ಕೊಡಗು ಸಂಸ್ಥಾನದ

# ರಾಜೇಂದ್ರನಾಮೆ

(ಕೊಡಗು ರಾಜ್ಯದ ಚರಿತ್ರೆ ಇದರಲ್ಲಿ ಸೇರಿದೆ.)



ಶ್ರೀ ಕಾವೇರಿ ಪ್ರಕಟನಾಲಯ

ಮಡಿಕೇರಿ — ಕೊಡಗು

ಮೊದಲನೆಯ ಮುದ್ರಣ : ೧೯೫೭



ಬೆಲೆ :

ಸಾದಾ ಪ್ರತಿ : ರೂ. ೪—೦—೦

ಕ್ಯಾಲಿಕೊ ಪ್ರತಿ : ರೂ. ೫—೦—೦

ಮುದ್ರಕರು :

ಆರ್. ಎನ್. ಹಬ್ಬು

ಉಷಾ ಪ್ರೆಸ್, ಓಲ್ಡ್ ಪೋಸ್ಟ್ ಆಫೀಸ್ ರೋಡ್, ಮೈಸೂರು

# ಮುನ್ನುಡಿ

ಭಾರತಭೂಮಿಯಲ್ಲಿ ಕೊಡಗು ಪಶ್ಚಿಮಘಟ್ಟಗಳ ತಪ್ಪಲಲ್ಲಿದ್ದು ಬೆಟ್ಟ ಸಾಲುಗಳಿಂದ ಸುತ್ತುವರಿಯಲ್ಪಟ್ಟು ಸುಂದರವಾದ ರತ್ನದಂತೆ ಶೋಭಿಸುವು ದೆಂದು ಒಬ್ಬ ಕವಿಯು ಹೇಳಿರುವನು. ಕೊಡಗಿನ ಪ್ರಾಕೃತಿಕ ಸೌಂದರ್ಯವನ್ನು ನೋಡಿದ ಬ್ರಿಟಿಷ್ ಉದ್ಯೋಗಸ್ಥರೊಬ್ಬರು ಕೊಡಗನ್ನು ಹಿಂದೂಸ್ಥಾನದ ಸ್ಕಾಟ್ಲೆಂಡ್ ಎಂದು ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದರು. ಇಂಥಾ ಸುಂದರವಾದ ಪ್ರದೇಶವು ದಕ್ಷಿಣಗಂಗೆಯೆಂಧೆನಿಸಿದ ಲೋಕಪಾವನೆಯಾದ ಕಾವೇರಿ ನದಿಯು ಉದ್ಭವಿಸಿದ ಪುಣ್ಯಭೂಮಿಯೂ ಆಗಿದೆ. ಈ ಭೂಮಿಯು ಶ್ರೀ ಕಾವೇರಿ ಮಾತೆಯ ವರಪ್ರಸಾದದಿಂದ ಧಾನ್ಯಸಮೃದ್ಧವೂ, ಫಲಭರಿತವೂ ಆಗಿದೆ. ಅಂತೆಯೇ ಇಲ್ಲಿನ ಜನರು ವಿಶಾಲಹೃದಯಿಗಳೂ, ಪರೋಪಕಾರಿ ಗಳೂ, ಅತಿಥಿಸತ್ಕಾರಿಗಳೂ ಆಗಿರುವರೆಂಬುದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

ಇಲ್ಲಿ ಚರಿತ್ರೆಯ ಆದಿಯಿಂದಲೇ ಎಲ್ಲೆಲ್ಲೂ ಇರುವ ಹಾಗೆ ನಾನಾ ಕೋಮುಗಳ ಜನರು ಇದ್ದರೂ ಇಲ್ಲಿನ ಮುಖ್ಯ ಜನಾಂಗವಾದ ಕೊಡವರು ತಮ್ಮದೇ ಆದ ಸಂಸ್ಕೃತಿ, ಉಡುಪು, ಆಚಾರ, ನಡೆ-ನುಡಿ, ಹಬ್ಬಗಳು ಮೊದ ಲಾದುವನ್ನು ಉಳ್ಳವರಾಗಿದ್ದು ಒಂದು ವೈಶಿಷ್ಟ್ಯವನ್ನು ಪಡೆದಿರುವರು. ಇವರ ರೀತಿಯ ಉಡಿಗೆ-ತೊಡಿಗೆಗಳು, ವಿವಾಹಪದ್ಧತಿಗಳು ಮೊದಲಾದುವು ಹಿಂದೂ ದೇಶದ ಇತರ ಯಾವ ಕೋಮಿನವರಲ್ಲಿಯೂ ಕಂಡುಬರುವುದಿಲ್ಲ. ಇವರ ಆಕಾರ, ನಡೆ, ಮಾತಿನ ರೀತಿಗಳಲ್ಲಿ ಒಂದು ಬಗೆಯ ಗಾಂಭೀರ್ಯವು ತೋರಿ ಬರುತ್ತಿದೆ.

ಕೊಡಗು ಕಾಡುಬೆಟ್ಟಗಳ ಸೀಮೆಯಾಗಿದ್ದು ಹಿಂದಿನ ಕಾಲದಲ್ಲಿ ಶತ್ರು ಗಳಿಗೆ ದುರ್ಗಮವಾಗಿದ್ದಿತು. ಆಗ ಇಲ್ಲಿ ಆಳುತ್ತಿದ್ದ ತುಂಡರಸರು ಅಥವಾ ನಾಯಕರು ಹೆಸರಿಗೆ ಮಾತ್ರ ಹೊರಪ್ರಾಂತ್ಯಗಳ ರಾಜರಿಗೆ ಮಾಂಡಲಿಕರಾಗಿದ್ದ ರಲ್ಲದೆ ಒಳದೇಶ ರಾಜ್ಯಭಾರದಲ್ಲಿ ಸ್ವತಂತ್ರರೇ ಆಗಿದ್ದರು. ಇತ್ತಲಾಗಿ ಆಳಿದ ಕೊಡಗಿನ ವೀರಶೈವ ರಾಜರು ತಾವು ಸ್ವತಂತ್ರರಾಗಿದ್ದುದು ಮಾತ್ರವಲ್ಲದೆ

ದಕ್ಷಿಣ ಕನ್ನಡ ಜಿಲ್ಲೆ, ಮೈಸೂರು ಮತ್ತು ವೈನಾಡುಗಳಿಗೆ ಆಗಾಗ ದಂಡೆತ್ತಿ ಹೋಗಿ ಆ ಸೀಮೆಗಳ ಕೆಲವು ಭಾಗಗಳನ್ನು ತಮ್ಮ ಆಡಳಿತಕ್ಕೊ ಒಳಪಡಿಸಿದ್ದರು. ಟಿಪ್ಪುಸುಲ್ತಾನನ ಮೇಲಿನ ಯುದ್ಧದಲ್ಲಿಯೂ ಕೊಡಗಿನ ದೊಡ್ಡವೀರರಾಜನು ಬ್ರಿಟಿಷರಿಗೆ ತುಂಬಾ ಸಹಾಯವನ್ನು ನೀಡಿದ್ದನು.

ಹೀಗೆ ತಮ್ಮದೇ ಆದ ವೈಶಿಷ್ಟ್ಯವುಳ್ಳ ಕೊಡವರ ಜನ್ಮಭೂಮಿಯಾದ ಮತ್ತು ಅನೇಕ ಶತಮಾನಗಳಿಂದ ಸ್ವತಂತ್ರ ಇತಿಹಾಸವುಳ್ಳ ಕೊಡಗು ಸೀಮೆಯ ಚರಿತ್ರೆಯನ್ನು ಕೊಡಗು ಕನ್ನಡನಾಡಾಗಿರುವ ವಿಶಾಲ ಮೈಸೂರಿನೊಳಗೆ ವಿಲೀನವಾಗಿರುವ ಈ ಸುಸಂದರ್ಭದಲ್ಲಿ ಕನ್ನಡನಾಡಿನ ಓದುಗರ ಮುಂದಿಡಲು ಸಂತೋಷಪಡುತ್ತೇವೆ.

ಈ ಚರಿತ್ರೆಯಲ್ಲಿ ಬರೆದಿರುವ ವಿಷಯಗಳಲ್ಲಿ ಕ್ರಿ.ಶ. ೧೬೩೩ನೆ ಇಸವಿಯವರೆಗಿನ ಸಂಗತಿಗಳನ್ನು ರೈಸ್ ಎಂಬ ಆಂಗ್ಲೇಯರು ಸಂಗ್ರಹಿಸಿದ 'ಕೊಡಗಿನ ಶಾಸನಗಳು' ಎಂಬ ಗ್ರಂಥದ ಆಧಾರದಿಂದ ಬರೆಯಲಾಗಿದೆ. ೧೬೩೩ರಿಂದ ೧೮೦೮ರ ವರೆಗಿನ ಕೊಡಗಿನ ಚರಿತ್ರೆಯು ದೊಡ್ಡವೀರರಾಜನು ಬರೆಯಿಸಿದ ರಾಜೇಂದ್ರನಾಮೆಯಲ್ಲಿಯೇ ಅಡಕವಾಗಿದೆ. ೧೮೦೮ರ ಅನಂತರದ ಇತಿಹಾಸವನ್ನು ರೈಸ್, ರಿಕ್ಟರ್, ಓಕೊನರ್, ಡಾ. ಮೂಗ್ಲಿಂಗ್ ಮೊದಲಾದ ಐರೋಪ್ಯರು ಬರೆದಿರುವ ಗ್ರಂಥಗಳಿಂದಲೂ ಕೆಲವು ಲೇಖನ ಮತ್ತು ಮಾಹಿತಿಗಳಿಂದಲೂ ಸಂಗ್ರಹಿಸಿ ಬರೆದಿರುವೆವು.

ಕೊಡಗಿನ ಇತಿಹಾಸದಲ್ಲಿ ಇನ್ನೂ ಬೆಳಕಿಗೆ ಬರದಿರುವ ವಿಷಯಗಳು ಅನೇಕವಿರಬಹುದು. ಆದರೂ ಸಹೃದಯಿಗಳಾದ ವಾಚಕರು ಈಗ ತಿಳಿದಿರುವ ಎಲ್ಲಾ ವಿವರಗಳನ್ನೊಳಗೊಂಡ ಈ ಚರಿತ್ರೆಯನ್ನು ಆದರಪೂರ್ವಕವಾಗಿ ಸ್ವೀಕರಿಸಬೇಕಾಗಿ ಕೇಳಿಕೊಳ್ಳುತ್ತೇವೆ.

ಇಂತೀ ತಮ್ಮವರಾದ,

**ಡಿ. ಎನ್. ಕೃಷ್ಣಯ್ಯ**

**ಎಂ. ಎಸ್. ಸುಬ್ಬರಾಯ**

# ೧. ಕೊಡಗಿನ ಪ್ರಾಚೀನ ಮತ್ತು ಮಧ್ಯಕಾಲಗಳ ಚರಿತ್ರೆ

ಕೊಡಗು ಸಂಸ್ಥಾನ ದಕ್ಷಿಣ ಹಿಂದೂಸ್ಥಾನದಲ್ಲಿ ಪಶ್ಚಿಮ ಘಟ್ಟಗಳ ಮೇಲಿರುವ ಸುಂದರವಾದ ಪ್ರದೇಶ. ಇದರ ವಿಸ್ತೀರ್ಣವು ೧೫೮೨ ಚದರ ಮೈಲುಗಳು. ಉತ್ತರ–ದಕ್ಷಿಣವಾಗಿ ಇದರ ಅತಿ ಹೆಚ್ಚಾದ ಉದ್ದವು ೬೦ ಮೈಲುಗಳು. ಪೂರ್ವ–ಪಶ್ಚಿಮವಾಗಿ ೪೦ ಮೈಲುಗಳು. ಇದು ಹಿಂದೂಸ್ಥಾನದ ಭೂಪಟದಲ್ಲಿ ೧೧·೫೫ ಉತ್ತರ ಅಕ್ಷಾಂಶದಿಂದ ೧೨·೫೦ ಉತ್ತರ ಅಕ್ಷಾಂಶದವರೆಗೂ ೭೫·೫೫ ಪೂರ್ವ ರೇಖಾಂಶದಿಂದ ೭೬·೧೪ ಪೂರ್ವ ರೇಖಾಂಶದವರೆಗೂ ಹರಡಿಕೊಂಡಿದೆ. ಇದು ಪಶ್ಚಿಮ ಘಟ್ಟಗಳ ಮೇಲೆ ಪೂರ್ವ ದಿಕ್ಕಿಗೆ ಇಳಿಜಾರಾಗಿ ವಿಸ್ತರಿಸಿಕೊಂಡಿದೆ. ಇದರ ಮುಖ್ಯಪಟ್ಟಣವಾದ ಮಡಿಕೇರಿಯು ಸಮುದ್ರಮಟ್ಟದಿಂದ ೩೮೦೯ ಅಡಿ ಎತ್ತರದಲ್ಲಿದೆ. ಇದರ ಉತ್ತರಕ್ಕೂ ಪೂರ್ವಕ್ಕೂ ಮೈಸೂರು ಸೀಮೆಯ ಹಾಸನ ಮತ್ತು ಮೈಸೂರು ಜಿಲ್ಲೆಗಳಿವೆ. ಪಶ್ಚಿಮಕ್ಕೂ ದಕ್ಷಿಣಕ್ಕೂ ದಕ್ಷಿಣ ಕನ್ನಡ, ಮಲೆಯಾಳ ಜಿಲ್ಲೆಗಳಿವೆ. ಅರಬಿಸಮುದ್ರವು ಕೊಡಗಿನಿಂದ ೩೦ ಮೈಲು ದೂರದಲ್ಲಿದೆ. ಕೊಡಗು ಪಶ್ಚಿಮಘಟ್ಟಗಳ ಮೇಲಿರುವ ಮಳೆ ಬೀಳುವ ಪ್ರದೇಶವಾದುದರಿಂದ ಯಾವಾಗಲೂ ಹಸುರುಹಚ್ಚೆಯಿಂದ ಕೂಡಿ ನೋಡುವವರ ಮನಸ್ಸನ್ನು ಸೆಳೆಯುತ್ತದೆ.

ಪ್ರಪಂಚದ ಪ್ರತಿಯೊಂದು ದೇಶದಲ್ಲೂ ಚರಿತ್ರೆಯ ಕಾಲಕ್ಕಿಂತ ಹಿಂದೆ ಪುರಾಣದ ಕಾಲವೊಂದಿರುತ್ತದೆ. ಮನುಷ್ಯನಿಗೆ ತಿಳುವಳಿಕೆಯು ಕಡಿಮೆಯಾಗಿದ್ದು ಬರೆವಣಿಗೆಯೂ ಕಾಲಗಣನೆಯ ಕ್ರಮವೂ ಗೊತ್ತಿಲ್ಲದಿದ್ದಾಗ ಜನರು ನಡೆದ ಸಂಗತಿಗಳನ್ನು ಬಾಯಿಂದ ಬಾಯಿಗೆ ಪರಂಪರೆಯಾಗಿ ಹೇಳುತ್ತಾ ಬಂದರು. ಆಗ ನಿಜವಾಗಿ ನಡೆದ ವಿಷಯಗಳೊಡನೆ ಅನೇಕ ನಡೆಯದ ವಿಷಯಗಳೂ, ಜನರ ಮಾತಿನ ಚಮತ್ಕಾರದಿಂದಲೂ ಅತಿಶಯೋಕ್ತಿಯಿಂದಲೂ ಸೇರಿಕೊಂಡವು. ಈ ವಿಷಯಗಳಿಗೆ ಸರಿಯಾದ ಕಾಲದ ಮತ್ತು ಕೆಲವು ಸಮಯಗಳಲ್ಲಿ ಸ್ಥಳದ ಆಧಾರವಿರುವುದಿಲ್ಲ. ಇಂಥಾ ವಿಷಯಗಳನ್ನು ಒಟ್ಟಾಗಿ ಪುರಾಣಗಳೆಂದು ಹೇಳುತ್ತಾರೆ. ಕೊಡಗಿನಲ್ಲಿಯೂ ಕೊಡಗಿನ ಜನರ ಹುಟ್ಟು, ಕಾವೇರಿಯ ಉದ್ಭವ ಮತ್ತು ಕೊಡಗಿನ ಪೂರ್ವದ ಹೆಸರುಗಳು

ಮುಂತಾದುವಕ್ಕೆ ಪುರಾಣ ಕಥೆಗಳಿವೆ. ಆದರೆ ಅವುಗಳಲ್ಲಿ ಎಷ್ಟರ ಮಟ್ಟಿನ ನಿಜಾಂಶವು ಇದೆಯೆಂದು ಹೇಳಲಾಗುವುದಿಲ್ಲ.

ಕೊಡಗಿನ ಚರಿತ್ರೆಯ ಕಾಲವು ಸುಮಾರು ಕ್ರಿ.ಶ. ಎರಡನೇ ಶತಮಾನ ದಿಂದ ಪ್ರಾರಂಭವಾಗಿದೆಯೆನ್ನಬಹುದು. ಕೊಡಗಿನ ಪೂರ್ವದ ಚರಿತ್ರೆಯನ್ನು ನಾವು ಶಾಸನಗಳ ಸಹಾಯದಿಂದ ಸ್ಥೂಲವಾಗಿ ಸಂಗ್ರಹಿಸಬಹುದು. ಹಿಂದಿನ ರಾಜರು ತಾವು ಆಳಿದ ಪ್ರದೇಶ, ಮಾಡಿದ ದಿಗ್ವಿಜಯ, ತಾವು ತಮ್ಮ ಆಶ್ರಿತರಿಗೆ ದಾನವಾಗಿ ಕೊಟ್ಟ ಜಹಗೀರು, ಉಂಬಳಿ ಮೊದಲಾದುವನ್ನು ಕಲ್ಲಿನ ಮೇಲೆ ಅಥವಾ ತಗಡಿನ ಮೇಲೆ ಬರೆಸಿಡುತ್ತಿದ್ದರು. ಇವುಗಳ ಆಧಾರ ದಿಂದ ಚರಿತ್ರಕಾರರು ಒಂದು ದೇಶದ ಹಿಂದಿನ ಇತಿಹಾಸವನ್ನು ಸಂಗ್ರಹಿಸು ತ್ತಾರೆ. ಕೊಡಗಿನ ಹಿಂದಿನ ಚರಿತ್ರೆಗೆ ಇಂಥಾ ಶಾಸನಗಳೇ ಆಧಾರಗಳು.

## ೨. ಕದಂಬರು

ಕೊಡಗಿನ ಚರಿತ್ರೆಯನ್ನು ಸಾಧಾರಣವಾಗಿ ಕ್ರಿ.ಶ. ಎರಡನೆಯ ಶತ ಮಾನದಿಂದ ಸಂಗ್ರಹಿಸಬಹುದು. ತಮಿಳು ಸಾಹಿತ್ಯದಲ್ಲಿ ಕ್ರಿ.ಶ. ಎರಡನೆಯ ಶತಮಾನದಲ್ಲೇ ಕೊಡಗನ್ನು ಕುರಿತು ಕುಡಕಮ್ ಎಂದು ವ್ಯವಹರಿಸಿರುವುದು ಕಂಡುಬರುತ್ತದೆ. ಕ್ರಿ.ಶ. ಎರಡನೇ ಶತಮಾನದಿಂದ ಸುಮಾರು ಹದಿನೈದನೆಯ ಶತಮಾನದವರೆಗೆ ಕೊಡಗು ಈಗಿನ ಮೇರೆಗಳುಳ್ಳದ್ದಾಗಿ ಒಂದೇ ಆಡಳಿತಕ್ಕೆ ಒಳಪಟ್ಟಿರಲಿಲ್ಲ.

ಕೊಡಗಿನ ಉತ್ತರ ಭಾಗವು ಕ್ರಿ.ಶಕದ ಎರಡನೆಯ ಶತಮಾನದಿಂದ ಆರನೆಯ ಶತಮಾನದವರೆಗೆ ಕದಂಬ ಅರಸರ ಅಧೀನದಲ್ಲಿದ್ದಂತೆ ತೋರುತ್ತದೆ. ಈ ಶತಮಾನಗಳಲ್ಲಿ ಕದಂಬರು ಕೊಡಗಿಗೆ ಮುಟ್ಟಿಕೊಂಡಿರುವ ಮೈಸೂರಿನ ಪಶ್ಚಿಮ ಭಾಗ, ಉತ್ತರಕನ್ನಡ ಮತ್ತು ದಕ್ಷಿಣಕನ್ನಡಗಳ ಕೆಲವು ಭಾಗಗಳನ್ನು ಆಳುತ್ತಿದ್ದರು. ಈ ಕದಂಬರಾಜರು ಕೊಡಗನ್ನು ಜಯಿಸಲು ಕಳುಹಿಸಿದ ಸೈನಿಕರು ಇಲ್ಲಿ ನೆಲೆಸಿ ಕೊಡವರ ಮೂಲಪುರುಷರಾದರು ಎಂದು ಕರ್ನಲ್ ವಿಲ್ಕ್ಸ್ ಎಂಬ ಚರಿತ್ರಕಾರನು ಅಭಿಪ್ರಾಯಪಡುತ್ತಾನೆ.

ಕೊಡಗಿನ ಪುರಾಣಕಥೆಯಾದ ಕಾವೇರಿ ಮಹಾತ್ಮೆಯಲ್ಲಿ ಕೊಡವರು ಮತ್ಸ್ಯದೇಶದ ರಾಜಕುಮಾರನಾದ ಚಂದ್ರವರ್ಮನ ಸಂತತಿಯವರು ಎಂದು

ಹೇಳಿದೆ. ಚಂದ್ರವರ್ಮನೆಂಬ ಹೆಸರು ಕದಂಬವಂಶದ ಅರಸರಲ್ಲಿ ಅನೇಕರಿಗಿದೆ. ಕದಂಬ ರಾಜ್ಯವು ಕೊಡಗಿನ ದಕ್ಷಿಣ ಭಾಗಕ್ಕೊಂದಲ್ಲದೆ ಇತರ ಎಲ್ಲಾ ಭಾಗಗಳಿಗೆ ಒತ್ತಾಗಿದ್ದುದರಿಂದ ಕೊಡಗಿನ ಉತ್ತರ ಭಾಗವು ಕ್ರಿ. ಶಕದ ಆದಿ ಶತಮಾನಗಳಲ್ಲಿ ಕದಂಬರ ಅಧೀನದಲ್ಲಿತ್ತೆಂದು ಊಹಿಸಬಹುದು. ಕಾವೇರಿ ಮಹಾತ್ಮೆಯಲ್ಲಿ ಹೇಳಲ್ಪಟ್ಟ ಚಂದ್ರವರ್ಮನು ಕದಂಬವಂಶದ ಚಂದ್ರವರ್ಮನೆಂತಲೂ ಅವನ ಸೈನಿಕರೇ ಕೊಡಗರ ಮೂಲಪುರುಷರೆಂತಲೂ ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಕದಂಬ ಅರಸರನ್ನು ಉತ್ತರದ ಚಾಲುಕ್ಯರು ಆರನೆಯ ಶತಮಾನದಲ್ಲಿ ಸೋಲಿಸಿದರು. ಅನಂತರ ಕದಂಬರು ಕೆಲವು ಶತಮಾನಗಳವರೆಗೆ ಚಾಲುಕ್ಯರ ಮಾಂಡಲಿಕರಾಗಿ ಇದ್ದದ್ದು ಕಂಡುಬರುತ್ತದೆ. ಕದಂಬರ ಚಿಕ್ಕ ಚಿಕ್ಕ ರಾಜ್ಯಗಳು ಕೊಡಗಿನ ಉತ್ತರದ ಮಂಜರಾಬಾದಿನಲ್ಲಿಯೂ ಕೊಡಗಿನ ದಕ್ಷಿಣದಲ್ಲಿರುವ ಬಯಲುನಾಡು ಅಥವಾ ಈಗಿನ ವೈನಾಡಿನಲ್ಲಿಯೂ ಗೋವಾ ಮತ್ತು ಹಾನಗಲ್ಲುಗಳಲ್ಲಿಯೂ ಕ್ರಿ.ಶ. ೧೦ನೇ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೆ ಇದ್ದುದು ಚರಿತ್ರೆಯಲ್ಲಿ ಕಂಡುಬರುತ್ತದೆ. ಮಂಜರಾಬಾದಿನ ಕದಂಬರಸರ ಒಂದು ಶಾಸನವು ಕೊಡಗಿನ ಯಡವನಾಡು ಯಡೂರು ಸುಗ್ಗಿದೇವರ ಗುಡಿಯಲ್ಲಿದೆ. ಈ ಶಾಸನವು ಕದಂಬ ದುದ್ದರಸನಿಗೆ ಸಂಬಂಧಪಟ್ಟು ಅವನ ತಮ್ಮ ಜೂಜರಸನಿಂದ ಇಡಲ್ಪಟ್ಟ ವೀರಶಾಸನವಾಗಿದೆ. ಈ ಶಾಸನದಲ್ಲಿ ದುದ್ದರಸನನ್ನು 'ಮಲೆಪರ ನಂದನವನ'ವೆಂದು ಹೊಗಳಿದೆ. ಈ ಕಾರಣಗಳಿಂದ ಕೊಡಗಿನ ಉತ್ತರ ಭಾಗವು ಕದಂಬರ ಅಧೀನದಲ್ಲಿ ಕೆಲವು ಕಾಲವಿತ್ತೆಂದು ಊಹಿಸಬಹುದು.

## ೩. ಗಂಗರು

ಕೊಡಗಿನ ಉತ್ತರ ಭಾಗವು ಕದಂಬರ ಅಧೀನದಲ್ಲಿದ್ದ ಕಾಲದಲ್ಲಿ ಕೊಡಗಿನ ಈಗಿನ ಕಿಗ್ಗಟ್ಟುನಾಡು ಮೈಸೂರಿನ ಗಂಗರಸರ ಅಧೀನದಲ್ಲಿದ್ದ ಹಾಗೆ ಶಾಸನಗಳ ಆಧಾರದಿಂದ ತಿಳಿಯುತ್ತದೆ. ಕೊಡಗಿನಲ್ಲಿ ದೊರೆತಿರುವ ಅತೀ ಹಿಂದಿನ ಶಾಸನಗಳು ಗಂಗರಸರಿಗೆ ಸಂಬಂಧಪಟ್ಟವು. ಗಂಗರಸರು ಜೈನರು. ಇವರು ಕ್ರಿ.ಶ. ಎರಡನೆಯ ಶತಮಾನದಿಂದ ೧೧ನೆಯ ಶತಮಾನದವರೆಗೆ ಮೈಸೂರಿನ ತಲಕಾಡಿನಲ್ಲಿ ಆಳುತ್ತಿದ್ದರು.

ಮಡಿಕೇರಿಯ ಅರಮನೆಯ ಖಜಾನೆಯಲ್ಲಿ ಸಿಕ್ಕಿದ ತಾಮ್ರಶಾಸನದಲ್ಲಿ ಶಾಲಿವಾಹನ ಶಕ ೩೮೮ ಅಂದರೆ ಕ್ರಿ.ಶ. ೪೬೬ರಲ್ಲಿ ಕೊಂಗುಣಿ ಮಹಾರಾಜಾಧಿರಾಜ ಅವಿನೀತನೆಂಬವನು ರಾಷ್ಟ್ರಕೂಟ ರಾಜನ ಮಂತ್ರಿಗೆ ಪುನ್ನಾಡು ಆರು ಸಾವಿರದ ಬದನಗುಪ್ಪೆ ಎಂಬ ಗ್ರಾಮವನ್ನು ದಾನ ಕೊಟ್ಟಂತೆ ಇದೆ. ಈ ಪುನ್ನಾಡು ಆರುಸಾವಿರ ಸೀಮೆಯು ಮೈಸೂರಿನ ನೈಋತ್ಯದಲ್ಲಿದ್ದು ಈಗಿನ ಕೊಡಗಿಗೆ ಮುಟ್ಟಿಕೊಂಡಿದ್ದಿತು. ಗಂಗರಸರ ಎರಡನೆಯ ಶಾಸನವು ಶಾಲೀವಾಹನ ಶಕ ೮೧೯ ಅಂದರೆ ಕ್ರಿ.ಶ. ೮೮೮ರದ್ದಾಗಿದೆ. ಈ ಶಾಸನದಲ್ಲಿ ಸತ್ಯವಾಕ್ಯ ಕೊಂಗುಣಿವರ್ಮಧರ್ಮ ಮಹಾರಾಜಾಧಿರಾಜನು ಪೆನ್ನೆಕಡಂಗದ ಜೈನ ಬಸದಿಗೋಸ್ಕರ ಪೆದ್ದೊರೆಗರೆಯ ಬೀಳೂರಿನ ಹನ್ನೆರಡು ಅಗ್ರಹಾರಗಳನ್ನು ದಾನಮಾಡಿದ ಉಲ್ಲೇಖವಿದೆ. ಪೆದ್ದೊರೆಯೆಂದರೆ ಕೊಡಗಿನ ಕಿಗ್ಗಟ್ಟುನಾಡಿನ ದೊಡ್ಡಹೊಳೆ ಅಥವಾ ಲಕ್ಷ್ಮಣತೀರ್ಥ ನದಿ. ಈ ದಾನಶಾಸನದಿಂದ ಗಂಗರ ಆಳ್ವಿಕೆಯು ಕಿಗ್ಗಟ್ಟುನಾಡಿಗೆ ವಿಸ್ತರಿಸಿದ್ದಿತೆಂಬುದು ಸಿದ್ಧವಾಗುತ್ತದೆ. ಸತ್ಯವಾಕ್ಯ ಕೊಂಗುಣಿವರ್ಮನ ಅಣ್ಣನ ಮಗ ಈರೆಯಪ್ಪನೆಂಬುವನು ಕೊಡಗಿನ ಶನಿವಾರಸಂತೆ ಕೊಡ್ಲಿಪೇಟೆ ಹೋಬಳಿಗಳು ಅಥವಾ ಏಳುಸಾವಿರ ಸೀಮೆಯನ್ನು ತನ್ನ ಚಿಕ್ಕಪ್ಪನ ಮಾಂಡಲಿಕನಾಗಿ ಆಳುತ್ತಿದ್ದನೆಂದು ತೋರುತ್ತದೆ. ಶಾಲೀವಾಹನ ಶಕ ೮೯೯ರ (ಕ್ರಿ ಶ. ೯೭೮) ಒಂದು ಶಾಸನದಲ್ಲಿ ಗಂಗರಸ ನಾಲ್ಮಡಿ ಸತ್ಯವಾಕ್ಯ ಕೊಂಗುಣಿವರ್ಮಧರ್ಮ ಮಹಾರಾಜಾಧಿರಾಜನ ತಮ್ಮ ಬೆದ್ದೊರೆಗರೆ ಅಥವಾ ಕಿಗ್ಗಟ್ಟುನಾಡಿನ ಲಕ್ಷ್ಮಣತೀರ್ಥ ನದಿಯ ಬದಿಯ ಸೀಮೆಯ ಮಾಂಡಲಿಕ ಅರಸು ರಕ್ಕಸಗಂಗನು ಶ್ರವಣಬೆಳಗೊಳದ ಒಬ್ಬ ಜೈನ ಗುರುವಿಗೆ ಕಿಗ್ಗಟ್ಟುನಾಡಿನ ಪೆಗ್ಗೂರು ಎಂಬ ಸ್ಥಳವನ್ನು ದಾನಕೊಟ್ಟಂತೆ ಇದೆ. ಈ ದಾನಶಾಸನದ ಸ್ಥಳದ ಆಡಳಿತ ನಡೆಸುವುದಕ್ಕೆ ನಾಲ್ವರು ಮಲೆಪರು ಅಥವಾ ಬೆಟ್ಟಸೀಮೆಗಳ ಅಧಿಪತಿಗಳು, ಐನೂರು ಜನ ಜೈನ ಸನ್ಯಾಸಿಗಳು ನೇಮಕವಾಗಿರುವುದು ಆ ಶಾಸನದಲ್ಲಿ ಕಂಡುಬರುತ್ತದೆ. ಈ ಶಾಸನದಿಂದ ಕೊಡಗಿನಲ್ಲಿ ಜೈನಬಸದಿಗಳೂ ಜೈನರೂ ಇದ್ದರೆಂಬುದೂ ಈ ಜೈನರಿಗೂ ಶ್ರವಣಬೆಳಗೊಳದ ಜೈನರಿಗೂ ಸಂಬಂಧವಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಕೊಡಗಿಗೆ ಸಂಬಂಧಪಟ್ಟ ಗಂಗರಸರ ಕೊನೆಯ ಶಾಸನವು ಶಾಲೀವಾಹನ ಶಕ ೯೨೬ ಅಥವಾ ಕ್ರಿ.ಶ. ೧೦೦೦ರದ್ದು. ಈ ಶಾಸನದಲ್ಲಿ ಗಣಗೂರು ಗ್ರಾಮದ ಹಣಚಧರ್ಮ

ಶೆಟ್ಟಿಯೆಂಬವನು ತಾನು ಕುಣಿಂದರನೆಂಬವನಲ್ಲಿ ಕೆಲವು ಕಾಲ ಸೇವಕನಾಗಿದ್ದು ಕೊನೆಗೆ ತಾನು ಮುಳ್ಳೂರುನಾಡಿನ ಬೊಕ್ಕನಹಳ್ಳಿ, ಕೂಡಲೂರು ಗ್ರಾಮಗಳನ್ನು ಗೆದ್ದುಕೊಂಡನೆಂದೂ ಆ ಯುದ್ಧಗಳಲ್ಲಿ ಮಾಡಿದ ಪಾಪಕ್ಕೆ ನದಿಯಲ್ಲಿ ಸ್ನಾನ ಮಾಡಿ ರಾಮೇಶ್ವರನನ್ನು ಪೂಜಿಸಿ ಒಂದು ಖಂಡುಗ ಭೂಮಿಯನ್ನು ದಾನ ಕೊಟ್ಟನೆಂದೂ ಬರೆದಿದೆ. ಈ ಶಿಲಾಶಾಸನವು ಫ್ರೇಸರ್‌ಪೇಟೆ ಹೋಬಳಿಯಲ್ಲಿದ್ದು ಈಗ ಮಡಿಕೇರಿ ಸರಕಾರಿ ಪ್ರೌಢಶಾಲೆಯ ಎದುರಿನ ಜಗಲಿಯಲ್ಲಿ ಹೂಳಲ್ಪಟ್ಟಿದೆ. ಇವನು ರಾಮಸ್ವಾಮಿ ಕಣಿವೆಯಲ್ಲಿ ಕಾವೇರಿ ನದಿಯಲ್ಲಿ ಸ್ನಾನ ಮಾಡಿ ಅಲ್ಲಿ ರಾಮೇಶ್ವರ ದೇವರನ್ನು ಪೂಜಿಸಿದಂತೆ ತೋರುತ್ತದೆ. ಇಲ್ಲಿಗೆ ಗಂಗರಸರ ಶಾಸನಗಳು ಅಂತ್ಯವಾಗುತ್ತವೆ. ಈ ಶಾಸನಗಳಿಂದ ಗಂಗರಸರ ಆಳ್ವಿಕೆಯು ಕೆಲವು ಸಮಯ ಕೊಡಗಿನ ಫ್ರೇಸರ್‌ಪೇಟೆ ಹೋಬಳಿ, ಶನಿವಾರಸಂತೆ ಹೋಬಳಿಗಳಿಗೂ ವಿಸ್ತರಿಸಿದ್ದಂತೆ ಕಂಡುಬರುತ್ತದೆ.

## ೪. ಕೊಡಗಿನಲ್ಲಿ ಚೋಳರ ಅಧಿರಾಜತ್ವ

ಕ್ರಿ.ಶ. ಹತ್ತನೆಯ ಮತ್ತು ಹನ್ನೊಂದನೆಯ ಶತಮಾನಗಳಲ್ಲಿ ತಮಿಳು ದೇಶದಲ್ಲಿ ಪ್ರಬಲರಾಗಿದ್ದ ಚೋಳರಾಜರಿಗೂ ಗಂಗರಸರಿಗೂ ಯುದ್ಧಗಳು ಜರುಗಿ ಕೊನೆಗೆ ಗಂಗರಾಜ್ಯವು ಅಳಿಯಿತು. ಚೋಳರಾಜರಲ್ಲಿ ಪ್ರಸಿದ್ಧನಾದ ರಾಜೇಂದ್ರಚೋಳನು ಗಂಗರಸರ ರಾಜಧಾನಿ ತಲಕಾಡನ್ನು ಹಿಡಿದು ಮೈಸೂರಿನ ದಕ್ಷಿಣ ಮತ್ತು ಪೂರ್ವದ ಸೀಮೆಗಳನ್ನು ಗೆದ್ದುಕೊಂಡನು. ಈ ದಂಡಯಾತ್ರೆಯಲ್ಲಿ ಮೈಸೂರುಸೀಮೆಯ ಹುಣಸೂರು ತಾಲೋಕು ಮತ್ತು ಕೊಡಗಿನ ಕೆಲವು ಭಾಗಗಳನ್ನು ಆಳುತ್ತಿದ್ದ ಚೆಂಗಾಳ್ವರೆಂಬ ಅರಸುಮನೆತನದವರು ಚೋಳರನ್ನು ಎದುರಿಸಿದರು. ಆದರೆ ಚೆಂಗಾಳ್ವರು ಕಾವೇರಿ ದಡದಲ್ಲಿರುವ ಹನಸೋಗೆಯೆಂಬಲ್ಲಿ ಸೋತುಹೋಗಿ ಚೋಳರ ಮಾಂಡಲಿಕರಾದರು. ಈ ಯುದ್ಧದಲ್ಲಿ ಹೆಚ್ಚು ಪರಾಕ್ರಮವನ್ನು ತೋರಿಸಿ ಚೆಂಗಾಳ್ವರನ್ನು ಸೋಲಿಸಿದವನು ಮಣಿಜನೆಂಬವನು. ಮಣಿಜನ ವೀರತ್ವವನ್ನು ಮೆಚ್ಚಿ, ರಾಜರಾಜಚೋಳನು ಅವನಿಗೆ ಕ್ಷತ್ರಿಯಶಿಖಾಮಣಿ ಕೊಂಗಾಳ್ವ ಎಂಬ ಬಿರುದನ್ನೂ ಉತ್ತರ ಕೊಡಗಿನ ಏಳು ಸಾವಿರ ಸೀಮೆಯನ್ನೂ ಮೈಸೂರಿನ ಅರ್ಕಲಗೋಡು ತಾಲೋಕನ್ನೂ ಕೊಟ್ಟು ತನ್ನ ಮಾಂಡಲಿಕನನ್ನಾಗಿ ಮಾಡಿಕೊಂಡನು. ಮಣಿಜನ ಸಂತತಿಯವರಿಗೆ

ಕೊಂಗಾಳ್ವರೆಂಬ ಹೆಸರಾಯಿತು. ಈ ಸಮಯದಿಂದ ಚೆಂಗಾಳ್ವರೂ ಕೊಂಗಾಳ್ವರೂ ಚೋೞರ ಅಧಿರಾಜತ್ವವನ್ನು ಒಪ್ಪಿಕೊಂಡು ತಮ್ಮ ಹೆಸರಿನ ಕೊನೆಯಲ್ಲಿ ಚೋೞರೆಂಬ ಬಿರುದನ್ನು ಧರಿಸಿಕೊಂಡರು. ಚೋೞರಾಜರು ತಮ್ಮ ಅಧೀನದ ರಾಜ್ಯಗಳ ಪಟ್ಟಿಯಲ್ಲಿ ಕುಡುಮಲೆನಾಡು ಎಂದರೆ ಕೊಡಗನ್ನು ಸೇರಿಸಿಕೊಂಡರು.

## ೫. ಚೆಂಗಾಳ್ವರು

ಚೆಂಗಾಳ್ವ ಅರಸರು ಮೈಸೂರಿನ ಪಶ್ಚಿಮದಲ್ಲಿಯೂ ಕೊಡಗಿನಲ್ಲಿಯೂ ೧೦ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಆಳಿದರು. ಅವರ ಮೂಲರಾಜ್ಯವು ಹುಣಸೂರು ತಾಲೋಕನ್ನೊಳಗೊಂಡ ಚೆಂಗನಾಡು. ಇವರು ತಾವು ಚಂದ್ರವಂಶಕ್ಕೆ ಸೇರಿದ ಯಾದವರೆಂದು ಹೇಳಿಕೊಳ್ಳುವರು. ಇವರಿಗೆ ಮಹಾಮಾಂಡಲಿಕ, ಮಂಡಲೇಶ್ವರ ಅಥವಾ ಮಹಾಮಂಡಲೇಶ್ವರ ಎಂಬ ಬಿರುದು ಇತ್ತು. ಇವರು ಮೊದಲು ಜೈನರಾಗಿದ್ದರು. ಹುಣಸೂರು ತಾಲೋಕಿನ ಹನಸೋಗೆಯಲ್ಲಿ ಈಗ ಹಾಳುಬಿದ್ದಿರುವ ಅನೇಕ ಜೈನಬಸದಿಗಳು ಈ ಅರಸರ ಕಾಲದಲ್ಲಿ ಕಟ್ಟಲ್ಪಟ್ಟವು ಅಥವಾ ಹಾಳಾದವು ಸರಿಮಾಡಲ್ಪಟ್ಟವು. ಈ ವಂಶದವರ ಶಾಸನಗಳು ಹುಣಸೂರು, ಯಡತೊರೆ ತಾಲೋಕುಗಳಲ್ಲಿಯೂ ಕೊಡಗಿನಲ್ಲಿಯೂ ಸಿಕ್ಕಿವೆ.

ಚೆಂಗಾಳ್ವರು ಹತ್ತನೆಯ ಶತಮಾನದಲ್ಲಿ ಗಂಗರ ಮಾಂಡಲಿಕರಾಗಿದ್ದರು. ಗಂಗರು ಚೋೞರಾಜರಿಂದ ಕ್ರಿ.ಶ. ೧೦೦೪ರಲ್ಲಿ ಸೋಲಿಸಲ್ಪಟ್ಟ ಮೇಲೆ ಚೆಂಗಾಳ್ವರು ಚೋೞರ ಮಾಂಡಲಿಕರಾದರು. ಹನ್ನೊಂದನೆಯ ಶತಮಾನದಲ್ಲಿ ಚೆಂಗಾಳ್ವರು ಚೋೞರಾಜರ ಅಧಿರಾಜತ್ವದ ಗುರುತಾಗಿ ತಮ್ಮ ಹೆಸರಿನ ಮುಂದುಗಡೆ ರಾಜೇಂದ್ರಚೋೞ ಅಥವಾ ಕುಲೋತ್ತುಂಗಚೋೞ ಎಂಬ ಹೆಸರನ್ನು ಇಟ್ಟುಕೊಂಡಿರುವುದು ಕಂಡುಬರುತ್ತದೆ. ಈ ಸಮಯದಲ್ಲಿ ಚೆಂಗಾಳ್ವರು ಲಿಂಗಾಯತ ಮತವನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಇವರ ಕುಲದೇವರು ಬೆಟ್ಟದಪುರದ ಮಲ್ಲಿಕಾರ್ಜುನದೇವರು.

ಕ್ರಿ.ಶ. ೧೧೧೬ರಲ್ಲಿ ಮೈಸೂರಿನ ಉತ್ತರದಲ್ಲಿ ದ್ವಾರಸಮುದ್ರ ಎಂಬಲ್ಲಿ ತಲೆಯೆತ್ತಿ ಪ್ರಬಲರಾದ ಹೊಯ್ಸಳ ರಾಜರು ಚೋೞರನ್ನು ಮೈಸೂರಿನಿಂದ

ಓಡಿಸಿದರು. ಆಗ ಚೆಂಗಾಳ್ವರಸರು ತಾವು ಸ್ವತಂತ್ರರಾಗುವುದಕ್ಕೆ ಪ್ರಯತ್ನಿಸಿದರು. ಈ ಚೆಂಗಾಳ್ವರಸರಲ್ಲಿ ಕೆಲವರ ಹೆಸರುಗಳನ್ನೂ ಅವರ ಹೆಸರು ಉಲ್ಲೇಖಿಸಿರುವ ಶಾಸನಗಳ ಕಾಲವನ್ನೂ ಇಲ್ಲಿ ಕೊಟ್ಟಿದೆ :

| | |
|---|---|
| ನನ್ನಿಚೆಂಗಾಳ್ವರಾಜೇಂದ್ರಚೋಳ | ೧೬೩೪ |
| ಮಾದೇವಚೆಂಗಾಳ್ವರಾಜೇಂದ್ರಚೋಳ | ೧೦೯೦ |
| ಉದಯಾದಿತ್ಯಚೆಂಗಾಳ್ವರಾಜೇಂದ್ರಚೋಳ | ೧೦೯೨ |
| ಅನ್ನದಾನಿಚೆಂಗಾಳ್ವರಾಜೇಂದ್ರಚೋಳ | ೧೧೦೬ |
| ಮಹಾದೇವಚೆಂಗಾಳ್ವರಾಜೇಂದ್ರಚೋಳ | ೧೧೨೪ |
| ಪೆಮ್ಮವೀರಪ್ಪಚೆಂಗಾಳ್ವರಾಜೇಂದ್ರಚೋಳ | ೧೧೨೭ |
| ಸೋಮದೇವ, ಬೊಪ್ಪದೇವ | ೧೩೪೭–೭೩ |
| ಮಲ್ಲಿದೇವ | ೧೩೮೦ |
| ಮಲ್ಲಿದೇವ, ಹರಿಹರದೇವ | ೧೩೯೬–೯೨ |

ಹೊಯ್ಸಳರು ಚೋಳರಾಜರನ್ನು ಮೈಸೂರಿನಿಂದ ಓಡಿಸಿದ ಮೇಲೆ ಹೊಯ್ಸಳರಿಗೂ ಚೆಂಗಾಳ್ವರಿಗೂ ಆಗಾಗ ಯುದ್ಧಗಳು ಜರುಗುತ್ತಲಿದ್ದವು. ಚೆಂಗಾಳ್ವರು ತಾವು ಸ್ವತಂತ್ರರಾಗುವುದಕ್ಕೆ ಪ್ರಯತ್ನಿಸಿದರೂ ಹೊಯ್ಸಳರ ಮುಂದೆ ಅವರ ಪರಾಕ್ರಮವು ಸಾಲಲಿಲ್ಲ. ಕೊನೆಗೆ ಚೆಂಗಾಳ್ವರಾಜ ಮಹಾದೇವನು ಹುಣಸೂರು ತಾಲೋಕಿನ ಬಯಲು ಪ್ರದೇಶವನ್ನು ಬಿಟ್ಟು ಕಿಗ್ಗಟ್ಟಿನಾಡಿನ ಪಾಲ್ಪರೆಯೆಂಬಲ್ಲಿ ಕೋಟೆ ಕಟ್ಟಿ ನಿಂತನು. ಅಲ್ಲಿಯೂ ಅವನಿಗೆ ಹೊಯ್ಸಳರ ಭಯವು ತಪ್ಪಲಿಲ್ಲ. ಹೊಯ್ಸಳರಾಜ ವೀರಬಲ್ಲಾಳನ ದಂಡನಾಯಕ ಬಿಟ್ಟರಸನು ೧೧೨೪ರಲ್ಲಿ ಪಾಲ್ಪರೆಗೆ ದಂಡೆತ್ತಿ ಬಂದು ಚೆಂಗಾಳ್ವ ಮಹಾದೇವನನ್ನು ಸೋಲಿಸಿ ಕೊಂದುಹಾಕಿ ಪಾಲ್ಪರೆಯಲ್ಲಿ ತಾನೇ ಆಳತೊಡಗಿದನು. ಆಗ ಮಹಾದೇವನ ಮಗ ಚೆಂಗಾಳ್ವ ಪೆಮ್ಮವೀರಪ್ಪನು ಬೂದಿಗೊಂಡ ನಂದಿದೇವ, ಕುರುಚಿಯ ಉದಯಾದಿತ್ಯದೇವ ಮತ್ತು ಸಕಲನಾಡಿನಕೊಡಗರು ಇವರ ಸಹಾಯದಿಂದ ಬಿಟ್ಟರಸನ ಮೇಲೆ ಬಿದ್ದನು. ಬಿಟ್ಟರಸನು ಒಮ್ಮೆ ಬಲ ಕುಂದಿದರೂ ಕೊನೆಗೆ ಪೆಮ್ಮವೀರಪ್ಪನನ್ನು ಸೋಲಿಸಿ ಓಡಿಸಿದನು. ಈ ಅಪಜಯದ ಅನಂತರ ಚೆಂಗಾಳ್ವರು ಹೊಯ್ಸಳರ ಮಾಂಡಲಿಕತನವನ್ನು

ಪೂರ್ತಿ ಒಪ್ಪಿಕೊಂಡರು. ಇಮ್ಮಡಿ ವೀರಬಲ್ಲಾಳನು ೧೧೭೫ರಲ್ಲಿ ಕೊಡಗಿನಲ್ಲಿ ಭೂಮಿಯನ್ನು ದಾನವಾಗಿ ಕೊಟ್ಟ ಶಾಸನಗಳು ಸಿಕ್ಕಿವೆ. ಪೆಮ್ಮವೀರಪ್ಪನ ಕಾಲದ ಶಾಸನದಲ್ಲಿ 'ಕೊಡಗರು' ಎಂಬ ಹೆಸರು ಮೊದಲನೆ ಬಾರಿ ಕಂಡು ಬರುತ್ತದೆ.

ಕ್ರಿ.ಶ. ೧೨೫೨ರಲ್ಲಿ ಹೊಯ್ಸಳರಾಜ ಸೋಮೇಶ್ವರನು ತಮಿಳು ದೇಶದಿಂದ ತನ್ನ ರಾಜಧಾನಿ ದ್ವಾರಸಮುದ್ರಕ್ಕೆ ಹಿಂತಿರುಗಿ ಬರುವಾಗ ರಾಮನಾಥಪುರದಲ್ಲಿ ಸೋಮದೇವ ಮತ್ತು ಬೊಪ್ಪದೇವರೆಂಬ ಇಬ್ಬರು ಚೆಂಗಾಳ್ವರಾಜರು ಅವನನ್ನು ಮರ್ಯಾದೆಯಿಂದ ಎದುರುಗೊಂಡರೆಂದು ಅರ್ಕಲಗೋಡಿನಲ್ಲಿ ಸಿಕ್ಕಿದ ಒಂದು ಶಾಸನದಿಂದ ತಿಳಿಯುತ್ತದೆ. ಈ ಇಬ್ಬರು ಚೆಂಗಾಳ್ವರಾಜರು ಜತೆಯಾಗಿ ಆಳುತ್ತಿದ್ದರು. ರಾಮನಾಥಪುರವು ಚೆಂಗಾಳ್ವರ ರಾಜ್ಯದ ಪೂರ್ವದ ಮೇರೆಯಾಗಿದ್ದಿತೆಂದು ತೋರುತ್ತದೆ. ಮೇಲೆ ಹೇಳಿದ ಶಾಸನದಿಂದ ಚೆಂಗಾಳ್ವರ ರಾಜಧಾನಿಯು ೧೨೪೫ರಿಂದ ಈಗಿನ ಸಿದ್ಧಾಪುರದ ಹತ್ತಿರ ಕಾವೇರಿ ನದಿಯ ದಕ್ಷಿಣದಲ್ಲಿರುವ ಕೊಡಗುಶ್ರೀರಂಗಪಟ್ಟಣವಾಗಿದ್ದಿತೆಂದೂ ತಿಳಿಯುತ್ತದೆ. ೧೨೮೦ ಮತ್ತು ೧೨೯೭ನೆಯ ಇಸವಿಗಳ ಶಾಸನಗಳಲ್ಲಿ ಚೆಂಗಾಳ್ವರ ಅರಸರು ಮಲ್ಲಿದೇವ ಮತ್ತು ಹರಿಹರದೇವರ ಹೆಸರುಗಳಿವೆ. ಹದಿನಾಲ್ಕನೆಯ ಶತಮಾನದಲ್ಲಿ ಉತ್ತರದಿಂದ ಮಹಮ್ಮದೀಯರು ಬಂದು ಹೊಯ್ಸಳ ರಾಜರನ್ನೂ ಇತರ ಹಿಂದೂ ರಾಜರನ್ನೂ ಸೋಲಿಸಿ ಅವರ ರಾಜ್ಯಗಳನ್ನು ಹಾಳು ಮಾಡಿದರು. ಈ ಸಮಯದಲ್ಲಿ ಚೆಂಗಾಳ್ವರ ಹೆಸರು ಕೇಳಿಬರುವುದಿಲ್ಲ.

## ೬. ನಂಜರಾಜಪಟ್ಟಣದ ಚೆಂಗಾಳ್ವರು

ಆದರೆ ತಿರುಗಿ ಹದಿನೈದನೆಯ ಶತಮಾನದಲ್ಲಿ ಚೆಂಗಾಳ್ವರು ಕೊಡಗಿನ ನಂಜರಾಜ ಪಟ್ಟಣವನ್ನು ರಾಜಧಾನಿ ಮಾಡಿಕೊಂಡು ಸುತ್ತುಮುತ್ತಲಿನ ನಾಡುಗಳನ್ನು ಆಳುತ್ತಿದ್ದರು. ಕೊಡಗು ಶ್ರೀರಂಗಪಟ್ಟಣದಲ್ಲಿ ಮತ್ತು ನಂಜರಾಜಪಟ್ಟಣದಲ್ಲಿ ಆಳಿದ ಚೆಂಗಾಳ್ವರ ವಂಶಾವಳಿ ಇಲ್ಲಿ ಕೊಟ್ಟಿದೆ.

**ನಾಗ, ರಂಗ, ಪೆರಿಯಣ್ಣ ; ನಂಜರಾಜ—೧೫೦೨-೩೩, ನಂಜುಂಡರಾಜ, ಶ್ರೀಕಂಠರಾಜ—೧೫೪೪, ವೀರರಾಜ ಒಡೆಯ—೧೫೫೯-೮೦,**

ಪೆರಿಯರಾಜದೇವ—೧೫೮೬–೧೬೦೨, ನಂಜುಂಡದೇವ, ನಂಜರಾಜದೇವ—೧೬೧೩–೧೯, ಕೃಷ್ಣರಾಜದೇವ—೧೬೧೨, ವೀರರಾಜ—೧೬೧೯–೪೪.

ಇವರಲ್ಲಿ ನಾಲ್ಕನೆಯವನಾದ ನಂಜರಾಜನು ತನ್ನ ಹೆಸರಿನಲ್ಲಿ ನಂಜರಾಜ ಪಟ್ಟಣವನ್ನು ಕಟ್ಟಿದನು.

೧೫೮೬ರಿಂದ ಆಳಿದ ಪೆರಿಯರಾಜನು ಹುಣಸೂರು ತಾಲ್ಲೋಕಿನ ಸಿಂಹ ಪಟ್ಟಣವನ್ನು ತಿರುಗಿ ಕಟ್ಟಿ ಅದನ್ನು ತನ್ನ ಹೆಸರಿನಲ್ಲಿ ಪೆರಿಯಾಪಟ್ಟಣವೆಂದು ಕರೆದನು. ಪೆರಿಯಾಪಟ್ಟಣವು ಚೆಂಗಾಳ್ವರ ಎರಡನೆಯ ರಾಜಧಾನಿ ಯಾಗಿದ್ದಿತು.

ಮೇಲೆ ಹೇಳಿದ ಚೆಂಗಾಳ್ವರಾಜರು ಹೊಯ್ಸಳ ರಾಜ್ಯದ ಅನಂತರ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯದ ಆಡಳಿತಕ್ಕೊಳಪಟ್ಟಿದ್ದರು. ಪೆರಿಯ ರಾಜನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದ ಪತನವಾಯಿತು. ಅನಂತರ ಮೈಸೂರಿನ ಶ್ರೀರಂಗಪಟ್ಟಣದಲ್ಲಿ ವಿಜಯನಗರ ಚಕ್ರವರ್ತಿಗಳ ಕೈಕೆಳಗೆ ಮಾಂಡಲಿಕನಾಗಿದ್ದ ತಿರುಮಲರಾಜನು ಬೆಟ್ಟದಪುರದ ಅನ್ನದಾನಿ ಮಲ್ಲಿ ಕಾರ್ಜುನದೇವರ ಪೂಜೆಯು ನಂಜರಾಜಪಟ್ಟಣದ ಚೆಂಗಾಳ್ವ ಅರಸರು ಇರುವ ವರೆಗೆ ನಿಲ್ಲಬಾರದೆಂದು ಹುಣಸೂರು ತಾಲ್ಲೋಕಿನ ಮಳಲವಾಡಿ ಸೀಮೆಯನ್ನು ೧೬೦೨ರಲ್ಲಿ ಚೆಂಗಾಳ್ವರ ಪೆರಿಯರಾಜನಿಗೆ ದಾನವಾಗಿ ಕೊಟ್ಟಂತೆ ಹಾಸನದ ಮೂವತ್ತಾರನೆಯ ಶಾಸನದಲ್ಲಿ ಹೇಳಿದೆ. ಆದರೆ ೧೬೪೪ರಲ್ಲಿ ಮೈಸೂರಿನ ಕಂಠೀರವ ನರಸರಾಜ ಒಡೆಯರ ಸೈನ್ಯವು ಪೆರಿಯಾಪಟ್ಟಣಕ್ಕೆ ಮುತ್ತಿಗೆಹಾಕಿ ಅದನ್ನು ವಶಪಡಿಸಿಕೊಂಡಿತು. ಪೆರಿಯಾಪಟ್ಟಣದಲ್ಲಿ ಆಳುತ್ತಿದ್ದ ವೀರರಾಜನು ತನ್ನ ಹೆಂಡತಿ ಮಕ್ಕಳನ್ನು ತಾನೇ ಕೊಂದು ಯುದ್ಧದಲ್ಲಿ ವೀರಸ್ವರ್ಗವನ್ನು ಹೊಂದಿದನು. ವೀರರಾಜನ ಮುದುಕ ತಂದೆಯು ನಂಜರಾಜಪಟ್ಟಣದಲ್ಲಿದ್ದು ಅಲ್ಲೇ ಸತ್ತುಹೋದನು. ಕೊಡಗಿನ ಹಾಲೇರಿ ವಂಶದ ರಾಜರು ಹದಿನೆಂಟ ನೆಯ ಶತಮಾನದಲ್ಲಿ ಪೆರಿಯಾಪಟ್ಟಣವನ್ನು ಮೈಸೂರು ರಾಜರಿಂದ ಗೆದ್ದು ಕೊಳ್ಳುವುದಕ್ಕೆ ಯತ್ನಿಸಿದರೂ ಸಾಧ್ಯವಾಗಲಿಲ್ಲ.

## ೭. ಕೊಂಗಾಳ್ವ ಅರಸರು

ಕೊಂಗಾಳ್ವ ಅರಸರ ಆಳ್ವಿಕೆಯು ಕೊಡಗಿನ ಚರಿತ್ರೆಯಲ್ಲಿ ಚೆಂಗಾಳ್ವರ ಆಳ್ವಿಕೆಯಷ್ಟೇ ಮಹತ್ವದ್ದಾಗಿದೆ. ರಾಜರಾಜಚೋಳನು ತನ್ನ ದಂಡ ನಾಯಕ ಮಣಿಜನು ಹನಸೋಗೆಯ ಯುದ್ಧದಲ್ಲಿ ಬಹಳ ಪರಾಕ್ರಮವನ್ನು ತೋರಿಸಿ ಚೆಂಗಾಳ್ವರನ್ನು ಸೋಲಿಸಿದುದಕ್ಕೋಸ್ಕರ ಆತನಿಗೆ ಕ್ಷತ್ರಿಯಶಿಖಾ ಮಣಿ ಕೊಂಗಾಳ್ವನೆಂಬ ಬಿರುದನ್ನೂ ಏಳುಸಾವಿರಸೀಮೆಯಲ್ಲಿ ಮಾಲಂಬಿ ಯೆಂಬ ನಾಡನ್ನೂ ಬಹುಮಾನವಾಗಿ ಕೊಟ್ಟನು. ಅಂದಿನಿಂದ ಮಣಿಜನ ವಂಶದವರಿಗೆ ಕೊಂಗಾಳ್ವರೆಂಬ ಹೆಸರಾಯಿತು.

ಕೊಂಗಾಳ್ವ ರಾಜ್ಯವು ಮೈಸೂರಿನ ಅರ್ಕಲಗೋಡು ತಾಲೋಕು ಮತ್ತು ಕೊಡಗಿನ ಏಳುಸಾವಿರ ಸೀಮೆಗಳನ್ನು ಒಳಗೊಂಡಿತ್ತು. ಇದೇ ರಾಜ್ಯವನ್ನು ಗಂಗರಾಜಕುಮಾರ ಈರೆಯಪ್ಪನು ಕ್ರಿ.ಶ. ೮೮೦ರಲ್ಲಿ ಗಂಗರಸರ ಮಾಂಡ ಲಿಕನಾಗಿ ಆಳಿದುದು ಕಂಡುಬರುತ್ತದೆ. ಕೊಂಗಾಳ್ವರ ಆಳ್ವಿಕೆಯಿಂದ ಈ ಸೀಮೆಗೆ ಕೊಂಗಳನಾಡು ಎಂಟುಸಾವಿರವೆಂದು ಹೆಸರಿತ್ತು. ಕೊಂಗಾಳ್ವರು ತಮ್ಮ ಹೆಸರಿನ ಕೊನೆಯಲ್ಲಿ ಚೋಳ ಎಂಬ ಬಿರುದನ್ನೂ ಹಾಕಿಕೊಳ್ಳುತ್ತಿದ್ದರು. ಇವರು ತಾವು ರಾಜವಂಶಕ್ಕೆ ಸೇರಿದವರು ಎಂದು ಹೇಳಿಕೊಳ್ಳುತ್ತಿದ್ದರು. ಇವರು ಜೈನರಾಗಿದ್ದರು.

ಕೊಂಗಾಳ್ವ ಅರಸರ ಶಾಸನಗಳಲ್ಲಿ ಹೆಸರಿಸಿರುವ ಮೊದಲನೆಯ ಪ್ರಸಿದ್ಧ ರಾಜನು ರಾಜೇಂದ್ರಚೋಳ ಕೊಂಗಾಳ್ವ. ಇವನು ೧೦೨೬ರಲ್ಲಿ ಹೊಯ್ಸಳ ರಾಜ ನೃಪಕಾಮನನ್ನು ಮನ್ನಿಯೆಂಬಲ್ಲಿ ಸೋಲಿಸಿದನೆಂದು ಅರ್ಕಲಗೋಡಿನ ೭೬ನೆಯ ಶಾಸನದಲ್ಲಿ ಬರೆಯಲ್ಪಟ್ಟಿದೆ.

ರಾಜೇಂದ್ರಚೋಳ ಕೊಂಗಾಳ್ವನ ಮಗನು ರಾಜಾಧಿರಾಜ ಕೊಂಗಾಳ್ವನು; ಈತನ ತಾಯಿಯ ಹೆಸರು ಪೋಚಬ್ಬರಸಿ. ರಾಜಾಧಿರಾಜ ಕೊಂಗಾಳ್ವನು ತನ್ನ ತಾಯಿ ಪೋಚಬ್ಬರಸಿಯ ಪುಣ್ಯಾರ್ಥವಾಗಿ ನಿಡತ ಹೋಬಳಿಯ ಮುಳ್ಳೂರಿನಲ್ಲಿ ಒಂದು ಬಸದಿಯನ್ನು ಕಟ್ಟಿಸಿದ್ದಾನೆಂದೂ ಅದಕ್ಕೆ ಉಂಬಳಿ ಯಾಗಿ ಕೆಲವು ಭೂಮಿಗಳನ್ನು ಬಿಟ್ಟಿದ್ದಾನೆಂದೂ ಈ ಬಸದಿಯು ಕೊಂಗಾಳ್ವರ ಅನಂತರ ಜೀರ್ಣವಾಗಿ ಹೋಗಲು ೧೩೯೦ರಲ್ಲಿ ವಿಜಯನಗರದ ವೀರಹರಿ

ಹರನು ರಾಜಾಧಿರಾಜ ಕೊಂಗಾಳ್ವನ ದಾನಶಾಸನಗಳನ್ನು ಓದಿ ಆ ಬಸದಿಯನ್ನು ನಡೆಸುವುದಕ್ಕೆ ಮುಳ್ಳೂರು ನಾಡನ್ನು ತನ್ನ ಒಬ್ಬ ಸೇನಾನಾಯಕನಾದ ಗೊಂಕರೆಡ್ಡಿನಾಯಕನೆಂಬವನಿಗೆ ದಾನವಾಗಿ ಕೊಟ್ಟಂತೆ ಕೊಡಗಿನ ೩೬ನೆಯ ಶಾಸನದಲ್ಲಿ ಬರೆದಿದೆ.

ರಾಜಾಧಿರಾಜ ಕೊಂಗಾಳ್ವನ ಮಗನು ರಾಜೇಂದ್ರಕೊಂಗಾಳ್ವ. ಇವನು ೧೦೫೦ರಲ್ಲಿ ಆಳುತ್ತಿದ್ದನು. ಇವನ ಅನಂತರ ರಾಜೇಂದ್ರಪೃಥ್ವಿಕೊಂಗಾಳ್ವ ಮತ್ತು ತ್ರಿಭುವನಮಲ್ಲ ಚೋಳಕೊಂಗಾಳ್ವನೆಂಬ ಬಿರುದುಗಳನ್ನು ಧರಿಸಿದ್ದ ಆದಾತರಾದಿತ್ಯನೆಂಬ ರಾಜನು ಆಳಿದ ಹಾಗೆ ತೋರುತ್ತದೆ. ಇವನ ಕಾಲವು ೧೦೬೬ರಿಂದ ೧೧೦೦ರ ವರೆಗೆ ಇದೆ. ಇವನು ಬಹಳ ಪ್ರಖ್ಯಾತನಾಗಿದ್ದಂತೆ ತೋರುತ್ತದೆ.

ಕೊಂಗಾಳ್ವ ಅರಸರಲ್ಲಿ ನಮಗೆ ದೊರೆತಿರುವ ಶಾಸನಗಳಲ್ಲಿ ವೀರಚೋಳ ಕೊಂಗಾಳ್ವನ ಹೆಸರು ಕೊನೆಯದು. ಈ ಸಮಯದಲ್ಲಿ ಕೊಂಗಾಳ್ವರು ಹೊಯ್ಸಳರಾಜರ ಮಾಂಡಲಿಕರಾಗಿದ್ದರು. ೧೧೭೬ನೇ ಇಸವಿಯ ಕೊಡಗಿನ ೩೩ನೆಯ ಶಾಸನದಲ್ಲಿ ವೀರಚೋಳ ಕೊಂಗಾಳ್ವನು ಹೊಯ್ಸಳರಾಜ ಇಮ್ಮಡಿ ವೀರಬಲ್ಲಾಳನ ರಾಣಿ ಪದ್ಮಲಾದೇವಿ, ಅವಳ ಮಗಳು ಸೋಮಲಾದೇವಿ ಮತ್ತು ಇತರರ ಸಮ್ಮುಖದಲ್ಲಿ ಶನಿವಾರಸಂತೆ ಸಮೀಪದ ಮುಳ್ಳೂರು ನಾಡಿನಲ್ಲಿ ಸುಂಕವನ್ನು ಎತ್ತುವ ಹಕ್ಕನ್ನು ಅಣ್ಣಾತಮ್ಮನೆಂಬವನಿಗೆ ಕೊಟ್ಟುದು ಕಂಡು ಬರುತ್ತದೆ. ಇದರಿಂದ ಹೊಯ್ಸಳರಾಜರು ಕೊಂಗಾಳ್ವರ ಉಪರಾಜತ್ವವನ್ನು ಒಪ್ಪಿಕೊಂಡಂತೆ ಕಾಣುತ್ತದೆ. ಬೇಲೂರಿನ ೮೬ನೆಯ ಶಾಸನದಲ್ಲಿ ಕೊಂಗಾಳ್ವರೂ ಚೆಂಗಾಳ್ವರೂ ಹೊಯ್ಸಳರಾಜ ಇಮ್ಮಡಿ ವೀರಬಲ್ಲಾಳನಿಗೆ ಕಾಣಿಕೆಗಳನ್ನು ಅರ್ಪಿಸುವುದಕ್ಕೆ ಅವನ ರಾಜಧಾನಿಗೆ ಹೋದ ಉಲ್ಲೇಖವಿದೆ.

ಆದರೆ ಕೊಂಗಾಳ್ವರ ರಾಜ್ಯವು ಇಮ್ಮಡಿ ವೀರಬಲ್ಲಾಳನ ಅನಂತರ ಹೆಚ್ಚು ಕಾಲವಿದ್ದಂತೆ ತೋರುವುದಿಲ್ಲ.

## ೮. ಹೊಯ್ಸಳ ರಾಜರು

ಮೈಸೂರಿನಲ್ಲಿ ಚೋಳರಾಜರ ಪ್ರಾಬಲ್ಯವನ್ನು ಮುರಿದ ಮೇಲೆ ಹೊಯ್ಸಳರಿಗೂ ಚೋಳರ ಮಾಂಡಲಿಕರಾಗಿದ್ದ ಚೆಂಗಾಳ್ವರಿಗೂ ಅನೇಕ

ಯುದ್ಧಗಳು ನಡೆದುವೆಂದೂ ಕೊನೆಗೆ ಚೆಂಗಾಳ್ವರು ಹೊಯ್ಸಳರ ಅಧಿರಾಜತ್ವವನ್ನು ಒಪ್ಪಿಕೊಳ್ಳಬೇಕಾಯಿತೆಂದೂ ಹಿಂದೆಯೇ ನಾವು ಹೇಳಿದ್ದೇವೆ. ಶಾಸನಗಳಲ್ಲಿ ಹೊಯ್ಸಳರಿಗೆ ಸಂಬಂಧಪಟ್ಟವು ನಾಲ್ಕು. ಎರಡು ಶಾಸನಗಳು ಶಾ.ಶಕ ೧೧೭೫ನೆಯ ಇಸವಿಯದಾಗಿದ್ದು ಇಮ್ಮಡಿ ವೀರಬಲ್ಲಾಳನ ಕಾಲದವು. ಉಳಿದ ಎರಡು ಶಾಸನಗಳು ಮುಮ್ಮಡಿ ನರಸಿಂಹನ ಕಾಲದವು. ಇವುಗಳ ಸಮಯ ಕ್ರಿ.ಶ. ೧೨೫೫ ಮತ್ತು ೧೨೮೫. ಈ ಶಾಸನಗಳು ಏಳುಸಾವಿರ ಸೀಮೆಯ ಬಿಲಹ ಹೋಬಳಿಯಲ್ಲೂ, ಕಣಿವೆ ಹೋಬಳಿಯಲ್ಲೂ, ನಿಡತ ಹೋಬಳಿಯಲ್ಲೂ ಸಿಕ್ಕಿವೆ. ಈ ಶಾಸನಗಳಿಂದ ಹೊಯ್ಸಳರು ಸ್ವಲ್ಪಕಾಲ ಕೊಡಗಿನ ಉತ್ತರ ಭಾಗವನ್ನು ತಾವೇ ಆಳುತ್ತಿದ್ದರೆಂದು ಊಹಿಸಬಹುದು. ಹದಿನಾಲ್ಕನೆಯ ಶತಮಾನದ ಆದಿಯಲ್ಲಿ ಉತ್ತರದಿಂದ ಮಹಮ್ಮದೀಯರು ದಂಡೆತ್ತಿ ಬಂದು ದಕ್ಷಿಣದ ರಾಜ್ಯಗಳನ್ನೆಲ್ಲಾ ಸೋಲಿಸಿ ಒಡೆದುಹಾಕಿದರು. ಆಗ ಹೊಯ್ಸಳ ರಾಜ್ಯವು ಅಳಿದುಹೋಯಿತು.

## ೯. ಮಹಾರಾಜ ಬೋಧರೂಪ

ಕೊಡಗಿನಲ್ಲಿ ಎರಡು ತಮಿಳು ಅಕ್ಷರದ ಶಾಸನಗಳು ಇವೆ. ಇವುಗಳಲ್ಲಿ ಒಂದು ಭಾಗಮಂಡಲ ದೇವಸ್ಥಾನದಲ್ಲಿದೆ. ಇನ್ನೊಂದು ಪಾಲೂರು ದೇವಸ್ಥಾನದಲ್ಲಿದೆ. ಈ ಶಾಸನಗಳು ಹದಿನಾಲ್ಕನೆಯ ಶತಮಾನದಲ್ಲಿ ಬರೆಯಲ್ಪಟ್ಟವು ಎಂದು ತೋರುತ್ತವೆ. ಈ ಶಾಸನಗಳಲ್ಲಿ ಬೋಧರೂಪನೆಂಬ ರಾಜನು ಪಾಲೂರು ಮತ್ತು ಭಾಗಮಂಡಲ ದೇವಸ್ಥಾನಗಳಲ್ಲಿ ಪೂಜೆ ನಡೆಸುವುದಕ್ಕೆ ಮಾಡಿದ ಏರ್ಪಾಡುಗಳ ಉಲ್ಲೇಖವಿದೆ. ಈ ಬೋಧರೂಪನೆಂಬ ರಾಜನು ಹಾಸನ ತಾಲೋಕಿನ ನೈಋತ್ಯದಲ್ಲಿ ಈಗಿನ ಮಹಾರಾಜದುರ್ಗವೆಂಬಲ್ಲಿ ಆಳುತ್ತಿದ್ದನೆಂದು ಇತರ ಆಧಾರಗಳಿಂದ ಕಂಡುಹಿಡಿದಿದ್ದಾರೆ. ಮೇಲೆ ಹೇಳಿದ ಶಾಸನಗಳಲ್ಲಿ ಪಾಲೂರು ಮತ್ತು ಭಾಗಮಂಡಲನಾಡು ಆ ದಾನಶಾಸನ ಮಾಡಿದ ರಾಜನಿಂದ ಆಳಲ್ಪಡುತ್ತಿತ್ತೆಂದು ಬರೆದಿದೆ. ಬೋಧರೂಪರಾಜನ ವಿಷಯ ಆತನ ರಾಜ್ಯವು ಎಲ್ಲಿಯವರೆಗೆ ವಿಸ್ತರಿಸಿತ್ತೆಂದೂ ಆತನು ಯಾವ ವಂಶಕ್ಕೆ ಸೇರಿದವನೆಂದೂ ಯಾವ ಕಾಲದಲ್ಲಿ ಆಳಿದನೆಂದೂ ಮೇಲೆ ಹೇಳಿರುವುದಕ್ಕಿಂತ ಹೆಚ್ಚೇನೂ ತಿಳಿದಿರುವುದಿಲ್ಲ.

## ೧೦. ಮುನಿವಾರಾದಿತ್ಯ ಗೋಕುಲ ದೇವರಸ

ಸುಮಾರು ಕ್ರಿ.ಶ. ೧೨೬೬ಳರಲ್ಲಿ ಮಹಾಮಂಡಲೇಶ್ವರ ಎಂಬ ಬಿರುದುಳ್ಳ ವೀರಮುನಿವಾರಾದಿತ್ಯ ಗೋಕುಲದೇವರಸನೆಂಬ ರಾಜನು ತನ್ನ ರಾಜ್ಯದ ಉಲುಗುಲಿ ಗ್ರಾಮದಲ್ಲಿ ವೀರತ್ವವನ್ನು ತೋರಿಸಿದ ಬಿಡದೆಯೆಂಬ ಹೆಂಗಸಿಗೆ ಮೂಗಿನ ಆಭರಣವನ್ನು ಬಹುಮಾನವಾಗಿ ಕೊಟ್ಟಂತೆ ಕೊಡಗಿನ ೭೫ನೆಯ ಶಾಸನದಲ್ಲಿ ಬರೆದಿದೆ. ಈ ಹೆಂಗಸು ರಾಜನ ಸೇವಕನಾದ ತನ್ನ ಗಂಡನು ಊರಲ್ಲಿ ಇಲ್ಲದಿರುವಾಗ ರಾಜನ ದನಗಳನ್ನು ಅಪಹರಿಸಲು ಬಂದ ತೆಂಕುನಾಡಿ ನವನನ್ನು ಹಿಡಿದು ಅವನ ಕಾಲುಗಳನ್ನು ಹಗ್ಗದಿಂದ ಕಟ್ಟಿಹಾಕಿದಳೆಂದೂ ಆದಕ್ಕೆ ಮೆಚ್ಚಿ ಮೇಲೆ ಹೇಳಿದ ರಾಜನು ಅವಳಿಗೆ ಮೂಗಿನ ಒಡವೆಯನ್ನು ಕೊಟ್ಟನೆಂದೂ ಶಾಸನದಲ್ಲಿ ಹೇಳಿದೆ. ಉಲುಗುಲಿ ಗ್ರಾಮವು ಸುಂಟಿಕೊಪ್ಪ ನಾಡಿನಲ್ಲಿದೆ. ಈ ಶಾಸನದಿಂದ ಸುಂಟಿಕೊಪ್ಪನಾಡು ಗೋಕುಲದೇವರಸನಿಂದ ಆಳಲ್ಪಡುತ್ತಿತ್ತೆಂದು ತಿಳಿಯುತ್ತದೆ.

## ೧೧. ವಿಜಯನಗರದ ಚಕ್ರವರ್ತಿಗಳ ಸಾರ್ವಭೌಮತ್ವ

ಹೊಯ್ಸಳ ರಾಜ್ಯದ ಪತನವಾದನಂತರ ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವು ಸ್ಥಾಪಿಸಲ್ಪಟ್ಟು ೧೫೬೫ರ ವರೆಗೆ ದಕ್ಷಿಣ ಹಿಂದೂಸ್ಥಾನದಲ್ಲಿ ಬಹಳ ವೈಭವದಿಂದ ಮೆರೆಯಿತು. ಈ ಸಮಯದಲ್ಲಿ ಕೊಡಗು ವಿಜಯನಗರದ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದಿತೆಂದೂ ಇಲ್ಲಿನ ನಾಯಕರು ಶ್ರೀರಂಗಪಟ್ಟಣದಲ್ಲಿದ್ದ ವಿಜಯನಗರ ಸಾಮ್ರಾಟರ ಮಂಡಲಾಧಿಕಾರಿಯ ಅಧೀನದಲ್ಲಿದ್ದರೆಂದೂ ತಿಳಿಯುತ್ತದೆ. ಕೊಡಗಿನ ೩೯ನೆಯ ಶಾಸನದಲ್ಲಿ ೧೩೯೦ನೇ ಇಸವಿಯಲ್ಲಿ ವಿಜಯನಗರದ ಇಮ್ಮಡಿ ಹರಿಹರ ಚಕ್ರವರ್ತಿಯು ಮೊದಲು ರಾಜಾಧಿರಾಜ ಕೊಂಗಾಳ್ವನು ಏಳುಸಾವಿರ ಸೀಮೆಯ ಮುಳ್ಳೂರನ್ನು ಅಲ್ಲಿನ ಜೈನಬಸದಿ ಯನ್ನು ನಡೆಸುವುದಕ್ಕೆ ಉಂಬಳಿಯಾಗಿ ಕೊಟ್ಟ ದಾನಶಾಸನವನ್ನು ಓದಿ ನೋಡಿ ಕೊಂಗಾಳ್ವರ ಅನಂತರ ಆ ಬಸದಿಯು ಜೀರ್ಣವಾಗಿರುವುದನ್ನು ಕಂಡು ತಿರುಗಿ ಆ ಬಸದಿಯ ಜೀರ್ಣೋದ್ಧಾರಕ್ಕಾಗಿ ಮುಳ್ಳೂರನ್ನು ತಮ್ಮ ಸೇನಾಧಿಪತಿ ಗುಂಡಪ್ಪದನ್ನಾಯಕನ ಕೈಕೆಳಗಿನ ಸೇನಾನಾಯಕ ಗೊಂಕರೆಡ್ಡಿ ನಾಯಕನಿಗೆ ದಾನವಾಗಿ ಕೊಟ್ಟಂತೆ ಬರೆದಿದೆ. ಇದರಿಂದ ಕೊಡಗಿನ ಉತ್ತರ

ಭಾಗವು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿದ್ದ ಹಾಗೆ ತೋರು ತ್ತದೆ. ಮಹಮ್ಮದೀ ಚರಿತ್ರಕಾರನಾದ ಫರಿಸ್ಟನು ಹದಿನಾರನೆಯ ಶತಮಾನದ ಕೊನೆಯಲ್ಲಿ ಕೊಡಗು, ನಾಯಕರೆಂಬ ಕೊಡಗಿನ ತುಂಡರಸರಿಂದ ಆಳಲ್ಪಡು ತ್ತಿತ್ತೆಂದೂ ಈ ನಾಯಕರು ವಿಜಯನಗರದ ಅಧಿರಾಜತ್ವವನ್ನು ಒಪ್ಪಿಕೊಂಡಿ ದ್ದರೆಂದೂ ಬರೆಯುತ್ತಾನೆ. ಈ ಸಮಯದಲ್ಲಿ ಕೊಡಗು ಹನ್ನೆರಡು ಕೊಂಬು ಗಳಾಗಿಯೂ ಮೂವತ್ತೈದು ನಾಡುಗಳಾಗಿಯೂ ವಿಭಾಗಿಸಲ್ಪಟ್ಟಿತ್ತೆಂದು ಕೊಡಗು ಹಾಡುಗಳಿಂದ ತಿಳಿಯುತ್ತದೆ.

## ೧೨. ಬೇಲೂರಿನ ನಾಯಕರ ಆಳ್ವಿಕೆ

ಕೊಡಗಿನ ಉತ್ತರ ಭಾಗದಲ್ಲಿ ಚೆಂಗಾಳ್ವರ ಆಳ್ವಿಕೆಯು ಕೊನೆಗಂಡ ಮೇಲೆ ಸ್ವಲ್ಪ ಕಾಲ ಕೊಡಗಿನ ಏಳುಸಾವಿರ ಸೀಮೆಯನ್ನು ಬೇಲೂರಿನ ನಾಯಕರು ಆಳುತ್ತಿದ್ದಂತೆ ಶಾಸನಗಳಿಂದ ಕಂಡುಬರುತ್ತದೆ. ಬೇಲೂರಿನ ನಾಯಕರು ಮಂಜರಾಬಾದು ಸೀಮೆಯನ್ನೂ ಏಳುಸಾವಿರ ಸೀಮೆಯನ್ನೂ ಆಳುತ್ತಿದ್ದರು. ಕೊಡಗಿನ ಹನ್ನೊಂದನೆಯ ಶಾಸನದಲ್ಲಿ ಬೇಲೂರಿನ ನಾಲ್ಮಡಿ ಕೃಷ್ಣಪ್ಪನಾಯಕನು ಕಟ್ಟೇಪುರ ಗ್ರಾಮವನ್ನು ೧೬೯೩ರಲ್ಲಿ ಒಬ್ಬ ಬ್ರಾಹ್ಮಣನಿಗೆ ದಾನ ಕೊಟ್ಟಿದ್ದನ್ನು ಬರೆದಿದೆ. ೪೭ನೆಯ ಶಾಸನದಲ್ಲಿ ಇದೇ ಕೃಷ್ಣಪ್ಪ ನಾಯಕನು ಮಾಲಂಬಿಯ ಒಬ್ಬ ಗೌಡನಿಗೆ ಗ್ರಾಮಕಂದಾಯವನ್ನು ಎತ್ತುವ ಹಕ್ಕನ್ನು ವಹಿಸಿಕೊಟ್ಟಿದ್ದು ಬರೆಯಲ್ಪಟ್ಟಿದೆ. ೬೬ನೆಯ ಶಾಸನದಲ್ಲಿ ೧೭೭೫ ರಲ್ಲಿ ಕೈವಲ್ಯನೆಂಬ ಯೋಗಿಗೆ ಬಿಲಹದ ಮಾದರವಳ್ಳಿ ಗ್ರಾಮವನ್ನು ದಾನ ಕೊಟ್ಟಂತಿದೆ. ಈ ಮೂರು ಶಾಸನಗಳಿಂದ ಏಳುಸಾವಿರ ಸೀಮೆಯಲ್ಲಿ ಸ್ವಲ್ಪ ಕಾಲ ಬೇಲೂರು ನಾಯಕರ ಆಳ್ವಿಕೆಯು ಇತ್ತೆಂದು ಗೊತ್ತಾಗುತ್ತದೆ.

## ೧೩. ಕೊಡಗಿನ ನಾಯಕರು

ವಿಜಯನಗರದ ಸಾಮ್ರಾಜ್ಯವು ಅಳಿದುಹೋದ ಕೂಡಲೇ ದೇಶದಲ್ಲೆಲ್ಲಾ ಅನಾಯಕತ್ವವು ತಲೆದೋರಿ ಅಲ್ಲಲ್ಲಿ ಪಾಳೆಯಗಾರರು ತಾವೇ ಸ್ವತಂತ್ರರಾಗಿ ಆಳತೊಡಗಿದರು. ಹಾಗೆಯೇ ಕೊಡಗಿನಲ್ಲಿ ವಿಜಯನಗರ ರಾಜರ ಕಾಲ ದಲ್ಲಿದ್ದ ನಾಯಕರು ಅನಂತರ ತಾವೇ ಸ್ವತಂತ್ರರಾಗಿ ಆಳುತ್ತಿದ್ದರು. ಈ

ನಾಯಕರು ತಮ್ಮತಮ್ಮೊಳಗೆ ಯಾವಾಗಲೂ ಯುದ್ಧವನ್ನು ಮಾಡಿಕೊಂಡಿರುತ್ತಿದ್ದರು. ಇವರ ಸಂಖ್ಯೆ ಎಷ್ಟಿತ್ತೆಂದು ಗೊತ್ತಿಲ್ಲ. ಇವರಲ್ಲಿ ಕಿಗ್ಗಟ್ಟುನಾಡಿನ ಅಚ್ಚುನಾಯಕನೂ ಬೆಪ್ಪುನಾಡಿನ ಉತ್ತನಾಯಕನೂ ಪಾಡಿನಾಲ್ಕುನಾಡಿನ ಕರ್ಣಂಬಾಹು ನಾಯಕನೂ ಪ್ರಸಿದ್ಧರು.

## ೧೪. ಕೊಡಗಿನ ಹಾಲೇರಿ ಅರಸರು (೧೬೩೩–೧೮೩೪)

ಈ ಸಮಯದಲ್ಲಿ ಮೈಸೂರು ದೇಶದ ವಾಯುವ್ಯ ಭಾಗದಲ್ಲಿರುವ ಇಕ್ಕೇರಿ ಅಥವಾ ಬೆದನೂರು ರಾಜಮನೆತನದ ರಾಜಕುಮಾರನೊಬ್ಬನು ಜಂಗಮವೇಷ ಧರಿಸಿಕೊಂಡು ಬಂದು ಕೊಡಗಿನಲ್ಲಿ ಮಡಿಕೇರಿಯಿಂದ ಏಳು ಮೈಲು ದೂರದಲ್ಲಿರುವ ಹಾಲೇರಿಯೆಂಬ ಗ್ರಾಮದಲ್ಲಿ ಬಂದು ನಿಂತನು. ಸ್ವಲ್ಪ ಸಮಯದಲ್ಲಿಯೇ ಅವನು ಜನರಿಂದ ಬತ್ತ ಮತ್ತು ಹಣವನ್ನು ಕಾಣಿಕೆಯಾಗಿ ತೆಗೆದುಕೊಳ್ಳುವುದಕ್ಕೆ ಪ್ರಾರಂಭಿಸಿದನು; ಕೆಲವು ಜನರನ್ನು ತನ್ನ ಮನೆಯನ್ನು ಕಾಯುವುದಕ್ಕೆ ನೇಮಿಸಿದನು. ಇವನು ವಾಸವಿದ್ದ ಸ್ಥಳಕ್ಕೆ ಬೂದಿಚಾವಡಿಯೆಂದು ಜನರು ಹೆಸರಿಟ್ಟರು. ಈ ಹೆಸರಿನಿಂದ ಇವನ ಮನೆ ಪಹರೆಗಾರರಿಗೆ ಚಾವಡಿ ಕಾರರು ಎಂದು ಹೆಸರಾಯಿತು. ಕೊನೆಗೆ ಕೊಡಗು ರಾಜ್ಯದ ಸೈನಿಕರಿಗೂ ಚಾವಡಿಕಾರರೆಂಬ ಹೆಸರೇ ವಾಡಿಕೆಯಾಯಿತು.

ಹಾಲೇರಿಯಲ್ಲಿ ಜಂಗಮನಾಗಿ ಬಂದು ನೆಲೆನಿಂತ ರಾಜಕುಮಾರನ ಹೆಸರು ವೀರರಾಜ ಒಡೆಯ. ವೀರರಾಜ ಒಡೆಯನು ತನ್ನ ಪಹರೆಗಾರರನ್ನು ಹೆಚ್ಚು ಮಾಡಿಕೊಂಡು ಕ್ರಮೇಣ ಕೊಡಗಿನ ಇತರ ನಾಯಕರಿಂದ ಕಪ್ಪ ಕಾಣಿಕೆಗಳನ್ನು ಎತ್ತತೊಡಗಿದನು. ಮೊದಲು ಮೊದಲು ಇತರ ನಾಯಕರು ವಿರೋಧಿಸಿದರೂ ಕೊನೆಗೆ ಅವರೆಲ್ಲರೂ ಹಾಲೇರಿ ಅರಸನ ಆಶ್ರಿತರಾದರು. ತಾವುನಾಡಿನ ಕರ್ಣಂಬಾಹುವು ಕೊನೆಯ ವರೆಗೂ ಹಾಲೇರಿ ರಾಜರನ್ನು ವಿರೋಧಿಸಿದನು. ಆದರೆ ಹಾಲೇರಿ ರಾಜನು ಸ್ವಲ್ಪ ಸಮಯದಲ್ಲೇ ಕೊಡಗಿನಲ್ಲಿ ನಾಯಕರ ಆಳ್ವಿಕೆಯನ್ನು ನಿರ್ಮೂಲ ಮಾಡಿ ತಾನೇ ನಿರಂಕುಶ ಪ್ರಭುವಾದನು. ಇವನ ವಂಶವು ಕ್ರಿ.ಶ. ೧೬೩೩ರಿಂದ ೧೮೩೪ರ ವರೆಗೆ ಕೊಡಗಿನಲ್ಲಿ ಆಳಿತು. ಈ ವಂಶದ ಚರಿತ್ರೆಯನ್ನು ಈ ವಂಶದ ಪ್ರಸಿದ್ಧ ಅರಸನಾದ ದೊಡ್ಡ ವೀರರಾಜೇಂದ್ರ ಒಡೆಯನು, ವಂಶದ ಪ್ರಾರಂಭದಿಂದ ಎಂದರೆ ೧೬೩೩ರಿಂದ

೧೮೦೮ರ ವರೆಗೆ ಬರೆಯಿಸಿ ಇಟ್ಟಿರುವನು. ಅವನು ಬರೆಸಿದ ಹಾಲೇರಿ ರಾಜರ ಚರಿತ್ರೆಗೆ ರಾಜೇಂದ್ರನಾಮೆಯೆಂದು ಹೆಸರು.

## ೧೫. ರಾಜೇಂದ್ರನಾಮೆ

ರಾಜೇಂದ್ರನಾಮೆಯು ಸುಲಭ ಕನ್ನಡ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಆದರೆ ಇದರಲ್ಲಿ ಆ ಕಾಲದಲ್ಲಿ ಬಳಕೆಯಲ್ಲಿದ್ದ ಅನೇಕ ಹಿಂದೂಸ್ಥಾನಿ ಶಬ್ದಗಳು ಸೇರಿಕೊಂಡಿವೆ. ಕೆಲವು ಸ್ಥಳಗಳಲ್ಲಿ ಈ ಚರಿತ್ರೆಯು ವರ್ಣನೆಗಳಿಂದ ಕೂಡಿ ಸ್ಫೂರ್ತಿದಾಯಕವಾಗಿಯೂ ಇದೆ.

ರಾಜೇಂದ್ರನಾಮೆಯಲ್ಲಿ ಬರೆಯಲ್ಪಟ್ಟಿರುವ ರಾಜರ ಚರಿತ್ರೆಯು ಆ ರಾಜರುಗಳ ಸಂಬಂಧದ ಎಲ್ಲಾ ವಿವರಗಳನ್ನು ಒಳಗೊಂಡಿದೆ ಎಂದು ಹೇಳಲು ಸಾಧ್ಯವಿಲ್ಲ. ರಾಜೇಂದ್ರನಾಮೆಯನ್ನು ದೊಡ್ಡವೀರರಾಜೇಂದ್ರ ಒಡೆಯನು ತನ್ನ ಸ್ನೇಹಿತರಾದ ಇಂಗ್ಲಿಷ್ ಅಧಿಕಾರಿಗಳ ಮತ್ತು ಇತರರ ತಿಳುವಳಿಕೆಗಾಗಿ ಬರೆಯಿಸಿದನು. ಇಂಗ್ಲಿಷ್ ಭಾಷೆಯ ಪ್ರತಿಯನ್ನು ದೊಡ್ಡವೀರರಾಜನು ಲೆಫ್ಟಿನೆಂಟ್ ರಾಬರ್ಟ್ ಅಬರ್‌ಕ್ರಾಂಬಿಯಿಂದ ಬರೆಯಿಸಿದನು. ಈ ಚರಿತ್ರೆಯು ರಾಜರ ಅಪ್ಪಣೆಯಿಂದ ಬರೆಯಲ್ಪಟ್ಟುದರಿಂದ ಈ ರಾಜವಂಶಕ್ಕೆ ಅವಮಾನವನ್ನುಂಟುಮಾಡುವಂಥ, ಕುಂದನ್ನುತರುವಂಥ ಯಾವ ಸಂಗತಿಗಳೂ ಈ ಚರಿತ್ರೆಯಲ್ಲಿಲ್ಲ. ಉದಾಹರಣೆಗೆ, ಈ ಪುಸ್ತಕದಲ್ಲಿ ಇಕ್ಕೇರಿಯ ರಾಜಮನೆತನಕ್ಕೂ ಹಾಲೇರಿ ಮನೆತನಕ್ಕೂ ಇದ್ದ ಸಂಬಂಧವನ್ನು ಸರಿಯಾಗಿ ಬರೆಯಲಿಲ್ಲ. ಇಕ್ಕೇರಿಯ ರಾಜರ ಚರಿತ್ರೆಯಲ್ಲಿ ಕೊಡಗಿನ ರಾಜರು ಇಕ್ಕೇರಿ ರಾಜರ ಆಶ್ರಿತರಾಗಿದ್ದರೆಂದೂ ಅವರಿಗೆ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರೆಂದೂ ಬರೆಯಲ್ಪಟ್ಟಿದೆ. ಇದೇ ಕಾರಣದಿಂದ ಮೈಸೂರಿನ ಹೈದರ್ ಅಲಿಯು ಬಿದನೂರು ಅಥವಾ ಇಕ್ಕೇರಿಯನ್ನು ಜಯಿಸಿದಾಗ ಇಕ್ಕೇರಿಯ ಆಶ್ರಿತರಾಗಿದ್ದ ಕೊಡಗಿನ ರಾಜರು ತನಗೂ ಕಪ್ಪ ಕೊಡಬೇಕೆಂದು ಅಪ್ಪಣೆ ಮಾಡಿದನು. ಇಕ್ಕೇರಿ ರಾಜರಿಗೂ, ಹಾಲೇರಿ ರಾಜರಿಗೂ ಇದ್ದ ಈ ಸಂಬಂಧವು ರಾಜೇಂದ್ರನಾಮೆಯಲ್ಲಿ ಕಂಡುಬರುವುದಿಲ್ಲ. ರಾಜೇಂದ್ರನಾಮೆಯು ೧೮೦೭ರಲ್ಲಿ ಬರೆಯಲ್ಪಟ್ಟಿತು. ಆದರೆ ಇದರಲ್ಲಿ ೧೬೩೩ರಿಂದ ಹಾಲೇರಿ ರಾಜರ ಚರಿತ್ರೆಯು ಬರೆಯಲ್ಪಟ್ಟಿದೆ. ದೊಡ್ಡವೀರರಾಜನು ಪಟ್ಟಕ್ಕೆ ಬರುವ ಮೊದಲು ಸುಮಾರು

ಹತ್ತು ವರ್ಷ ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಗೆ ಕೊಡಗು ಒಳಪಟ್ಟಿದ್ದಿತು. ಆ ಸಮಯದಲ್ಲಿ ರಾಜರ ಹಿಂದಿನ ಬರೆವಣಿಗೆಗಳನ್ನೆಲ್ಲಾ ಸುಲ್ತಾನರ ಅಧಿಕಾರಿಗಳು ಹಾಳುಮಾಡಿದರೆಂದು ದೊಡ್ಡವೀರರಾಜನು ಬರೆಯಿಸಿರುವನು. ಹೀಗಿರುವಲ್ಲಿ ಯಾವ ಬರೆವಣಿಗೆಯ ಆಧಾರವೂ ಇಲ್ಲದೆ ಬರೇ ನೆನಪಿನಿಂದ ಸುಮಾರು ನೂರ ಎಪ್ಪತ್ತೈದು ವರ್ಷಗಳ ಆಳ್ವಿಕೆಯ ಚರಿತ್ರೆಯನ್ನು ಕ್ರಮವಾಗಿ ವಿಷಯಗಳನ್ನು ಬಿಡದೆ ಬರೆಯಿಸಿದನೆಂದರೆ ನಂಬಲರ್ಹವಾದುದಲ್ಲ. ಈ ಪುಸ್ತಕದಲ್ಲಿ ಬರೆಯಲ್ಪಟ್ಟ ವಿಷಯಗಳು ನಿಜವಾಗಿರಬಹುದು ; ಆದರೆ ನಡೆದ ಅನೇಕ ವಿಷಯಗಳು ಬಿಟ್ಟುಹೋಗಿರಬಹುದು. ವೀರರಾಜನು ಪೆರಿಯಾಪಟ್ಟಣದಲ್ಲಿ ಸೆರೆಯಲ್ಲಿರುವಾಗ ಟಿಪ್ಪುಸುಲ್ತಾನನು ವೀರರಾಜನ ಇಬ್ಬರು ಸಹೋದರಿಯರನ್ನು ತನ್ನ ಜನಾನಕ್ಕೆ ಸೇರಿಸಿದ್ದನು. ಆ ರಾಜಕುಮಾರಿಯರು ಟಿಪ್ಪುಸುಲ್ತಾನನ ಮರಣಾನಂತರ ಕೊಡಗಿಗೆ ಬಂದು ತಾವು ಸಾಯುವವರೆಗೆ ನಾಲ್ಕುನಾಡು ಅರಮನೆಯಲ್ಲಿದ್ದರು. ಇವರು ಕಳೆದ ಶತಮಾನದ ಮಧ್ಯಭಾಗದಲ್ಲಿ ಮರಣಹೊಂದಿದರು. ಇವರ ಮೃತ ದೇಹಗಳನ್ನು ಮುಸಲ್ಮಾನರ ಧರ್ಮದಂತೆ ಕ್ರಿಯೆ ಮಾಡಿ ಹೂಳಿದರು. ದೊಡ್ಡವೀರರಾಜನ ಸಹೋದರಿಯರನ್ನು ಟಿಪ್ಪುಸುಲ್ತಾನನು ತನ್ನ ಅರಮನೆಗೆ ಸೇರಿಸಿಕೊಂಡದ್ದೂ ಮತ್ತು ಅವರು ಮತಾಂತರ ಹೊಂದಿದ್ದೂ ರಾಜೇಂದ್ರನಾಮೆಯಲ್ಲಿ ಕಂಡುಬರುವುದಿಲ್ಲ ಮೇಲೆ ಹೇಳಿದ ಕಾರಣಗಳಿಂದ ರಾಜೇಂದ್ರನಾಮೆಯು ೧೬೩೩ರಿಂದ ೧೮೦೭ರ ವರೆಗೆ ೧೭೫ ವರ್ಷಗಳ ಕಾಲದ ಕೊಡಗಿನ ಚರಿತ್ರೆಯನ್ನು ಒಳಗೊಂಡಿದ್ದರೂ ಅದು ಆ ಕಾಲದಲ್ಲಿ ನಡೆದ ಎಲ್ಲ ಸಂಗತಿಗಳ ಪೂರ್ಣ ವಿವರಣೆ ಅಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೂ ಅಲ್ಲಿ ಬರೆದಿರುವ ಸಂಗತಿಗಳಲ್ಲಿ ಹೆಚ್ಚಿನವು ನಿಜವಿರಬಹುದಾದ್ದರಿಂದ ಅದಕ್ಕೆ ಚರಿತ್ರೆಯ ಮಹತ್ವವನ್ನು ಕೊಡುತ್ತೇವೆ.

# ಕೊಡಗು ಸಂಸ್ಥಾನದ

# ರಾಜೇಂದ್ರನಾಮೆ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥

ಸ್ವಸ್ತಿ ! ಶ್ರೀ ವಿಜಯಾಭ್ಯುದಯ ಕಲಿಯುಗ ಸಂದ ವರುಷ ೪೮೯೮ನೇ ಶಾಲಿವಾಹನ ಶಕ ಸಂದ ೧೭೧೮ನೇ ವರ್ತಮಾನಕ್ಕೆ ಸಲುವ ನಳ ಸಂವತ್ಸರ ದಲ್ಲು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಕೊಡಗಿನ ಸಂಸ್ಥಾನದ ಶ್ರೀರತ್ನಸಿಂಹಾಸನಾರೂಢರಾಗಿ ಪೃಥ್ವಿ ಸಾಮ್ರಾಜ್ಯಂ ಗೆಯ್ಯುತ್ತಿದ್ದ ಭಾರದ್ವಾಜ ಗೋತ್ರದ ಆಶ್ವಲಾಯನ ಸೂತ್ರದ ಋಕ್‌ಶಾಖಾನೂಪಾಧ್ಯಾಯ ವೀರಶೈವ ಮತಸ್ಥರಾದ ಅಪ್ಪಾಜಿರಾಜೇಂದ್ರರ ಪೌತ್ರರಾದ ಲಿಂಗರಾಜೇಂದ್ರ ಒಡೆಯರವರ ಪುತ್ರರಾದ ವೀರರಾಜೇಂದ್ರ ಒಡೆಯರವರು ಕೊಡಗಿನ ಸಂಸ್ಥಾನದ ರಾಜ್ಯಾಧಿಪತ್ಯವನ್ನು ಮಾಡಿಕೊಂಡು ಇರುವಾಗ್ಗೆ, ತಮ್ಮ ಕೊಡಗಿನ ಸಂಸ್ಥಾನದ ದೊರೆಗಳ ವಂಶಾವಳಿ ಪಾರಂಪರ್ಯ ವಾಗಿ ಪ್ರಾರಂಭ್ಯದಿಂದ ನಡೆದುಬಂದಂಥಾ ವೃತ್ತಾಂತಗಳನ್ನು ಬರೆದ ಶಾಸನ ಗಳ ಜೀರ್ಣೋದ್ಧಾರಮಾಡಿ ಬರೆಸಿ, ಇತ್ತಲಾಗೆ ನಡೆದಂಥಾ ಅಭಿಪ್ರಾಯ ಗಳನ್ನು ಅದಕ್ಕೆ ಬರೆಸಬೇಕೆಂಬುದಾಗಿ, ಪುರಾಣಸಾಧನಗಳನ್ನು ತೆಗೆಸಿ ನೋಡಿ ದಲ್ಲಿ, ಕಲಿ ಸಂದ ೪೭೩೪ನೇ ಆಂಗೀರಸ ಸಂವತ್ಸರದ ಆಚೆಗೆ ನಡೆದ ವೃತ್ತಾಂತ ಬರೆದ ಸಾಧನಗಳು ನವಾಬ ಹೈದರಲ್ಲೀಖಾನಬಹಾದ್ದರವರು ಅವರ ಮಗ ಟೀಪೂಸುಲ್ತಾನರ ದಿವಸದಲ್ಲಿ ಸಹ ಅತಂತ್ರವಾಗಿ ಹೋದದ್ದು ಹೋಗಲಾಗಿ, ಆ ಆಂಗೀರಸ ಸಂವತ್ಸರದ ಇತ್ತಲಾಗೆ ತಂದೆಯುವರಾದ ಲಿಂಗರಾಜೇಂದ್ರ ಒಡೆಯರ ದಿವಸ ಪರಿಯಂತ ಆದ ವಿದ್ಯಮಾನ ಬರೆದ ಸಾಧನಗಳು ಉಳಿದು ಇದ್ದದರಿಂದ ಅದರಲ್ಲಿ ಬರೆದು ಇದ್ದ ವಿವರ ಮತ್ತು ತಮ್ಮ ಕಾಲದಲ್ಲಿ ನಡೆ ದಂಥಾ ರಾಜಕಾರ್ಯ ಕಾರಣಂಗಳ ಸಹ, ಸಮಸ್ತರು ತಿಳಿಯುವ ಬಗ್ಗೆ ನಳ ಸಂವತ್ಸರದ ಮಾಘ ಶು. ೧ ಯು ಭಾನುವಾರ ಅಪ್ಪಣೆಕೊಟ್ಟು ಬರೆಸಿದ ಕ್ರಮ ವೆಂತೆಂದರೆ :

ಅಂಗೀರಸ ಸಂವತ್ಸರದಲ್ಲಿ ವೀರರಾಜೇಂದ್ರ ಒಡೆಯರ ಪೌತ್ರರಾದ ಅಪ್ಪಾಜಿರಾಜರ ಪುತ್ರರಾದ ಮುದ್ದರಾಜ ಒಡೆಯರು ಪೂರ್ವ ಆರಭ್ಯ ದೊರೆತನ ಮಾಡಿ ಬಂದಂಥ ಜಾಗ ಹಾಲೇರಿ ಅರಮನೆ ಆದ್ದರಿಂದ, ಅಲ್ಲಿಯೇ ಇದ್ದು ಕೊಂಡು ರಾಜ್ಯಭಾರ ಮಾಡಿಕೊಂಡು ಇದ್ದರು. ಅತಃಪ್ರಾಕು ಇವರ ವಂಶ ಭೂತರಲ್ಲಿ ಒಬ್ಬರು ಮೊದಲಾರಭ್ಯದಿಂದ ಪೆರಿಯಾಪಟ್ಟಣದಲ್ಲಿ ಇದ್ದು ಅಲ್ಲಿ ರಾಜ್ಯಭಾರ ಮಾಡಿಕೊಂಡು ಏಕಗೃಹಕೃತ್ಯವಾಗಿ ನಡೆಯುತ್ತಾ ಇದ್ದರು.

ಈ ಕೊಡಗಿನ ಸಂಸ್ಥಾನದ ಸಿಂಹಾಸನದ ಅಧಿಪತಿಗಳಾಗಿ ಇದ್ದ ಮುದ್ದರಾಜ ಒಡೆಯರ ಪಟ್ಟದ ಸ್ತ್ರೀ ಆದ ದೇವಮ್ಮಾಜಿಯವರ ಗರ್ಭದಲ್ಲಿ ರಾಜಶ್ರೇಷ್ಠರಾದ ಶಿರಿಬಾಯಿ ದೊಡ್ಡವೀರಪ್ಪ ಒಡೆಯರು ಕಲಿ ಸಂದ ೪೭೫೯ನೇ ಹೇವಿಳಂಬಿ ಸಂ॥ದಲ್ಲಿ ಜನಿಸಿದರು. ಅವರ ಹಿಂದೆ ಅಪ್ಪಾಜಿರಾಜರು, ಅವರ ಬೆನ್ನು ಹಿಂದೆ ನಂದರಾಜರು ಸಹ ಜನಿಸಿದರು. ಅದರಲ್ಲಿ ಹಿರಿಯ ಕುಮಾರ ಶಿರಿಬಾಯಿ ದೊಡ್ಡವೀರಪ್ಪ ಒಡೆಯರಿಗೆ ಮುದ್ದಮ್ಮಾಜಿ ದೇವಮ್ಮಾಜಿ ಎಂಬ ಇಬ್ಬರು ರಾಣಿಗಳ ಮದುವೆಮಾಡಿ, ಮುದ್ದರಾಜರವರು ಮಡಿಕೇರಿ ಎಂಬ ಜಾಗ ಪಸಂದುಮಾಡಿ, ಅಲ್ಲಿ ನೂತನವಾಗಿ ಕೋಟೆಯನ್ನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗೆಸಿ ತಯ್ಯಾರುಮಾಡಿಸಿ ಕಲಿ ಸಂದ ೪೭೮೩ನೇ ದುರ್ಮತಿ ಸಂವತ್ಸರದಲ್ಲಿ ತಮ್ಮ ಜ್ಯೇಷ್ಠಪುತ್ರರಾದ ದೊಡ್ಡವೀರಪ್ಪ ಒಡೆಯರಿಗೆ ರಾಜ್ಯಪಟ್ಟಾಭಿಷೇಕವನ್ನು ಮಾಡಿ ರಾಜ್ಯಾಧಿಪತ್ಯವನ್ನು ಕೊಟ್ಟು, ಆಮೇಲೆ ಎರಡನೇ ಕುಮಾರರಾದ ಅಪ್ಪಾಜಿರಾಜರಿಗೆ ರಾಜಮ್ಮಣ್ಣಿಯೆಂಬವರ ವಿವಾಹವನ್ನು ಮಾಡಿ, ಅವರನ್ನು ಮುದ್ದರಾಜ ಒಡೆಯರು ತಮ್ಮ ಬಳಿಯ ಹಾಲೇರಿ ಅರಮನೆಯಲ್ಲಿ ಇಟ್ಟುಕೊಂಡು, ಮೂರನೇ ಮಗನಾದ ನಂದರಾಜ ಅರಸುಗಳಿಗೆ ನಂಜಮ್ಮಣ್ಣಿಯೆಂಬವರ ವಿವಾಹ ಮಾಡಿ ಅವರಿಗೆ ಹೊರಮಲೆ ನಾಡನ್ನು ಜಹಗೀರು ಕೊಟ್ಟು ಅಲ್ಲಿ ಇಟ್ಟರು.

ಆಮೇಲೆ ಕಲಿ ಸಂದ ೪೭೮೫ನೇ ಕ್ಷಯ ಸಂವತ್ಸರದಲ್ಲಿ ಮುದ್ದರಾಜ ಒಡೆಯರು ಶಿವಾಧೀನವಾದರು. ದೊಡ್ಡವೀರಪ್ಪ ಒಡೆಯರು ಅದೇ ಮೇರೆ ರಾಜ್ಯಭಾರವನ್ನು ಮಾಡುತ್ತ ಇದ್ದರು. ಅವರಿಗೆ ಅಪ್ಪಾಜಿರಾಜರು ಎಂಬ ಕುಮಾರರು ಜನಿಸಿದ್ದರಿಂದ ವಿವಾಹ ಮಾಡಿದರು. ಅದೇ ರಾಣಿಯವರ ಗರ್ಭದಲ್ಲಿ ಚಿಕ್ಕವೀರಪ್ಪ ಒಡೆಯರೆಂಬ ಕುಮಾರರು ಜನಿಸಿದರು. ಹಾಲೇರಿ

ಅರಮನೆಯಲ್ಲಿ ಇದ್ದ ಅಪ್ಪಾಜಿರಾಜರಿಗೆ ಐದು ಮಂದಿ ಕುಮಾರರು ಜನಿಸಿದರು. ಅದರಲ್ಲಿ ಹಿರಿಯ ಕುಮಾರರಾದ ಮುದ್ದಯ್ಯರಾಜರಿಗೆ ನಂಜಮ್ಮಣ್ಣಿ ಎಂಬವರ ವಿವಾಹಮಾಡಿದರು. ಎರಡನೇ ಲಿಂಗರಾಜರಿಗೆ ದೇವಾಂಬಿಕೆ ಅಮ್ಮನವರ ವಿವಾಹಮಾಡಿದರು. ಉಳಿಕೆ ಮೂರು ಮಂದಿ ಕುಮಾರರು ಕೆಲವು ದಿನದಲ್ಲಿ ತೀರಿಹೋದರು. ಆ ಮುದ್ದಯ್ಯರಾಜರಿಗೆ ಅಪ್ಪಾಜಿ ರಾಜರು ಜನಿಸಿದರು. ಲಿಂಗರಾಜರಿಗೆ ವೀರರಾಜ ಒಡೆಯರು ಜನಿಸಿದರು. ಹೊರಮಲೆಯಲ್ಲಿ ಇದ್ದ ನಂದರಾಜರಿಗೆ ಮುದ್ದರಾಜರು ಜನಿಸಿದರು. ಆ ಮುದ್ದಯ್ಯ ಅರಸುಗಳಿಗೆ ವಿವಾಹಮಾಡಿದರು. ಅವರಿಗೆ ಮಲ್ಲಯ್ಯರಾಜರು ಜನಿಸಿದರು.

ಈ ಮೇರೆ ಇರುತ್ತ ಇದ್ದಲ್ಲಿ, ಆವಾಗ್ಗೆ ಮೈಸೂರು ಸಂಸ್ಥಾನದಲ್ಲಿ ಚಿಕ್ಕದೇವರಾಜ ಒಡೆಯರು, ಇಕ್ಕೇರಿ ಸಂಸ್ಥಾನದಲ್ಲಿ ದೊಡ್ಡಚನ್ನಮ್ಮಾಜಿಯುವರು ಸೋಮಶೇಖರನಾಯಕರ ಸಾಕಿಕೊಂಡು ದೊರೆತನ ಮಾಡುತ್ತ ಇದ್ದರು. ಸ್ವಾದೆ ಸಂಸ್ಥಾನದಲ್ಲಿ ಸದಾಶಿವರಾಜರೂ, ಬೇಲೂರು ಸಂಸ್ಥಾನದಲ್ಲಿ ವೆಂಕಟಾದ್ರಿನಾಯಕರೂ, ಚಿರಕಲ ಸಂಸ್ಥಾನದಲ್ಲಿ ವೀರವರ್ಮರಾಜರೂ, ಈ ಮೇರೆ ತಮ್ಮ ತಮ್ಮ ರಾಜ್ಯಭಾರ ಮಾಡಿಕೊಂಡು ಇರುತ್ತಿದ್ದರು.

ಆವಾಗ್ಗೆ ಮೈಸೂರ ಸರಹದ್ದಿನ ಪೆರಿಯಾಪಟ್ಟಣದ ಸೀಮೆಯೂ ಕೊಡಗಿನ ಸೀಮೆಯೂ ಒಂದಾಗಿ ನಡೆದುಬರುತ್ತ ಇತ್ತು. ಕೊಡಗಿಗೂ ಮೈಸೂರಿಗೂ ಸೇರಿದ ಸರಹದ್ದು ಪೆರಿಯಾಪಟ್ಟಣ ತಾಲ್ಲೂಕು ಕಟ್ಟೆಮಳವಾಡಿ ಸಮೀಪ ಉದ್ದೂರು ಕೊಡಗರಹಳ್ಳಿಯೆಂಬಲ್ಲಿ ಕೊಡಗಿನ ನಿಶಾನಿಕಲ್ಲು ನಟ್ಟೆಯಿದೆ. ಮೈಸೂರವರಿಗೂ ಕೊಡಗಿನವರಿಗೂ ಮೊದಲಾಗಿ ವಿರೋಧವಾದ ಕಾರಣ ಏನೆಂದರೆ—ಪೆರಿಯಾಪಟ್ಟಣದ ನಂಜುಂಡ ಅರಸುಗಳ ಕಡೆಯ ಕೆಲವು ಚಾಕರ ಜನರು ಪಿತೂರಿಯಿಂದ, "ಈಗ ನಿಮ್ಮ ಫವುಜು ಕಳುಹಿಸಿಕೊಟ್ಟರೆ ಈ ಕೋಟೆ ನಿಮ್ಮ ಕೈವಶ ಮಾಡಿಕೊಡುತ್ತೇವೆ" ಎಂಬದಾಗಿ ಮೈಸೂರು ದೊರೆಗಳಿಗೆ ಚದಿ ಸಂಧಾನ ನಡೆಸಿ ಹೇಳಿಕಳುಹಿಸಿದ್ದರಿಂದ, ಆ ಚಿಕ್ಕದೇವರಾಜ ಒಡೆಯರು ಪೆರಿಯಾಪಟ್ಟಣದ ಕೋಟೆ ಆ ಸೀಮೆ ಸಹ ಸಾಧಿಸಿಕೊಳ್ಳಬೇಕೆಂಬುದಾಗಿ ಫವುಜು ಜಮಾಯಿಸುತ್ತ ಇದ್ದರು. ಇವರ ಫವುಜು ತಯಾರು ಮಾಡಿಸುವ ಸಮಾಚಾರ ನಂಜುಂಡ ಅರಸುಗಳು ತಿಳಿದು, ಪೆರಿಯಾಪಟ್ಟಣದ ಕೋಟೆಯಲ್ಲಿ ತಮ್ಮ ಮಗನಾದ ವೀರರಾಜರ ಮಡಗಿ, ತಾವು ಫವುಜು ತೆಗೆದುಕೊಂಡು

ಹೋಗುವ ಬಗ್ಗೆ ಮಡಿಕೇರಿಗೆ ಬಂದು, ಈ ಸಮಾಚಾರವನ್ನು ದೊಡ್ಡವೀರಪ್ಪ ಒಡೆಯರಿಗೆ ಜಾಹೀರು ಮಾಡಿದ್ದಲ್ಲಿ, ಅವರು ತಮ್ಮ ಕೊಡಗು ಮಂದಿ ಯಾವತ್ತು ಜಮಾಯಿಸುತ್ತ ಇದ್ದರು. ಅಷ್ಟರಲ್ಲಿ, "ಈ ಮೇರೆ ನಂಜುಂಡ ಅರಸುಗಳು ಫವುಜು ತೆಗೆದುಕೊಂಡು ಬರುವ ಬಗ್ಗೆ ಮಡಿಕೇರಿಗೆ ಹೋಗಿಯಿದ್ದಾರೆ. ಆ ಫವುಜು ತೆಗೆದುಕೊಂಡು ಇಲ್ಲಿಗೆ ಬಂದರೆ ಬಲ ಹೆಚ್ಚಾಗುತ್ತದೆ. ಆ ಬಳಿಕ ಕೋಟೆ ನಿಮಗೆ ಸಾಧ್ಯವಾಗುವುದು ಪ್ರಯಾಸವಿದೆ. ಆದುದರಿಂದ ಆ ಫವುಜು ಬರುವುದಕ್ಕಿಂತ ಮೊದಲೇ ನಿಮ್ಮ ಫವುಜು ಬಂದರೆ ಸುಲಭದಲ್ಲಿ ನಿಮ್ಮ ಕೈವಶಮಾಡಿಕೊಡುತ್ತೇವೆ" ಎಂಬದಾಗಿ ಪೆರಿಯಾಪಟ್ಟಣದಲ್ಲಿ ಇದ್ದ ಫಿತೂರಿಯವರು ಮೈಸೂರು ದೊರೆಗಳಿಗೆ ಹೇಳಿಕಳುಹಿಸಿದಲ್ಲಿ, ಈ ವರ್ತಮಾನ ಕೇಳಿದಾಕ್ಷಣ ಚಿಕ್ಕದೇವರಾಜರು ರಾತ್ರಿಹಗಲು ಫವುಜು ಕಳುಹಿಸಿ, ಪೆರಿಯಾಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿಸಿ, ಜಗಳಮಾಡುತ್ತ ಇದ್ದರು. ದೊಡ್ಡವೀರಪ್ಪ ಒಡೆಯರು ತಮ್ಮ ಮಂದಿ ಯಾವತ್ತು ಜಮಾಯಿಸಿಕೊಂಡು ಹೋಗಿ ಸಿದ್ಧೇಶ್ವರನ ಬೆಟ್ಟದ ಬಳಿಗೆ ತಲುಪುವಷ್ಟರಲ್ಲಿ 'ಆ ಫಿತೂರಿ ಜನರ ಸಹಾಯದಿಂದ ಪೆರಿಯಾಪಟ್ಟಣದ ಕೋಟೆಯನ್ನು ಹಲ್ಲಾ ಮಾಡಿ ಮೈಸೂರವರು ತೆಗೆದುಕೊಂಡರು. ಆವಾಗ್ಗೆ ಅಲ್ಲಿ ಇದ್ದ ವೀರರಾಜ ಅರಸುಗಳು ತಮ್ಮ ಬಹುಮಾನ ಕೀರ್ತಿಯ ಮೇಲೆ ದೃಷ್ಟಿ ಮಡಗಿ ತಮ್ಮ ಕುಟುಂಬ ಮಕ್ಕಳು ಯಾವತ್ತನ್ನು ಕೊಂದುಹಾಕಿ, ಅವರು ಅಲ್ಲಿಯೇ ಜಗಳ ಮಾಡಿ ಪ್ರಾಣಬಿಟ್ಟರು' ಎಂಬದಾಗಿ ದೊಡ್ಡವೀರಪ್ಪ ಒಡೆಯರಿಗೆ ವರ್ತಮಾನ ಬಂದದ್ದರಿಂದ, "ಆ ಕೋಟೆಯನ್ನು ಮೈಸೂರವರು ತೆಗೆದುಕೊಂಡು ತಮ್ಮ ಮಂದಿ ಠಾಣ್ಯಯಿಟ್ಟು ಬಲ ಕಾಯಿಸಿಕೊಂಡರು. ಇನ್ನು ನಾವು ಅಲ್ಲಿಗೆ ಹೋದರೆ ಫಲವೇನದೆ? ಇನ್ನು ಮೈಸೂರವರು ಬಡಾಯಿಸಿ ಕೊಡಗಿನ ಸೀಮೆಯೊಳಗೆ ನುಗ್ಗಿ ಬಂದಾರು" ಎಂಬದಾಗಿ ತಮ್ಮ ಮನಸ್ಸಿನಲ್ಲು ಗ್ರಹಿಸಿ, ಕೊಡಗಿನ ಸರಹದ್ದು ಸಿದ್ಧೇಶ್ವರನ ಬೆಟ್ಟ ಬಳಿಯ ಮುಂತಾದ ಎಲ್ಲೆಗಟ್ಟು ಬಂದ ಹಾಗೆ ಅಲ್ಲಿ ಬೇಕಾದಷ್ಟು ಮಂದಿ ಇಟ್ಟು ಬಂದೋಬಸ್ತು ಮಾಡಿಸಿ, ತಾವು ಪುನಃ ಮಡಿಕೇರಿಗೆ ಬಂದು, ಪೆರಿಯಾಪಟ್ಟಣದಲ್ಲಿ ನಡೆದ ವೃತ್ತಾಂತ ಯಾವತ್ತು ನಂಜುಂಡ ಅರಸುಗಳಿಗೆ ಹೇಳಿದ್ದಲ್ಲಿ, ಅವರು ಬಹು ಚಿಂತಾಕ್ರಾಂತರಾಗಿ ದುಃಖಪಟ್ಟುಕೊಂಡುದರಿಂದ "ನಿಮ್ಮ ಕುಮಾರರು ತೀರಿಹೋದಾಗ್ಯೂ ಆ ಮೈಸೂರವರು ಮಾಡಿದ್ದಕ್ಕೆ ಪ್ರತಿ

ಜವಾಬು ಕೊಡುವ ಬಗ್ಗೆ ನಿಮ್ಮ ಅಣ್ಣನ ಮಗನಾಗಿ ನಾವು ಹಾಜರು ಇದ್ದೇವೆ. ಇದರ ಮೇಲೆ ನಮ್ಮ ಅರಮನೆಯಲ್ಲು ಇರುವಂತಹ ಚಿಕ್ಕವರು ದೊಡ್ಡವರು ಸಹ ತಮ್ಮ ಮಕ್ಕಳೋಪಾದಿಯಲ್ಲಿ ಇದ್ದಾರೆ. ತಾವು ಎಲ್ಲಾ ಬಗೆಯಲ್ಲು ನಿಶ್ಚಿಂತರಾಗಿ ಇರಬೇಕು " ಎಂಬದಾಗಿ ಒಡಂಬಡಿಸಿದರು.

ಆವಾಗ್ಗೆ ಆ ನಂಜುಂಡ ಅರಸುಗಳು ಹೇಳಿದ ವಿವರ: " ನಮಗೆ ಮುಪ್ಪಿನ ಕಾಲವಾದ್ದರಿಂದ ನಮ್ಮ ಮನೆಗೆ ಪೆರಿಯಾಪಟ್ಟಣದ ಒತ್ತಿನಲ್ಲಿ ನಿಮ್ಮ ಒಡಂಬಡಿಕೆಯಿಂದ ಕೂರಿಸಿ, ನಾವು ಈ ಲೋಕದ ಆಸೆ ತೊರೆದು ಶಿವಧ್ಯಾನ ಮಾಡಿಕೊಂಡು ಇರುತ್ತಾ ಇದ್ದೇವು. ಇಂಥಾ ಮುಪ್ಪಿನ ವೇಳೆಯಲ್ಲಿ ನೋಡ ಬಾರದಂಥಾ ಅವಸ್ಥೆ ಮಹಾದೇವನು ತೋರಿಸಿದ. ನಮ್ಮ ಕಯ್ಯಿಂದ ಬಿಟ್ಟು ಹೋದಂತಹ ಸೀಮೆಯನ್ನು ನೀವು ಸಾಧಿಸಿಕೊಳ್ಳಬೇಕು. ನಮ್ಮ ಆಯುಷ್ಯ ತೀರುವ ಪರಿಯಂತರ ಇರುವ ಬಗ್ಗೆ ಒಂದು ಮನೆ, ನಮ್ಮ ಮನೆದೇವರಾದ ವೀರಭದ್ರ ದೇವರಿಗೆ ಒಂದು ದೇವಸ್ಥಾನ ಸಹ ಕಟ್ಟಿಸಿಕೊಡಬೇಕು. ಇದಲ್ಲದೆ ನಮ್ಮ ಹೆಸರಲ್ಲಿ ಒಂದು ಲಿಂಗ ಪ್ರತಿಷ್ಠೆಮಾಡಬೇಕು ಎಂಬದಾಗಿ ನಮ್ಮ ಮನಸ್ಸಿನಲ್ಲು ಇದೆ. ಈ ಬಗ್ಗೆ ಕಾವೇರಿ ಹೊಳೆಕರೆಯಲ್ಲಿ ಒಂದು ದೇವಸ್ಥಾನ ವನ್ನು ಕಟ್ಟಿಸಿ, ಆದರಲ್ಲಿ ನಮ್ಮ ಹೆಸರಿಂದ ಲಿಂಗಪ್ರತಿಷ್ಠೆ ಮಾಡಿಸಿ, ನಮ್ಮ ಆಯುಷ್ಯ ತೀರಿದ ಮೇಲೆ ಆ ದೇವಸ್ಥಾನದ ಮುಂದೆ ನಮ್ಮ ಸಮಾಧಿ ಮಾಡಿ ಅದರ ಮೇಲೆ ಕಲ್ಲುಮಂಟಪ ಕಟ್ಟಿಸಿ ಅದರ ಒಳಗೆ ಬಸವೇಶ್ವರ ದೇವರ ಪ್ರತಿಷ್ಠೆ ಮಾಡಿಸಬೇಕು " ಎಂಬದಾಗಿ ಹೇಳಿದ್ದರಿಂದ, ಅದೇ ಮೇರೆ ಕಾವೇರಿ ಹೊಳೆ ಬಳಿಯ ಹೊಳಸಾಲಳ್ಳಿಯಲ್ಲಿ ಅವರಿಗೆ ಒಪ್ಪಿದ ಸ್ಥಳದಲ್ಲಿ ದೊಡ್ಡವೀರಪ್ಪ ಒಡೆಯರವರು ಒಂದು ಅರಮನೆಯನ್ನು ಕಟ್ಟಿಸಿ, ಅದರ ಸುತ್ತ ಕಂದಕ ಮುಂತಾಗಿ ತೆಗೆಸಿ, ಅವರನ್ನು ಅಲ್ಲಿ ಮಡಗಿ, ಅದಕ್ಕೆ ನಂಜರಾಯಪಟ್ಟಣ ಎಂಬ ಹೆಸರು ಮಡಗಿ, ಅವರ ವ್ಯೆಗಾವಲಿನ ಬಗ್ಗೆ ೭೦೦ ಜನ ಕೊಡಗರ ನೇಮಿಸಿಕೊಟ್ಟು, ಅವರು ಹೇಳಿದ ಮೇರೆ ಹೇರಳ ದ್ರವ್ಯ ವೆಚ್ಚಮಾಡಿ ವೀರಭದ್ರ ದೇವಸ್ಥಾನವನ್ನು ಕಟ್ಟಿಸಿ, ಅದರಲ್ಲಿ ದೇವರ ಪ್ರತಿಷ್ಠೆಮಾಡಿ, ಮತ್ತೊಂದು ದೇವ ಸ್ಥಾನವನ್ನು ಕಲ್ಲಿಂದ ಕಟ್ಟಿಸಿ, ಅದರ ಒಳಗೆ ಲಿಂಗಪ್ರತಿಷ್ಠೆ ಮಾಡಿಸಿ ಅದಕ್ಕೆ ನಂಜುಂಡೇಶ್ವರ ಎಂಬ ಹೆಸರು ಮಡಗಿದರು. ಆ ಬಳಿಕ ಕೆಲವು ದಿವಸದ ಮೇಲೆ ಆ ನಂಜುಂಡ ಅರಸುಗಳು ಶಿವಾಧೀನವಾದ್ದರಿಂದ, ಅವರು ಹೇಳಿದ

ಮೇರೆ ದೊಡ್ಡವೀರಪ್ಪ ಒಡೆಯರು ಆ ದೇವಸ್ಥಾನದ ಮುಂದೆ ಸಮಾಧಿಮಾಡಿಸಿ, ಅದರ ಮೇಲೆ ಕಲ್ಲುಮಂಟಪವನ್ನು ಕಟ್ಟಿಸಿ, ಅದರ ಒಳಗೆ ದೊಡ್ಡದಾಗಿ ಒಂದು ಬಸವೇಶ್ವರ ದೇವರ ಪ್ರತಿಷ್ಠೆ ಮಾಡಿಸಿ, ಆ ದೇವಸ್ಥಾನದ ವೆಚ್ಚದ ಬಗ್ಗೆ ಆಚಂದ್ರಾರ್ಕವುಳ್ಳ ಪರಿಯಂತರ ಧರ್ಮ ನಡೆಯುವ ಬಗ್ಗೆ ಕೆಲವು ಭೂಮಿಯನ್ನು ಉತ್ತಾರು ಬಿಟ್ಟುಕೊಟ್ಟರು.

ಆ ಬಳಿಕ ಕೆಲವು ಕಾಲದ ಮೇಲೆ ಕೊಡಗಿನ ಸಂಸ್ಥಾನವನ್ನು ಕಟ್ಟಿಕೊಳ್ಳಬೇಕೆಂಬುದಾಗಿ ಮೈಸೂರ ಸಂಸ್ಥಾನದಿಂದ ಭಾರಿ ದಂಡು ಬಂದಲ್ಲಿ, ದೊಡ್ಡವೀರಪ್ಪ ಒಡೆಯರವರು ತಮ್ಮ ಫವುಜು ಯಾವತ್ತು ತೆಗೆದುಕೊಂಡು ಸರಹದ್ದು ಬಂದೋಬಸ್ತುಮಾಡಿ, ಅವರ ಸಂಗಡ ಜಗಳ ಮಾಡುವುದಕ್ಕೆ ತಯಾರಾಗಿ ಇದ್ದರು. ಈ ತರುವಾಯದಲ್ಲಿ ಕೊಡಗಿನ ಸೀಮೆಗೆ ವಳಿತವಾದ ಬೆಪ್ಪುನಾಡು ನಾಯಕನ ಉತ್ತ ಎಂಬ ಕೊಡಗ ಕಾರೇಕಾರನು ಉಪ್ಪಿಗೆ ಹರಾಮನಾಗಿ ಕೋಟೆಂಗಡಿ ಅರಸನ ಬಳಿಗೆ ಓಡಿಹೋಗಿ ಅರಸಿಗೆ ಹೇಳಿದ ವಿವರ: "ಮೊದಲು ಮೈಸೂರವರು ಕೊಡಗಿಗೆ ಸೇರಿದ ಪೆರಿಯಾಪಟ್ಟಣದ ಕೋಟೆಯನ್ನು ತೆಗೆದುಕೊಂಡು, ಈಗ ಕೊಡಗಿನ ಸೀಮೆಯನ್ನು ಕಟ್ಟಿಕೊಳ್ಳಬೇಕೆಂಬುದಾಗಿ ಹೇರಳ ಫವುಜು ತೆಗೆದುಕೊಂಡು ಇಲ್ಲಿಗೆ ಬಂದು ಇದ್ದಾರೆ. ಆದ್ದರಿಂದ ದೊಡ್ಡವೀರಪ್ಪ ಒಡೆಯರವರು ಯಾವತ್ತು ಮಂದಿಯನ್ನು ತೆಗೆದುಕೊಂಡು ಸರಹದ್ದು ಬಂದೋಬಸ್ತು ಮಾಡಿಕೊಂಡು ತಯಾರಾಗಿ ಇದ್ದಾರೆ. ಅವರ ಸೀಮೆ ಜನರೆಲ್ಲ ಗಾಬರಿಯಾಗಿ ಇದ್ದಾರೆ. ಈ ಸಮಯದಲ್ಲಿ ನೀವು ಯಾವತ್ತು ನಾಯಮಾರರನ್ನು ಕರೆದುಕೊಂಡು ಕೊಡಗಿನ ಸೀಮೆಯನ್ನು ಸಾಧಿಸುವ ಬಗ್ಗೆ ಘಟ್ಟ ಹತ್ತಿ ಬಂದರೆ ನಾನು ಕೆಲವು ಕೊಡಗರನ್ನು ನಿಮ್ಮ ಕುಮ್ಮಕ್ಕಿಗೆ ಸಾಕಾರ ಮಾಡಿಕೊಡುತ್ತೇನೆ" ಎಂಬದಾಗಿ ಹೇಳಿದಲ್ಲಿ, ಆ ಮಾತನ್ನು ಆ ಕೋಟೆ ಅರಸು ನಂಬಿಕೊಂಡು, ನಾಲ್ಕು ಐದು ಸಾವಿರ ನಾಯಮಾರರನ್ನು ಕರೆದುಕೊಂಡು ಘಟ್ಟದ ಮೇಲೆ ತೋಮಾರ ಎಂಬ ಗ್ರಾಮಕ್ಕೆ ಬಂದು, ಅಲ್ಲಿ ಒಂದು ಲಕ್ಕಡಿ ಕೋಟೆ ಹಾಕಿ, ತಮ್ಮ ಫವುಜು ಸಹ ಆ ಕೋಟೆಯೊಳಗೆ ಇದ್ದುಕೊಂಡು, "ನಮ್ಮ ಕುಮ್ಮಕ್ಕಿಗೆ ಕೊಡಗರ ಕೂಡಿಸಿ ಕೊಡುತ್ತೇನೆ ಎಂದು ಹೇಳಿಯಿದ್ದೆಯಷ್ಟೆ, ಅವರು ಎಲ್ಲಿ ಇದ್ದಾರೆ?" ಎಂತ ಆ ಕೋಟೆ ಅರಸು ಕೇಳಿದ್ದಲ್ಲಿ, ಆ ನಿಮ್ಮಕ್‌ಹರಾಮು ಹೇಳಿದ್ದು: "ಆ ಜನರು

ದೊಡ್ಡವೀರಪ್ಪ ಒಡೆಯರ ಸಂಗಡ ಮೈಸೂರ ಫವುಜಿನ ಮೇಲೆ ಜಗಳ ಮಾಡುವು ದಕ್ಕೆ ಹೋಗಿಯಿದ್ದಾರೆ. ಈಗ ಕರೆಸುವುದಕ್ಕೆ ಸಂಗತಿಯಿಲ್ಲ. ಮೈಸೂರವರು ಕೊಡಗಿನ ಸೀಮೆ ಒಳಗೆ ಬಂದರೆ ಆ ಜನರೆಲ್ಲ ಚೆಲ್ಲಾಪಿಲ್ಲಿಯಾಗಿ ಸೀಮೆಗೆ ಬರುತ್ತಾರೆ. ಆವಾಗ್ಗೆ ನನಗೆ ಬೇಕಾದವರ ಕರೆದರೆ ಬಂದಾರು. ಆಮೇಲೆ ಕೆಲವು ಕೊಡಗಿನ ಸೀಮೆಯನ್ನು ಸುಲಭದಿಂದ ಸಾಧಿಸಿಕೊಳ್ಳಬಹುದು" ಎಂಬ ದಾಗಿ ಹೇಳಿದ ಆ ಮಾತನ್ನು ನಂಬಿಕೊಂಡು, ಆ ಕೋಟೆ ಅರಸುಗಳು ತಮ್ಮ ಮಂದಿ ಸಹ ಆ ಲಕ್ಕಡಿ ಕೋಟೆಯಲ್ಲು ಇರುತ್ತಾ ಇದ್ದಲ್ಲಿ, ಈ ಸಮಾಚಾರ ದೊಡ್ಡವೀರಪ್ಪ ಒಡೆಯರವರು ಕೇಳಿ ಅಪ್ಪಣೆ ಕೊಟ್ಟಿದ್ದು : "ಈಗ ಬಂದಿರುವ ಮೈಸೂರವರ ಭಾರಿ ದಂಡನ್ನು ಮಹಾದೇವನ ಕಟಾಕ್ಷದಿಂದ ನಾವು ಜಯಿಸಿದರೆ, ಈ ನಾಯಮಾರರನ್ನು ನಿಗ್ರಹಿಸುವುದು ದೊಡ್ಡದಲ್ಲ. ಸದ್ಯಕ್ಕೆ ೧೫೦೦ ಕೊಡಗು ಜನರು ಹೋಗಿ ಆ ತೋಮಾರದ ಲಕ್ಕಡಿ ಕೋಟೆಗೆ ಮುತ್ತಿಗೆ ಹಾಕಿ, ಆ ಕೋಟೆಅಂಗಡಿ ಅರಸು ಅವರ ಕಡೆ ಜನರು ಮಲೆಯಾಳಕ್ಕೆ ಹೋಗದಂತೆ ಮಾರ್ಗ ಯಾವತ್ತು ಬಂದುಮಾಡಿ" ಎಂಬದಾಗಿ ಅಪ್ಪಣೆ ಕೊಟ್ಟು ಕಳುಹಿಸಿ ದ್ದಲ್ಲಿ, ಆ ಕೊಡಗು ಮಂದಿಯು ಅದೇ ಮೇರೆಗೆ ಬಂದು ಆ ಲಕ್ಕಡಿ ಕೋಟೆಗೆ ಮುತ್ತಿಗೆ ಹಾಕಿಕೊಂಡು ಇದ್ದರು. ಆ ತರುವಾಯ ಮೈಸೂರವರು ಭಾರಿ ದಂಡು ತೆಗೆದುಕೊಂಡು ಬಾಳೆಲೆ ಮಾರ್ಗವಾಗಿ ಸೀಮೆ ಒಳನುಗ್ಗಿ ಬಂದು ಪಾಲು ಪರೆ ಎಂಬ ಮೈದಾನದಲ್ಲು ಇಳಿದುಕೊಂಡಲ್ಲಿ, ಆ ಬೆಳಿಗ್ಗೆ ಅರುಣೋದಯದ ಸಮಯದಲ್ಲಿ ಕೊಡಗಿನ ಮಂದಿಯು ಹೋಗಿ ಮೈಸೂರವರ ದಂಡಿನ ಮೇಲೆ ಬಿದ್ದಲ್ಲಿ, ಹೇರಳ ಲಡಾಯಿವಾಗಿ ಅವರ ಕಡೆಯ ಸುಮಾರು ೧೫೦೦ ಜನ ಪರಿಯಂತರ ಮೃತವಾಗಿ, ೭೭ ಅಂದಳದ ಸರದಾರರ ಸಹ ಕಡಿದುಹಾಕಿದರು. ಅದರಲ್ಲಿ ಕೆಲವು ಜನ ಪಲಾಯನವಾಗಿ ಚಿಕ್ಕದೇವರಾಜರ ಬಳಿಗೆ ಹೋದರು. ಈ ಮೇರೆ ಮೈಸೂರವರ ದಂಡನ್ನು ಮುಳುಗಿಸಿ ತಮ್ಮ ಮಂದಿ ಯಾವತ್ತು ತೆಗೆದುಕೊಂಡು ಆ ಕೋಟೆ ಅರಸುಗಳು ಇದ್ದ ಲಕ್ಕಡಿ ಕೋಟೆಗೆ ಬಂದು ಮುತ್ತಿಕೊಂಡು ಅದರ ಒಳಗೆ ಇದ್ದ ನಾಯಿಮಾರರ ವೀರವರ್ಮ ಅರಸುಗಳ ಸಹ ಹೊಡೆದು ಹಾಕಿಬಿಟ್ಟರು. ಆ ಆರಭ್ಯದಿಂದ ಮೈಸೂರವರು ಮಲೆಯಾಳ ದವರು ಸಹ ಇಂತಹ ಜಗಳ ಕೊಡಗಿನ ಸೀಮೆ ಸರಹದ್ದಿನ ಒಳಗೆ ಮಾಡಲಿಲ್ಲ.

**ಈಚೆಗೆ ದೊಡ್ಡವೀರಪ್ಪ ಒಡೆಯರವರು ೧೮ ವರುಷ ಪರಿಯಂತರ**

ಕೊಡಗಿನ ರಾಜ್ಯದ ಒಳಗೆ ಯಾವತ್ತು ಕಡಂಗ ಕಂದುಕ ಮುಂತಾಗಿ ತೆಗೆಸಿ ಆಳ್ವೇರಿ ಬಕ್ಕಾ ಬಾಗಿಲು ಮುಂತಾಗಿ ತಯಾರುಮಾಡಿಸಿ, ಈ ರಾಜ್ಯದಲ್ಲಿ ಇರುವ ಜಗಳದ ಅಗಳು ಮುಂತಾಗಿ ತೆಗೆಸಿ, ಕೊಡಗಿನ ರಾಜ್ಯವನ್ನು ಬಂದೋಬಸ್ತು ಮಾಡಿಕೊಂಡು ಸ್ವಸ್ಥದಲ್ಲಿ ರಾಜ್ಯಭಾರ ಮಾಡಿಕೊಂಡು ಇರುತ್ತ ಇದ್ದಲ್ಲಿ, ಕೆಲವು ದಿವಸದಮೇಲೆ ಮೈಸೂರು ಚಿಕ್ಕದೇವರಾಜ ಒಡೆಯರವರು ಬೇಲೂರು ವೆಂಕಟಾದ್ರಿನಾಯಕರ ಸೀಮೆಯನ್ನು ಸಾಧಿಸಿಕೊಳ್ಳುವ ಬಗ್ಗೆ ಫವುಜು ತೆಗೆದು ಕೊಂಡು ಹೋದರು. ಆ ಸಮಾಚಾರ ದೊಡ್ಡವೀರಪ್ಪ ಒಡೆಯರು ಕೇಳಿ ಅಪ್ಪಣೆ ಕೊಟ್ಟದ್ದು: "ಬೇಲೂರು ವೆಂಕಟಾದ್ರಿನಾಯಕನ ಸೀಮೆಯನ್ನು ಆಕ್ರಮಿಸಿಕೊಳ್ಳುವ ಬಗ್ಗೆ ಮೈಸೂರು ಚಿಕ್ಕದೇವರಾಜ ಒಡೆಯರವರು ಭಾರಿ ದಂಡು ಸಮೇತ ಬೇಲೂರು ಕಡೆಗೆ ಹೋಗಿಯಿದ್ದಾರೆ; ಈ ಸಮಯದಲ್ಲಿ ಕೊಡಗಿನ ಸೀಮೆ ಸರಹದ್ದಿನ ಸಮೀಪದ ಬೇಲೂರು ಸೀಮೆಯಲ್ಲಿ ಕೆಲವು ಕಟ್ಟಿಕೊಳ್ಳುವ ಬಗ್ಗೆ ನಾವು ಮಂದಿ ಕಳುಹಿಸಿ ಅದನ್ನು ಬಂದೋಬಸ್ತು ಮಾಡಿ ಕೊಳ್ಳಬೇಕು" ಎಂಬದಾಗಿ ಮನಸೂಬ ಮಾಡಿ ಅದೇ ಮೇರೆ ಕೆಲವು ಮಂದಿ ಯನ್ನು ಕಳುಹಿಸಿ, ಕೊಡಗಿನ ಸರಹದ್ದಿಗೆ ಮುಟ್ಟಿಯಿರುವ ಬೇಲೂರು ವಳಿತ ವಾದ ಏಳುಸಾವಿರ ಸೀಮೆಯನ್ನು ತೆಗೆದುಕೊಂಡು ಕೊಡಗಿನ ಸೀಮೆಗೆ ಸೇರಿಸಿ ಕೊಂಡು, ಉಳಿಕೆ ಬೇಲೂರು ಸೀಮೆ ಕೋಟೆ ಸಹ ಮೈಸೂರು ಅರಸುಗಳು ಕಟ್ಟಿಕೊಂಡರು. ಆ ತದನಂತರದಲ್ಲಿ ಬೇಲೂರು ವೆಂಕಟಾದ್ರಿನಾಯಕರು ನಿಸ್ತರಿಸಲಾರದೆ ಓಡಿಹೋಗಿ ತಮ್ಮ ಸೀಮೆ ವಳಿತವಾದ ಗಿಡ ಸರಹದ್ದು ಐಗೂರು ಸೀಮೆ ಬಂದೋಬಸ್ತು ಮಾಡಿಕೊಂಡು, ಕಾಲಕ್ಷೇಪ ಮಾಡಿಕೊಂಡು ಇದ್ದರು. ಈ ಮೇರೆ ಇರುತ್ತ ಇದ್ದಲ್ಲಿ, ಕೆಲವು ದಿವಸದ ಮೇಲೆ ಮೈಸೂರು ಅರಸುಗಳು, "ಬೇಲೂರು ಸಂಸ್ಥಾನ ನಾವು ಕಟ್ಟಿಕೊಂಡು ಇದ್ದೇವೆ. ಅದಕ್ಕೆ ಸೇರಿದ ಏಳುಸಾವಿರ ಸೀಮೆ ನಮಗೆ ಸಲ್ಲತಕ್ಕಂಥಾದ್ದು ನೀವು ಹೇಗೆ ಕಟ್ಟಿ ಕೊಂಡಿರಿ? ಬಿಟ್ಟುಕೊಡಿ" ಎಂದು ದೊಡ್ಡವೀರಪ್ಪರಾಜರ ಕೇಳಿದ್ದಕ್ಕೆ ಇವರು ಜವಾಬು ಹೇಳಿದ್ದು: "ಬೇಲೂರು ಸಂಸ್ಥಾನ ಪ್ರತ್ಯೇಕ ವೆಂಕಟಾದ್ರಿ ನಾಯಕರು ಆಳಿಕೊಂಡು ಇದ್ದದ್ದೇ ಹೊರತು ಮೈಸೂರು ಸಂಸ್ಥಾನಕ್ಕೂ ಕೊಡಗಿನ ಸಂಸ್ಥಾನಕ್ಕೂ ಸೇರಿದ್ದಲ್ಲ. ನೀವು ಬೇಲೂರವರ ಮೇಲೆ ಜಗಳಮಾಡಿ ಆ ರಾಜ್ಯ ಕಟ್ಟಿಕೊಂಡಿರಿ. ನಿಮ್ಮಂತೆ ನಾವು ಜಗಳಮಾಡಿ ಏಳುಸಾವಿರ ಸೀಮೆ

ಕಟ್ಟಿ ತೆಗೆದುಕೊಂಡೆವು. ಈ ಮೇರೆ ಇರುವಲ್ಲಿ, ನಾವು ಏಳುಸಾವಿರ ಸೀಮೆ ಬಿಡಲಿಕ್ಕೆ ಇಲ್ಲ" ಎಂದು ಹೇಳಿದಲ್ಲಿ, ಆ ಮೈಸೂರವರಿಗೂ ಇಲ್ಲಿಯ ದೊರೆಗಳಿಗೂ ಜಗಳವಾಗಿ ಆ ಮೈಸೂರವರು ಸದರೀ ಸೀಮೆ ಒಳನುಗ್ಗಿ ಬಂದಲ್ಲಿ, ಅಲ್ಲಿ ಒಳನುಗ್ಗುವುದಕ್ಕೆ ಬಿಡದೆ ಹೊಡೆದರು. ಆವಾಗ್ಗೆ ಅವರು ಒಳನುಗ್ಗಲಾರದೆ ಅಲ್ಲಿಂದ ಬಿಟ್ಟು ಆ ಸೀಮೆಗೆ ಸೇರಿದ ಮಲ್ಲಿಪಟ್ಟಣ, ಬೆಮ್ಮತ್ತಿ, ಹೊಸನೂರು ಎಂಬ ಮೂರು ಗ್ರಾಮವನ್ನು ತಮ್ಮ ಕಡೆಗೆ ಮಾಡಿಕೊಂಡು, ಅಲ್ಲಿ ಲಕ್ಕಡಿ ಕೋಟೆ ಕಟ್ಟಿಕೊಂಡು ಠಾಣ್ಯ ಇಟ್ಟು, ಮೈಸೂರವರು ಹೋದಲ್ಲಿ, ಕೊಡಗು ಜನ ಹೋಗಿ ರೈತರ ನಿಲ್ಲುವುದಕ್ಕೆ ಬಿಡದೆ ಲೂಟಿಮಾಡಿ, ಸೀಮೆ ಹೈರಾನು ಮಾಡುತ್ತ ಇದ್ದಲ್ಲಿ, ದೊಡ್ಡವೀರಪ್ಪ ಒಡೆಯರಿಗೆ ಚಿಕ್ಕದೇವರಾಜ ಒಡೆಯರು ಬರೆದು ಕಳುಹಿಸಿದ ವಿವರ : "ನಾವು ನೀವು ಜಗಳಮಾಡಿಕೊಂಡು ಸೀಮೆ ಹಾಳುಮಾಡಿದ್ದುಂಟಾದರೆ ಉಭಯಸ್ತರಿಗೂ ನಷ್ಟವೇ ಸರಿ. ಈ ಬಗ್ಗೆ ನೀವು ಕಟ್ಟಿಕೊಂಡಿರುವ ಏಳುಸಾವಿರ ಸೀಮೆ ವಳಿತವಾದ ಕೆಲವು ಸೀಮೆ ನಾವು ಕಟ್ಟಿಕೊಂಡು ಇರುವಂಥದನ್ನು ನಿಮ್ಮ ಕಡೆಗೆ ಮಾಡಿಕೊಂಡು ಅದರಿಂದ ವಸೂಲಾದಂಥ ಹಣವನ್ನು ನಮಗೆ ಕೊಡಿ" ಎಂಬದಾಗಿ ಬರೆಸಿ ಕಳುಹಿಸಿದರಿಂದ, ಆ ಮಾತಿಗೆ ಒಪ್ಪಿಕೊಂಡು, ಆ ಹೋಬಳಿಗಳನ್ನು ಏಳುಸಾವಿರ ಸೀಮೆಗೆ ಸೇರಿಸಿಕೊಂಡು, ಆ ಹೋಬಳಿಗಳಿಂದ ವಸೂಲಾದ ಹಣಗಳನ್ನು ಏಳುಸಾವಿರ ಸೀಮೆ ಪಾರುಪತ್ಯಗಾರನು ದೊಡ್ಡವೀರಪ್ಪ ಒಡೆಯರವರ ಹುಕುಂ ಪ್ರಕಾರ ಕೊಡುತ್ತ ಇದ್ದನು. ಆದ್ದರಿಂದ ಆ ಏಳುಸಾವಿರ ಸೀಮೆಗೆ ಇತ್ತೆರಿಗೆ ಸೀಮೆ ಯೆಂದು ಹೆಸರಾಯಿತು.

ಹಾಗೆ ಇರುತ್ತಿದ್ದಲ್ಲಿ, ಕೆಲವು ದಿವಸದ ಮೇಲೆ ಚಿಕ್ಕದೇವರಾಜ ಒಡೆಯರು ತೀರಿಹೋಗಿ, ದೊಡ್ಡಕೃಷ್ಣದೇವರಾಜ ಒಡೆಯರಿಗೆ ಪಟ್ಟವಾಯಿತು. ಅದೇ ತರುವಾಯ ಇಕ್ಕೇರಿ ಸಂಸ್ಥಾನದ ಸೋಮಶೇಖರನಾಯಕರು ಚೆರಕಲ್ಲ ಸೀಮೆ ಕಟ್ಟಿಕೊಳ್ಳಬೇಕೆಂಬ ಅಪೇಕ್ಷೆಯಿಂದ ದಂಡು ಸಮೇತ ನೀಲೇಶ್ವರದ ಮಾರ್ಗವಾಗಿ ಬಂದು ಜಗಳಮಾಡಿ ಚೆರಕಲ್ಲ ಅರವಾಸೆ ಸೀಮೆಯನ್ನು ಸಾಧಿಸಿಕೊಂಡು ಅಲ್ಲಲ್ಲಿ ಲಕ್ಕಡಿ ಕೋಟೆಗಳ ಹಾಕಿಸಿ, ಠಾಣ್ಯ ಇಟ್ಟು ಮತ್ತು ಬಾಕಿ ಸೀಮೆಯನ್ನು ಆಕ್ರಮಿಸಿಕೊಳ್ಳತಕ್ಕ ಬಗ್ಗೆ ಲುಟಾಯಿಸಿದ್ದಲ್ಲಿ ಆ ಚೆರಕಲ್ಲ ವೀರವರ್ಮರಾಜರು ಜಗಳ ಮಾಡಲಾರದೆ ದೈನ್ಯೋಕ್ತಿಯಿಂದ ದೊಡ್ಡವೀರಪ್ಪ

ಒಡೆಯರಿಗೆ ಕಾಗದ ಬರೆದು ಕಳುಹಿಸಿದ ವಿವರ : " ಇಕ್ಕೇರಿ ಸಂಸ್ಥಾನದ ಸೋಮಶೇಖರನಾಯಕರು ಭಾರಿ ದಂಡು ತೆಗೆದುಕೊಂಡು ಬಂದು ನಮ್ಮ ಅರೆವಾಸಿ ಸೀಮೆಯನ್ನು ಕಟ್ಟಿಕೊಂಡು, ಅಲ್ಲಲ್ಲಿ ಲಕ್ಕಡಿ ಕೋಟೆಗಳ ಹಾಕಿ ಠಾಣ್ಯ ಇಟ್ಟುಕೊಂಡು, ಮತ್ತು ಮುಂದೆ ಬಡಾಯಿಸಿಕೊಂಡು ಬರುತ್ತಾರೆ. ಅವರ ಸಂಗಡ ಜಗಳಮಾಡಿ ನಿಸ್ತರಿಸುವುದಕ್ಕೆ ತೀರದು. ಈ ಬಗ್ಗೆ ತಾವೂ ಅವರೂ ಸ್ವಕೀಯಸ್ಥರಾದ್ದರಿಂದ ಮೆಹರ್ಬಾನಗಿ ಮಾರ್ಗದಿಂದ ಸೋಮಶೇಖರ ನಾಯಕರು ನಮ್ಮ ಸೀಮೆ ಬಿಟ್ಟುಕೊಟ್ಟು ಅವರ ದಂಡುಸಮೇತ ಇಕ್ಕೇರಿಗೆ ಹೋಗುವಂತೆ ಉಪಕಾರ ಮಾಡಿಸಿಕೊಡಬೇಕು " ಎಂಬದಾಗಿ ಬರೆಸಿ ಕಳುಹಿಸಿದಲ್ಲಿ, ಅದಕ್ಕೆ ಜವಾಬು ಕೊಟ್ಟದ್ದು : " ಈ ಬಗ್ಗೆ ನಮ್ಮಿಂದ ಆಗತಕ್ಕ ಪ್ರಯತ್ನ ಮಾಡಿಯೇವು. ಅದರ ಮೇಲೆ ಮಹಾದೇವನ ಅಪ್ಪಣೆಯಿದ್ದಂತೆ ಆದೀತು. ತಾವು ಖಾತರ್‌ಜಮೆ ಆಗಿ ಇರಬೇಕು " ಎಂಬದಾಗಿ ಬರೆಸಿ ಕಳುಹಿಸಿ ಈ ವಿವರ ಸೋಮಶೇಖರನಾಯಕರಿಗೆ ಬರೆಸಿ ಕಳುಹಿಸಿದಲ್ಲಿ, ಅವರು ಜವಾಬು ಹೇಳಿ ಕಳುಹಿಸಿದ್ದು ಏನೆಂದರೆ : " ನಾವು ಹೇರಳ ಫವುಜು ತೆಗೆದು ಕೊಂಡು ಬಂದು ಚೆರಕಲ್ಲ ರಾಜರ ಸಂಗಡ ಜಗಳಮಾಡಿ ಅವರ ಕಡೆ ನಾಯ ಮಾರರನ್ನು ನಿಗ್ರಹಿಸಿ ಅವರ ಅರೆವಾಸಿ ಸೀಮೆಯನ್ನು ಆಕ್ರಮಿಸಿಕೊಂಡು ಅಲ್ಲಲ್ಲಿ ಠಾಣ್ಯಯಿಟ್ಟು ಮಜಬೂತು ಮಾಡಿಯಿದ್ದೇವೆ. ಈ ಲಡಾಯದಲ್ಲಿ ನಮ್ಮ ಕಡೆ ಹೇರಳ ಮಂದಿ ಸತ್ತುಹೋಯಿತು. ಇದಲ್ಲದೆ ದಂಡಿನ ಖರ್ಚು ಬಹಳ ಮುಟ್ಟಿಯಿದೆ. ಆದ್ದರಿಂದ ನಾವು ಸಲ್ಲಾಮಾಡಿ ಅವರ ಸೀಮೆ ಬಿಟ್ಟು ಕೊಡಲಿಕ್ಕೆ ಇಲ್ಲ " ಎಂಬದಾಗಿ ಹೇಳಿಕಳುಹಿಸಿದಲ್ಲಿ, ಈ ವಿವರವನ್ನು ದೊಡ್ಡ ವೀರಪ್ಪ ಒಡೆಯರು ಚೆರಕಲ್ಲ ರಾಜರಿಗೆ ಹೇಳಿಕಳುಹಿಸಿದಲ್ಲಿ ಮತ್ತು ಆ ರಾಜರು ಆಣೆ ಭಾಷೆ ಹಾಕಿ ಕರಾರುನಾಮಾ ದಸ್ಕತು ಮೊಹರದಿಂದ ಬರಹದಲ್ಲಿ " ಅವರ ದಂಡಿನ ಖರ್ಚಿನ ಬಗ್ಗೆ ೧೮ ಲಕ್ಷ ರೂಪಾಯಿ ನಾವು ಕೊಡುತ್ತೇವೆ. ಈ ಮಾತಿಗೆ ತಾವು ಹೊಣೆಯಾಗಿ ಕಳುಹಿಸಿಕೊಡಬೇಕು " ಎಂಬದಾಗಿ ಪುನಃ ಬರೆಸಿ ಕಳುಹಿಸಿದರಿಂದ, ದೊಡ್ಡವೀರಪ್ಪ ಒಡೆಯರು ಆ ಕರಾರುನಾಮೆಯನ್ನು ನಂಬಿ, ಸೋಮಶೇಖರನಾಯಕರಿಗೆ ಶ್ರುತಪಡಿಸಿದಲ್ಲಿ, ಅವರು ಜವಾಬು ಹೇಳಿದ್ದು : " ಮಲೆಯಾಳದ ರಾಜರು ಮೋಸಗಾರರು. ಆಡಿದ ಮಾತುಕೊಟ್ಟ ನಂಬಿಕೆಗೆ ಸರಿಯಾಗಿ ನಡೆಯುವವರಲ್ಲ. ಅವರ ಕರಾರುನಾಮೆ ನಂಬಿ ಈ ಹಣವಿಗೆ

ನೀವು ಹೊಣೆಯಾಗಬೇಡಿ" ಎಂದು ಹೇಳಿದಲ್ಲಿ, ದೊಡ್ಡವೀರಪ್ಪ ಒಡೆಯರು ಹೇಳಿದ್ದು : "ಚೆರಕಲ್ಲ ರಾಜರು ಈ ಹಣವಿಗೆ ಕೈಕಾಗದ ಬಹಳ ಬಗೆ ಆಣೆ ಭಾಷೆ ಹಾಕಿ ಬರೆದು ಇದ್ದಾರೆ. ಈ ಬಗೆ ಹಣ ನಾವು ಏನು ಬಗೆಯಿಂದ ಲಾದರೂ ಬರಮಾಡಿ ತಮಗೆ ಸಂದಾಯ ಮಾಡಿಕೊಡುತ್ತೇವೆ" ಎಂಬದಾಗಿ ಹೇಳಿದಲ್ಲಿ, ಸೋಮಶೇಖರನಾಯಕರವರು ಒಡಂಬಟ್ಟು, ಈ ಹಣವಿಗೆ ದೊಡ್ಡ ವೀರಪ್ಪ ಒಡೆಯರ ಕೈಯಿಂದ ಕಾಗದ ಬರೆಸಿ ತೆಗೆದುಕೊಂಡು, ಆ ಚೆರಕಲ್ಲ ಸೀಮೆಯಲ್ಲಿ ಇಟ್ಟುಯಿದ್ದ ಠಾಣ್ಯಯೆಬ್ಬಿಸಿಕೊಂಡು ಫವುಜಿನ ಸಂಗಡ ತಮ್ಮ ಸೀಮೆಗೆ ಹೋಗುವಾಗ್ಗೆ, ದೊಡ್ಡವೀರಪ್ಪ ಒಡೆಯರ ಭೇಟಿ ಆಗುವ ಬಗ್ಗೆ ಸುಬ್ರಹ್ಮಣ್ಯಕ್ಕೆ ಹೋಗಿ ಅವರ ಕಂಡು ಭೇಟಿ ಆಗಿ, ಪುನಃ ಬಂದು ಕೆಲವು ಕಾರೆಕಾರರು ಹರಿಕಾರರು ಕೊಡಗು ಜನ ಮುಂತಾಗಿ ಚೆರಕಲ್ಲ ರಾಜರ ಬಳಿಗೆ ಹಣ ತರುವ ಬಗ್ಗೆ ಕಳುಹಿಸಿದಲ್ಲಿ, ಆ ಅರಸುಗಳು : "ಈ ಹಣ ನಾಲ್ಕು ಐದು ಗಡುಬದಲ್ಲಿ ಕಳುಹಿಸಿಕೊಡುತ್ತೇನೆಂಬದಾಗಿ ಹೇಳಿ, ಇಲ್ಲಿಂದ ಹೋದ ಅಂತಹ ಜನರನ್ನು ಇಟ್ಟುಕೊಂಡು, ಎರಡು ಮೂರು ಗಡಬದಲ್ಲಿ ಅರೆವಾಸಿ ಹಣ ಸಂದಾಯ ಮಾಡಿಕೊಟ್ಟು, ಬಾಕಿ ಹಣಕ್ಕೆ ವರಾತ ಮಾಡಿದಲ್ಲಿ ಹೋದ ಅಂತಹ ಜನರನ್ನು ತಳ್ಳಿಬಿಟ್ಟದ್ದರಿಂದ, ಆ ಜನರು ಬಂದು, ಆ ವಿವರ ದೊಡ್ಡ ವೀರಪ್ಪ ಒಡೆಯರಿಗೆ ಶ್ರುತಪಡಿಸಿದಲ್ಲಿ, ದಳವಾಯಿ ಬೋನಿ ಮುತ್ತಣ್ಣನನ್ನು ಈತನ ಸಂಗಡ ೫೦೦೦ ಜನ ಕೊಡಗರ ಕೂಡಿಸಿ, ಚೆರಕಲ್ಲ ರಾಜರ ಬಳಿಗೆ ಕಳುಹಿಸಿದಲ್ಲಿ, ಆ ದಳವಾಯಿ ಬೋನಿ ಮುತ್ತಣ್ಣನು ಹಣಕ್ಕೆ ವರಾತ ಮಾಡಿ ದಲ್ಲಿ, ಆ ರಾಜರು ಇಂದು ನಾಳೆ ಕೊಡುತ್ತೇವೆಯೆಂತ ದಿನ ಹರಣ ಮಾಡಿದ ರಿಂದ, "ಈ ಮೇರೆ ತಕ್ಕು ಮಾಡುವದು ಒಳ್ಳೆಯದಲ್ಲ. ಕರಾರು ಮೇರೆ ಹಣ ಕೊಡಿ" ಎಂತ ಖಸ್ತು ವರಾತ ಹತ್ತಿಸಿದಲ್ಲಿ, ಇವಂದಿರನ್ನು ಹೊಡೆಯ ಬೇಕೆಂಬದಾಗಿ ಆ ಅರಸುಗಳು ಯೋಚಿಸಿ, ಗುಟ್ಟಿನಿಂದ ಅವರ ಮಂದಿಯನ್ನು ಜಮಾಯಿಸುತ್ತಾ ಇದ್ದಲ್ಲಿ, ಈ ಸಮಾಚಾರ ಕಣ್ಣೂರ ರಾಜರು ಕೇಳಿ, ಕೆಲವು ಮಾಪಿಳ್ಳೆಯರನ್ನು ಆ ದಳವಾಯಿ ಬಳಿಗೆ ಕಳುಹಿಸಿ, "ಚೆರಕಲ್ಲ ರಾಜರು ನಿಮಗೆ ಕರಾರು ಮೇರೆ ಹಣ ಕೊಡುವುದು ಇಲ್ಲ. ಅವರ ಕಡೆ ಜನರಿಂದ ನಿಮ್ಮ ಜನರ ಯಾವತ್ತೂ ಒಂದೂ ಉಳಿಯದೆ ಹೊಡೆಯಬೇಕು ಎಂತ ಯೋಚಿ ಸಿದ್ದಾರೆ. ನೀವು ಅಲ್ಲಿ ನಿಲ್ಲಬೇಡ" ಎಂತ ತಿಳಿಸಿದ್ದರಿಂದ, "ಇನ್ನು ಇಲ್ಲಿ

ನಿಂತರೆ ಮೋಸಮಾಡಿಯಾರು. ಈ ಬಗ್ಗೆ ಕೊಡಗಿಗೆ ಹೋಗುವ ಬಗ್ಗೆ ಮಾರ್ಗ ಬಂದುಮಾಡಿಯಿದ್ದಾರು. ಆದ್ದರಿಂದ ಕಣ್ಣೂರಿಗೆ ಹೋಗಿ ವಿಚಾರಿಸಿಕೊಂಡು ಹೋಗಬಹುದು" ಎಂಬದಾಗಿ ದಳವಾಯಿ ಬೋನಿ ಮುತ್ತಣ್ಣನು ಸಂಗಡ ಯಿದ್ದ ಕೊಡಗ ಜನ ಯಾವತ್ತು ತೆಗೆದುಕೊಂಡು ರಾತಾರಾತ್ರಿಯೇ ಕಣ್ಣೂರಿಗೆ ಹೊರಟುಹೋಗುವಲ್ಲಿ, ಚಿರಕಲ್ಲ ರಾಜರ ಕಡೆ ಜನ ಬಂದು ಮಾರ್ಗದಲ್ಲಿ ತಡೆದ ರಿಂದ, ಅವರಿಗೆ ದಕ್ಕದೆ ಜನಾನೂ ತೆಗೆದುಕೊಂಡು ರಾತ್ರಿಯೇ ಕಣ್ಣೂರಿಗೆ ತಲಪಿದರಿಂದ ಕೊಡಗಿಗೆ ಬರುವಂಥಾ ಮಾರ್ಗಕ್ಕೆಲ್ಲಾ ಮುಂದಿಯಿಟ್ಟು ಚಿರಕಲ್ಲ ರಾಜರು ಮಾರ್ಗ ಕಟ್ಟಿಯಿದ್ದರು. ಈ ವರ್ತಮಾನ ಕಣ್ಣೂರು ರಾಜರು ತಿಳಿದು, "ಈ ಮಾರ್ಗವಾಗಿ ಹೋದದ್ದೇ ಉಂಟಾದರೆ ನಿಮಗೂ ನಿಮ್ಮ ಸಂಗಡ ಇರುವ ಜನರಿಗೂ ಸಹ ಮೋಸಮಾಡಿಯಾರು" ಎಂದು ಹೇಳಿ ಆ ದಳವಾಯಿಗೂ ಆ ೫೦೦೦ ಕೊಡಗರಿಗೂ ಪತ್ತೇಮಾರಿ ಮೇಲೆ ಹಾಕಿಸಿ ಇಕ್ಕೇರಿ ವಳಿತವಾದ ಮಂಗಳೂರು ಪೈಕಿ ಕುಂಬಳೆ ತಾಲೂಕಿನಲ್ಲಿ ಇಳಿಸಿ ಬಿಟ್ಟರು. ಆ ಬಳಿಕ ದಳವಾಯಿ ಮುತ್ತಣ್ಣನು ಆ ಜನರ ಕರೆದುಕೊಂಡು ತುಳುವನಾಡು ಮಾರ್ಗವಾಗಿ ಕೊಡಗಿನ ಸೀಮೆಗೆ ಬಂದನು. ಈ ಚಿರಕಲ್ಲ ರಾಜರಿಂದ ಕರಾರು ಮೇರೆ ಬರತಕ್ಕ ಹಣವಿನಲ್ಲಿ ಬಾಕಿ ನಿಂತು ಇದ್ದ ಅರೆವಾಸಿ ಹಣವನ್ನು ತಮ್ಮ ಕೈಯಿಂದ ಕಳುಹಿಸಿಕೊಟ್ಟರು. ಈ ಚಿರಕಲ್ಲ ರಾಜರು ಅರೆವಾಸಿ ಹಣ ಕೊಡದೆ ದಗಾ ಮಾಡಿದ ವಿವರವನ್ನು ಸೋಮಶೇಖರನಾಯಕ ರಿಗೆ ಬರೆಸಿ ಕಳುಹಿದಲ್ಲಿ, ಅವರು ಕೇಳಿ ದೊಡ್ಡವೀರಪ್ಪ ಒಡೆಯರನ್ನು ಇಕ್ಕೇರಿಗೆ ಕರೆಸಿಕೊಂಡು, "ಮಲೆಯಾಳದ ಅರಸುಗಳು ಮೋಸಗಾರರು, ಅವರ ಮಾತು ನಂಬಬಾರದು—ಎಂಬದಾಗಿ ಮೊದಲೇ ನಾವು ಹೇಳಿದ್ದು ಕೇಳದೆ, ಅವರ ಮಾತು ನಂಬಿಕೊಂಡು, ನಾವು ಕಟ್ಟಿಕೊಂಡು ಇದ್ದ ಸೀಮೆಯನ್ನು ಅವರಿಗೆ ಬಿಡಿಸಿಕೊಟ್ಟು, ಅವರ ಕಡೆಯಿಂದ ಬರತಕ್ಕ ಹಣ ತಮ್ಮ ಕೈಯಿಂದ ಕೊಟ್ಟರು" ಎಂಬದಾಗಿ ಬಹಳ ನೊಂದುಕೊಂಡು, ಆವಾಗ್ಗೆ 'ನೀವು ನಮಗೆ ಸ್ವಕೀಯಸ್ಥರೇ ಹೊರತು ಬೇರೊಂದಲ್ಲ' ಎಂಬದಾಗಿ ಏಕೀಕರ ಮಾರ್ಗದಿಂದ ತುಳುವನಾಡು ವಳಿತವಾದ ಮೂಡಮಂಬತ್ತು ಮಾಗಣೆಯಿಂದ ಈ ಕೊಡಗಿನ ಘಟ್ಟದ ಸರ ಹದ್ದಿಗೆ ಮುಟ್ಟಿ ಇರುವಂತಹ ಕೆಲವು ಮಾಗಣೆಗಳಿಂದ ಕೆಲವು ಗ್ರಾಮಗಳನ್ನು ವಿಂಗಡಿಸಿ, ದೊಡ್ಡವೀರಪ್ಪ ಒಡೆಯರಿಗೆ ಹಾಲು ಬೆಣ್ಣೆಗೆ ಎಂಬದಾಗಿ ಅದಕ್ಕೆ

—ಅಮೃತ ಉದ್ದಿಶ್ಯವಾಗಿ ಕೊಟ್ಟಂಥಾದ್ದು, ಇದರ ಹೆಸರು ಅಮರಸುಳ್ಯ— ಎಂಬದಾಗಿ ಸೋಮಶೇಖರನಾಯಕರು ನೂತನವಾಗಿ ಹೆಸರುಯಿಟ್ಟರು. ಆ ತದನಂತರ "ಕಾವೇರಿ ಅಮ್ಮ ದೇವರ ಪೂಜೆ ಬಗ್ಗೆ ಈ ಕೊಡಗಿನ ಸೀಮೆಯಲ್ಲಿ ತೆಂಗಿನಕಾಯಿ ಫಲವಿಲ್ಲದ್ದರಿಂದ ಆ ದೇವರ ಪೂಜೆ ಬಗ್ಗೆ ಕಾಯಿ ಬೇಕಾಗುತ್ತದೆ. ಸುಳ್ಯದ ಮಾಗಣೆಯು ಆ ದೇವಸ್ಥಾನಕ್ಕೆ ಸಮೀಪವಾಗಿಯಿದೆ. ಇದನ್ನು ಕೊಡಿಸಿಕೊಡಬೇಕು. ಆ ಮಾಗಣೆಗೆ ಆದ ಕ್ರಯವನ್ನು ಕೊಡಿಸಿ ಕೊಡುತ್ತೇವೆ" ಎಂಬದಾಗಿ ಸೋಮಶೇಖರನಾಯರ ಸಂಗಡ ಕೇಳಿದಲ್ಲಿ, ಅವರು ಒಪ್ಪಿದರಿಂದ ಕಾವೇರಿ ಅಮ್ಮನವರ ಭಂಡಾರದಿಂದ ಅದಕ್ಕೆ ಸಲುವ ಹಣ ಕೊಟ್ಟರು. ಆವಾಗ್ಗೆ ಸುಳ್ಯದ ಮಾಗಣೆಯನ್ನು ವಿಂಗಡಿಸಿ ಬೆಂಗುಮಲೆ ಒಡ್ಡಿನಲ್ಲು ತೋರಣ ಕಟ್ಟಿಸಿ, ಕೊಡಗಿನ ಸೀಮೆಗೆ ಸೇರಿಸಿಕೊಟ್ಟರು. ಅಮರ ಸುಳ್ಯ ಸಹ ಕೊಡಗಿನ ಸಂಸ್ಥಾನಕ್ಕೆ ಸೇರಿ ಈಗ ಸಂಸ್ಥಾನಕ್ಕೆ ನಡೆದುಬರುತ್ತ ಇದೆ. ಈ ಮೇರೆ ಇರುತ್ತಯಿದ್ದಲ್ಲಿ, ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರವರು ತೀರಿಹೋಗಿ ಬೂದಿಬಸವಪ್ಪನಾಯಕರಿಗೆ ಪಟ್ಟವಾಯಿತು. ಇತ್ತಲಾಗಿ ದೊಡ್ಡವೀರಪ್ಪ ಒಡೆಯರ ಕುಮಾರರಾದ ಅಪ್ಪಾಜಿರಾಜರಿಗೆ ಮದುವೆಮಾಡಿಕೊಟ್ಟಂತಹ ಪಟ್ಟಸ್ತ್ರೀ ಇದ್ದಂತೆ.ಒಂದು ಸಾಮಾನ್ಯ ಸ್ತ್ರೀಯನ್ನು ಇಟ್ಟುಕೊಂಡು ಆಕೆಯ ಮಾತು ಕೇಳಿ ತಮ್ಮ ರಾಣಿಗೆ ಕಿರುಕುಳ ಮಾಡುತ್ತ ಇದ್ದಲ್ಲಿ, ಈ ಕಿರುಕುಳ ತಡೆಯಲಾರದೆ ಆ ರಾಣಿಯವರು ಸೇದುವ ಬಾವಿಗೆ ಬಿದ್ದು ಮೃತಪಟ್ಟದ್ದರಿಂದ, ಈ ವಿವರ ದೊಡ್ಡವೀರಪ್ಪ ಒಡೆಯರು ತಿಳಿದು, ಅಪ್ಪಾಜಿರಾಜ ಅರಸುಗಳಿಗೂ ಅವರ ಪಟ್ಟಸ್ತ್ರೀಯವರ ಗರ್ಭದಲ್ಲಿ ಜನಿಸಿದಂತಹ ಕುಮಾರ ಚಿಕ್ಕವೀರಪ್ಪ ಒಡೆಯರಿಗೂ ಸೆರೆಮನೆಯಲ್ಲಿ ಹಾಕಿಸಿದರು. ಈ ಮೇರೆ ೧೨ ವರ್ಷ ಪರ್ಯಂತರ ಸೆರೆಯೊಳಗೆ ಇದ್ದು, ಅದರ ಒಳಗೆ ಅಪ್ಪಾಜಿ ರಾಜರು ಮೃತವಾದರು. ಆ ಬಳಿಕ ಕೆಲವು ಆಪ್ತರಾದಂತಹ ಕೊಡಗರು ದೊಡ್ಡವೀರಪ್ಪ ಒಡೆಯರಿಗೆ ಅರಿಕೆ ಮಾಡಿಕೊಂಡ ವಿವರ : "ಅಪ್ಪಾಜಿರಾಜರು ಅಪರಾಧ ಮಾಡಿ ಸೆರೆಮನೆಯೊಳಗೆ ಬಿದ್ದು ಮೃತವಾದರು. ಅವರ ಕುಮಾರರು ನಿರಪರಾಧವಾಗಿ ಸೆರೆಯಲ್ಲಿ ಬಿದ್ದುಯಿದ್ದಾರೆ. ತಾವು ಆದರೆ ಮುಪ್ಪಿನವರಾದಿರಿ. ಮುಂದೆ ಈ ರಾಜ್ಯಭಾರ ಮಾಡಿಕೊಂಡು ನಮ್ಮ ಸರ್ವರನ್ನೂ ರಕ್ಷಣ್ಯ ಮಾಡುವದಕ್ಕೆ ಕರ್ತರು ಯಾರು ? ಈ ಬಗ್ಗೆ ಸೆರೆಮನೆಯೊಳಗೆಯಿರುವ ಆ

ಕುಮಾರನನ್ನು ಸೆರೆಯಿಂದ ಬಿಟ್ಟು ರಕ್ಷಿಸಿ ತಮ್ಮ ದೊರೆತನದಲ್ಲಿ ನಿಲ್ಲಿಸಬೇಕು" ಎಂಬದಾಗಿ ಅರಿಕೆ ಮಾಡಿಕೊಂಡಿದ್ದರಿಂದ ದೊಡ್ಡವೀರಪ್ಪ ಒಡೆಯರು ಆ ಮಾತಿಗೆ ಒಡಂಬಟ್ಟು ಆ ಸೆರೆಯೊಳಗೆ ಇದ್ದ ತಮ್ಮ ಮೊಮ್ಮಗನಾದ ಚಿಕ್ಕ ವೀರಪ್ಪ ಒಡೆಯರನ್ನು ಸೆರೆಯಿಂದ ಬಿಟ್ಟು ಕಲಿ ಸಂದ ೪೮೩೨ನೇ ಸಾಧಾರಣ ಸಂವತ್ಸರದಲ್ಲಿ ಅವರಿಗೆ ಪಟ್ಟಾಭಿಷೇಕವನ್ನು ಮಾಡಿಸಿದರು. ಅವರು ಚಿಕ್ಕಂದಿನಾರಭ್ಯ ಸೆರೆಮನೆಯೊಳಗೆ ಇದ್ದದ್ದರಿಂದ ಶರೀರದಲ್ಲಿ ಆದರುವಾಯು ಸಂಭವಿಸಿಕೊಂಡುಯಿತ್ತು. ಈ ಮೇರೆ ಇರುತ್ತಯಿದ್ದಲ್ಲಿ ಕಲಿ ಸಂದ ೫೮೩೭ನೇ ಆನಂದ ಸಂವತ್ಸರದಲ್ಲಿ ದೊಡ್ಡವೀರಪ್ಪ ಒಡೆಯರು ಶಿವಾಧೀನರಾದರು. ಇವರ ಸಂಗಡಲೇ ಇವರ ಪಟ್ಟದ ರಾಣಿಗಳಾದ ಇಬ್ಬರಮ್ಮನವರು ಸಹಗಮನ ಮಾಡಿದರು.

ಆ ತರುವಾಯದಲ್ಲಿ ಮೈಸೂರು ಸಂಸ್ಥಾನದಲ್ಲು ದೊಡ್ಡಕೃಷ್ಣರಾಜ ಒಡೆಯರು ಇಕ್ಕೇರಿ ಸಂಸ್ಥಾನದಲ್ಲಿ ಬೂದಿಬಸವಪ್ಪನಾಯಕರು ಸಹ ಆಯಾಯ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿಕೊಂಡಿದ್ದರು. ಈ ಮೇರೆ ಇರುತ್ತ ಇರುವಲ್ಲಿ ದೊಡ್ಡವೀರಪ್ಪ ಒಡೆಯರವರ ತಮ್ಮಂದಿರಾಗಿ ಹಾಲೇರಿಯಲ್ಲು ಇದ್ದ ಅಪ್ಪಾಜಿ ರಾಜರು ಸ್ವರ್ಗಸ್ಥರಾದರು. ಹಾಗೆ ಕೆಲವು ದಿವಸದೊಳಗೆ ಹೊರಮಲೆಯಲ್ಲಿದ್ದ ನಂದರಾಜರೂ ಮೃತರಾದರು. ಅದೇ ತದನಂತರದಲ್ಲಿ, ಮೈಸೂರು ಕೃಷ್ಣರಾಜ ಒಡೆಯರು ತೀರಿಹೋಗಿ ಚಾಮರಾಜ ಒಡೆಯರಿಗೆ ಪಟ್ಟವಾಗಿ ಇದ್ದಲ್ಲಿ, ಅವರು ತೀರಿಹೋದ ಕೃಷ್ಣರಾಜ ಒಡೆಯರವರ ಪಟ್ಟದ ಸ್ತ್ರೀಯರ ಮೇಲೆ ಕಣ್ಣು ಇಟ್ಟದ್ದರಿಂದ, ಈ ವಿವರ ಆ ರಾಣಿಯವರು ದಳವಾಯಿ ದೇವರಾಜರಿಗೆ ಹೇಳಿಕಳುಹಿಸಿದಲ್ಲಿ, " ಈ ನಡತೆ ಒಳ್ಳೇದಲ್ಲ. ಅಪಕೀರ್ತಿ ಬಂದೀತು " ಎಂದು ದಳವಾಯಿಯು ಚಾಮರಾಜ ಒಡೆಯರಿಗೆ ಹೇಳಿದಲ್ಲಿ, " ಈ ಮೇರೆ ಹೇಳು ವಂಥದ್ದು ಚಾಕರನ ಮರ್ಯಾದೆಯಲ್ಲ " ಎಂದು ಅವರ ಮೇಲೆ ಸಿಟ್ಟುಮಾಡಿ, " ನೀವು ಪಟ್ಟಣದ ಒಳಗೆ ಇರಬೇಡ. ಒಂದು ಗುಡಿ ಒಳಗೆ ಇದ್ದುಕೊಳ್ಳಿ " ಎಂಬದಾಗಿ ದಳವಾಯಿ ದೇವರಾಜರಿಗೆ ಹೇಳಿದ್ದರಿಂದ, ಅವರು ಬೆಂಗಳೂರು ನಂದರಾಜ ಅರಸುಗಳು ಸಹ ಕೂಡಿ, ಚಾಮರಾಜ ಒಡೆಯರನ್ನು ಕಪಾಲ ದುರ್ಗಕ್ಕೆ ಹಾಕಿಬಿಟ್ಟರು. ಆವಾಗ್ಗೆ ಅವರಿಗೆ ಪಟ್ಟವಾಗಿ ೧೮ ತಿಂಗಳು ಆಗಿತ್ತು. ಆಮೇಲೆ ಚಿಕ್ಕಕೃಷ್ಣರಾಜ ಒಡೆಯರಿಗೆ ೧೦ ವರುಷದ ಪ್ರಾಯದಲ್ಲಿ,

ತಂದು ಪಟ್ಟಕಟ್ಟಿದರು. ಅದೇ ತದನಂತರದಲ್ಲಿ ಇಕ್ಕೇರಿ ಸಂಸ್ಥಾನದ ಬೂದಿ ಬಸವಪ್ಪನಾಯಕರು ತೀರಿಹೋಗಿ, ಅವರ ಕುಟುಂಬವಾದ ಈರಮ್ಮಾಜಿ ಎಂಬ ರಾಣಿಯವರು ದೊರೆತನ ಮಾಡಿಕೊಂಡು ಇದ್ದರು. ಆವಾಗ್ಗೆ ಈ ಮೂರು ಸಂಸ್ಥಾನದಲ್ಲಿಯೂ ರಾಜಕಾರ್ಯಕಾರಣಗಳು ಈ ಮೇರೆ ಇರುತ್ತ ಇದ್ದಲ್ಲಿ, ಚಿಕ್ಕಕೃಷ್ಣರಾಜ ಒಡೆಯರಿಗೆ ದಳವಾಯಿ ದೇವರಾಜ ಅರಸುಗಳ ತಮ್ಮ ನಾದ ಕರಾಚೂರಿ ನಂದರಾಜ ಅರಸುಗಳ ಮಗಳನ್ನು ಮದುವೆ ಮಾಡಿದರು. ಆವಾಗ್ಗೆ ನಂದರಾಜ ಅರಸುಗಳು ಸರ್ವಾಧಿಕಾರ ಮಾಡಿಕೊಂಡಿದ್ದರು. ಇವರ ಬಳಿಯಲ್ಲಿ ಹೈದರ ನಾಯಕನು ಕೆಲವು ಮಂದಿ ಸಹಿತವಾಗಿ ಚಾಕರಿಮಾಡಿ ಕೊಂಡು ಇದ್ದನು. ಆ ತದನಂತರದಲ್ಲಿ ನವಾಬ್ ಚಂದಾಸಾಹೇಬರು ಎಂಬವರು ತ್ರಿಚ್ಚಿನಪಳ್ಳಿ ಕೋಟೆ ತೆಗೆದುಕೊಳ್ಳಬೇಕು ಎಂಬುದಾಗಿ ಆ ಕೋಟೆಗೆ ಮುತ್ತಿಗೆ ಹಾಕಿಕೊಂಡು ಇದ್ದದ್ದರಿಂದ, ಮಮ್ಮದಲ್ಲಿಖಾನರು ಕರಾಚೂರಿ ನಂದರಾಜ ಅರಸುಗಳಿಗೆ ಬರೆಸಿ ಕಳುಹಿಸಿದ ವಿವರ: " ನೀವು ನಿಮ್ಮ ಫವುಜು ತೆಗೆದು ಕೊಂಡು ಬಂದು ಸಹಾಯ ಮಾಡಬೇಕು " ಎಂಬದಾಗಿ ಬರೆಸಿ ಕಳುಹಿಸಿದಲ್ಲಿ, ಈ ಮಾತು ಕೇಳಿ ಇವರು ಫವುಜು ತೆಗೆದುಕೊಂಡು ಬಂದು ಗುತ್ತಿ ಮುರಾರಿ ರಾವು ಕಡೆ ಫವುಜು ಸಹ ಕುಮ್ಮಕ್ಕಾಗಿ ತೆಗೆದುಕೊಂಡು, ತಿರಚಿನಾಪಳ್ಳಿಗೆ ಹೋದರು. ಆವಾಗ್ಗೆ ಹೈದರ ನಾಯಕನು ಕರಾಚೂರಿ ನಂದರಾಜರ ಸಂಗಡ ಯಿದ್ದನು. ಮಮ್ಮದಲ್ಲಿ ಖಾನರು ಕುಮ್ಮಕ್ಕಿಗೆ ಇಂಗ್ರೇಜಿ ಬಹದ್ದರ ಸರಕಾರದ ಫವುಜು ಕರೆಸಿಕೊಂಡು, ಚಂದಾಸಾಹೇಬರ ಸಂಗಡ ಲಡಾಯ ಮಾಡಿ, ಚಂದಾ ಸಾಹೇಬರ ಫವುಜು ಯಾವತ್ತು ಮುಳುಗಿಸಿದರು. ಆಮೇಲೆ ಅವರು ಓಡಿಹೋಗಿ ಜಂಬುಕೇಶ್ವರ ದೇವರ ಗುಡಿ ಹೊಕ್ಕುಕೊಂಡು ಇದ್ದದ್ದರಿಂದ, ಅವರಿಗೆ ಮಮ್ಮ ದಲ್ಲಿ ಖಾನರು ಹಿಡಿತರಿಸಿ, ತಲೆ ಹೊಡೆದುಬಿಟ್ಟರು. ಆ ಬಳಿಕ ಕೆಲವು ದಿವಸ ಕರಾಚೂರಿ ನಂದರಾಜ ಅರಸುಗಳು ಅಲ್ಲಿ ಇದ್ದು, ಪುನಃ ಶ್ರೀರಂಗಪಟ್ಟಣಕ್ಕೆ ಬಂದರು. ಆ ಚಂದಾಸಾಹೇಬರ ಲಡಾಯದ ಸಮಯದಲ್ಲಿ ಹೈದರ ನಾಯಕನು ಕೆಲವು ಸಾಮಾನು ಫಿರಂಗಿ ಮುಂತಾಗಿ ಲೂಟಿ ಮಾಡಿಕೊಂಡು ಸ್ವಲ್ಪ ಪ್ರಬ ಲಿಸಿದನು. " ಆ ಬಳಿಕ ಕರಾಚೂರಿ ನಂದರಾಜ ಅರಸುಗಳು ತಿರಚಿನಾಪಳ್ಳಿ ಲಡಾಯಕ್ಕೆ ಹೋಗಿ ಹೇರಳ ದ್ರವ್ಯ ಖರ್ಚುಮಾಡಿದನು. ಕಾರ್ಯವು ಕೂಡಿ ಬರಲಿಲ್ಲ " ಎಂಬುದಾಗಿ ಚಿಕ್ಕ ಕೃಷ್ಣರಾಜ ಒಡೆಯರು ಪ್ರಸ್ತಾಪ ಮಾಡಿದ್ದ

ರಿಂದ, ಅದನ್ನು ಕರಾಚೂರಿ ನಂದರಾಜ ಅರಸುಗಳು ತಿಳಿದು ತಿರುಗಿಬಿದ್ದು, ಆ ಕೃಷ್ಣರಾಜ ಒಡೆಯರ ಅರಮನೆಗೆ ಗುಂಡು ಹೊಡೆದು ಅವರ ಸಾಮಾಧಿಕರನ್ನು ಅಜ್ಞೆಮಾಡಿಸಿ, ಅವರ ಮನೆಗೆ ಪಾರಾಯಿಟ್ಟು ಬಂದೋಬಸ್ತು ಮಾಡಿದರು. ಈ ಮೇರೆ ನಾಲ್ಕು ವರ್ಷ ಕಳೆಯಿತು.

ಅಷ್ಟರಲ್ಲಿ ಮೈಸೂರ ದೊಡ್ಡ ದಳವಾಯಿ ದೇವರಾಜರು ತೀರಿಹೋದ್ದರಿಂದ, ಅವರ ಕುಟುಂಬವಾದ ಚೆಲುವಾಜಮ್ಮಾಜಿಯುವರು ಅಲ್ಲಿ ಬರೆವಣಿಗೆಯಲ್ಲು ಇದ್ದ ಖಂಡೇರಾವು ಎಂಬ ಬ್ರಾಹ್ಮಣನ ಕೂಡೆ ವ್ಯಭಿಚಾರ ಮಾಡಿಕೊಂಡು, ಅವರು, ದೊಡ್ಡಕೃಷ್ಣರಾಜ ಒಡೆಯರ ರಾಣಿಯಾದ ದೊಡ್ಡಮ್ಮಾಜಿಯವರಿಗೆ ಹೇಳಿ ಖಂಡೇರಾಯನಿಗೆ ಸರ್ವಾಧಿಕಾರವನ್ನು ಕೊಡಿಸಿದ್ದರಿಂದ, ಕರಾಚೂರಿ ನಂದರಾಜ ಅರಸು ಈ ಅನ್ಯಾಯ ತಿಳಿದು ಖಂಡೇರಾಯನ ಹಿಡಿದು ಶಿಕ್ಷೆ ಮಾಡಬೇಕೆಂಬುದಾಗಿ ಅವನ ಸಂಗಡ ಜಗಳಮಾಡಿದಲ್ಲಿ ಅವನು ಸಿಕ್ಕಲಿಲ್ಲ. ಆ ಬಳಿಕ ಹೈದರಲ್ಲಿ ನಾಯಕನಿಗೆ ಕರಾಚೂರಿ ನಂದರಾಜರು ಕೆಲವು ಫವುಜು ಕೂಡಿಸಿಕೊಟ್ಟು ಖಂಡೇರಾಯನ ಸಂಗಡ ಜಗಳ ಮಾಡಿ ಅವನನ್ನು ಹಿಡಿದು ಕಬ್ಬಿಣದ ಪಂಜರದೊಳಗೆ ಹಾಕಿ, ಕೊಂದುಬಿಟ್ಟು, ದೊಡ್ಡಕೃಷ್ಣರಾಜ ಒಡೆಯರ ಕುಟುಂಬವಾದ ದೊಡ್ಡಮ್ಮಾಜಿ ಎಂಬ ಮುದ್ದಮ್ಮಾಜಿಯುವರು ಚಿಕ್ಕಕೃಷ್ಣರಾಜ ಒಡೆಯರು ಸಹ ಇದ್ದ ಅರಮನೆಗೆ ಸುತ್ತ ಪಹರೆ ಇಟ್ಟು, ಶ್ರೀರಂಗಪಟ್ಟಣದ ಕೋಟೆಯನ್ನು ತನ್ನ ಕೈವಶ ಮಾಡಿಕೊಂಡು, ಹೈದರಲ್ಲಿ ಖಾನಬಹಾದರ ಎಂಬುದಾಗಿ ಹೆಸರು ಇಟ್ಟುಕೊಂಡು, ಆ ವ್ಯಭಿಚಾರಿ ಚೆಲುವಮ್ಮಾಜಿ ಎಂಬವಳನ್ನು ದಳವಾಯಿ ಮನೆಯಿಂದ ತೆಗೆದು ಬೇರೆ ಒಂದು ಮನೆಯೊಳಗೆ ಮಡಗಿಬಿಟ್ಟು, ಆ ದಳವಾಯಿಯುವರ ಮನೆಯಲ್ಲಿ ಹೈದರಲ್ಲಿಖಾನರು ಇಳುಕೊಂಡರು.

ಆ ತದನಂತರದಲ್ಲಿ, ಇತ್ತಲಾಗಿ ಇಕ್ಕೇರಿ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿಕೊಂಡು ಇದ್ದ ಬೂದಿಬಸವಪ್ಪನಾಯಕರ ಕುಟುಂಬ ಈರಮ್ಮಾಜಿಯುವರು ನಂಬ್ಯಣ್ಣ ಎಂಬ ಚಾಕರನ ಸಂಗಡ ವ್ಯಭಿಚಾರಮಾಡಿಕೊಂಡು, ಪಟ್ಟಕ್ಕೆ ಸಲ್ಲುವಂಥ ದೊರೆಮಗನನ್ನು ಜಟ್ಟಿಗಳ ಕೈಯಿಂದ ಕುತ್ತಿಗೆ ಮುರಿಸಿ ಕೊಂದು ಹಾಕಿ, ತನ್ನ ಮಿಂಡನಾದ ನಂಬ್ಯಣ್ಣನಿಗೆ ಸರ್ವಾಧಿಕಾರವನ್ನು ಕೊಟ್ಟು ಮಡಗಿದಳು. ಈ ಸಮಾಚಾರ ಹೈದರಲ್ಲಿಖಾನರು ಕೇಳಿ, ಇಕ್ಕೇರಿ ಸಂಸ್ಥಾನವನ್ನು ಆಕ್ರಮಿಸಿಕೊಳ್ಳುವ ಬಗ್ಗೆ, ಯಾವತ್ತೂ ಫವುಜು ತೆಗೆದುಕೊಂಡು,

ಚಿತ್ರಕಲ್ಲು ಭರಮನಾಯಕರು ಅವರ ಫವುಜು ಸಹ ತೆಗೆದುಕೊಂಡು ಹೋಗಿ, ಇಕ್ಕೇರಿ ಸಂಸ್ಥಾನದ ಕೋಟೆಗೆ ಮುತ್ತಿಗೆ ಹಾಕಿ, ಕಿಂಚಿತವಾಗಿ ಜಗಳಮಾಡಿ, ಅಲ್ಲಿ ಇದ್ದ ಜನರನ್ನು ತನ್ನ ವಶೀಕರಣಮಾಡಿಕೊಂಡು, ಮೋಸದಿಂದ ಲಡಾಯಿ ಮಾಡಿ, ಕಲಿ ಸಂದ ೪೮೬೪ನೇ ಚಿತ್ರಭಾನು ಸಂವತ್ಸರದಲ್ಲಿ ಇಕ್ಕೇರಿ ಸಂಸ್ಥಾನವನ್ನು ತೆಗೆದುಕೊಂಡು, ನಂಬ್ಯಣ್ಣ ಎಂಬವಗೆ ಹಿಡಿದು ಕೊಂದುಹಾಕಿ ಬಿಟ್ಟು, ಆ ಈರಮ್ಮಾಜಿಯೆಂಬವಳನ್ನು ಕವಲೆದುರ್ಗದ ಮೇಲೆ ಸೆರೆಹಾಕಿ ಬಿಟ್ಟು, ಇಕ್ಕೇರಿ ಸಂಸ್ಥಾನದ ಹೆಸರು ಹೈದರನಗರಯೆಂಬದಾಗಿ ಇಟ್ಟು, ತಮ್ಮ ಹೆಸರನ್ನು ನವಾಬು ಹೈದರಲ್ಲಿಖಾನ ಎಂಬುದಾಗಿ ಪರುಶವಿಸಿಕೊಂಡು, ಆ ಸಂಸ್ಥಾನಕ್ಕೆ ಸೇರಿದ ಸೀಮೆ ವಿಚಾರಿಸಿ ಲೆಕ್ಕಾ ಕೇಳುವಾಗ್ಗೆ, ಮಂಗಳೂರು ತಾಲೂಕು ಮಾಡವೊಂಭತ್ತು ಮಾಗಣೆಯಿಂದ ಅಮರದ ಮಾಗಣೆ ಒಂದು, ಸುಳ್ಯದ ಮಾಗಣೆ ಒಂದು, ಅಂತೂ ಎರಡೂ ಸಹ, ಮೊದಲು ಸೋಮಶೇಖರ ನಾಯಕರು ಕೊಡಗಿನ ಸಂಸ್ಥಾನಕ್ಕೆ ದೊಡ್ಡವೀರಪ್ಪ ಒಡೆಯರಿಗೆ ಬಿಟ್ಟುಕೊಟ್ಟು ಇದ್ದಾರೆಯೆಂತ ಆ ಸ್ಥಳದ ಜನ ಹೇಳಿದಲ್ಲಿ, ಅದನ್ನು ವಿಚಾರಿಸಿ ಕೇಳಿದಲ್ಲಿ ಸಹ ರುಜು ಆದ್ದರಿಂದ, ಈ ಎರಡು ಮಾಗಣೆ ವಿನಾ ಇಕ್ಕೇರಿ ಸಂಸ್ಥಾನಕ್ಕೆ ಸೇರಿದ ಸೀಮೆ ಗಡಿ ಬಂದ ಹಾಗೆ ಬಂದೋಬಸ್ತು ಮಾಡಿಕೊಂಡು, ಪುನಃ ಪಟ್ಟಣಕ್ಕೆ ಬಂದು, ದೊಡ್ಡಕೃಷ್ಣರಾಜ ಒಡೆಯರು ಸಹ ಇದ್ದ ಅರಮನೆಯಲ್ಲಿ ಇದ್ದ ಬೊಕ್ಕಸಭಂಡಾರ ಯಾವತ್ತು ತೆಗೆದುಕೊಂಡು, ತನ್ನ ಮಾತಿಗೆ ಅನುಕೂಲ ವಾಗದಂತಹ ಹಳೇ ಸರದಾರರನ್ನು ಪರಿಹರಿಸಿ ಬಿಟ್ಟು, ತನ್ನ ಬಂಧುವರ್ಗದವ ರನ್ನು ಫವುಜಿಗೆ ಸರದಾರರನ್ನಾಗಿ ಮಾಡಿಕೊಂಡು ದಿನದಿನಕ್ಕೆ ಫವುಜು ಹೆಚ್ಚಾಗಿ ಜಮಾಯಿಸುತ್ತ, ಯಾವತ್ತೂ ಫವುಜು ಬಂದು ಮೈಸೂರು ಕೋಟೆಗೆ ಮುತ್ತಿಗೆ ಹಾಕಿ, ಜಗಳಮಾಡಿ, ಆ ಕೋಟೆಯನ್ನು ತೆಗೆದುಕೊಂಡು, ಕರಾಚೂರಿ ನಂದ ರಾಜರನ್ನು ಹಿಡಿತಂದು ಕೋಟೆ ಒಳಗೆ ಸೆರೆಹಾಕಿ, ಮೈಸೂರು ಸೀಮೆ ಯಾವತ್ತೂ ಸ್ವಾಧೀನ ಮಾಡಿಕೊಂಡರು. ಆ ತದನಂತರದಲ್ಲಿ ಚಿಕ್ಕಕೃಷ್ಣರಾಜ ಒಡೆಯರು ತೀರಿಹೋದದ್ದರಿಂದ, ಅವರ ಸಂತತಿಯೊಳಗೆ ಕೃಷ್ಣರಾಜರು ಎಂಬವರ ತಂದು ನವಾಬ ಹೈದರಲ್ಲಿಖಾನ ಬಹದರನರು ಪಟ್ಟಕಟ್ಟಿ ಹೆಸರಿಗೆ ಮಡಗಿದ್ದರು.

ಕೊಡಗಿನ ಸಂಸ್ಥಾನದಲ್ಲಿ ದೊರೆತನ ಮಾಡುತ್ತ ಇದ್ದ ಚಿಕ್ಕವೀರಪ್ಪ

ಒಡೆಯರಿಗೆ ಹೈದರಲ್ಲಿಖಾನ ಬಹದರರವರು ಬರೆಸಿ ಕಳುಹಿಸಿದ ವಿವರ : " ಏಳು ಸಾವಿರ ಸೀಮೆ ಕೊಡಗಿನ ಸಂಸ್ಥಾನಕ್ಕೂ ಮೈಸೂರು ಸಂಸ್ಥಾನಕ್ಕೂ ಇತ್ತೆರಿಗೆ ಆಗಿಯಿದೆಯಲ್ಲಾ ! ಅದರಲ್ಲಿ ಕೆಲವು ಮೈಸೂರವರಿಗೆ ಕೊಡುವ ಹಣ ತಾವು ತೆಗೆದುಕೊಡುವುದು ನಮಗೆ ಕೆಲಸವಿಲ್ಲ. ನಮಗೆ ಸಲ್ಲತಕ್ಕಂತಹ ಸೀಮೆಯನ್ನು ಬಿಟ್ಟುಕೊಡಿ. ನಾವು ಬಂದೋಬಸ್ತು ಮಾಡಿಕೊಳ್ಳುತ್ತೇವೆ " ಎಂಬದಾಗಿ ಬರೆಸಿ ಕಳುಹಿಸಿದರಿಂದ, ಅದೇ ಮೇರೆ ಚಿಕ್ಕವೀರಪ್ಪ ಒಡೆಯರವರ ಆ ಏಳು ಸಾವಿರ ಸೀಮೆಯಲ್ಲಿ ಅವರಿಗೆ ಸಲ್ಲುವಂತಹ ಬೆಮ್ಮತ್ತಿ ೧, ಮಲ್ಲಿಪಟ್ಟಣ ೧, ಹೊಸೂರು ೧, ಎಂಬ ಮೂರು ಹೋಬಳಿಗಳನ್ನು ವಿಂಗಡಿಸಿ ಬಿಟ್ಟುಕೊಟ್ಟಲ್ಲಿ, ಮಲ್ಲಿಪಟ್ಟಣ ಎಂಬಲ್ಲಿ ಒಂದು ಕೋಟೆ ಕಟ್ಟಿ ಅಮಲ್‌ದಾರನ ಇರಿಸಿ, ಬಂದೋಬಸ್ತು ಮಾಡಿಕೊಂಡರು. ಈ ಕಡೆ ಸಲ್ಲುವಂತಹ ಸೀಮೆಯನ್ನು ಕೊಡಗಿನ ರಾಜರು ಬಂದೋಬಸ್ತು ಮಾಡಿಕೊಂಡರು.

ಕೆಲವು ದಿವಸದಮೇಲೆ ನವಾಬು ಹೈದರಲ್ಲಿಖಾನರು ಫರಜುಲ್ಲಾಖಾನನ ಸಂಗಡ ದಂಡು ಕೂಡಿಸಿಕೊಟ್ಟು, ಕೊಡಗಿನ ಸಂಸ್ಥಾನದ ಮೇಲೆ ಜಗಳಕ್ಕೆ ಕಳುಹಿಸಿದರಿಂದ, ಆ ಫರಜುಲ್ಲಾಖಾನನು ಕಲಿ ಸಂದ ೪೮೬೭ನೇ ಪಾರ್ಥಿವ ಸಂವತ್ಸರದಲ್ಲಿ ಉಬ್ಬಲಗಂಡಿ ಮಾಳದಲ್ಲಿ ಬಂದು ಇಳಿದಲ್ಲಿ, ಅವರಿಗೂ ಈ ಸಂಸ್ಥಾನದವರಿಗೂ ಹೇರಾಳ ಲಡಾಯಿವಾಗಿ ಆ ಫರಜುಲ್ಲಾಖಾನನು ಮುರಿದು ಹೋಗಿ ಐಗೂರು ಸೀಮೆಯಲ್ಲಿ ಇಳಕೊಂಡನು. ಆ ಬಳಿಕ ನವಾಬ ಹೈದರಲ್ಲಿ ಖಾನರು ಫರಜುಲ್ಲಾಖಾನನ ಮುಖಾಂತರ ಹೇಳಿಸಿದ್ದು : " ಮಹಾರಾಜನ ದುರ್ಗ ತಾಲೂಕಿನಿಂದ ಉಚ್ಚಂಗಿ ಮುಂತಾದ ಕೆಲವು ಸೀಮೆ ನಿಮ್ಮ ಸರಹದ್ದಿಗೆ ಮುಟ್ಟಿ ಇರುವುದನ್ನು ವಿಂಗಡಿಸಿ, ನಿಮ್ಮ ಸಂಸ್ಥಾನಕ್ಕೆ ಬಿಟ್ಟು ಕೊಡುತ್ತ ಇದ್ದೇವೆ. ಫರಜುಲ್ಲಾಖಾನನ ದಂಡಿನ ಖರ್ಚು ಹೇರಳ ಮುಟ್ಟಿಯಿದೆ. ಆ ಬಗ್ಗೆ ಮೂರು ಲಕ್ಷ ವರಹ ಕೊಡಬೇಕು. ಆದ್ದರಿಂದ ನಿಮ್ಮ ನಮ್ಮ ಸ್ನೇಹ ಅನಂತಕಾಲ ಪರಿಯಂತರ ಶಾಶ್ವತವಾಗಿ ಇರಬೇಕು " ಎಂಬದಾಗಿ ಹೇಳಿ ಕಳುಹಿಸಿದರಿಂದ, ಕೊಡಗಿನ ಸಂಸ್ಥಾನದ ಚಿಕ್ಕವೀರಪ್ಪ ಒಡೆಯರು ಜವಾಬು ಕೊಟ್ಟ ವಿವರ : " ನೀವು ಹೇಳಿದ ಮೇರೆ ಸದರಿ ಬರೆಸಿದ ಸೀಮೆ ಈ ಕಡೆಗೆ ಬಿಟ್ಟುಕೊಡುವಂಥಾದ್ದು ಯಾವಾಗ ಬಿಟ್ಟುಕೊಡುತ್ತೀರಿ ? " ಎಂತ ಕೇಳಿದಲ್ಲಿ, ಆ ಫರಜುಲ್ಲಾಖಾನನು ಹೇಳಿದ್ದು : " ಈ ಮೂರು ಲಕ್ಷ ವರಹದಲ್ಲಿ ಕಾಲು

ವಾಸಿ ಹಣ ನೀವು ಕೊಟ್ಟ ಬಾಕಿ ಹಣವಿಗೆ ನಿಮ್ಮ ದಳವಾಯಿಯನ್ನು ಹೊಣೆ ಕೊಟ್ಟಲ್ಲಿ, ಆ ಸೀಮೆ ವಿಂಗಡಿಸಿ ಕೊಡುತ್ತೇವೆ. ಆಮೇಲೆ ಅಲ್ಲಿ ನಿಮ್ಮ ಠಾಣ್ಯ ಇಟ್ಟುಕೊಳ್ಳಿ" ಎಂಬದಾಗಿ ಹೇಳಿದರಿಂದ, ಈ ಅರ್ಥಕ್ಕೆ ಉಭಯ ಕಡೆ ಖುದ್ದು ಒಪ್ಪಿ, ನಂಬಿಗೆ ಭಾಷೆ ಮಾಡಿ, ಖರಾರನಾಮಾ ಉಭಯ ಕಡೆಯುವರು ಬರೆಸಿ ಕೊಂಡರು. ಅದೇ ಪ್ರಕಾರ ಕೊಡಗಿನ ಸಂಸ್ಥಾನದಿಂದ ಕಾಲುವಾಸಿ ಹಣ, ಬಾಕಿ ಹಣವಿಗೆ ಹೊಣೆ ಆಗಿ ದಳವಾಯಿ ತಮ್ಮ ಚರಮಣ್ಣ ಎಂಬುವನ ಸಹ ಫರಜುಲ್ಲಾಖಾನನ ಬಳಿಗೆ ಕಳುಹಿಸಿಕೊಟ್ಟು, 'ಕರಾರು ಮೇರೆ ಸೀಮೆ ಬಿಡಿಸಿ ಕೊಡಿ' ಎಂಬದಾಗಿ ಕೇಳಿದಲ್ಲಿ, ಈ ವಿವರಕ್ಕೆ ಅವನು ಅರ್ಜಿ ಬರೆದುಕೊಂಡು, ಆ ಬಗ್ಗೆ ಹಣ ಆ ಚರಮಣ್ಣನ ಸಹ ನವಾಬ ಹೈದರಲ್ಲಿಖಾನರ ಬಳಿಗೆ ಕಳುಹಿಸಿ ಕೊಟ್ಟನು. ಈ ಪ್ರಕಾರ ಜವಾಬು ಸವಾಲು ಆಗುತ್ತ ಇರುವಾಗ್ಗೆ, ಚಿಕ್ಕವೀರಪ್ಪ ಒಡೆಯರು ಕಲಿ ಸಂದ ೪೮೬೮ನೇ ವ್ಯಯ ಸಂವತ್ಸರದಲ್ಲಿ ಸ್ವರ್ಗಸ್ಥರಾದರು. ಈ ಚಿಕ್ಕವೀರಪ್ಪ ಒಡೆಯರಿಗೆ ಅದುರುವಾಯು ಸಂಭವಿಸಿಕೊಂಡು ಇದ್ದದರಿಂದ ಪುತ್ರಸಂತಾನ ಇಲ್ಲದೆ ಹೋಯಿತು. ಆದ್ದರಿಂದ ದೊಡ್ಡವೀರಪ್ಪ ಒಡೆಯರ ಸಂತತಿ ಮೂರು ತಲೆಯಂತರದ ಚಿಕ್ಕವೀರಪ್ಪ ಒಡೆಯರು ಕಾಲವಾದಾಗ್ಗೆ ಸಮಾಪ್ತವಾಯಿತು.

ಆ ಬಳಿಕ ಹಾಲೇರಿ ಅರಮನೆಯಲ್ಲು ನಿಂತುಯಿದ್ದ ಮುದ್ದರಾಜ ಅರಸುಗಳು ಹೊರಮಲೆ ಅರಮನೆಯಲ್ಲು ಇದ್ದ ನಂದರಾಜ ಅರಸುಗಳ ಮಗ ಮುದ್ದಯ್ಯ ಅರಸುಗಳು ಸಹ, ಅನ್ಯೋನ್ಯವಾಗಿ ಏಕೀಕರದಿಂದ ಕೊಡಗಿನ ರಾಜ್ಯಭಾರ ಮಾಡಿಕೊಂಡು ಇರುವಾಗ್ಗೆ, ಇವರು ಫರಜುಲ್ಲಾ ಖಾನನ ಸಂಗಡ ಕೇಳಿದ್ದು : "ನಿಗದಿ ಮಾಡಿದ ಪ್ರಕಾರ ನಮ್ಮ ಸಂಸ್ಥಾನದಿಂದ ಕಾಲುವಾಸಿ ಹಣ ಕೊಟ್ಟು, ಬಾಕಿ ಹಣಕ್ಕೆ ನಮ್ಮ ದಳವಾಯಿ ತಮ್ಮನನ್ನು ಹೊಣೆಕೊಟ್ಟು ಇದ್ದೇವೆಯಷ್ಟೆ ? ಇನ್ನು, ಕರಾರು ಮೇರೆ ಸೀಮೆ ಯಾಕೆ ಬಿಟ್ಟುಕೊಡುವುದಿಲ್ಲ ?" ಎಂತ ಕೇಳಿದಲ್ಲಿ, ಆ ನವಾಬ ಹೈದರಲ್ಲಿಖಾನರು ಫರಜುಲ್ಲಾಖಾನನ ಮುಖಾಂತರ ಜವಾಬು ಹೇಳಿಸಿದ್ದು : "ಈ ವರೆಗೆ ಮಾತು ಕತೆ ಮಾಡಿದ ಚಿಕ್ಕವೀರಪ್ಪ ಒಡೆಯರು ಕಾಲವಾದರು. ಈಗ ಬದಲು ರಾಜ ರಾಗಿದ್ದಾರೆ. ಆದ್ದರಿಂದ ನೀವು ತೀರ ಹಣ ಕೊಟ್ಟರೆ ಸೀಮೆ ಬಿಡಿಸಿಕೊಡು ತ್ತೇವೆ" ಎಂತ ಹೇಳಿಸಿದ್ದರಿಂದ, "ಕಾಲುವಾಸಿ ಹಣ ಕೊಟ್ಟು ಬಾಕಿ ಹಣವಿಗೆ

ದಳವಾಯಿಯನ್ನು ಹೊಣೆ ಕೊಟ್ಟರೆ ಸೀಮೆ ಕೊಡುತ್ತೇವೆಯೆಂತ ಹೇಳಿ, ಈಗ ಯಾವತ್ತೂ ಹಣ ಕೊಟ್ಟರೆ ಸೀಮೆ ಕೊಡುತ್ತೇವೆ ಎಂತ ಹೇಳುತ್ತೀಯೆ ? ಇನ್ನು ನಾವು ಬಾಕಿ ಹಣ ಕೊಟ್ಟರೆ ಅದನ್ನು ತೆಗೆದುಕೊಂಡು, ಕಡೆಗೆ ಸೀಮೆ ಯನ್ನು ಕೊಡದೆ ದಗಾಮಾಡುವ ಹಾಗೆ ಕಾಣುತ್ತದೆ. ನಾವು ನಿಗದೀ ಮೇರೆ ಹಣ ಕೊಟ್ಟು ಇದ್ದೇವೆ. ಇನ್ನು ಸೀಮೆ ಕೊಡಿ. ಬಾಕಿ ಹಣ ಕೊಡುತ್ತೇವೆ" ಎಂತ ಹೇಳಿದಲ್ಲಿ, "ಅದು ಆಗದು. ಮುಂದಾಗಿ ಕೊಡಿ" ಎಂತ ಹೇಳಿದ. ಇವರು "ಮುಂಚಿತವಾಗಿ ಕೊಡಿ" ಎಂತ ಹೇಳಿದರು. ಈ ಮೇರೆ ಮಾತು ಬಂದು ಅದೇ ವ್ಯಯಸಂವತ್ಸರದಲ್ಲಿ ಸಲ್ಲಾ ಮುರಿದು, ಹಾಲೇರಿ ಅರಮನೆ ಯಲ್ಲು ಇದ್ದ ಮುದ್ದುರಾಜ ಅರಸುಗಳ ತಮ್ಮಂದಿರಾದ ಲಿಂಗರಾಜೇಂದ್ರ ಒಡೆಯರಿಗೂ ಫರಜುಲ್ಲಾ ಖಾನನಿಗೂ ಏಳುಸಾವಿರ ಸೀಮೆ ಬಳಿಯ ಜಗಳವಾಗಿ ಫರಜುಲ್ಲಾ ಖಾನನ ದಂಡಿಗೆ ಬಹಳ ಪೆಟ್ಟಾಗಿ, ಅಲ್ಲಿಂದ ಅವನು ಮುಖಭಂಗಿತ ವಾಗಿ ಬಿಸಲೆಘಟ್ಟ ಇಳಿದು ಹೋಗುವಾಗ್ಗೆ ಲಿಂಗರಾಜೇಂದ್ರ ಒಡೆಯರವರು ಮಂದಿ ತೆಗೆದುಕೊಂಡು ಹೋಗಿ, ಬಿಸಲೆಘಟ್ಟದಲ್ಲು ಅಡ್ಡಗಟ್ಟಿ ಜಗಳಮಾಡಿದಲ್ಲಿ ಅವರ ದಂಡಿಗೆ ಬಹಳ ಪೆಟ್ಟಾಗಿ, ಅರೆವಾಸಿ ದಂಡು ಮುಳುಗಿಹೋಗಿ, ಆ ದಂಡಿನ ಸಾಮಾನು, ಸರಂಜಾಮು, ತೋಶಿಕಾನೆ, ಫಿರಂಗಿ ಮುಂತಾಗಿ ಕೊಡಗಿನ ಸಂಸ್ಥಾನದವರು ತೆಗೆದುಕೊಂಡರು. ಕೊಡಗಿನ ಸಂಸ್ಥಾನದಿಂದ ಹೊಣೆಕೊಟ್ಟು ಇದ್ದ ದಳವಾಯಿ ತಮ್ಮ ಚರಮಣ್ಣ ಎಂಬುವನು ಪಟ್ಟಣದಲ್ಲಿ ಸಿಡುಬಾಗಿ ಅಲ್ಲಿಯೇ ಮೃತವಾದನು. ಆ ಬಳಿಕ ಈ ಫರಜುಲ್ಲಾ ಖಾನನ ದಂಡು ಯಾವತ್ತೂ ಮುರಿದು ಹಲಕಾದ ವರ್ತಮಾನ ನವಾಬ ಹೈದರಲ್ಲಿ ಖಾನರು ಕೇಳಿ, ಕೊಡಗಿನ ಸಂಸ್ಥಾನದವರಿಗೂ ನಮಗೂ ಮುಂದೆ ಕಜಾ ಇಲ್ಲದೆ ಸಲ್ಲಾಮಾಡಿ ದೋಸ್ತಿ ಮಡಗಬೇಕೆಂತ ನಿಶ್ಚೈಸಿ, "ಪ್ರಾಕುನಗರದ ದೊರೆಗಳು ಅಮರಸುಳ್ಯವನ್ನು ಕೊಡಗಿನ ಸಂಸ್ಥಾನಕ್ಕೆ ಸೇರಿಸಿಕೊಟ್ಟು ಇದ್ದಾ ರಷ್ಟೆ ? ಈಗ ನಾವು ಅದರ ಸಮೀಪವಲ್ಲಿ ಇರುವ ಪಂಜ ಬೆಳ್ಳಾರೆ ಎಂಬ ಎರಡು ಮಾಗಣೆಯನ್ನು ನಗರದ ಸೀಮೆಯಿಂದ ವಿಂಗಡಿಸಿ, ಕೊಡಗಿನ ಸಂಸ್ಥಾನಕ್ಕೆ ಸೇರಿಸಿ, ಸರ್ವೆಹೊಳೆ ಬಳಿಯ ತೋರಣ ಕಟ್ಟಿಸಿ, ಕಲಿ ಸಂದ ೪೮೭೨ನೇ ವಿಕೃತಿ ಸಂವತ್ಸರದಲ್ಲಿ ಬಿಟ್ಟುಕೊಟ್ಟರು. ಆ ಬಳಿಕ ಉಭಯ ಕಡೆಯಿಂದಲು ದೋಸ್ತಿಯಿಂದ ನಡೆದುಬರುತ್ತ ಇದ್ದರು. ಆ ತರುವಾಯದಲ್ಲಿ

ಕೊಡಗಿನ ಸಂಸ್ಥಾನ ವಿಚಾರಿಸಿಕೊಂಡು ಹಾಲೇರಿ ಅರಮನೆಯಲ್ಲು ಇದ್ದ ಮುದ್ದರಾಜ ಅರಸುಗಳು, ಹೊರಮಲೆ ಅರಮನೆಯಲ್ಲು ಇದ್ದ ನಂದರಾಜರುಗಳ ಮಗ ಮುದ್ದಯ್ಯರಾಜರು ಸಹ, ಎರಡು ವರುಷದೊಳಗೆ ಮೃತವಾಗಿ ಹೋದರು.

ಆ ಬಳಿಕ ಕಲಿ ಸಂದ ೪೮೭೨ನೇ ವಿಕೃತಿ ಸಂವತ್ಸರದಲ್ಲು ಕೊಡಗಿನ ಸಂಸ್ಥಾನದ ಪಟ್ಟವಾಗಬೇಕಾದರೆ, ಹಾಲೇರಿ ಅರಮನೆಯಲ್ಲಿ ಲಿಂಗರಾಜ ಒಡೆಯರು ತಮ್ಮ ಅಣ್ಣನ ಮಗನಿಗೆ ಪಟ್ಟವಾಗಬೇಕೆಂಬುದಾಗಿಯೂ, ಹೊರ ಮಲೆಯಲ್ಲು ಮಲ್ಲಯ್ಯ ಅರಸುಗಳು ತಮ್ಮ ಮಗನಿಗೆ ಪಟ್ಟವಾಗಬೇಕೆಂಬು ದಾಗಿಯೂ ಸಂವಾದಗಳ ಮಾಡಿ, ಗೃಹಛಿದ್ರದಿಂದ ಇವರು ಜಗಳ ಮಾಡಿದಲ್ಲಿ, ಹೊರಮಲೆ ಮಲ್ಲಯ್ಯರಾಜರ ಬಲ ಹೆಚ್ಚಾಗಿ ಬಲಾತ್ಕಾರದಿಂದ ತಮ್ಮ ಮಗನಾದ ದೇವಪ್ಪರಾಜರಿಗೆ ಮಡಿಕೇರಿಯಲ್ಲಿ ಪಟ್ಟವನ್ನು ಕಟ್ಟಿ, ಕೊಡಗಿನ ರಾಜ್ಯದ ಆಳಿಕೆಯನ್ನು ಮಾಡಿಕೊಂಡು, ಆ ಬಳಿಕ ಹಾಲೇರಿಯಲ್ಲು ಇದ್ದ ಲಿಂಗರಾಜೇಂದ್ರ ಒಡೆಯರಿಗೆ ಹೇರಳ ಕಿರುಕುಳ ಮಾಡಿದ್ದರಿಂದ, ಇವರ ಕಿರು ಕುಳದಲ್ಲಿ ನಿಸ್ತರಿಸಲಾರದೆ ಲಿಂಗರಾಜೇಂದ್ರ ಒಡೆಯರವರು ತಮ್ಮ ಕುಮಾರ ರಾದ ವೀರರಾಜೇಂದ್ರ ಒಡೆಯರನ್ನು, ತಮ್ಮ ಅಣ್ಣನ ಮಗ ಅಪ್ಪಾಜಿರಾಜರು, ಅವರ ಮಕ್ಕಳು ಇಬ್ಬರನ್ನು ಸಹ ಕರೆದುಕೊಂಡು ಐಗೂರು ಸೀಮೆಗೆ ಹೋಗಿ, ಅಲ್ಲಿ ಇದ್ದು, "ಹೈದರಲ್ಲಿಖಾನರು ನಮ್ಮ ಸಂಸ್ಥಾನದ ದೋಸ್ತಿ ಇರಬೇಕು ಎಂಬದಾಗಿ ಪಂಜ ಬೆಳ್ಳಾರೆ ಎರಡು ಮಾಗಣೆಯನ್ನು ತಮ್ಮ ಕಡೆಯಿಂದ ನಮ್ಮ ಸೀಮೆಗೆ ಬಿಟ್ಟುಕೊಟ್ಟು ದೋಸ್ತಿ ಇಟ್ಟು ಇದ್ದಾರೆ. ಈ ಸಮಯದಲ್ಲಿ ನಮ್ಮ ದಾಯಾದ್ಯರು ನಮ್ಮ ರಾಜ್ಯ ಆಶ್ರಯಿಸಿಕೊಂಡು ಇರುವಂತಹ ವಿವರ ಇವರಿಗೆ ಹೇಳಿದರೆ ನಮಗೆ ಕುಮ್ಮಕ್ಕು ಮಾಡಿ ಆ ದಾಯಾದ್ಯರ ಕೈಯಿಂದ ನಮ್ಮ ರಾಜ್ಯ ಬಿಡಿಸಿಕೊಟ್ಟಾರು" ಎಂಬದಾಗಿ ಗ್ರಹಿಸಿ, ಈ ವಿವರವನ್ನು ಹೈದರಲ್ಲಿಖಾನರಿಗೆ ಕಾಗದ ಬರೆದು ಮುತ್ತಿನಹಳ್ಳಿ ಬಸವನ ಕಯ್ಯ ಕೊಟ್ಟು, ಅವನ ಸಂಗಡ ಹರಿಕಾರರ ಕೂಡಿಸಿ ಕಳುಹಿಸಿದಲ್ಲಿ, ಹೈದರಲ್ಲಿಖಾನರು ಆ ಕಾಗದವನ್ನು ನೋಡಿ ಬಹಳ ಸಂತೋಷಪಟ್ಟು, "ಯಾವ ಬಗ್ಗೂ ಚಿಂತೆ ಮಾಡಬೇಡಿ. ಬೇಕಾದ ಕುಮ್ಮಕ್ಕು ಮಾಡಿ ನಿಮ್ಮ ಮನಸ್ಸಿನಲ್ಲು ಇರುವ ಪ್ರಕಾರ ಮಾಡಿಕೊಡುವಲ್ಲಿ ಅಂತರವಿಲ್ಲ" ಎಂಬದಾಗಿ ನಂಬಿಗೆ ಭಾಷೆಯಿಂದ ಜವಾಬು ಬರೆದು ಕಳುಹಿಸಿದ್ದರಿಂದ, ಆವಾಗ್ಗೆ ಲಿಂಗರಾಜೇಂದ್ರ ಒಡೆಯರು

ಆ ಮಾತು ನಂಬಿ ನವಾಬ ಹೈದರಲ್ಲಿಖಾನರ ಬಳಿಗೆ ಹೋಗಿ ಭೇಟಿ ಆದಲ್ಲಿ, "ನಿಮ್ಮ ರಾಜ್ಯ ಬಿಟ್ಟು ಏನು ಉದ್ದಿಶ್ಯ ನಮ್ಮ ಬಳಿಗೆ ಬಂದಿರಿ?" ಎಂಬದಾಗಿ ಹೈದರಲ್ಲಿಖಾನರು ಕೇಳಿದಲ್ಲಿ, ಸದರಿ ಬರೆದ ವಿವರ ಯಾವತ್ತು ಹೇಳಿದರು. "ಆ ಬಗ್ಗೆ ಚಿಂತೆ ಏನಿದೆ? ನಿಮ್ಮ ದೇಶವನ್ನು ನಾವು ಬಿಡಿಸಿಕೊಟ್ಟೇವು" ಎಂಬದಾಗಿ ನಂಬಿಗೆ ಭಾಷೆ ಕೊಟ್ಟು, ಬಹಳ ಬಗೆ ಹೇಳಿ ತಮ್ಮ ಬಳಿ ಇಟ್ಟು ಕೊಂಡು ಇದ್ದಲ್ಲಿ, ಕಲಿ ಸಂದ ೪೮೭೩ನೇ ಖರ ಸಂವತ್ಸರದಲ್ಲಿ ಮಹಾರಾಷ್ಟ್ರ ದಿಂದ ತ್ರಿಯಂಬಕಮಾಮನು ಹೇರಳ ಫವುಜು ತೆಗೆದುಕೊಂಡು, ನವಾಬ ಹೈದರಲ್ಲಿಖಾನರ ಮೇಲೆ ಜಗಳಕ್ಕೆ ಬಂದು, ಮೈಸೂರು ಸಂಸ್ಥಾನದ ಸೀಮೆ ಯಾವತ್ತು ದೌಡುಮಾಡಿ ಪಾಳುಮಾಡುತ್ತ ಇದ್ದಲ್ಲಿ, ನವಾಬ ಹೈದರಲ್ಲಿಖಾನ ರಿಗೂ ತ್ರಿಯಂಬಕಮಾಮನಿಗೂ ಚಿನಕುಳ್ಳಿಯ ಬಳಿ ಹೇರಳ ಲಡಾಯಿಯಾಗಿ, ಹೈದರಲ್ಲಿಖಾನರ ದಂಡು ಯಾವತ್ತೂ ಮುಳುಗಿಹೋಗಿ, ಒಂದು ಕುದುರೆ ಮೇಲೆ ಹತ್ತಿಕೊಂಡು ಹೈದರಲ್ಲಿಖಾನರು ಪಟ್ಟಣಕ್ಕೆ ಹೊಕ್ಕರು. ಆ ಬಳಿಕ ತ್ರಿಯಂಬಕಮಾಮನ ದಂಡು ಖರ ನಂದನ ಸಂವತ್ಸರದಲ್ಲಿ ಎರಡು ವರ್ಷ ಹೈದರಲ್ಲಿಖಾನರ ಸೀಮೆ ಯಾವತ್ತೂ ಸೂರೆ ಮಾಡುತ್ತ ಇದ್ದದ್ದರಿಂದ, ನವಾಬ ಹೈದರಲ್ಲಿಖಾನರು ತ್ರಿಯಂಬಕಮಾಮನ ಸಂಗಡ ಸಲ್ಲಾದ ಸವಾಲು ಜವಾಬು ಮಾಡಿಕೊಂಡು, ಹೇರಳ ದ್ರವ್ಯ ಕೊಟ್ಟಿದ್ದರಿಂದ, ಅವರು ತಮ್ಮ ಫವುಜು ಯಾವತ್ತು ತೆಗೆದುಕೊಂಡು, ಹೈದರಲ್ಲಿಖಾನರಿಗೆ ಸೇರಿದ ಸೀಮೆ ಬಿಟ್ಟು, ಮಹಾರಾಷ್ಟ್ರಕ್ಕೆ ಹೋದರು.

ಈ ತ್ರಿಯಂಬಕಮಾಮನ ಅತಂತ್ರದಿಂದ ಹೈದರಲ್ಲಿಖಾನರ ಸೀಮೆ ಯಾವತ್ತು ಬರ ಹತ್ತಿ, ಸೀಮೆ ರೈತರಿಗೂ ದಂಡಿನ ಮಂದಿಗೂ ತಿನ್ನೋದಕ್ಕೆ ಅನ್ನವಿಲ್ಲದೆ, ಹೇರಳ ಜನ ಸಾಯುತ್ತ ಇದ್ದಲ್ಲಿ, ಲಿಂಗರಾಜೇಂದ್ರ ಒಡೆಯರು ಹೈದರಲ್ಲಿಖಾನರ ಸಂಗಡ ಹೇಳಿದ್ದು ಏನೆಂದರೆ: "ತ್ರಿಯಂಬಕಮಾಮನ ಅತಂತ್ರದಿಂದ ತಮ್ಮ ಸೀಮೆ ಯಾವತ್ತೂ ಕೆಟ್ಟುಹೋಗಿ ಬರ ಹತ್ತಿ, ಹೇರಳ ಜನ ಅನ್ನವಿಲ್ಲದೆ ಮೃತವಾಗುತ್ತ ಇದೆ. ಈ ಸಮಯದಲ್ಲಿ ನಮ್ಮ ಕೊಡಗಿನ ಸೀಮೆಗೆ ದಂಡು ತೆಗೆದುಕೊಂಡು ಹೋದುದೇ ಉಂಟಾದರೆ ಆ ಸೀಮೆಯಲ್ಲಿ ಹೇರಳದ ದವಸ ಧಾನ್ಯ ಸಿಕ್ಕುತ್ತದೆ. ನಿಮ್ಮ ಸೀಮೆ ಜನಕ್ಕೆ ಅನ್ನವಾಗುತ್ತದೆ. ಈ ಬರಗಾಲವು ಕಳೆದುಹೋಗುತ್ತದೆ" ಎಂದು ಹೇಳಿದಲ್ಲಿ, ಆ ಮಾತಿಗೆ

ಹೈದರಲ್ಲಿಖಾನರು ಒಡಂಬಟ್ಟು, ತಮ್ಮ ದಂಡನ್ನು ತೆಗೆದುಕೊಂಡು, ಲಿಂಗ ರಾಜೇಂದ್ರ ಒಡೆಯರನ್ನು ಕರೆದುಕೊಂಡು, ಕಲಿ ಸಂದ ೪೮೭೫ನೇ ವಿಜಯ ಸಂವತ್ಸರದಲ್ಲಿ ಅರಕಲಗೋಡು ಬಳಿಯಿಂದ ಕೊಡಗು ಸೀಮೆ ವಳಿತವಾದ ಬೆಟ್ಟಕಣಿವೆ ಮಾರ್ಗವಾಗಿ ಕೊಡಗಿನ ಸೀಮೆವೊಳಗೆ ಬಂದಲ್ಲಿ, ಎಡವನಾಡು ಬಳಿಯ ಹೈದರಲ್ಲಿಖಾನಬಹದರವರ ದಂಡಿಗೂ ಕೊಡಗ ಜನಕ್ಕೂ ಜಗಳವಾಗಿ ಹೈದರಲ್ಲಿಖಾನರ ದಂಡಿಗೆ ಬಹಳ ಪೆಟ್ಟಾಗಿ, ಮುರಿದು, ಹಿಂದಕ್ಕೆ ಹೋಗಿ, ಅರಕಲಗೋಡು ಬಳಿಯಲ್ಲು ಇಳಿದುಕೊಂಡು, "ಈ ಮೇರೆ ನಮ್ಮ ದಂಡು ಒಳನುಗ್ಗುವುದಕ್ಕೆ ಕೊಡಗರು ಆಸ್ಪದ ಕೊಡದೆ ಹೋದರು. ನಿಮ್ಮ ಸೀಮೆ ಮಾರ್ಗವಾದರೆ ಬಹಳ ಇಕ್ಕಟ್ಟು. ಇನ್ನು ಮುಂದೆ ಏನು ಉಪಾಯ?" ಎಂತ ಹೈದರಲ್ಲಿಖಾನರು ಲಿಂಗರಾಜೇಂದ್ರ ಒಡೆಯರವರ ಕೇಳಿದಲ್ಲಿ ಅವರು ಹೇಳಿದ್ದು: "ನಮ್ಮ ಕೊಡಗಿನ ಸೀಮೆಯಲ್ಲಿ ಬಹಳ ಜನ ಕೊಡಗರು ನಮಗೆ ಆಪ್ತರಿದ್ದಾರೆ. ಅವರಿಗೆಲ್ಲಾ ನಾವು ಅಂತರಂಗದಲ್ಲಿ ಬರೆದು ಕಳುಹಿಸಿ, ಕೆಲವು ಕೊಡಗು ಜನರ ನಮ್ಮ ಕಡೆ ಸಹಾಯ ಮಾಡಿಕೊಂಡು, ಹೇರಳ ಲಡಾಯಿ ಬೀಳದಂತೆ, ಸರಾಗಮಾರ್ಗದಲ್ಲಿ ಕೊಡಗಿನ ಸೀಮೆವೊಳಗೆ ದಂಡನ್ನು ತೆಗೆದು ಕೊಂಡು ಹೋಗುತ್ತೇವೆ" ಎಂಬದಾಗಿ ಹೇಳಿದಲ್ಲಿ, "ಅದೇ ಮೇರೆ ಮಾಡಿ" ಎಂಬದಾಗಿ ಹೇಳಿದರು. ಆ ಬಗ್ಗೆ ತಮಗೆ ಆಪ್ತರಾದಂತಹ ಕೊಡಗರಿಗೆ ಬರೆಸಿ ಕಳುಹಿಸಿದ ವಿವರ: "ನಮ್ಮ ನಮ್ಮ ಗೃಹಛಿದ್ರವಾಗಿ ಅಣ್ಣ ತಮ್ಮಂದಿರು ಜಗಳ ಮಾಡಿಕೊಂಡು, ನಾವು ನವಾಬ ಹೈದರಲ್ಲಿಖಾನರ ಬಳಿಗೆ ಹೋಗಿ ಹೇಳಿದಲ್ಲಿ ನಿಮ್ಮ ಅಣ್ಣತಮ್ಮಂದಿರ ನ್ಯಾಯ ತೀರಿಸಿ, ನಿಮ್ಮ ರಾಜ್ಯ ನಿಮಗೆ ದಾಯಾದ್ಯರ ಕೈಯಿಂದ ಬಿಡಿಸಿಕೊಡುತ್ತೇವೆಂಬದಾಗಿ ಹೇಳಿ, ಭಾರಿ ದಂಡು ತೆಗೆದುಕೊಂಡು ಬಂದು ಇದ್ದಾರೆ. ಆದ್ದರಿಂದ ನಮ್ಮ ದಾಯಾದ್ಯರ ಮಾತಿನ ಮೇಲೆ ನೀವು ನಮ್ಮ ಸಂಗಡ ಜಗಳ ಮಾಡಿದ್ದುಂಟಾದರೆ ನಿಮಗೆ ಬಹಳ ದಣು ತೋರೀತು" ಎಂದು ನಯ ಭಯ ತೋರಿ ಬರೆದು ಕಳುಹಿಸಿದಲ್ಲಿ, ಆ ಮಾತಿಗೆ ಕೆಲವು ಕೊಡಗರು, ರಾಜರಿಗೆ ಆಪ್ತರಾದಂತಹವರು, ಒಡಂಒಟ್ಟು, "ನೀವು ಬಾಳೆಲೆ ಮಾರ್ಗವಾಗಿ ಬಂದರೆ ನಾವು ಅಲ್ಪಸ್ವಲ್ಪ ಲಡಾಯ ಮಾಡಿ ನಿಮ್ಮ ಸಂಗಡ ಕೂಡುತ್ತೇವೆ" ಎಂಬದಾಗಿ ಬರೆಸಿ ಕಳುಹಿಸಿದ್ದರಿಂದ, ಈ ವಿವರ ಲಿಂಗರಾಜೇಂದ್ರ ಒಡೆಯರು ನವಾಬ ಹೈದರಲ್ಲಿಖಾನರಿಗೆ ಹೇಳಿದಲ್ಲಿ, ಆ

ಮಾತಿಗೆ ಒಡಂಬಟ್ಟು, ಬಾಳಲೆ ಮಾರ್ಗವಾಗಿ ದಂಡು ತೆಗೆದುಕೊಂಡು ಬಂದಲ್ಲಿ ಅಲ್ಲಿ ಇದ್ದಂತಹ ಕೊಡಗರು, ಆಪ್ತರಾದಂಥವರು ಸ್ವಲ್ಪ ಲಡಾಯಿ ಮಾಡಿ, ಲಿಂಗರಾಜೇಂದ್ರ ಒಡೆಯರವರ ಕಡೆಗೆ ಬಂದು ಕೂಡಿ, ದಂಡನ್ನು ಒಳಕ್ಕೆ ಬಿಟ್ಟುಕೊಂಡ ಕಾರಣ, ಆ ದೇವಪ್ಪರಾಜರು ಈ ಸೀಮೆಯಲ್ಲು ನಿಲ್ಲಲಾರದೆ ಘಟ್ಟ ಇಳಿದು ಮಲೆಯಾಳಕ್ಕೆ ಹೋದರು. ಆ ಬಳಿಕ ಆ ದೇವಪ್ಪರಾಜರ ಕುಟುಂಬ, ಮಕ್ಕಳು, ಅವರ ಸಂತತಿ ಯಾವತ್ತು, ಪಟ್ಟಣಕ್ಕೆ ಹಿಡಿದುಕೊಂಡು ಹೋಗಿ ಸೆರೆ ಹಾಕಿದರು. ಮಲೆಯಾಳಕ್ಕೆ ಹೋದ ದೇವಪ್ಪರಾಜರನ್ನು ಕೋಟೆ ಅರಸುಗಳು ನಂಬಿಗೆ ಕೊಟ್ಟು ಕರೆಸಿ, " ನಿಮ್ಮ ದೊಡ್ಡವೀರಪ್ಪ ಒಡೆಯರವರು ನಮ್ಮ ಕಾರಣವರನ್ನು ತೋಮರದಲ್ಲು ತಲೆ ಒಡೆದು ಹಾಕಿ ಇದ್ದಾರೆ. ಆದರ ಬದಲಿಗೆ ನಿಮ್ಮ ತಲೆ ಕೊಡಿ. ಅಲ್ಲದಿದ್ದರೆ ತಲೆಬೆಲೆ ದ್ರವ್ಯ ಕೊಡಿ " ಎಂಬುದಾಗಿ ಕೇಳಿದ್ದರಿಂದ, ಅವರು ಲಾಚಾರಾಗಿ ೪೦,೦೦೦ ವರಹ ತಲೆಬೆಲೆ ಕೊಟ್ಟು, ಅಲ್ಲಿ ನಿಲ್ಲಲಾರದೆ, ಸಂಗಡ ಇದ್ದ ಜನವನ್ನೆಲ್ಲ ಅಲ್ಲಿ ಬಿಟ್ಟು, ಬದಲು ವೇಷ ಹಾಕಿಕೊಂಡು, ನಾಲ್ಕು ಜನರ ಮಾತ್ರ ಕೂಡ ಕರೆದುಕೊಂಡು, ಮರಾಟೆ ಸೀಮೆಗೆ ಓಡಿಹೋಗುತ್ತಿದ್ದಲ್ಲಿ ಹರಿಹರದಲ್ಲಿ ಹೈದರಲ್ಲಿ ಖಾನರ ಕಡೆಯವರು ಹಿಡಿದು ಶ್ರೀರಂಗಪಟ್ಟಣಕ್ಕೆ ಕಳುಹಿಸಿಕೊಟ್ಟದ್ದರಿಂದ, ಆ ದೇವಪ್ಪರಾಜರನ್ನು ಪಟ್ಟಣದಲ್ಲು ಸೆರೆಹಾಕಿ, ಇವರನ್ನೂ ಇವರ ಕುಟುಂಬ, ಮಕ್ಕಳು, ಹೊರಮಲೆ ಸಂತತಿ ಯಾವತ್ತನ್ನೂ ಕೊಂದುಹಾಕಿಬಿಟ್ಟದ್ದರಿಂದ, ದೊಡ್ಡವೀರಪ್ಪ ಒಡೆಯರ ಎರಡನೆ ಚಿಕ್ಕ ತಮ್ಮಂದಿರಾಗಿ ಹೊರಮಲೆಯಲ್ಲು ಇದ್ದ ನಂದರಾಜ ಅರಸುಗಳ ಸಂತಾನ ಯಾವತ್ತೂ ಇವರ ಮಗನಾದ ದೇವಪ್ಪ ರಾಜರ ಕಾಲಕ್ಕೆ ಕಲಿ ಸಂದ ೪೮೭೬ನೇ ಜಯ ಸಂವತ್ಸರಕ್ಕೆ ಸಮಾಪ್ತ ವಾಯಿತು.

ಆ ಬಳಿಕ ನವಾಬ ಹೈದರಲ್ಲಿಖಾನರು ಲಿಂಗರಾಜೇಂದ್ರ ಒಡೆಯರ ಸಂಗಡ ಹೇಳಿದ್ದು : " ನಿಮ್ಮ ಸೀಮೆ ನಿಮ್ಮ ದಾಯಾದ್ಯರ ಕಯ್ಯಿಂದ ತಪ್ಪಿತು. ಆ ದೇವಪ್ಪರಾಜರು ನಮ್ಮ ಕೈಗೆ ಸಿಕ್ಕಿದರು. ಸೀಮೆ ಬಿಡಿಸಿಕೊಡುವ ಬಗ್ಗೆ ನಮ್ಮ ದಂಡು ತೆಗೆದುಕೊಂಡು ಬಂದದ್ದರಿಂದ, ನಮ್ಮ ದಂಡುಗಳಲ್ಲಿ ಹೇರಾಳ ಮಂದಿ ಸತ್ತರು. ಇದಕ್ಕೆ ಖರ್ಚು ಹೇರಾಳ ಮುಟ್ಟಿಯಿದೆ. ಕರಾರು ಮೇರೆ ನಿಮ್ಮ ಸೀಮೆಯನ್ನು ನಿಮ್ಮ ವಶಮಾಡಿಕೊಂಡು, ಸದರಿ ಬರೆದ ಮೇರೆ ಖರ್ಚು

ಆಗಿ ಇರುವ ದ್ರವ್ಯ ನಮಗೆ ಕೊಡಬೇಕು" ಎಂಬದಾಗಿ ಹೇಳಿದಲ್ಲಿ, ಲಿಂಗ ರಾಜೇಂದ್ರರು ಹೇಳಿದ್ದು ಏನೆಂದರೆ: "ಈ ಪರಿಯಂತರ ನಮ್ಮ ದಾಯಾದಿ ದೇವಪ್ಪರಾಜರು ದೊರೆತನ ಮಾಡಿಕೊಂಡು ನಮ್ಮ ಸಂಸ್ಥಾನದ ದ್ರವ್ಯ ಯಾವತ್ತೂ ಕೊಂಡುಹೋದರು. ನಮಗೆ ಈಗ ಹಣ ಎಲ್ಲಿ ಇದೆ?" ಎಂತ ಹೇಳಿದಲ್ಲಿ, ಆ ಬಗ್ಗೆ ಹೈದರಲ್ಲಿಖಾನರು ಹೇಳಿದ್ದು: "ನಿಮ್ಮ ಸೀಮೆ ನಿಮಗೆ ಬಿಟ್ಟುಕೊಡುತ್ತ ಇದೇವೆ. ನಮ್ಮ ದಂಡಿನ ಖರ್ಚಿನ ಉದ್ದಿಶ್ಯವಾಗಿ ಕಾಲಂ ಪ್ರತಿಯಲ್ಲು ೨೪ ಸಾವಿರ ರೂಪಾಯಿ ಕೊಡುತ್ತ ಬರಬೇಕು" ಎಂದು ಹೇಳಿದಲ್ಲಿ ಲಿಂಗರಾಜೇಂದ್ರ ಒಡೆಯರವರು ಹೇಳಿದ್ದು: "ನಮ್ಮ ಸಂಸ್ಥಾನಕ್ಕೆ ಪ್ರಾಕು ಕಲ್ಪಾತಿ ಪರಿಯಂತರಕ್ಕೂ ಕೆಲವು ಬಯನಾಡು ಸೀಮೆಗೆ ಸೇರಿತ್ತು. ಈಚೆಗೆ ಕೆಲವು ದಿವಸದಿಂದ ಅದನ್ನು ಕೋಟೆ ಅರಸುಗಳು ಆಕ್ರಮಿಸಿಕೊಂಡು ಇದ್ದಾರೆ. ಅವರ ಕಯ್ಯಿಂದ ಬಿಡಿಸಿ ನಮಗೆ ಕೊಟ್ಟು, ಕಲ್ಪಾತಿ ಪರಿಯಂತರ ನಮ್ಮ ಠಾಣ್ಯ ಮಡಗಿಕೊಟ್ಟರೆ, ಸದರಿ ಹೇಳಿದ ಮೇರೆ ಹಣವನ್ನು ಕಾಲಂಪ್ರತಿಯಲ್ಲು ತಮ್ಮ ಸರಕಾರಕ್ಕೆ ಸಂದಾಯ ಮಾಡಿಕೊಟ್ಟೇವು. ನಾವು ಖುಶಿಯಿಂದ ನಮ್ಮ ಸೀಮೆಯಲ್ಲು ಇದ್ದೇವು" ಎಂದು ಹೇಳಿದಲ್ಲಿ, ಆ ಮಾತಿಗೆ ಹೈದರಲ್ಲಿಖಾನರು ಹೇಳಿದ್ದು: "ಕೊಡಗಿನ ಸೀಮೆಯಲ್ಲು ಬಂದೋಬಸ್ತು ಮಾಡಿಕೊಂಡು ಇರತಕ್ಕ ಬಗ್ಗೆ ಮಡಿಕೇರಿಯಲ್ಲಿ ನಿಮ್ಮ ಅಣ್ಣನ ಮಗನ ಮಡಗಿ, ನೀವು ನಮ್ಮ ಸಂಗಡ ಪಟ್ಟಣಕ್ಕೆ ಬಂದರೆ ಕಲ್ಪಾತಿ ಪರಿಯಂತರ ನಿಮ್ಮ ಸೀಮೆ ಕೋಟೆ ಅರಸುಗಳು ಈಗ ಆಕ್ರಮಿಸಿಕೊಂಡು ಇರುವಂಥಾದ್ದು ವಿಚಾರಿಸಿ, ಕೊಡಗಿನ ಸೀಮೆಗೆ ಸೇರಿದ್ದು ತಾರ್ಕಣ್ಯ ಹೌದಾದರೆ, ಅಲ್ಲಿ ನಿಮ್ಮ ಠಾಣ್ಯ ಇಡಿಸಿಕೊಡ ಲಾದೀತು" ಎಂಬದಾಗಿ ಹೇಳಿದಲ್ಲಿ, ಆ ಮಾತಿಗೆ ಒಡಂಬಟ್ಟು, ಲಿಂಗ ರಾಜೇಂದ್ರ ಒಡೆಯರವರು ತಮ್ಮ ಅಣ್ಣನ ಮಗನಾದ ಅಪ್ಪಾಜಿರಾಜರಿಗೆ ಪಟ್ಟ ಕಟ್ಟಿ, ಮಡಿಕೇರಿಯಲ್ಲಿ ಇಟ್ಟು, ನವಾಬ ಹೈದರಲ್ಲಿಖಾನರ ಸಂಗಡ ಪಟ್ಟಣಕ್ಕೆ ಹೋದಲ್ಲಿ, ಆ ನವಾಬರು ಕಲ್ಪಾತಿ ಸಮೀಪದಲ್ಲು ಇರುವಂತಹ ಹಳಬರನ್ನು ಕರೆಸಿ ವಿಚಾರಿಸಿದಲ್ಲಿ, ಆ ಜನರು ಹೇಳಿದ್ದು: "ಅತಃ ಪ್ರಾಕು ಕಲ್ಪಾತಿ ಪರಿಯಂತರಕ್ಕೂ ಕೊಡಗಿನ ಸಂಸ್ಥಾನಕ್ಕೆ ಸೇರಿಯಿತ್ತು. ಈಚೆಗೆ ಕೆಲವು ಕಾಲದಿಂದ ಕೋಟೆ ಅರಸುಗಳು ಆಕ್ರಮಿಸಿಕೊಂಡು ಇದ್ದಾರೆ" ಎಂಬದಾಗಿ ಆ ಜನರು ಹೇಳಿದಲ್ಲಿ ಈ ವಿವರ ಹೈದರಲ್ಲಿಖಾನರು ತಿಳಿದು ಲಿಂಗರಾಜೇಂದ್ರ

ಒಡೆಯರಿಗೆ ಹೇಳಿದ್ದು : " ನೀವು ಕೊಡಗಿನ ರಾಜ್ಯಕ್ಕೆ ಹೋಗಿ ಅದಕ್ಕೆ ಸೇರಿದ ಕಲ್ಪಾತಿ ಹತ್ತಿರ ನಿಮ್ಮ ಠಾಣ್ಯ ಇಟ್ಟು ಬಂದೊಬಸ್ತು ಮಾಡಿಕೊಳ್ಳಿ " ಎಂದು ಹೇಳಿದ್ದಕ್ಕೆ ಲಿಂಗರಾಜರು ತಮ್ಮ ಸ್ಥಳಕ್ಕೆ ಬಂದು, ೩,೦೦೦ ಕೊಡಗುಮಂದಿ ಕೂಡ ತೆಗೆದುಕೊಂಡುಹೋಗಿ, ಕಲ್ಪಾತಿ ಸರಹದ್ದಿನಲ್ಲಿ ಲಕಡಿ ಕೋಟೆ ತಯಾರು ಮಾಡಿಸಿ, ಒಂದು ವರುಷ ಅಲ್ಲಿ ಇದ್ದು, ಆ ಬಳಿಕ ಆ ಕೋಟೆಯಲ್ಲಿ ೨೦೦೦ ಮಂದಿಯನ್ನು ಗಡಿ ಬಂದೋಬಸ್ತು ಬಗ್ಗೆ ಇಟ್ಟು, ಸದರಿ ಜನಕ್ಕೆ ಸರದಾರ ಕಗ್ಗೋಡುನಾಡು ಅಣ್ಣಪ್ಪನ ಅಪ್ಪಯ್ಯ ನೇಮಿಸಿ ಇಟ್ಟು ಆ ಲಕಡಿಕೋಟೆ ಕಿಲ್ಲೇದಾರಿಕೆಯನ್ನು ಎಡೆನಾಲ್ಕುನಾಡು ಮಂಜುಡ ಅಪ್ಪಯ್ಯಗೆ ನೇಮಿಸಿ, ಉಳಿದ ಒಂದು ಸಾವಿರ ಕೊಡಗರನ್ನು ಕರೆದುಕೊಂಡು ಕೊಡಗಿನ ಸೀಮೆಗೆ ಬಂದು ಇರುತ್ತ ಇದ್ದಲ್ಲಿ, ಕಲಿ ಸಂದ ೪೮೭೭ನೇ ಮನ್ಮಥ ಸಂವತ್ಸರದಲ್ಲಿ ಈ ರಾಜ್ಯಭಾರ ಮಾಡುತ್ತ ಇದ್ದ ಅಪ್ಪಾಜಿರಾಜರು ಮೃತವಾದ್ದರಿಂದ, ಆ ಬಳಿಕ ಲಿಂಗರಾಜೇಂದ್ರ ಒಡೆಯರು, ತಮ್ಮ ಮಕ್ಕಳು, ತಮ್ಮ ಅಣ್ಣನ ಮಗ ಅಪ್ಪಾಜಿ ರಾಜರ ಮಗ ಈ ಮೂರು ಜನ ಸಹ ಸಲಹಿಕೊಂಡು ರಾಜ್ಯಭಾರ ಮಾಡುತ್ತ ಇದ್ದಲ್ಲಿ, ಕಲ್ಪಾತಿ ಲಕಡಿಕೊಟೆಯಲ್ಲಿ ಕೊಡಗು ಜನ ಆ ಸರದಾರ ಕಿಲ್ಲೇದಾರ ಸಹವಾಗಿ ಕಲಿಸಂದ ೪೮೭೬ನೇ ಜಯಸಂವತ್ಸರದಾರಭ್ಯ ಕಲಿಸಂದ ೪೮೮೦ನೇ ವಿಳಂಬಿ ಸಂ||ದ ವರೆಗೆ ೫ ವರ್ಷ ಆ ಕಲ್ಪಾತಿಯನ್ನು ಬಲಕಾಯಿಸಿಕೊಂಡು ಇರುತ್ತ ಇದ್ದಲ್ಲಿ, ಆ ಕೋಟೆಯಲ್ಲು ಇದ್ದಂಥಾ ರಸ್ತು ಮುಸ್ತೈದು ಯಾವತ್ತು ಮುಗಿದುಹೋದ್ದರಿಂದ, ಕೋಟೆ ಅರಸುಗಳು ಆ ಕೋಟೆ ಒಳಗೆ ಠಾಣ್ಯ ಇರುವ ಜನಕ್ಕೆ ರಸ್ತು ಬರುವಂಥಾ ಮಾರ್ಗ ಮುಟ್ಟಿಸಿ, ಬಹಳ ಕಿರುಕುಳ ಮಾಡಿದ ರಿಂದ, ಕೊಡಗು ಮಂದಿಗೆ ಸಾಮಾನು ಸಿಕ್ಕದೆ ಬೇಜಾರಾಗಿ, ಆ ಕಲ್ಪಾತಿ ಲಕಡಿಕೋಟೆಯಲ್ಲು ಇದ್ದ ಠಾಣ್ಯ ಎಬ್ಬಿಸಿಕೊಂಡು, ಇಬ್ಬರು ಕೊಡಗು ಸರದಾ ರರು ಕಲಿ ಸಂದ ೪೮೮೧ನೇ ವಿಕಾರಿ ಸಂ||ದ ಚೈತ್ರಮಾಸದಲ್ಲಿ ಕೊಡಗಿನ ಸೀಮೆಗೆ ಬಂದು ಈ ವಿವರ ಯಾವತ್ತು ಲಿಂಗರಾಜೇಂದ್ರರಿಗೆ ಅರಿಕೆ ಮಾಡಿ ದಲ್ಲಿ, ಅದ ಕೇಳಿದ ಬಳಿಕ ಅವರು ತಮ್ಮ ಅಣ್ಣನ ಮಗ ಅಪ್ಪಾಜಿರಾಜ ಅರಸು ಗಳ ಮಕ್ಕಳು ಇಬ್ಬರ ಸಂಗಡ ೨ ಸಾವಿರ ಕೊಡಗು ಮಂದಿಯನ್ನು ಕೂಡಿಸಿ, ಕಲ್ಪಾತಿ ಗಡಿ ಬಂದೋಬಸ್ತು ಮಾಡಿಕೊಂಡು ಇರುವದಕ್ಕೆ ಕಳುಹಿಸಿದಲ್ಲಿ, ಈ ಮಂದಿ ಹೋಗುವಂತಹ ಮಾರ್ಗವನ್ನು ಕೋಟೆಅರಸು ಮಂದಿ ಇಟ್ಟು ರಾತ್ರಿ

ಕಾಲದಲ್ಲಿ ಮರೆ ಮೋಸದಿಂದ ಬಿದ್ದು, ಈ ಕೊಡಗರ ಕಡಿದುಹಾಕಿ, ಒಬ್ಬ ದೊರೆಮಗನನ್ನು ಕಡಿದು, ಮತ್ತೊಬ್ಬನ ಕೈಸೆರೆ ಹಿಡಿದುಕೊಂಡುಹೋಗಿ ಕದನೂರಕೂಲಾ ಎಂಬಲ್ಲಿ ಸೆರೆಹಾಕಿ ಕೊಂದುಬಿಟ್ಟರು.

ಆ ಬಳಿಕ ಇದೇ ಮಾಘ ಬ. ೧೦ ಬುಧವಾರ ಮಹಾದೇವಪುರದಲ್ಲಿ ಲಿಂಗರಾಜರು ಶಿವಾಧೀನರಾದರು. ಆಮೇಲೆ ಉಳಿದ ದೊರೆಮಕ್ಕಳು ಚಿಕ್ಕವ ರಾದ್ದರಿಂದ ನವಾಬ ಹೈದರಲ್ಲಿಖಾನರು ಹೇಳಿದ್ದು: "ಈ ಸೀಮೆ ಬಂದೋಬಸ್ತು ಮಾಡುವ ಬಗ್ಗೆ ನೀವು ಚಿಕ್ಕವರು. ನಿಮ್ಮಿಂದ ತೀರದು. ನೀವು ದೊಡ್ಡವರಾದಮೇಲೆ ನಿಮ್ಮ ರಾಜ್ಯ ನಿಮಗೆ ಕೊಡುತ್ತೇವೆ" ಎಂಬದಾಗಿ ಹೇಳಿ, ಕೊಡಗಿನ ರಾಜ್ಯವನ್ನು ಅಪಹರಿಸಿಕೊಂಡು, ಮೊದಲು ಇಲ್ಲಿ ಕರಣಿಕ ನಾಗಿ ಸುಬ್ಬರಸಯ್ಯನಿಗೆ ಕೊಡಗಿನ ಸೀಮೆ ಮಾಮಿಲೆಯನ್ನು ಕೊಟ್ಟು, ಕಲಿ ಸಂದ ೪೮೮೩ನೇ ಶಾರ್ವರಿ ಸಂವತ್ಸರದಲ್ಲಿ ನವಾಬ ಹೈದರಲ್ಲಿಖಾನರು ದಂಡು ತೆಗೆದುಕೊಂಡು ಆರಕಾಡಿಗೆ ಹೋದರು. ಆಗ ಈ ಸೀಮೆಯಲ್ಲಿ ಇರುವ ಕೊಡಗ ಜನರು ಮನಸೂಬ ಮಾಡಿದ್ದು: "ಕೊಡಗಿನ ಸಂಸ್ಥಾನದ ದೊರೆ ಮಗನಿಗೆ ರಾಜ್ಯ ಕೊಡದೆ ಹೈದರಲ್ಲಿಖಾನರು ಒಬ್ಬ ಬ್ರಾಹ್ಮಣನಿಗೆ ಅಮಲು ಕೊಟ್ಟು ಇವನ ಕೈಕೆಳಗೆ ನಮ್ಮ ಇಟ್ಟನಲ್ಲಾ ! ದೊರೆಕುಮಾರರು ಇದ್ದ ಹಾಗೆ ಈ ಬ್ರಾಹ್ಮಣನ ಕೈಕೆಳಗೆ ಇರುವದು ಯುಕ್ತವಲ್ಲ" ಎಂದು ಕೊಡಗುಜನ ಈ ಅಮಲ್‌ದಾರನ ಮೇಲೆ ಕಲಿ ಸಂದ ೪೮೮೪ನೇ ಶುಭಕೃತು ಸಂವತ್ಸರದ ಜ್ಯೇಷ್ಠ ಮಾಸದಲ್ಲಿ ತಿರುಗಿಬಿದ್ದು ಶರಾರತ್ತು ಮಾಡಿದರು. ಈ ವಿವರವನ್ನು ಈ ಅಮಲ್ ಮಾಡುವವನು ನವಾಬ ಹೈದರಲ್ಲಿಖಾನರಿಗೆ ಬರೆದು ಕಳುಹಿಸಿದಲ್ಲಿ, ಅದಕ್ಕೆ ಜವಾಬು ಅವರು ಬರೆದು ಕಳುಹಿಸಿದ್ದು: "ಕೊಡಗಿನ ದೊರೆಮಕ್ಕಳು ಮಹಾ ರಾಜನದುರ್ಗ ತಾಲೂಕು ಗೋರೂರಲ್ಲಿ ಇರಲಿ. ನಾವು ಆರಕಾಡಿಂದ ಪಟ್ಟಣಕ್ಕೆ ಬಂದಮೇಲೆ ಕೊಡಗರ ತುಂಟತನ ನಿಲ್ಲಿಸಿ ಅವರ ಸೀಮೆ ಅವರಿಗೆ ಕೊಟ್ಟು ಅಲ್ಲಿಗೆ ಕಳುಹಿಸಬಹುದು" ಎಂಬದಾಗಿ ಬರೆದು ಕಳುಹಿಸಿದ್ದರಿಂದ, ಆ ಅಮಲ್‌ದಾರನು ಅದೇ ಹುಕ್ಕುಂ ಮೇರೆ ಇದೇ ಸಂವತ್ಸರದ ಭಾದ್ರಪದ ಮಾಸದಲ್ಲಿ ಕುಟುಂಬಮಕ್ಕಳು ಸಹವಾಗಿ ಗೋರೂರಲ್ಲಿ ಮಡಗಿಸಿದನು. ಅದೇ ಸಮಯದಲ್ಲಿ ಕೊಡಗರು ಯಾವತ್ತೂ ಪುಂಡು ಎದ್ದು, ಕೊಡಗಿನ ಸೀಮೆಯಲ್ಲಿ ಇರುವಂಥಾ ಹೈದರಲ್ಲಿಖಾನರ ಠಾಣ್ಯದ ಮಂದಿ ಯಾವತ್ತೂ ಹೊರಡಿಸಿಬಿಟ್ಟು,

ಕೋಟೆಕೊತ್ತಳ ಯಾವತ್ತನ್ನೂ ತೆಗೆದುಕೊಂಡು, ಈ ಕೊಡಗರು ಸೀಮೆಯನ್ನು ಕಟ್ಟಿಕೊಂಡು ಇರುತಿರುವಲ್ಲಿ, ಇದೇ ವರುಷ ನವಾಬ ಹೈದರಲ್ಲಿಖಾನರು ಬೆನ್ನಿನಲ್ಲಿ ರಾಜಹುಣ್ಣು ಎದ್ದು ಆರಕಾಡಿನಲ್ಲಿ ಮೃತವಾದರು.

ಈ ಸಮಾಚಾರ ಕೇಳಿ, ಬೊಂಬಾಯಿಯಿಂದ ಇಂಗ್ರೇಜಿ ಬಹದ್ದರರ ಫವುಜು ತೆಗೆದುಕೊಂಡು ಜನರಲ್ ಮೆತ್‌ಯುಸ್ ಸಾಹೇಬರವರು ಬಂದು, ನಗರದ ಕೋಟೆ, ಕೊಡಿಯಾಲದ ಕೋಟೆ ಮುಂತಾಗಿ ತೆಗೆದುಕೊಂಡು, ಕೊಡಿಯಾಲದ ಕೋಟೆಯಲ್ಲು ಒಬ್ಬ ಸರದಾರ ಕೆಲವು ಫವುಜು ಸಹ ಠಾಣ್ಯ ಇಟ್ಟು, ನಗರದ ಕೋಟೆಯಲ್ಲಿ ಖಾಸ ಜನರಲ್ ಮೆತ್‌ಯುಸ್ ಸಾಹೇಬರವರು ಫವುಜು ಸಮೇತ ಇರುತ್ತ ಇದ್ದಲ್ಲಿ, ಈ ಸಮಾಚಾರವನ್ನು ನವಾಬ ಹೈದರಲ್ಲಿಖಾನರ ಮಗ ಟಿಪ್ಪುಸುಲ್ತಾನರು ಕೇಳಿ, ತಮ್ಮ ಫವುಜು ಯಾವತ್ತೂ ತೆಗೆದುಕೊಂಡು ಆ ಇಂಗ್ರೇಜಿ ಬಹದ್ದರವರ ಫವುಜಿನ ಮೇಲೆ ಜಗಳಕ್ಕೆ ಹೋಗುವಾಗ್ಗೆ, ಗೋರೂರಲ್ಲಿ ಇದ್ದ ಕೊಡಗಿನ ಸಂಸ್ಥಾನದ ದೊರೆಮಕ್ಕಳ ಕುಟುಂಬ ಯಾವತ್ತನ್ನೂ ಇದೇ ಸಂವತ್ಸರದ ಪುಷ್ಯಮಾಸದಲ್ಲಿ ಪಿರಿಯಾಪಟ್ಟಣದ ಕೋಟೆ ಒಳಗೆ ಮಡಗಿಸಿ, ಕೋಟೆಗಾವಲನ್ನು ಮಾಡಿಸಿದರು.

ಆ ಬಳಿಕ ಅರಮನೆ ಕುಟುಂಬ ಮಕ್ಕಳು ಯಾವತ್ತೂ ಸಿಡುಬಿನ ಹುಣ್ಣಾಗಿ ರಸ್ತುಮುಸ್ತೈದೆಯು ಇಲ್ಲವಾಗಿ ಬಹಳ ಜನ ಮೃತವಾಗಿಹೋದರು. ಆವಾಗ್ಗೆ ವೀರರಾಜರ ಮಾತುಶ್ರೀ ದೇವಾಂಬಿಕೆ ಅಮ್ಮನವರು ಇದೇ ಸಂವತ್ಸರದ ಪುಷ್ಯ ಮಾಸದಲ್ಲಿ ಶಿವಾಧೀನರಾದರು. ಅದರಲ್ಲಿ ವೀರರಾಜರವರ ಬಲ ಅಣ್ಣನ ಚಿಕ್ಕ ಕುಮಾರರು ಒಬ್ಬರು ಕೆಲವು ಕುಟುಂಬ ಮಕ್ಕಳು ಸಹ ಉಳಕೊಂಡು ಪಿರಿಯಾಪಟ್ಟಣದಲ್ಲು ಇರುತ್ತ ಇದ್ದರು.

ಟೇಪುಸುಲ್ತಾನರು ನಗರಕ್ಕೆ ಹೋಗಿ, ಇಂಗ್ರೇಜಿ ಬಹದ್ದರ ಫವುಜಿನ ಸಂಗಡ ಜಗಳ ಮಾಡಿ, ಸಾಧ್ಯವಿಲ್ಲದೆ ನಂಬಿಗೆ ಕೊಟ್ಟು ಕೋಟೆ ಒಳಗೆ ಇದ್ದ ಇಂಗ್ರೇಜಿ ಫವುಜು ಜನರಲ್ ಮೆತ್‌ಯುಸ್ ಸಾಹೇಬರವರ ಸಹ ಸಲ್ಲಾದ ಮೇಲೆ ಇಳಿಸಿ, ಕೈಗೆ ಸಿಕ್ಕಿದವರ ಘಾತಮಾಡಿ, ಸೆರೆಹಾಕಿ, ನಗರದ ಕೋಟೆಯನ್ನು ಸ್ವಾಧೀನಮಾಡಿಕೊಂಡು, ಅಲ್ಲಿಂದ ಕೊಡೆಯಾಲಕ್ಕೆ ಹೋಗಿ, ಆ ಕೋಟೆಗೆ ಮುತ್ತಿಗೆ ಹಾಕಿ, ಬಹಳ ಲಡಾಯಮಾಡಿದಾಗ್ಯೂ ಇವರಿಗೆ ಸಾಧ್ಯವಿಲ್ಲದೆ ಹೋಗಿ, ಆ ಕೋಟೆ ಒಳಗೆ ಇದ್ದ ಇಂಗ್ರೇಜಿಯವರ ಸಂಗಡ ಸಲ್ಲಾ ಮಾಡಿದಲ್ಲಿ,

ಅವರು ಇಳಿದು, ಜಾಜು ಹತ್ತಿಹೋದರು. ಆ ಬಳಿಕ ಸುಲ್ತಾನರು ಆ ಕೊಡಿಯಾಲದ ಕೋಟೆಯನ್ನು ಕೆಡವಿಸಿ ಬಿಟ್ಟು, ಅವೇಲೆ ತಮ್ಮ ಫವುಜು ಯಾವತ್ತೂ ತೆಗೆದುಕೊಂಡು, ಕಲಿ ಸಂದ ೪೮೮೬ನೇ ಕ್ರೋಧಿ ಸಂವತ್ಸರದಲ್ಲಿ ಕೊಡಗಿಗೆ ಬಂದು, ಈ ಶರಾರತ್ತು ಮಾಡಿದ ಕೊಡಗರಿಗೆಲ್ಲಾ ನಂಬಿಗೆ ಭರವಸಕೊಟ್ಟು, ನಯಭಯದಿಂದ ಕವಲು ಕರಾರು ಮಾಡಿ, ಪಟ್ಟಣಕ್ಕೆ ಹೋದರು.

ಆ ಬಳಿಕ ಕಲಿ ಸಂದ ೪೮೮೭ನೇ ವಿಶ್ವಾವಸು ಸಂವತ್ಸರದ ಶ್ರಾವಣ ಮಾಸದಲ್ಲಿ ಇದೇ ಮಾತಿನ ಬಗ್ಗೆ ಪುನಶ್ಚ ಕೊಡಗು ಜನ ಯಾವತ್ತು ತಿರುಗಿಬಿದ್ದು ಶರಾರತ್ತು ಮಾಡಿದ್ದರಿಂದ, ಟೀಪುಸುಲ್ತಾನರು ಈ ಶರಾರತ್ತು ನಿಲ್ಲಿಸುವ ಬಗ್ಗೆ ಜೈನುಲ್ಲಾಬ್ದೀನು ಸೂಸ್ತ್ರಿಯನ್ನು ೧೫ ಸಾವಿರ ಫವುಜು ಸಹ ಕೊಡಗಿಗೆ ಕಳುಹಿಸಿದಲ್ಲಿ, ಆ ಫವುಜು ಕೊಡಗಿನ ಸೀಮೆವೊಳಗೆ ಬಂದು, ಉಲುಗುಲಿ ಸಂತೆಮಾಳದಲ್ಲಿ ಇಳುಕೊಂಡು ಇದ್ದಲ್ಲಿ, ೪–೫ ಸಾವಿರ ಕೊಡಗರು ಹೋಗಿ ಮುತ್ತಿಗೆ ಹಾಕಿಕೊಂಡು, ಲಡಾಯಮಾಡಿ, ಆ ಲಷ್ಕರಿನ ಜನಗಳನ್ನು ಕಡಿದು ಹಾಕಿದರು. ಆ ಸೂಸ್ತ್ರಿಯೂ ಮಡಕೇರಿ ಕೋಟೆ ಪರಿಯಂತರ ಬಂದು, ತನ್ನ ಜೋರು ಇಲಾಜು ಏನೂ ನಡೆಯದೆ ಲಾಚಾರಾಗಿ, ತಿರುಗಿ ಬೆಟ್ಟದಪುರದ ಕಡೆ ತಿರುಗುತ್ತ ಇದ್ದಲ್ಲಿ, ಅದೇ ಉಲುಗುಲಿ ಸಂತೆಮಾಳದಲ್ಲಿ ಕೊಡಗರು ಹೋಗಿ ಲಡಾಯ ಮಾಡಿದ್ದಲ್ಲಿ, ಅವನ ಕಡೆ ಕೆಲವು ಮಂದಿ ಮೃತವಾಗಿ, ಸಾಮಾನು ಸರಂಜಾಮು ಅಲ್ಲೇ ಬಿಟ್ಟು, ಬಾಕಿ ಫವುಜು ತೆಗೆದುಕೊಂಡು ಬೆಟ್ಟದಪುರಕ್ಕೆ ಹೋಗಿ ಇಳಕೊಂಡನು.

ಆ ಬಳಿಕ ಈ ವರ್ತಮಾನವನ್ನು ಟೀಪುಸುಲ್ತಾನರಿಗೆ ಬರೆದು ಕಳುಹಿಸಿದ್ದರಿಂದ, ಅವರು ಫವುಜು ತೆಗೆದುಕೊಂಡು ಇಲ್ಲಿಗೆ ಬಂದು, ಉಲುಗುಲಿ ಮಾಳದಲ್ಲಿ ಇದೇ ವರುಷದ ಆಶ್ವೀಜ ಬ. ೩೦ ಯಲ್ಲು ಇಳಕೊಂಡಲ್ಲಿ, ಅಲ್ಲಿ ಇರುವಂತಾ ಕೊಡಗರಿಗೆ ನಂಬಿಗೆ ಭಾಷೆ ಹೇಳಿ ಕೌಲಿಗೆ ಇಳಿಸುತ್ತ ೧೫ ದಿವಸ ಅಲ್ಲಿ ಇದ್ದು, ಆ ಬಳಿಕ ಮಡಿಕೇರಿಗೆ ಬಂದು, ಅಲ್ಲಿ ಇರುವಂತಾ ಯಾವತ್ತು ಕೊಡಗರಿಗೆ ನಂಬಿಗೆ ಭಾಷೆ ಹೇಳಿ ಅಲ್ಲಿಂದ ಮಾರ್ಗಶಿರ ಶುದ್ಧ ೧ ದಿವಸ ಭಾಗಮಂಡಲಕ್ಕೆ ಹೋಗಿ, ಅದರ ಸಮೀಪದಲ್ಲಿ ಇರುವ ದೇವಟ್ಟುಪರಂಬು ಎಂಬ ಮೈದಾನದಲ್ಲು ಇಳಕೊಂಡು, ಅಲ್ಲಿ ಇರುವಂಥಾ ಕೊಡಗರಿಗೆಲ್ಲ ನಂಬಿಗೆ ಕೊಟ್ಟು, ಈ ಬ. ೫ ಕೌಲಿಗೆ ಬಂದು ಇದ್ದಂಥ ಕೊಡಗರು, ಅವರ ಕುಟುಂಬ ಮಕ್ಕಳ ಸಹ

ಸಮಸ್ತರನ್ನೂ ಬಳಸಿ ಹಿಡಿದುಕೊಂಡು, ಪಹರಿ ಹಾಕಿ ತೆಗೆದುಕೊಂಡುಹೋಗಿ ತಮ್ಮ ಸೀಮೆಗಡಿಗಳಿಗೆಲ್ಲ ಹಂಚಿಹಾಕಿ, ಆಯಾಯ ಸ್ಥಳಕ್ಕೆ ಕಳುಹಿಸಿ, ಆ ಜನಕ್ಕೆಲ್ಲ ಮುಂಜಿಮಾಡಿ, ಕುಲಗೆಡಿಸಿ, ಚೇಲೆಯರ ಮಾಡಿ ಇಟ್ಟುಕೊಂಡು, ಆ ಬಳಿಕ ತಮ್ಮ ಜಾತಿ ಸೇಕ್, ಸೈದ್, ಮೊಗಲ್, ಪಟಾಣ ಎಂಬ ಜಾತಿಗೆ ಕೊಡಗಿನ ಸೀಮೆಗೆ ಕಳುಹಿಸಿ, ಕೊಡಗಿನ ಸೀಮೆ ಭೂಮಿಯನ್ನು ಆ ಮುಸಲ್ಮಾನರಿಗೆ ಜಾಗೀರಾಗಿ ಕೊಟ್ಟು, ಆರಂಭದ ಬದುಕು ಮಾಡುವ ಬಗ್ಗೆ ಪ್ರಾಕು ಕೊಡಗರಿಗೆ ಬದುಕುಮಾಡುತ್ತ ಇದ್ದ ಹೊಲೆಯರನ್ನು ಈ ಮುಸಲ್ಮಾನರಿಗೆ ಕೊಟ್ಟು, ಇವರಿಂದ ಸಾಗು ಆಗದೆ ಹೋದ ಭೂಮಿ ಮನೆಗೆ ಆದವಾನಿ ಸೀಮೆ ರೈತರ ಹಿಡಿತಂದು ಕೊಡಗಿನ ಸೀಮೆಯಲ್ಲಿ ರೈತಾವಿಗೆ ಇಟ್ಟು, ಅವರಿಗೆಲ್ಲ ಕೊಟ್ಟು, ಇಲ್ಲಿ ಸರಕಾರದ ಕೆಲಸ ಬಜಾಯಿಸುವ ಬಗ್ಗೆ ಪ್ರಾಕು ಇಲ್ಲಿ ಕರಣೀಕತನ ಮಾಡಿಕೊಂಡು ಇದ್ದವನ ತಮ್ಮ ನಾಗಪ್ಪಯ್ಯ ಎಂಬವನ ನೇಮಿಸಿ ಇಟ್ಟು ಇದ್ದಲ್ಲಿ, ಈ ನಾಗಪ್ಪಯ್ಯ ಎಂಬವನು ಆ ರೈತರಿಗೆ ಸಲ್ಲುವಂತಹ ಕೆಲವು ಹಣ ದವಸಧಾನ್ಯ ತಟವಟ ಮಾಡಿ ತಿಂದದ್ದರಿಂದಲೂ, ಇದು ವಿನಹಾ ಕೆಲವು ರೈತರಿಂದ ಲಂಚ ತೆಗೆದುಕೊಂಡು ಅವರನ್ನು ಬಿಟ್ಟುಬಿಡುತ್ತ ಇದ್ದುದರಿಂದಲೂ ಸಹ, ಮಧ್ಯೆ ಮಾರ್ಗದಲ್ಲಿ ಆ ಆದ್ವಾನಿಗೆ ಕದ್ದುಹೋಗುತ್ತ ಇದ್ದಂತಹ ರೈತರಲ್ಲಿ ಕೆಲವರು ಗಡಿ ಪಹರೆದವರಿಗೆ ಸಿಕ್ಕಿದ್ದರಿಂದ, ಆ ಪಹರೆದವರು ಟೇಪು ಸುಲ್ತಾನರ ಬಳಿಗೆ ಕಳುಹಿಸಿದಲ್ಲಿ, ಅವರನ್ನು ವಿಚಾರಿಸುವಾಗ್ಗೆ, ಆ ನಾಗಪ್ಪಯ್ಯನ ದಗಲ್‌ಬಾಜಿತನ ತಿಳಿದುದರಿಂದ, ಆ ನಾಗಪ್ಪಯ್ಯನನ್ನು ಹಿಡಿದು ಗಲ್ಲು ಹಾಕಿಸಬೇಕೆಂಬದಾಗಿ ಟೇಪುಸುಲ್ತಾನರು ಅಪ್ಪಣೆ ಕೊಟ್ಟದ್ದರಿಂದ, ಈ ವರ್ತಮಾನ ತಿಳಿದುಕೊಂಡು ಆ ನಾಗಪ್ಪಯ್ಯನು ಓಡಿಹೋಗಿ ಕೋಟೆ ಅರಸುಗಳ ಬಳಿ ಸೇರಿಕೊಂಡಲ್ಲಿ, ಅವರ ಕಡೆ ೫೦ ಜನ ನಾಯಿಮಾರರನ್ನು ಕೊಡಿಸಿ, ಪೈಯೊಟ್ಟುಚಂದು ಎಂಬವನ ಗೊತ್ತುಮಾಡಿ ಕೋಟೆ ಅರಸುಗಳು ಕೊಟ್ಟಲ್ಲಿ, ಅವಂದಿರ ಕರೆದುಕೊಂಡು ಕೊಡಗಿಗೆ ಬಂದು, ಕಾಡಲ್ಲಿ ಸೇರಿಕೊಂಡು ಇರುವಂತಾ ಕೊಡಗು ಜನರಿಂದಲೂ ಪಣ್ಯದ ಹೊಲೆಯರಿಂದ ಸಹ ಕೂಡಿಸಿ, ಎಲ್ಲಾ ೧೦೦ ಜನ ಪರಿಯಂತರ ಕೂಡಿಸಿಕೊಂಡು, ಕಾಡಿನಲ್ಲಿ ರೈತಾವಿ ಮಾಡಿಕೊಂಡು ಇರುವ ಆದ್ವಾನಿ ರೈತರ ಮನೆ ಮಾಲು ಲೂಟಿಮಾಡಿಕೊಂಡು, ಶರಾರತ್ತು ಮಾಡಿಕೊಂಡು ಇದ್ದಲ್ಲಿ, ಈ ಸಮಾಚಾರವನ್ನು ಈ ಸೀಮೆಯಲ್ಲಿ ಕಾಡು ಸೇರಿ

ಕೊಂಡು ಇರುವಂಥಾ ಕೊಡಗು ಜನರು ವೀರರಾಜೇಂದ್ರ ಒಡೆಯರಿಗೆ ಹೇಳಿ ಕಳುಹಿಸಿದಲ್ಲಿ, ಅವರು ಅಲ್ಲಿಂದ ಕುಟುಂಬ ಮಕ್ಕಳ ಕರೆದುಕೊಂಡು ಕಲಿ ಸಂದ ೪೮೯೦ನೇ ಕೀಲಕ ಸಂವತ್ಸರದ ಮಾರ್ಗಶಿರ ಬಹುಳ ೭ ದಿವಸ ರಾತ್ರೆ ಗಳಿಗೆ ೧೫ರಲ್ಲಿ ಆ ಕೋಟೆ ಇಳಿದು, ತಮ್ಮ ಕೊಡಗುಸೀಮೆಗೆ ಬಂದು, ಕುರ್ಚಿ ಎಂಬ ಗ್ರಾಮದಲ್ಲಿ ತಮ್ಮ ಸಂಸಾರವನ್ನು ಮಡಗಿ, ತಾವು ಕಿಗ್ಗಟ್ಟುನಾಡಲ್ಲು ಇರುತ್ತ ಇದ್ದಲ್ಲಿ, ಈ ನಾಗಪ್ಪಯ್ಯ ಎಂಬುವನು ಕೋಟೆ ಅರಸುಗಳ ಬಳಿಗೆ ಹೋಗಿ "ಕೊಡಗಿನ ದೊರೆಗಳು ಪಿರಿಯಾಪಟ್ಟಣದಿಂದ ಇಲ್ಲಿಗೆ ಬಂದು ಇದ್ದಾರೆ. ಗಿಡ ಸೇರಿಕೊಂಡು ಇರುವಂತವರನ್ನ ಜಮಾಯಿಸುತ್ತ ಇದ್ದಾರೆ" ಎಂದು ಹೇಳಿದಲ್ಲಿ, ಆ ಕೋಟೆ ಅರಸು ಹೇಳಿದ್ದು ಏನೆಂದರೆ: "ನೀನು ಅವರ ಕಡೆ ಚಾಕರನಿದ್ದೀಯೆ! ನೀನು ಹೇಳಿದ ಮಾತು ಅವರು ಪ್ರಮಾಣವಾಗಿ ನಂಬುತ್ತ ಇದ್ದಾರೆ. ಏನು ಬಗೆಯಿಂದಾದರೂ ಉಪಾಯದಿಂದ ಅವರ ಇಲ್ಲಿಗೆ ಕರೆದುಕೊಂಡು ಬಾ. ಆಮೇಲೆ ಯಾವತ್ತೂ ಕಾರ್ಯ ಪ್ರವರ್ತಿಸಬಹುದು" ಎಂಬದಾಗಿ ಹೇಳಿದ್ದರಿಂದ, ಆ ನಾಗಪ್ಪಯ್ಯನು ವೀರರಾಜೇಂದ್ರ ಒಡೆಯರವರ ಬಳಿಗೆ ಬಂದು ಹೇಳಿದ್ದು: "ತಾವು ತಮ್ಮ ರಾಜ್ಯಕ್ಕೆ ಬಂದ ವರ್ತಮಾನ ಕೋಟೆ ಅರಸುಗಳು ಕೇಳಿ ಬಹಳ ಹರುಷಿತರಾದರು. ತಮ್ಮ ಭೇಟಿ ಆಗ ಬೇಕೆಂಬುದಾಗಿ ಅವರಿಗೆ ಬಹಳ ಅಪೇಕ್ಷೆ ಇದೆ" ಎಂದು ನಾನಾ ಪ್ರಕಾರ ಹೇಳಿ ನಂಬಿಸಿ, ರಾಜರ ಕರೆದುಕೊಂಡುಹೋಗಿ, ಆರಳ ಎಂಬ ಗ್ರಾಮದಲ್ಲಿ ಇಳಿಸಿ, ತಾನು ಕೋಟೆ ಅರಸುಗಳ ಬಳಿಗೆ ಹೋಗಿ ಏನೇನೋ ಮಾತನಾಡಿಕೊಂಡು, ೪೦-೫೦ ಜನ ಪರಿಯಂತರ ಆಯುಧಪಾಣಿ ನಾಯಿಮಾರರನ್ನು ಕರೆದುಕೊಂಡು ಬಂದು, ರಾಜರು ಇಳಿದಿರುವ ಆರಳ ಎಂಬ ಗ್ರಾಮದ ಸುತ್ತ ಪಾರಾ ನಿಲ್ಲಿಸಿ ಬಿಟ್ಟನು. ಆಮೇಲೆ "ಅವರ ಕಂಡು ಭೇಟಿ ಆಗಬೇಕು" ಎಂಬದಾಗಿ ಹೇಳಿದಲ್ಲಿ "ಎರಡು ದಿವಸ ಒಳ್ಳೇದಲ್ಲ. ಆಮೇಲೆ ಕಾಣಬಹುದು" ಎಂಬದಾಗಿ ಹೇಳಿದರು. ಆ ಎರಡು ದಿನ ಕಳೆದಮೇಲೆ, "ಭೇಟಿ ಆಗಬೇಕು" ಎಂದು ಹೇಳಿದ್ದರಿಂದ, ಆವಾಗ್ಲೂ ಅದೇ ಮೇರೆಗೆ ನೆವನ ಹೇಳಿ ನಾಗಪ್ಪಯ್ಯನು ಹೋದನು. ಆ ಬಳಿಕ ಮೂರನೇ ದಿವಸದಲ್ಲಿ ಬಂದು ಹೇಳಿದ್ದು: "ನನಗೆ ತಿಥಿ ಪ್ರಸ್ತ ಇದ್ದುದರಿಂದ ಈಗ ಎರಡು ಮೂರು ದಿನ ಕುಟುಂಬ ಮಕ್ಕಳ ಬಳಿಯೆ ಇದ್ದೆ. ಕೋಟೆ ಅರಸುಗಳ ಬಳಿ ಹೋಗುವುದಕ್ಕೆ ಸಮಯವಾಗಲಿಲ್ಲ"

ಎಂಬದಾಗಿ ಹೇಳಿದನು. ಆ ಬಳಿಕ ಮತ್ತೊಂದಾವರ್ತಿ ಈ ನಾಗಪ್ಪಯ್ಯನ ಸಂಗಡ ಹೇಳಿಬಿಟ್ಟಲ್ಲಿ, ಅವನು ಹೋಗಿ ಕೋಟಿ ಅರಸುಗಳ ಬಳಿ ಐದು ದಿವಸ ಕುಳಿತುಕೊಂಡನು. ಈ ಮೇರೆಗೆ ಭೇಟಿ ಆಗಿ ಅಲ್ಲಿಂದ ಬಿಡುಗಡೆ ಆಗಿ ಪುನಃ ತಿರುಗಿ ಬರುವ ಸಂಗತಿಯೂ ಕಾಣಲಿಲ್ಲ. ಈ ಮೇರೆಗೆ ಹದಿನೈದು ದಿವಸ ಕಾಲ ಹರಣ ಮಾಡಿಬಿಟ್ಟನು. ಅಷ್ಟರಲ್ಲಿ ಟೀಪುಸುಲ್ತಾನರು ತಮ್ಮ ಕಡೆ ಕೆಲವು ಫವುಜನ್ನು ವೀರರಾಜೇಂದ್ರರನ್ನು ಹುಡುಕುವ ಬಗ್ಗೆ ಮೊಕರೂರು ಮಾಡಿ ಕಳುಹಿಸಿದ್ದರಿಂದ, ಈ ಸಮಾಚಾರ ಅವರ ಕುಟುಂಬದ ಬಳಿಯು ನವಕರರು ಬಂದು ರಾಜರ ಸಂಗಡ ಕೋಟಿ ಅರಸುಗಳಿಗೆ ಹೇಳಿ ಕಳುಹಿಸಿದ ವಿವರ: "ನಮ್ಮನ್ನು ಹುಡುಕಿ ತಲಾಸುಮಾಡುವ ಬಗ್ಗೆ ಟೀಪುಸುಲ್ತಾನರ ಕೆಲವು ಫವುಜು ಬಂದು ಇದೆ. ನಾವು ಇಲ್ಲಿಗೆ ಬಂದು ಇಪ್ಪತ್ತು ದಿನವಾಯಿತು. ಈಗ ನಮ್ಮನ್ನು ಬಿಟ್ಟರೆ ನಮ್ಮ ಕುಟುಂಬ ಮಕ್ಕಳ ಬಳಿಗೆ ಹೋಗಿ ಅವರನ್ನು ಬಂದೋಬಸ್ತಿನ ಜಾಗದಲ್ಲಿ ಇಟ್ಟು, ಆ ಬಳಿಕ ತಮ್ಮ ಭೇಟಿಗೆ ಬಂದೇವು" ಎಂಬದಾಗಿ ಹೇಳಿಕಳುಹಿಸಿದಲ್ಲಿ, ಆ ಬಳಿಕ ಕೋಟಿ ಅರಸುಗಳು ಅದೇ ನಾಗಪ್ಪಯ್ಯನ ಸಂಗಡ ಹೇಳಿಕಳುಹಿಸಿದ್ದು: "ನಿಮ್ಮ ಹಿರಿಯ ಅಜ್ಜಯ್ಯನವರಾದ ದೊಡ್ಡ ವೀರಪ್ಪ ಒಡೆಯರು ನಮ್ಮ ಹಿರಿಯರವರ ಒಬ್ಬರ ಕೊಂದುಬಿಟ್ಟು ಇದ್ದಾರೆ. ಅದಕ್ಕೆ ನೀವು ತಲೆಗೆ ತಲೆ ಕೊಟ್ಟಲ್ಲದೆ ನಮ್ಮ ಭೇಟಿ ಆಗಲಿಕ್ಕಿಲ್ಲ" ಎಂಬದಾಗಿ ಹೇಳಿಬಿಟ್ಟಲ್ಲಿ, ಈ ಮಾತಿಗೆ ಮಹಾರಾಜರು ಹೇಳಿದ್ದು: "ಈಗ ನೂರು ವರುಷಕ್ಕೆ ಮುಂದೆ ನಿಮ್ಮ ಹಿರಿಯರವರು ನಮ್ಮ ಅಜ್ಜಯ್ಯನವರ ಕೂಡೆ ಜಗಳ ಮಾಡಿ ತೋಮರದ ಮೊಕ್ಕಾಮಿನಲ್ಲಿ ತೀರಿಹೋದರು. ಅದಕ್ಕೆ ಬದಲು ಈಗ ತಲೆ ಕೊಡಬೇಕೆಂದರೆ ಮಾಡತಕ್ಕದ್ದೇನು? ನಾವು ನಿಮ್ಮ ಮಾತು ನಂಬಿ ಬಂದು ನಿಮ್ಮ ಕೈಗೆ ಸಿಕ್ಕಿ ಇದ್ದೇವೆ. ತಾವು ಪಾಪ ಪುಣ್ಯ ಬಲ್ಲಂತಹವರಿದ್ದೀರಿ. ಎಲ್ಲಾ ನಿಮಗೇ ಕೂಡಿ ಇದೆ" ಎಂಬದಾಗಿ ಹೇಳಿದಲ್ಲಿ ಆ ಮಾತಿಗೆ ನಾಗಪ್ಪಯ್ಯ ಹೇಳಿದ್ದು: "ಮನಸ್ಸಿನಲ್ಲಿ ಕರಕರೆ ಮಾಡಬೇಡಿ. ನಾನು ಕೋಟಿಅರಸುಗಳ ಬಳಿಗೆ ಹೋಗಿ ಈ ವಿವರ ಯಾವತ್ತು ಅವರಿಗೆ ಹೇಳಿ ನಾಳೆ ದಿವಸ ಏನು ಬಗೆಯಿಂದಾದರೂ ತಮ್ಮ ಅವರ ಭೇಟಿ ಆಗುವ ಹಾಗೆ ಮಾಡುತ್ತೇನೆ" ಎಂಬದಾಗಿ ಹೇಳಿ ಹೋದನು. ಮೂರನೇ ದಿವಸ ಬೆಳಗ್ಗೆ ರಾಜರನ್ನು ಭೇಟಿ ಆಗುವ ಬಗ್ಗೆ ಕರೆ ಬಿಟ್ಟಲ್ಲಿ, ರಾಜರು ಭೇಟಿಗೆ ಎಂದು ಕೋಟಿಅರಸುಗಳ ಮೊಕ್ಕಾಂ ಪಾಲೆಗೆ

ಹೋಗುತ್ತ ಇದ್ದಲ್ಲಿ, ನಾಗಪ್ಪಯ್ಯನು ಬಂದು ಹೇಳಿದ್ದು : " ಪ್ರಾಕಾರಭ್ಯ ನಮಗೂ ಅವರಿಗೂ ಇರುವ ಹಗೆತನ ತೀರಿತು ಎಂಬುದಾಗಿ ಕೋಟೆ ಅರಸುಗಳು ಒಂದು ಕಾಗದ ಬರೆಸಿ ಮಡಗಿ ಇದ್ದಾರೆ. ಭೇಟಿ ಆದ ತರುವಾಯ ಆ ಕಾಗದಕ್ಕೆ ದಸ್ಕತ್ತು ಮಾಡಿಕೊಡಿ ಎಂತ ಕೋಟೆ ಅರಸುಗಳು ತಮ್ಮ ಕೈಲಿ ಕೊಟ್ಟಾರು. ದಸ್ಕತು ಮಾಡುವ ಬಗ್ಗೆ ತಾಮಸ ಮಾಡಿದರೆ, ತಾವು ಕೊಡಗಿಗೆ ಹೋಗುವಂಥಾದ್ದು ಪ್ರಯಾಸವಾಗಿ ಕಾಣುತ್ತದೆ " ಎಂಬುದಾಗಿ ಹೇಳಿ, ಕರೆದು ಕೊಂಡು ಹೋಗಿ ಭೇಟಿ ಮಾಡಿಸಿದನು. ಆ ಬಳಿಕ, ಕೋಟೆ ಅರಸುಗಳು ಆ ಬರೆಸಿಟ್ಟಿದ್ದ ಕಾಗದವನ್ನು ರಾಜರ ಕೈಯಲ್ಲಿ ಕೊಟ್ಟು, " ಇದಕ್ಕೆ ದಸ್ಕತು ಮಾಡಿಕೊಟ್ಟರೆ ಪ್ರಾಕಿನ ಹಗೆತನ ತೀರುತ್ತದೆ. ಇಲ್ಲದಿದ್ದರೆ ಕೊಲೆಗೆ ಕೊಲೆ ನಿಮ್ಮಿಂದ ತೆಗೆದುಕೊಂಡೇವು " ಎಂಬುದಾಗಿ ಹೇಳಿದಲ್ಲಿ, ದೊರೆಗಳು ತಮ್ಮ ಮನಸ್ಸಿನಲ್ಲು ಗ್ರಹಿಸಿದ್ದು : ' ಈ ಕಾಗದಕ್ಕೆ ಗುರ್ತು ಹಾಕಿ ಕೊಟ್ಟು ಯಾವ ಬಗೆಯಿಂದಾದರೂ ಇವರ ಕೈಯಿಂದ ತಪ್ಪಿ ನಮ್ಮ ರಾಜ್ಯಕ್ಕೆ ಹೋಗಿ, ಆಮೇಲೆ ಬೇಕಾದ ಹಾಗೆ ಮಾಡಬಹುದು ' ಎಂಬುದಾಗಿ ಆ ಕಾಗದಕ್ಕೆ ಗುರ್ತು ಹಾಕಿ ಕೊಟ್ಟರು. ಆ ಕಾಗದವನ್ನು ಕೋಟೆ ಅರಸುಗಳು ನಾಗಪ್ಪಯ್ಯನ ಕೈಯಲ್ಲಿ ಕೊಟ್ಟು, " ಈ ಕಾಗದದ ಅಭಿಪ್ರಾಯ ಯಾವತ್ತು ದೊರೆಗಳಿಗೆ ಹೇಳು " ಎಂಬದಾಗಿ ಹೇಳಿದ್ದಲ್ಲಿ, ಅವನು ಓದಿ ತಿಳಿಯಪಡಿಸಿದ ವಿವರ : " ಕೀಲಕ ಸಂವತ್ಸರದ ಪುಷ್ಯ ಮಾಸದಲ್ಲು ಪಾಲೆ ವೀರವರ್ಮರಾಜರಿಗೆ ಕೊಡಗಿನ ಸಂಸ್ಥಾನದ ಹಾಲೇರಿ ವೀರಪ್ಪ ಒಡೆಯರು ಬರೆಸಿಕೊಟ್ಟ ಕಾಗದದ ಕ್ರಮ ವೆಂತೆಂದರೆ : ಪ್ರಾಕು ನಿಮ್ಮ ಕಾರಣವರನ್ನು, ನಮ್ಮ ಕಾರಣವರು ಕೊಂದ ಪಾಪ ಪರಿಹಾರ ಉದ್ದಿಶ್ಯ ಪೆರುಮಾಳು ಭಗವತಿಗೆ ನಾವು ಬಿಟ್ಟು ಕೊಟ್ಟದ್ದು : ಕಿಗ್ಗಟ್ಟುಹತ್ತುನಾಡು, ಅಮ್ಮತ್ತಿನಾಡು, ಎಡೆನಾಲ್ಕುನಾಡು, ನಿಮ್ಮ ಕಾರಣವರು ಬಿದ್ದುಹೋದ ತೋಮರದಲ್ಲಿ ಒಂದು ಕೋಟೆಗೆ ಸ್ಥಾನ ಕೊಡುತ್ತ ಇದ್ದೇವೆ. ಈ ದಿವಸ ನಿಮ್ಮ ಕುತುಪಿ ತೀರಿತು. ಇನ್ನುಮುಂದೆ ನಮಗೆ ನಿಮಗೆ ಅನ್ಯೋನ್ಯವೇ ಸರಿಯೆಂಬುದಾಗಿ ಬರೆದು ಇತ್ತು. ಈ ಮೇರೆ ಕೋಟೆ ಅರಸುಗಳು ನಾಗಪ್ಪಯ್ಯನ ಕೈಯಲ್ಲಿ ಬರೆಸಿಟ್ಟಿದ್ದ ಕಾಗದಕ್ಕೆ, ಅಂಕೆ ಯಲ್ಲಿ ಒಂದು ಗುರ್ತುಹಾಕಿಸಿ, ತೆಗೆದುಕೊಂಡದ್ದೇ ಹೊರ್ತು, ರಾಜರು ತಮ್ಮ ಸಂಸ್ಥಾನದ ರಾಜಮೊಹರವನ್ನು ಒತ್ತಿ ತಮ್ಮ ಹೆಸರು ಸಹಿ ಹಾಕಿ, ರಜಾವಂದಿ

ಯಿಂದ ಕೊಡದೆ, ರಾಜರು ಅವನ ಪಹರದಿಂದ ಬಿಡುಗಡೆಯಾಗಿ, ತಮ್ಮ ಕೊಡಗಿನ ಸೀಮೆಯೊಳಗೆ ಬಂದು, ತಮ್ಮ ಅರಮನೆ ಕುಟುಂಬ, ಮಕ್ಕಳು ಇದ್ದ ಕುರ್ಚಿ ಎಂಬಲ್ಲಿಗೆ ತಲಪಿದರು. ಅಲ್ಲಿ ಚಲವಿಗೆ ಚೂಕರವಾದ್ದರಿಂದ, ಕೆಲವು ಕುಟುಂಬ, ತಮ್ಮ ಅಣ್ಣನ ಮಗನ ಸಹಾ, ಕುರ್ಚಿ ಗ್ರಾಮದಲ್ಲಿ ಮಡಗಿ, ಕೆಲವು ಅರಮನೆ ಕುಟುಂಬ ತಂದು, ಬರಪೊಳೆ ಎಂಬಲ್ಲಿ ಇಟ್ಟು ಇರುತ್ತಿದ್ದರು.

ಆ ಬಳಿಕ ಹತ್ತು ಹದಿನೈದು ದಿವಸದ ಮೇಲೆ, ಈ ಕೋಟೆ ಅರಸುಗಳು ಮುನ್ನೂರು ನಾಯುಮಾರರನ್ನು ಕರಕೊಂಡು ಘಟ್ಟ ಹತ್ತಿ, ಕಿಗ್ಗಟ್ಟುನಾಡು ಒಳಿತವಾದ ಮರೇನಾಡಿಗೆ ಬಂದು, ಇಳಿದುಕೊಂಡಿರುವ ಸಮಾಚಾರ ರಾಜರು ಕೇಳಿ, ಈ ವಿವರವನ್ನು ತಮಗೆ ಆಪ್ತರಾದ ಕಡಿಯತ್ತಮೂರ್ನಾಡ ಅಪ್ಪ ನೆರವನ ಅಚ್ಚಯ್ಯ ಪಟ್ಟಚರವನ ಬೋಳ್ಕನಿಗೆ ಸಹಾ ಹೇಳಿಕಳುಹಿಸಿದಲ್ಲಿ, ಅವರು ಕಡಿಯತ್ತಮೂರ್ನಾಡಲ್ಲು ಇದ್ದ, ಆಯುಧಪಾಣಿ ಕೊಡಗ ಜನ ಯಾವತ್ತು ಕರಕೊಂಡು, ಬರಪೊಳೆಗೆ ಬಂದಲ್ಲಿ, ಈ ಮಂದಿ ಮತ್ತು ಕೆಲವು ಕೊಡಗ ಜನ ಇವರ ಸಂಗಡ ಕೂಡಿಸಿ, ಐನೂರು ಜನಕ್ಕೆ ಭರ್ತಿ ಮಾಡಿಕೊಂಡು, ಈ ಜನವನ್ನು ಕರಕೊಂಡು, ರಾಜರು ಮರೆನಾಡಿಗೆ ಕೋಟೆ ಅರಸುಗಳು ಇದ್ದಲ್ಲಿಗೆ ಹೋಗಿ, ಕೇಳಿದ ವಿವರ : " ನೀವು ನಮ್ಮ ಕೊಡಗಿನ ಸೀಮೆ ಘಟ್ಟ ಹತ್ತಿ, ಮಂದಿ ತೆಗೆದುಕೊಂಡು, ನಮ್ಮ ಅಪ್ಪಣೆ ಇಲ್ಲದೆ ನಿಮ್ಮ ಹದ್ದು ದಾಟಿ, ನಮ್ಮ ಹದ್ದಿಗೆ ಬರುವುದಕ್ಕೆ ಕಾರಣವೇನು ? " ಎಂಬುದಾಗಿ ಕೇಳಿದಲ್ಲಿ, ಅವರು ಹೇಳಿದ ವಿವರ : " ನಮ್ಮ ಹಿರಿಯುವರ ನಿಮ್ಮ ಹಿರಿಯುವರು ಕೊಂದು ಹಾಕಿದ ತಲೆಬೆಲೆ ಉದ್ದಿಶ್ಯವಾಗಿ, ಬರೆಸಿಕೊಂಡಂಥಾ ಈ ನಾಡುಗಳನ್ನು ವಿಚಾರಿಸುವ ಬಗ್ಗೆ ಬಂದೆವು " ಎಂಬುದಾಗಿ ಕೋಟೆ ಅರಸುಗಳು ಹೇಳಿದ್ದಕ್ಕೆ, ದೊರೆಗಳು ಹೇಳಿದ ಜವಾಬು : " ಹಾಗಾದರೆ ಬೈನಾಡಲ್ಲಿ ನಮ್ಮ ಅಣ್ಣ ತಮ್ಮಂದಿರಾದ ದೊರೆ ಮಕ್ಕಳು ಇಬ್ಬರನ್ನೂ, ನೀವು ಹಿಡಿದು, ಕೊಂದು ಹಾಕಿದ್ದಿರಷ್ಟೆ. ಈ ಎರಡು ತಲೆಬೆಲೆ ನಮಗೆ ನೀವು ಏನು ಕೊಟ್ಟು, ಈ ನಮ್ಮ ಹಗೆ ತೀರಿಸಿಕೊಂಡಿದ್ದೀರಿ ? " ಎಂತ ಕೇಳಿದಲ್ಲಿ ಅವರು ಹೇಳಿದ ವಿವರ : " ತಾವು ಪಾಲೆಗೆ ಬಂದು ಇದ್ದಾಗ್ಗೆ, ನಮ್ಮ ಹಿರಿಯರನ್ನು ನಿಮ್ಮ ಹಿರಿಯರು ಕೊಂದ ಮಾತನ್ನು ನಾವು ತೀರಿಸಿಕೊಂಡೆವಷ್ಟೆ. ಆವಾಗ್ಗೆ ನಿಮ್ಮ

ಮಾತು ನೀವು ತೀರಿಸಿಕೊಳ್ಳಬೇಕೇ ಹೊರ್ತು, ಈಗ ಕೇಳುವುದಕ್ಕೆ ಸಂಗತಿ ಏನು ?" ಎಂದು ಕೋಟೆ ಅರಸುಗಳು ಕೇಳಿದ್ದಲ್ಲಿ, "ಹಿಂದಕ್ಕೆ ನೂರು ವರ್ಷದ ಆಚೆಗೆ ನಿಮ್ಮ ಹಿರಿಯರು ಜಗಳದಲ್ಲಿ ಬಿದ್ದುಹೋದುದನ್ನು ಈವರಿ ಪರ್ಯಂತರಕ್ಕೂ ನಮ್ಮ ಸಂಸ್ಥಾನದ ದೊರೆ ಮಕ್ಕಳ ಕೂಡೆ ತೀರಿಸಿಕೊಳ್ಳದೆ, ಈಗ ನಮಗೆ ನಂಬಿಕೆ ಕೊಟ್ಟು, ಪಾಲಿಗೆ ಕರೆಸಿಕೊಂಡು, ತಲೆಬೆಲೆ ಕೊಡಿ ಎಂಬುದಾಗಿ, ನಿಮಗೆ ಒಪ್ಪಿದಂತೆ ಬರೆದು, ನಮ್ಮ ಕೂಡ ಗುರ್ತು ಹಾಕಿಸಿಕೊಳ್ಳುವುದಕ್ಕೆ ಕಾರಣವೇನು ?" ಎಂದು ಕೇಳಿದ್ದಲ್ಲಿ, "ಇಷ್ಟು ದಿವಸ ನಮಗೆ ಸಮಯವು ಸಿಕ್ಕಲಿಲ್ಲ. ನಮಗೆ ಸಿಕ್ಕಿದಾಗ್ಗೆ ತೀರಿಸಿಕೊಂಡೆವು" ಎಂಬುದಾಗಿ ಹೇಳಿದರು. ಆ ಮಾತಿಗೆ ರಾಜರು ಹೇಳಿದ್ದು : "ನೂರು ವರ್ಷದ ಆಚೆಗೆ ಆದ ಮಾತನ್ನು, ನೀವು ಇಂದಿನ ಪರ್ಯಂತರ ಸಾಧಿಸಿದ್ದಿರಷ್ಟೆ, ನಾವು ನಿಮ್ಮ ಕೈಯೊಳಗೆ ಪಾಲಿಯಲ್ಲಿ ಸಿಕ್ಕಿಕೊಂಡು ಈ ಮಾತು ಹೇಳಿದರೆ, ನಮಗೆ ನೀವು ದಗಾ ಮಾಡೀರಿ ಎಂಬುದರಿಂದ, ನಿಮ್ಮ ಸೀಮೆ ಬಿಟ್ಟು ನಮ್ಮ ಸೀಮೆಗೆ ಬಂದಮೇಲೆ, ನಿಮ್ಮ ಕೇಳಬಹುದು ಎಂಬುದಾಗಿ ಕುರಿತು, ನಾವು ಹದಿನೈದು ದಿವಸ ಸಮಯ ಸಾಧಿಸಿದೆವು. ಈ ಬಗ್ಗೆ ನೀವು ನಮ್ಮ ಸ್ಥಳಕ್ಕೆ ಬಂದಿದ್ದಿರಷ್ಟೆ ? ಈಗ, ನಮ್ಮ ಮಾತನ್ನು ತೀರಿಸಿಕೊಟ್ಟು ಹೋಗಿ. ಅಲ್ಲದಿದ್ದರೆ, ನಿಮ್ಮ ಕಾರಣವರ ತಲೆ ಚಿನ್ನದ್ದಾದರೆ, ನಮ್ಮ ಸಂಸ್ಥಾನದ ದೊರೆ ಮಕ್ಕಳ ತಲೆ ಮಣ್ಣಿಂದಲ್ಲವಷ್ಟೆ" ಎಂಬುದಾಗಿ ಕೋಟೆ ಅರಸುಗಳಿಗೆ ಕೇಳಿದಲ್ಲಿ, ಇದಕ್ಕೆ ಪ್ರತಿ ಜವಾಬು ಕೊಡುವುದಕ್ಕೆ, ಅವರಿಗೆ ಮಾತು ಸಿಕ್ಕದೆ, ಸುಮ್ಮನೆ ಇದ್ದರು.

ಆ ಬಳಿಕ ರಾಜರು ಹೇಳಿದ್ದು : "ಬೈನಾಡಲ್ಲು ಬಿದ್ದುಹೋದ ನಮ್ಮ ಸಂಸ್ಥಾನದ ದೊರೆ ಮಕ್ಕಳ ತಲೆ ಎರಡರಲ್ಲಿ, ಒಂದು ತಲೆ ನಿಮ್ಮ ಕಾರಣವರ ತಲೆಗೆ ಸಮವಾಯಿತು. ಮತ್ತೊಂದು ತಲೆಗೆ ನಿಮ್ಮ ತಲೆ ಕೊಡಿ" ಎಂಬುದಾಗಿ ಕೇಳಿದಲ್ಲಿ, ಆ ಮಾತಿಗೆ ಕೋಟೆ ಅರಸುಗಳು ಹೇಳಿದ ವಿವರ : "ತಾವು ಹೇಳಿದಹಾಗೆ, ನಮ್ಮ ಕಾರಣವರ ತಲೆ ಒಂದಕ್ಕೆ, ನಿಮ್ಮ ಸಂಸ್ಥಾನದ ಒಬ್ಬ ದೊರೆ ಮಗನ ತಲೆ ಒಂದಕ್ಕೆ ಸಮವಾಯಿತು. ಮತ್ತೊಂದು ದೊರೆ ಮಗನ ತಲೆಗೆ, ಬೈನಾಡು-ಕಲ್ಪಾತಿ ಪರ್ಯಂತರಕ್ಕೂ, 'ನಮ್ಮದು'—'ನಿಮ್ಮದು' ಎಂಬುದಾಗಿ, ನಿಮಗೆ-ನಮಗೆ ವಿವಾದ ಬಿದ್ದಿದೆಯಷ್ಟೆ. ಅದಕ್ಕೆ, ನಾವು ಇನ್ನುಮುಂದೆ ವಿವಾದಮಾಡುವುದಿಲ್ಲ" ಎಂದು ಹೇಳಿದರು. ಆ ಮಾತಿಗೆ

ರಾಜರು ಹೇಳಿದ್ದು : " ನೀವು ಬಾಯಿಂದ ಹೇಳಿದರೆ ಈ ಮಾತು ತೀರಲಿಕ್ಕಿಲ್ಲ. ಆ ಬಗ್ಗೆ ಬರೆದುಕೊಡಿ " ಎಂಬುದಾಗಿ ಹೇಳಿದಲ್ಲಿ, ಅದಕ್ಕೆ ಒಡಂಬಟ್ಟು, ಕೋಟೆ ಅರಸುಗಳು, ದೊರೆಗಳಿಗೆ ಬರೆದುಕೊಟ್ಟ ಕಾಗದದ ಕ್ರಮವೆಂತೆಂದರೆ : " ಕೀಲಕ ಸಂವತ್ಸರದ ಮಾಘ ಶುದ್ಧ ೫ರಲ್ಲು, ಶ್ರೀಮತ್, ಕೊಡಗಿನ ಸಂಸ್ಥಾನದ ಹಾಲೇರಿ ವೀರಪ್ಪ ಒಡೆಯರವರಿಗೆ, ಪಾಲೆ ವೀರವರ್ಮರಾಜರು ಬರೆಸಿಕೊಟ್ಟ ಕಾಗದದ ಕ್ರಮವೆಂತೆಂದರೆ : ತಮ್ಮ ಸಂಸ್ಥಾನದ ದೊರೆ ಮಕ್ಕಳು ಇಬ್ಬರನ್ನೂ, ಬೈನಾಡಿನಲ್ಲಿ ಕೊಂದುಹಾಕಿದ್ದಕ್ಕೆ, ಈ ಎರಡು ತಲೆಯಲ್ಲಿ ಒಬ್ಬ ದೊರೆ ಮಗನ ತಲೆಗೂ, ಪ್ರಾಕು ತೋಮರದಲ್ಲಿ ನಮ್ಮ ಕಾರಣವರ ನಿಮ್ಮ ಕಾರಣವರು ಹೊಡೆದ ತಲೆಗೆ ಒಂದಕ್ಕೊಂದು ಸಮವಾದ್ದು ಹೋಗಲಾಗಿ, ಬಾಕಿ, ಮತ್ತೊಂದು ನಿಮ್ಮ ಸಂಸ್ಥಾನದ ದೊರೆ ಮಗನ ತಲೆಗೆ, ಬೈನಾಡು–ಕಲ್ಪಾತಿ ಪರ್ಯಂತರವು ನಿಮ್ಮದು–ನಮ್ಮದು ಎಂಬುದಾಗಿ, ನಿಮಗೆ ನಮಗೆ ವಿವಾದ ಬಿದ್ದಿದೆಯಷ್ಟೆ. ಅದಕ್ಕೆ ನಾವು ಇನ್ನುಮುಂದೆ ವಿವಾದಮಾಡುವುದಿಲ್ಲ. ಆ ಕಲ್ಪಾತಿ ಗಡಿ ಪರ್ಯಂತರಕ್ಕೂ ನಿಮ್ಮದೇ ಸರಿ. ನಮಗೆ ಸಂಬಂಧವಿಲ್ಲ. ನಾವು ಪಾಲೆಯಲ್ಲಿ ಬರೆಸಿ, ನಿಮ್ಮ ಕೈಯಲ್ಲಿ ಗುರ್ತು ಹಾಕಿಸಿ, ತೆಗೆದುಕೊಂಡ ಕಾಗದಕ್ಕೆ ಇನ್ನು ಮುಂದೆ ಕಾರಣವಿಲ್ಲ. ಈ ದಿವಸ ನಮ್ಮ ನಿಮ್ಮ ಉಭಯಸ್ಥರ ಕುತುಪಿಯು ತೀರಿತು. ಇನ್ನುಮುಂದೆ ನಮಗೆ ನಿಮಗೆ ಅನ್ಯೋನ್ಯವೇ ಸರಿ " ಎಂಬುದಾಗಿ, ಕೋಟೆ ಅರಸುಗಳು ಕಾಗದ ಬರೆದು, ತಮ್ಮ ಕೈವೊಪ್ಪಿತ ಹಾಕಿ, ಆ ಕಾಗದ ವನ್ನು ಕೋಟೆ ಅರಸುಗಳು ಕೊಡಗಿನ ರಾಜರ ಕೈಯಲ್ಲಿ ಕೊಟ್ಟರು. ಆ ಕಾಗದ ತೆಗೆದುಕೊಂಡು, ದೊರೆಗಳು ಬಿಡಾರಕ್ಕೆ ಹೋಗಿ, ಇಳುಕೊಂಡರು. ಆ ದಿವಸ ಸಮರಾತ್ರಿಯಲ್ಲು, ಈ ಕೋಟೆ ಅರಸುಗಳು ರಾಜರವರಿಗೆ ತಿಳಿಯದಂತೆ, ಅವರ ಕಡೆ ನಾಯಿಮಾರ ಜನರನ್ನು ಕರಕೊಂಡು, ಘಟ್ಟ ಇಳಿದು, ಕೊಡಗಿನ ಸೀಮೆ ಸರಹದ್ದು ದಾಟಿ ಅವರ ಸೀಮೆಗೆ ಓಡಿಹೋದರು. ಆ ಬೆಳಿಗ್ಗೆ ಈ ಸಮಾಚಾರ ಮಹಾರಾಜರು ಕೇಳಿ ನೂರು ಜನ ಪರಿಯಂತರ ಕೊಡಗರನ್ನು " ಹದ್ದಿನ ಪರಿಯಂತ್ರಕ್ಕೂ ಹೋಗಿ ನೋಡಿಕೊಂಡು ಬನ್ನಿ " ಎಂಬುದಾಗಿ, ಅಪ್ಪಣೆ ಕೊಟ್ಟು ಕಳುಹಿದಲ್ಲಿ, ಇವರು ಹೋಗುವಾಗ್ಗೆ, ನಡುಮಾರ್ಗದಲ್ಲಿ ನಾಗಪ್ಪಯ್ಯನು ಸಿಕ್ಕಿದರಿಂದ ಅವನಿಗೆ ಪಹರೆ ಹಾಕಿಕೊಂಡು, ಈ ಜನ ಹೋಗಿ ಕೊಡಗಿನ ಸೀಮೆ ಸರಹದ್ದಿನ ಪರಿಯಂತರ ನೋಡಿದಲ್ಲಿ, ಕೋಟೆ

ಅರಸುಗಳು ಕೊಡಗಿನ ಸೀಮೆ ಅರ್ಧ ದಾಟಿ ರಾತಾರಾತ್ರಿಯೇ ತಮ್ಮ ಸೀಮೆಗೆ ಹೋಗಿ ಇದ್ದರಿಂದ, ಈ ಕೊಡಗ ಜನರು ಪುನಃ ಬಂದು, ಈ ವರ್ತಮಾನ ವನ್ನು ಶ್ರುತಗೊಳಿಸಿ, ಈ ನಾಗಪ್ಪಯ್ಯನನ್ನು ಒಪ್ಪಿಸಿದರಿಂದ, ರಾಜರವರು ಅವನನ್ನು ತೆಗೆದುಕೊಂಡು, ಮರೆನಾಡಿಂದ ಅರಮನೆ ಕುಟುಂಬ ಇದ್ದ ಕುರ್ಚಿ ಗ್ರಾಮ ಸಮೀಪವಾದ್ದರಿಂದ, ಅಲ್ಲಿಗೆ ಹೋಗಿ, ಆ ಕೋಟೆ ಅರಸುಗಳು ಬರೆದುಕೊಟ್ಟಂಥಾ ಕೈಕಾಗದವನ್ನು ಸಂದೂಕದ ಒಳಗೆ ಹಾಕಿ, ಅಲ್ಲಿ ಇಟ್ಟು ಐದು ದಿವಸ ಅಲ್ಲಿ ಇದ್ದು, ಆ ಬಳಿಕ ಆ ನಾಗಪ್ಪಯ್ಯನನ್ನು ತೆಗೆದುಕೊಂಡು ಬರಪೊಳೆಗೆ ಬಂದು, ಅಲ್ಲಿ ಇದ್ದ ತಮ್ಮ ಕುಟುಂಬವನ್ನು, ಅವರ ಗರ್ಭದಲ್ಲಿ ಜನಿಸಿದ ತಮ್ಮ ಕುಮಾರ್ತಿ ರಾಜಮ್ಮಾಜೀಯವರನ್ನು ಸಹಾ ಕರಕೊಂಡು, ಪಾಡಿನಾಲ್ಕುನಾಡ ವಳಿತವಾದ ಯುವಕಪಾಡಿಯೆಂಬ ಗ್ರಾಮಕ್ಕೆ, ಇದೇ ಸಂವತ್ಸರದ ಮಾಘ. ಶು. ೧೩ ದಿವಸ ಬಂದು, ಕೆಟುವಳಿ ಮನೆ ಬಿಡಾರ ಮಾಡಿಸಿ, ಕುಟುಂಬ ಸಮೇತ ಅಲ್ಲಿ ಇಳುಕೊಂಡು, ಆ ನಾಗಪ್ಪಯ್ಯ ಎಂಬ ನಿಮ್ಮಕುಹರಾಮನ ಕಾಲಿಗೆ ಸಂಕೋಲೆ ಹಾಕಿ, ಅಲ್ಲಿ ಸೆರೆಮನೆ ಕೂಡಿಸಿಬಿಟ್ಟು, ಹತ್ತು ದಿವಸ ಅಲ್ಲಿ ಇದ್ದು, ವೀರರಾಜೇಂದ್ರ ಒಡೆಯರು ಕೂಡಿ ಇದ್ದ ಜನರ ಕರೆದುಕೊಂಡುಹೋಗಿ, ತಮ್ಮ ರಾಜ್ಯದಲ್ಲಿ ಟೇಪೂ ಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂಥಾ ಸೇಕ್ ಸೈಯದ್ ಮೊಗಲ್ ಪಠಾಣ ಎಂಬ ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ, ಅವರನ್ನು ಪಲಾಯನಮಾಡಿ, ಆದವಾನಿ ಸೀಮೆ ಪ್ರಜೆಗಳನ್ನು ಸೆರೆ ಬಿಡಿಸಿಬಿಟ್ಟು, ಕಾಡು ಸೇರಿಕೊಂಡು ಇದ್ದಂಥಾ ಕೊಡಗು ಜನರನ್ನು ಕರೆಸಿ, ಅವರವರ ಭೂಮಿ, ಮನೆ ಅವರವರಿಗೆ ಕೊಡಿಸಿ, ಆ ಭೂಮಿಯಿಂದ ಮುಸಲ್ಮಾನರು ಬೆಳೆದು ಕೂಡಿಸಿ ಇದ್ದಂಥಾ ನವಧಾನ್ಯ, ದನ, ಕರ, ಪಂಚಲೋಹ ಮುಂತಾಗಿ ಆಯಾಯ ಮನೆಯಲ್ಲು ಇದ್ದದ್ದನ್ನೂ, ಆಯಾ ಭೂಮಿ ಮನೆ ಜಮ್ಮಗಾರರಿಗೆ ಕೊಡಿಸಿ " ನಿರ್ಭಯ ದಿಂದ ನಿಮ್ಮ ನಿಮ್ಮ ಮನೆಯಲ್ಲಿ ಒಕ್ಕಲಾಗಿ ಬಾಳುತ್ತಾ ಇರಿ " ಎಂದು, ಅಭಯವನ್ನು ಕೊಟ್ಟು, ಕೊಡಗು ಸೀಮೆ ಸರಹದ್ದು, ಸಿದ್ಧೇಶ್ವರನ ಬೆಟ್ಟ ಆಶ್ರಯದಲ್ಲಿ ವೀರರಾಜೇಂದ್ರ ಒಡೆಯರವರು ಇದ್ದುಕೊಂಡು, ಮೈಸೂರ ಸೀಮೆ ಸರಹದ್ದು ಬಂದಹಾಗೆ ಬಿಸಲೆಘಟ್ಟದಿಂದ ಬೈನಾಡು ಸರಹದ್ದು ಪರಿಯಂತರ ಸಂಹಾರ ಮಾಡುತ್ತಾ, ದಿವಸದಲ್ಲಿ ದುಸುಮಾನರ ಕಡೆ ಮುಸಲ್ಮಾನರ ಸಂಗಡ

ಲಡಾಯಿಮಾಡಿ, ಅವರನ್ನು ತಮ್ಮ ಸೀಮೆಯಿಂದ ಹೊರಗೆ ಹಾಕುತ್ತಾ, ರಾತ್ರಿ ಕಾಲದಲ್ಲು ಮೈಸೂರ ಸೀಮೆಗೆ ಹೋಗಿ, ಅನಾಜು ವಗೈರೆ ಲೂಟಿಮಾಡಿಕೊಂಡು ಬಂದು, ತಮ್ಮ ಕಡೆ ಮಂದಿಗೆ ಊಟದ ಬಗ್ಗೆ ಕೊಡಿಸುತ್ತಾ, ಈ ಮೇರೆ ಕಾಲಕ್ಷೇಪಮಾಡುತ್ತಾ ಇರಲಾಗಿ, ಆ ಮುಸಲ್ಮಾನರು ಈ ವಿವರವನ್ನು ಟೀಪು ಸುಲ್ತಾನರಿಗೆ ಫಿರಿಯಾದಿಯಾಗಿ ಜಾಹೀರು ಮಾಡಿದರಿಂದ, ಈ ವರ್ತಮಾನ ಟೀಪುಸುಲ್ತಾನರು ಕೇಳಿ, ಕಂದಾಚಾರದ ಬಕ್ಷಿ ಸದೂರ್ ಗುಲಾಮಲ್ಲೀ ಗಾಜೀಕಾದಲೇರ್‌ದಿಲ್ಖಾ ಇವರ ಸಂಗಡ ಭಾರಿ ಫೌಜು, ಕುದುರೆ ಪೈದಲ್ ಸಹಾ, ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ, ಆ ಗುಲಾಮಲ್ಲಿಯು, ಸಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ, ಕೊಡಗಿನ ಸೀಮೆ ಒಳನುಗ್ಗುವಲ್ಲಿ ಕೊಡಗರಿಗೂ ಅವರಿಗೂ ಜಗಳವಾಗಿ, ಈ ಕಡೆ ಜನರ ಮದ್ದು ಗುಂಡು ತೀರಿಹೋಗಿ, ಜಗಳ ನಿಂತದರಿಂದ, ಗುಲಾಮಲ್ಲಿಬಕ್ಷಿಯು ಒಳನುಗ್ಗಿ ಬಂದು, ಈ ಸೀಮೆಯಲ್ಲಿ ಇದ್ದ ದವಸ, ಧಾನ್ಯ ಯಾವತ್ತೂ ಸೂರೆ ಮಾಡುತ್ತಾ, ದನ, ಕರ ಯಾವತ್ತೂ ಹಿಡಿದುಕೊಂಡು, ಕೊಡಗುಜನದ ಕುಟುಂಬಮಕ್ಕಳ ಹಿಡಿಯಬೇಕೆಂಬುದಾಗಿ, ಮಾರ್ಗ ತೋರಿಸುವ ಬಗ್ಗೆ ಈ ಸೀಮೆ ಜೀತಗಾರ ಹೊಲೆಯರ ಹಿಡಿದುಕೊಂಡು ಅವರ ಕೂಡ ದಾರಿ ತೋರಿಸಿಕೊಳ್ಳುತ್ತಾ, ಮಲೆ ವತ್ತಿನಲ್ಲಿ ಇಕ್ಕಟ್ಟಿನ ಸ್ಥಳದಲ್ಲಿ, ಕೊಡಗುಜನದ ಕುಟುಂಬಮಕ್ಕಳು ಇದ್ದದ್ದನ್ನು ಹಿಡಿಯುವ ಬಗ್ಗೆ, ದಂಡನ್ನು ಒಂದೊಂದು ತುಕಡಿಮಾಡಿ, ಒಂದೊಂದು ಕಡೆಗೆ ಕಳುಹುತ್ತಾ ಇದ್ದನು.

ಅಷ್ಟರಲ್ಲಿ ಇವರಿಗೆ ಕುಮಕಾಗಿ ಚರಕಲ ರಾಜರವರು, ಕೆಲವು ನಾಯಿಮಾರರನ್ನು ತಮ್ಮ ಕಡೆ ಕಾರೆಕಾರರ ಸಂಗಡ ಕೂಡಿಸಿ ಕಳುಹಿದಲ್ಲಿ, ಅವರು ಬಂದು, ಗುಲಾಮಲ್ಲಿ ಸದೂರನ ಕಂಡಲ್ಲಿ, ನಮ್ಮ ಕಡೆಯಿಂದಲೂ ಕೆಲವು ಫೌಜನ್ನು ಕೊಡುತ್ತೇವೆ, ಆವರು, ನೀವು ಕೂಡಿ ಕಾಡ ಒಳಗೆ ಸೇರಿಕೊಂಡು ಇರುವಂಥ ಕೊಡಗರ ಕುಟುಂಬ ಮಕ್ಕಳ ಹಿಡಿದು ತರಬೇಕೆಂಬದಾಗಿ ಕೆಲವು ಫೌಜನ್ನು ಕೊಟ್ಟಲ್ಲಿ, ಆ ನಾಯಿಮಾರರು ಆ ಫೌಜು ಸಹಾ ಒಟ್ಟಾಗಿ, ಪಾಡಿ ನಾಲ್ಕು ನಾಡ ದೇವಸ್ಥಾನದ ಬಳಿಗೆ ಹೋದಲ್ಲಿ, ಅಲ್ಲಿ ಕೊಡಗರು ಜಗಳ ಮಾಡಿದಲ್ಲಿ, ಆ ನಾಯಿಮಾರರು ಪೆಟ್ಟು ತಡೆಯಲಾರದೆ, ಆ ದೇವಸ್ಥಾನಕ್ಕೆ ಬೆಂಕಿ ಹಾಕಿ ಸುಟ್ಟು, ಮಲೆಯಾಳಕ್ಕೆ ಓಡಿಹೋದರು. ಗುಲಾಮಲ್ಲೀ ಕಡೆ ಜನರು

ಅವನ ದಂಡಿಗೆ ಕೂಡಿಕೊಂಡು, ಕೊಡಗರ ಕುಟುಂಬ ಮಕ್ಕಳ ಹಿಡಿಯುವ ಬಗ್ಗೆ ಪ್ರಾರಂಭಿಸಿದಲ್ಲಿ, ಆ ಕುಟುಂಬದ ಬಳಿಯು ಇದ್ದ ಕೊಡಗ ಜನ ಯಾವತ್ತು, ಅವರು ಬರುವಂಥ ಇಕ್ಕಟ್ಟಿನ ಮಾರ್ಗ ಕಟ್ಟಿಕೊಂಡು, ಮದ್ದು ಗುಂಡು ತೀರುವ ಪರ್ಯಂತರ, ಗುಂಡಿನಿಂದ ಹೊಡೆದು ತೀರುತ್ತಲೆ ಕತ್ತಿ ತೆಗೆದುಕೊಂಡು, ಮೇಲೆ ಬಿದ್ದು ಕಡಿಯುತ್ತ, ದಿನ ಒಂದಕ್ಕೆ ಅವರ ಕಡೆ ಐವತ್ತು–ಅರವತ್ತು ಜನದ ಮೇಲೆ ಜಾಯ ಜಖಮಿ ಮಾಡುತ್ತಾ ಇರಲಾಗಿ, ಈ ಕೊಲೆಗಾರದೆ ಲಾಚಾರಿಯಿಂದ ಗುಲಾಮಲ್ಲೀ ಭಕ್ಷಿ ತನ್ನ ಕಡೆ ದಂಡಿನ ಜನ ಯಾವತ್ತೂ ಒಟ್ಟುಗೂಡಿಕೊಂಡು, ಮಲೆಪತ್ತಿನ ಇಕ್ಕಟ್ಟಾದ ಗ್ರಾಮಗಳಿಗೆ ಬಾರದೆ, ನಡು ಸೀಮೆಯಲ್ಲಿ ಮೈದಾನ ವಾಗಿರುವಂಥಾ ಜಾಗದಲ್ಲಿ ಇರುವ ರೈತರ ಮನೆಮಾರು ಲೂಟಿಮಾಡಿ, ಬೆಂಕಿ ಹಾಕುತ್ತ ಇದ್ದನು. ಅಷ್ಟರಲ್ಲಿ ಟೀಪುಸುಲ್ತಾನರ ಕೈವಳಗೆ ಇದ್ದಂಥ ಮಲೆಯಾಳರು ಯಾವತ್ತು ಈ ಕೊಡಗಿನ ಸಮಾಚಾರ ಕೇಳಿ, ಪುಂಡಾಗಿ ಕಾಡು ಸೇರಿಕೊಂಡು, ಶರಾರತ್ತು ಮಾಡುತ್ತಾ ಇದ್ದದ್ದರಿಂದ ಟೀಪುಸುಲ್ತಾನರು ತಿಳಿದು, ಗುಲಾಮಲ್ಲೀ ಸದೂರನಿಗೆ ಬರೆಸಿ ಕಳುಹಿದ್ದು : “ ನೀನು ಕೊಡಗಿನ ಸೀಮೆಯಿಂದ ಹೊರಟು, ಮಲೆಯಾಳಕ್ಕೆ ಹೋಗಿ, ಅಲ್ಲಿ ಶರಾರತ್ತು ಮಾಡು ವಂಥಾ ಜನಕ್ಕೆ ತಂಬಿ ಪಹುಂಚಾಯಿಸಿ ಬಂದುಬಸ್ತು ಮಾಡು ” ಎಂಬುದಾಗಿ ಬರೆಸಿ ಕಳುಹಿದ್ದರಿಂದ, ಆ ಗುಲಾಮಲ್ಲೀ ಬಕ್ಷಿಯು ತನ್ನ ಫೌಜು ಸಮೇತ ಕೊಡಂತುರದ ಮಾರ್ಗವಾಗಿ ಪೋಗುತ್ತಿದ್ದಲ್ಲಿ, ಕೊಡಗರು ಹೋಗಿ, ಮಧ್ಯೆ ಘಟ್ಟದಲ್ಲಿ ಲಡಾಯಿ ಮಾಡಿದಲ್ಲಿ, ಈ ಜನದ ಮದ್ದು ಗುಂಡು ತೀರಿಹೋಗಿ, ಜಗಳ ಸ್ತಂಭನವಾದ್ದರಿಂದ, ಆ ಗುಲಾಮಲ್ಲಿಯು ಅಲ್ಲಿಂದ ಹೋಗಿ, ಪೈಯಾ ವೂರಲ್ಲು ಇಳುಕೊಂಡು, ಪೈಯಾವೂರು ದೇವಸ್ಥಾನಕ್ಕೆ ಬೆಂಕಿ ಹಾಕಿ ಆ ಸೀಮೆ ರೈತರ ಮನೆಮಾರು ಲೂಟಿಮಾಡುತ್ತಾ ಇದ್ದಲ್ಲಿ, ಪೈಚಿಯಲ್ಲಿ ಇದ್ದ ಪಾಲೆ ಅರಸುಗಳ ಅಣ್ಣನು, ತಾನು ಟೀಪುಸುಲ್ತಾನರ ಕಂಡುಕೊಂಡು ಇದ್ದೇನೆ. ತನ್ನ ತಮ್ಮನಾದ ಪಾಲೆ ವೀರವರ್ಮ ಅರಸು ಟೀಪುಸುಲ್ತಾನರ ಸಂಗಡ ತಿರುಗಿ ಬಿದ್ದು ಕಾಡ ಸೇರಿಕೊಂಡು ಇದ್ದಾನೆ. ಈಗ ಅವರ ಫೌಜು ಬಂದು ಇದೆ. ಇನ್ನೂ ನನಗೆ ಏನು ಆದೀತೊ ಎಂಬದಾಗಿ ಭಯಸ್ಥನಾಗಿ, ತನ್ನ ಕುಟುಂಬ ಮಕ್ಕಳನ್ನು ತೆಗೆದುಕೊಂಡು ರಾತಾರಾತ್ರಿಯೆ ಅನಂತಶಯನದ ಕಡೆಗೆ ಓಡಿ ಹೋದರು. ಈ ವಿವರ ಗುಲಾಮಲ್ಲೀ ಸದೂರನು ಟೀಪುಸುಲ್ತಾನರಿಗೆ ಬರೆದು

ಕಳುಹಿದ್ದರಿಂದ, ಕುಮಕಿನ ಬಗ್ಗೆ ಮುಹಮ್ಮದ ರಾಜಾ ಭಕ್ಷಿ, ಅಜಮಲ್ಲಿ ಖಾನ್ ಬಕ್ಷಿ, ಫಾಜಲ್‌ಖಾನ್, ಪರಾಸೀಸ್ ಮೂಸೆ, ಜಾನ್ ಕಸ್ತೂರಿ, ಅವನ ಸಂಗಡ ಮೂರು ಜನ ಕಪ್ತಾನರು, ಇವರ ಸಂಗಡ ಭಾರಿ ಫೌಜು ಸಹ ರವಾನೆ ಮಾಡಿದರು.

ಆ ಸರದಾರರು ದಂಡು ಸಮೇತ ಮಲೆಯಾಳಕ್ಕೆ ಹೋಗುವ ಬಗ್ಗೆ, ಕೊಡಗಿನ ಸೀಮೆ ಮಾರ್ಗವಾಗಿ ಬಂದು ಹೆಗ್ಗಳದ ಬೆಟ್ಟದ ಮೇಲೆ ಇಳು ಕೊಂಡಲ್ಲಿ, ಆ ದಿವಸವೇ ವೀರರಾಜೇಂದ್ರ ಒಡೆಯರವರು ಮಂದಿ ತೆಗೆದು ಕೊಂಡುಹೋಗಿ, ಘಟ್ಟ ಇಳಿದುಹೋಗುವ ಮಾರ್ಗಗಳ ಕಟ್ಟಿ, ದುಷ್ಮಾನನ ಲಷ್ಕರಿನ ಸಂಗಡ ಲಡಾಯಿ ಮಾಡುವ ಬಗ್ಗೆ ದಾರಿ ನೋಡುತ್ತ ಇದ್ದಲ್ಲಿ, ಆ ಮಾರನೆ ದಿವಸ ಬೆಳಿಗ್ಗೆ ಫಾಜಲ್‌ಖಾನನು ತನ್ನ ದಂಡು ತೆಗೆದುಕೊಂಡು ಅಗಾಡಿಗೆ ಆಗಿಕೊಂಡು, ಪಿಚಾಡಿಗೆ ಜಾನ್ ಕಸ್ತೂರಿ ಆಗಿಕೊಂಡು, ಮಧ್ಯ ಗುನುಗು ಹಾಕಿಕೊಂಡು, ಮಲೆಯಾಳದ ಕಡೆಗೆ ಹೋಗುತ್ತಾ ಇದ್ದಲ್ಲಿ, ಲಡಾಯಿವಾಗಿ ಪೆಟ್ಟು ತಾಳಲಾರದೆ, ಅಗಾಡಿ ಇದ್ದ ಫಾಜಲ್‌ಖಾನ, ದಂಡು ಸಹಾ ಘಟ್ಟ ಇಳಿದು ಓಡಿಹೋದನು. ಜಾನ್ ಕಸ್ತೂರಿಯು ಕೊಡಗುಜನರ ಬಳವಿಗೆ ಸಿಕ್ಕಿ ಜಗಳವಾಡಿ ಬಹಳ ಜನಕ್ಕೆ ಜಾಯಿ ಜಖಮಿ ಆದ್ದರಿಂದ ಲಾಚಾ ರಾಗಿ, ರಸ್ತು ಗುನುಗು ಬಿಟ್ಟು, ಅಗಾಡಿ ಇದ್ದ ಫೌಜಿಗೆ ಕೂಡತಕ್ಕ ಬಗ್ಗೆ ಧೈರ್ಯಗುಂದಿ ಹೋಗುತ್ತಿದ್ದಲ್ಲಿ, ಕೊಡಗು ಮಂದಿಯು ಕಾದುನಿಂತು ಇದ್ದ ಬಳಿಯಿಂದ ಅವನ ದಂಡಿನ ಮೇಲೆ ಬಿದ್ದು, ಎಂಟುನೂರು ಜನದ ತಲೆ ಕೊಯಿದರು. ನಾನೂರು ಜನಕ್ಕೆ ಜಖಮಿ ಆಯಿತು. ಜಾನ್ ಕಸ್ತೂರಿ ಅವನ ಸಂಗಡ ಇದ್ದ ಪರಾಸೀಸ ಸರದಾರರನ್ನು ತಲೆ ಕೊಯಿದರು. ಅಷ್ಟರಲ್ಲಿ ಕೊಡಗು ಜನರು ಸಾಮಾನು ಸರಂಜಾಮು ಸೂರೆ ಮಾಡುವುದಕ್ಕೆ ಪ್ರಾರಂಭಿ ಸಿದ್ದರಿಂದ ಕೆಲವು ಜಖಮಿ ಆದಂಥ ಜನ ಮುಂತಾಗಿ ಕಾಡು ಬಿದ್ದು, ಓಡಿ ಹೋಗಿ, ಫಾಜಲ್‌ಖಾನನ ದಂಡಿಗೆ ಕೂಡಿದರು. ಆ ಬಳಿಕ ದಂಡಿನಲ್ಲಿ ಸಿಕ್ಕಿದಂಥ ಸಾಮಾನು ಸರಂಜಾಮು ಯಾವತ್ತು ದಂಡಿನಲ್ಲಿ ಕೈಸೆರೆ ಸಿಕ್ಕಿದಂಥ ಜನರ ಕೂಡೆ ಹೊರಸಿ, ಹೆಗ್ಗಳಕ್ಕೆ ಹಾಕಿಸಿಕೊಂಡು, ಆ ಜನರನ್ನು ಕೈಸೆರೆ ಬಿಟ್ಟು, ಬಾಳೆಲೆ ಮಾರ್ಗವಾಗಿ ಕಳುಹಿಸಿ, ಆ ಮಾರನೆ ದಿವಸ ಈ ಸಿಕ್ಕಿದಂಥಾ ದ್ದರಲ್ಲಿ ಕತ್ತಿ, ಕೋವಿ, ಮದ್ದು, ಗುಂಡು ಅರಮನೆಗೆ ಸೇರತಕ್ಕಂಥಾದ್ದರಿಂದ,

ಅದನ್ನು ತೆಗೆದುಕೊಂಡು, ಉಳಿಕೆ ಸರಂಜಾಮು ಕೊಡಗರಿಗೆಲ್ಲ ಹಂಚಿ ಕೊಡಿಸಿದರು.

ಆ ಬಾಳೆಲೆ ಮಾರ್ಗವಾಗಿ ಹೋದ ಜನ, ಬಾಳೆಲೆ ಲಕ್ಡೀ ಕೋಟೆಗೆ ಹೋಗಿ, ಈ ವಿವರ ಯಾವತ್ತೂ ಅಲ್ಲಿ ಠಾಣ್ಯ ಇದ್ದ ಸರದಾರ ತಾಡಮರಿ ಮಲ್ಲಪ್ಪನಾಯಕ ಎಂಬವನಿಗೆ, ಹೇಳಿದಲ್ಲಿ, ಆ ಠಾಣ್ಯದವನು, ಈ ಲಡಾಯು ವಾದ ವರ್ತಮಾನ ಕೇಳಿ, ಹೆದರಿ, ಮದ್ದು ಗುಂಡು ಮುಂತಾದ ಸಾಮಾನು ಅಲ್ಲಿಯೇ ಬಿಟ್ಟು, ರಾತಾರಾತ್ರಿಯೇ ತನ್ನ ಮಂದಿಯನ್ನು ತೆಗೆದುಕೊಂಡು, ಪೆರಿಯಾಪಟ್ಟಣಕ್ಕೆ ಓಡಿಹೋದನು.

ಆ ಬಳಿಕ ಈ ಸಮಾಚಾರವನ್ನು ಟೀಪುಸುಲ್ತಾನರು ಕೇಳಿ, ಮಹಾ ಕೋಪದಿಂದ ತಮ್ಮ ಭಾವಮೈದುನನಾದ ಬುರಾನ್‌ದೀನರು ಎಂಬವರಿಗೆ ಮಡಿ ಕೇರಿ ಕೋಟೆ, ಕುಶಾಲನಗರದ ಕೋಟೆ, ಬೆಪ್ಪುನಾಡು ಲಕ್ಡಿಕೋಟೆ, ಭಾಗ ಮಂಡಲದ ಲಕಡಿ ಕೋಟೆ, ಈ ನಾಲ್ಕು ಕೋಟೆಗೆ ರಸ್ತು ತಲಪಿಸುವ ಬಗ್ಗೆ ಭಾರಿ ಫೌಜು ಕೊಟ್ಟು ಕಳುಹಿದಲ್ಲಿ, ಆ ಬುರಾನ್‌ದೀನರು ಫೌಜು ಸಮೇತ ಕುಶಾಲನಗರ ಎಂಬ ಮುಳ್ಳುಸೋಗೆ ಹತ್ತಿರ ಇಳಿದುಕೊಂಡು, ಆ ಕೋಟೆಗೆ ಬೇಕಾದ ರಸ್ತು ತುಂಬಿ, ಉಳಿಕೆ ಮೂರು ಕೋಟೆಗೆ ಇದ್ದ ರಸ್ತು ತೆಗೆದು ಕೊಂಡು, ದಂಡು ಸಮೇತ ಮಡಿಕೇರಿಗೆ ಬರುತ್ತಿದ್ದಲ್ಲಿ, ಮಧ್ಯ ಮಾರ್ಗಕ್ಕೆ ಮಹಾರಾಜರು ತಮ್ಮ ಮಂದಿ ತೆಗೆದುಕೊಂಡುಹೋಗಿ, ಲಡಾಯು ಮಾಡಿದಲ್ಲಿ ಆ ಬುರಾನ್‌ದೀನರ ದಂಡಿಗೆ ಬಹಳ ಪೆಟ್ಟಾಗಿ, ಮೂರು ಕೋಟೆಗೆ ಇದ್ದ ರಸ್ತಿನಲ್ಲಿ ಅರೆವಾಸಿ ಅಲ್ಲಿ ಬಿಟ್ಟು ಅರೆವಾಸಿ ರಸ್ತು ಸಾಗಿಸಿಕೊಂಡು ಹೋಗಿ ಮಡಿಕೇರಿ ಕೋಟೆಗೆ ಹಾಕಿದರು.

ಉಳಿಕೆ ಆ ಎರಡು ಲಕಡಿ ಕೋಟೆಗೆ ಇದ್ದ ರಸ್ತು ಕೊಡಗರಿಗೆ ಸಿಕ್ಕಿ ಹೋದ್ದರಿಂದ, ಬುರಾನ್‌ದೀನರು ದಂಡು ಸಮೇತ ಪುನಃ ಪಟ್ಟಣಕ್ಕೆ ಹೋಗಿ, ಕೊಡಗಿನಲ್ಲಿ ಆದ ವೃತ್ತಾಂತ ಟೀಪುಸುಲ್ತಾನರಿಗೆ ಹೇಳಿದಲ್ಲಿ ಅವರು ಬುರಾನ್ ದೀನರ ಸಂಗಡ ಹುಕುಂ ಕೊಟ್ಟಿದ್ದು : " ಈಗ ಕೋಟೆ ಅರಸುಗಳು ರಾಮ ರಾಜರ ಸೀಮೆ ಕಡೆಗೆ ಓಡಿಹೋಗಿ ಇದ್ದಾರೆ. ಮಲೆಯಾಳದ ಸೀಮೆ ಯಾವತ್ತೂ ಪುಂಡು ಆಗಿ ಅದೆ. ಅದನ್ನು ನಿಲ್ಲಿಸಿ, ಬಂದುಬಸ್ತು ಮಾಡತಕ್ಕ ಬಗ್ಗೆ, ನಾವು ಅರೆವಾಸಿ ಫೌಜು ತೆಗೆದುಕೊಂಡು, ಗೆಜ್ಜಲಹಟ್ಟಿ ಮಾರ್ಗವಾಗಿ,

ಬೆಂಗಾಟು ಅಂಗಡಿಗೆ ಬರುತ್ತ ಇದ್ದೇವೆ. ಅರೆವಾಸಿ ಫೌಜನ್ನು ನಿಮ್ಮ ತಾಬೆಗೆ ಕೊಡುತ್ತೇವೆ. ಆ ದಂಡು ಮೂರು ತುಕಡಿ ಮಾಡಿ, ಮೂರು ಮಾರ್ಗದಿಂದ ಕೊಡಗಿನ ಸೀಮೆ ಒಳನುಗ್ಗಿಸಿ, ಕೊಡಗರಿಗೆ ಯಾವತ್ತಕ್ಕೂ ಹೊಡೆದು, ಆ ನಾಲ್ಕು ಕೋಟೆಗೆ ಮಳೆಗಾಲ ಆರು ತಿಂಗಳಿಗೆ ಬೇಕಾದ ರಸ್ತು ಹಾಕಿ, ಹೆಗ್ಗಳದ ಘಟ್ಟದ ಮಾರ್ಗವಾಗಿ ನಾವು ಇರುವಲ್ಲಿಗೆ ಬಾ" ಎಂಬುದಾಗಿ ಹುಕುಂ ಕೊಟ್ಟು ಟೀಪುಸುಲ್ತಾನರು ಅದೇ ಮೇರೆ ಅರೆವಾಸಿ ಫೌಜನ್ನು, ಸೈದಹಮ್ಮದ ಸಿಪಾದಾರ, ಶೇಕ್ ಅನ್ಸರ ಸಿಪಾದಾರ, ರಸ್ತು ಸಾಮಾನು ಸರಂಜಾಮು ಮುಂತಾಗಿ ಬುರಾನ್‌ದೀನ್ ಸಿಪಾಸಾಲಾರರ ತಾಬೆ ಮಾಡಿ, ಬಾಕಿ ಅರೆವಾಸಿ ಫೌಜನ್ನು ಖಾಸ ತಮ್ಮ ಸಂಗಡ ತೆಗೆದುಕೊಂಡು, ಕಲಿ ಸಂದ ೪೮೯೧ನೇ ಸೌಮ್ಯ ಸಂವತ್ಸರದ ವೈಶಾಖ ಮಾಸದಲ್ಲಿ, ಪಟ್ಟಣದಿಂದ ಹೊರಟು, ಗೆಜ್ಜಲಹಟ್ಟಿ ಘಟ್ಟ ಇಳಿದು, ಕೋಟೆ ಅರಸುಗಳ ಸೀಮೆ ಮಾರ್ಗವಾಗಿ ಬೆಂಗಾಟು ಅಂಗಡಿಯಲ್ಲು ಇಳಿದುಕೊಂಡು, "ಮಲೆಯಾಳದ ರಾಜರು ತುಂಟರಿದ್ದಾರೆ, ಇವರನ್ನೆಲ್ಲಾ ಹಿಡಿಯುಬೇಕು" ಎಂಬದಾಗಿ, ವಿಚಾರಿಸಿದಲ್ಲಿ, ಈ ಸೂಕ್ಷ್ಮವನ್ನು ಚರಕಲ ರಾಜರು ತಿಳಿದು, "ಕೋಟೆ ಅರಸುಗಳು ದಗಾಮಾಡಿ ಓಡಿಹೋದ್ದರಿಂದ, ಟೀಪುಸುಲ್ತಾನರಿಗೆ ಮಲೆಯಾಳದ ರಾಜರ ನಂಬಿಕೆ ಇಲ್ಲದೆ ಹೋಗಿ ಇದೆ. ಅದರಿಂದ ನಮ್ಮ ಅರ್ಥ, ಪ್ರಾಣ ಯಾವ ಮೇರೆ ಉಳಿದೀತು" ಎಂಬುದಾಗಿ ಗ್ರಹಿಸಿ, ತಮ್ಮ ಕುಟುಂಬ ಮಕ್ಕಳನ್ನು ನಂಬಿಗಸ್ಥ ಜನರ ಸಂಗಡ ಕೂಡಿಸಿ, ರಾತಾರಾತ್ರೆಯೇ ತಲಚೇರಿಗೆ ಸಾಗಿಸಿ, ಈ ವರ್ತಮಾನ ರಾತ್ರೆಯೇ ಬಂದು ಹೇಳಿದರೆ, "ನಾವು ಈ ರಾತ್ರೆ ಮೂರನೇ ಜಾವದಲ್ಲಿ ಹೊರಟು, ತಲಚೇರಿಗೆ ಬರುತ್ತೇವೆ" ಎಂಬದಾಗಿ ತಾಕಿದಿ ಮಾಡಿ ಕಳುಹಿದಲ್ಲಿ, ಆ ಜನರು ಕುಟುಂಬ ಮಕ್ಕಳ ತಲಚೇರಿ ಸರಹದ್ದಿಗೆ ದಾಟಿಸಿ, ಆ ರಾತ್ರಿಯೇ ಪುನಃ ಬಂದು, ಈ ವರ್ತಮಾನ ಹೇಳುವುದಕ್ಕೆ ಎತ್ತದರಿಂದ ಕೆಲವು ಮಾಪಿಳೇರು ಈ ವರ್ತಮಾನ ತಿಳಿದುಕೊಂಡು, ಟೀಪುಸುಲ್ತಾನರ ಬಳಿಗೆ ಬಂದು, ಚರಕಲರಾಜರು ಕುಟುಂಬ ಮಕ್ಕಳ ತಲಚೇರಿಗೆ ಸಾಗಿಸಿ ಇದ್ದಾರೆ. ಈಗ ಅವರು ಅಲ್ಲಿಗೆ ಓಡಿಹೋಗುವವರಾಗಿದ್ದಾರೆ, ಎಂಬುದಾಗಿ ಹೇಳಿದ್ದರಿಂದ, ಈ ವಿವರ ಕೇಳಿ, ಟೀಪುಸುಲ್ತಾನರು ತಮ್ಮ ಕಡೆ ಆಹಶಾಂ ಪ್ಯಾದೇರಿಗೆ ತಯಾರುಮಾಡಿ, ಆ ಚರಕಲರಾಜರ ಹಿಡಿಯುವ ಬಗ್ಗೆ ಕಳುಹಿದಲ್ಲಿ, ಆ ಪ್ಯಾದೇರು ಅದೇ ಮೇರೆ ಆ ಚರಕಲರಾಜರು

ಇದ್ದ ಪೈಚಿ ಜಾಗ ಬಳಸುವುದರೊಳಗೆ, ಈ ವಿವರವನ್ನು ಅಲ್ಲಿ ಇದ್ದ ನಾಯಿ ಮಾರರು, ಚರಕಲರಾಜರಿಗೆ ಹೇಳಿದ್ದರಿಂದ, ಆ ರಾಜರು ಹೆದರಿ, ಆ ಕ್ಷಣ ಗಿಡ ಬಿದ್ದು ಓಡುತ್ತಾ ಇದ್ದಲ್ಲಿ, ಆ ವಾಲೇಕಾರ ಜನರು ಕಂಡು, ಆ ರಾಜರ ಬೆನ್ನಡಿ ಹೋಗಿ ಹಿಡಿಯುವಷ್ಟರಲ್ಲಿ, ಆ ರಾಜರು ಇನ್ನು ಅವರ ಕೈಗೆ ಸಿಕ್ಕಿದರೆ ತಮಗೆ ಸುಖ ಬಾರದು ಎಂಬದಾಗಿ ತಿಳಿದು, ತಮ್ಮ ಪ್ರಾಣ ತಮ್ಮ ಕೈಯಿಂದ ಕಳೆದುಕೊಂಡರು.

ಆ ಬಳಿಕ, ವಾಲೇಕಾರರು, ಆ ರಾಜರ ಶವವನ್ನು ಟೇಪುಸುಲ್ತಾನರ ಬಳಿಗೆ ತೆಗೆದುಕೊಂಡು ಹೋದಲ್ಲಿ, ಟೇಪುಸುಲ್ತಾನರು ಆ ಶವದ ಕಾಲಿಗೆ ಹಗ್ಗ ಹಾಕಿ, ದಂಡಿನ ಸುತ್ತ ಎಳೆಸಿ ಆ ಬಳಿಕ ಒಂದು ಮರಕ್ಕೆ ತೂಗಿಸಿಬಿಟ್ಟರು. ಆದ್ದರಿಂದ ಆ ಮಲೆಯಾಳದ ಕೆಲವು ಅರಸುಗಳು, ನಾಯರರು, ನಂಬ್ಯಾರರು ಮುಂತಾಗಿ ಹೆದರಿ, ಅನಂತಶಯನದ ರಾಮರಾಜರ ಸೀಮೆಗೆ ಓಡಿಹೋದರು.

ಈ ಸಮಾಚಾರವನ್ನು ಟೇಪುಸುಲ್ತಾನರು ಕೇಳಿ, "ಈ ಮೇರೆ ನಮ್ಮ ಸರಕಾರಕ್ಕೆ ಸೇರಿದ ಮಲೆಯಾಳದ ಜನರು ಮುಂತಾಗಿ ನಿಮ್ಮ ಸೀಮೆ ಕಡೆಗೆ ಓಡಿಬಂದು ಇದ್ದಾರೆ. ಆ ಜನರ ಯಾವತ್ತು ಹಿಡಿದು ಕಳುಹಿಕೊಡಬೇಕು. ಇಲ್ಲದಿದ್ದರೆ, ನಿಮ್ಮ ಸೀಮೆ ಯಾವತ್ತು ಲುಟಾಯಿಸಿ, ಆಕ್ರಮಿಸಿಕೊಳ್ಳುತ್ತೇವೆ" ಎಂಬುದಾಗಿ, ತಮ್ಮ ಕಡೆ ಹರಿಕಾರ ಮುಂತಾದವರ ಸಂಗಡ ಹೇಳಿಕಳುಹಿದಲ್ಲಿ, ಈ ಮಾತಿಗೆ ರಾಮರಾಜರು ಒಡಂಬಡದೆ, ಆ ಜನರನ್ನು ಬಿಟ್ಟುಕೊಡದೆ, ಹರಿಕಾರ ಮುಂತಾದವರನ್ನು ಹಿಂತಿರುಗಿಸಿಬಿಟ್ಟಿದ್ದರಿಂದ, ಆ ಜನ ಬಂದು, ಈ ಮಾತು ಟೇಪುಸುಲ್ತಾನರಿಗೆ ಹೇಳಿದಲ್ಲಿ, ಟೇಪುಸುಲ್ತಾನರು, "ಮಳೆಗಾಲ ಆರು ತಿಂಗಳು ಕಳೆದ ಬಳಿಕ, ಅನಂತಶಯನದ ರಾಮರಾಜರ ಸೀಮೆಯನ್ನು ಆಕ್ರಮಿಸಿಕೊಳ್ಳಬೇಕು" ಎಂಬುದಾಗಿ, ಕೊಯಮುತ್ತೂರಿಗೆ ಹೋಗಿ, ಛಾವಣಿ ಮಾಡಿ, ಜಗಳಕ್ಕೆ ಬೇಕಾದ ಸನ್ನಾಹ ಮಾಡುತ್ತ ಇದ್ದರು.

ಇತ್ತಲಾಗಿ ಟೇಪುಸುಲ್ತಾನರು ಮಾಡುವಂಥ ಅನಾಹುತ ಯಾವತ್ತನ್ನೂ ಆ ರಾಮರಾಜರು, ಇಂಗ್ರೇಜಿ ಬಹದ್ದೂರ್ ಕಂಪನಿ ದೊಡ್ಡ ಸ್ಥಾನವಾಗಿರುವ ಬಂಗಾಳದ ಜನರಲ್ ಮಹಾರಾಜಶ್ರೀ ಲಾರ್ಡ್ ಕಾರನ್ವಾಲೀಸ್ ಸಾಹೇಬ ಬಹಾದುರವರಿಗೂ, ಮದರಾಸಿನ ಜನರಲ್ ಮೆಂಡೂಸ್ ಸಾಹೇಬ ಬಹಾದು ರವರಿಗೂ, ಬೊಂಬಾಯಿ ಗವರ್ನರ್ ಮೇಜರ್ ಜನರಲ್ ರಾಬರ್ಟ್ ಅಬರ್

ಕ್ರಂಬಿ ಬಹಾದುರವರಿಗೂ ಸಹಾ, ಬರೆಸಿ ಕಳುಹಿದಲ್ಲಿ, ಈ ಮೂವರು ದೊಡ್ಡ ಸರದಾರ ಸಾಹೇಬ ಬಹಾದುರವರು, " ನೀವು ಅಂಜಬ್ಯಾಡ " ಎಂಬುದಾಗಿ, ರಾಮರಾಜರಿಗೆ ಜವಾಬು ಬರೆಸಿ ಕಳುಹಿ, ಅವರು ಲಡಾಯಕ್ಕೆ ಸನ್ನದ್ಧ ರಾಗುತ್ತಾ ಇದ್ದರು. ಹೀಗೆ ಇರುತ್ತಿದ್ದಲ್ಲಿ, ಕೊಡಗಿನ ಒಳಗೆ ಇರುವ ನಾಲ್ಕು ಕೋಟೆಗೆ ರಸ್ತು ಹಾಕುವ ಬಗ್ಗೆ ಬೇಕಾದ ಸಾಮಾನು ಜಮಾಯಿಸುತ್ತ ಇದ್ದಂಥ ಸಮಾಚಾರ ಕೊಡಗಿನ ರಾಜರು ಕೇಳಿ, ಅವರು ರಸ್ತು ತೆಗೆದುಕೊಂಡು ಬರುವುದಕ್ಕೆ ಮುಂಚಿತವಾಗಿ, ಕೊಡಗಿನ ಒಳಗೆ ನಾಲ್ಕು ಕೋಟೆಯನ್ನು ಮಳೆ ಗಾಲದ ಒಳಗೆ ಸಾಧಿಸಬೇಕು ಎಂಬದಾಗಿ, ಜ್ಯೇಷ್ಠ ಶು. ೧೦ ದಿವಸ ಸಾವಿರದ ಐನೂರು ಕೊಡಗು ಜನರನ್ನು ತೆಗೆದುಕೊಂಡುಹೋಗಿ, ನಂಜರಾಯ ಪಟ್ಟಣದ ದೇವಸ್ಥಾನದಲ್ಲು ಇಳಿದುಕೊಂಡು, ನಾಲ್ಕು ದಿವಸ ಅಲ್ಲಿ ಇದ್ದು, ಟೀಪುಸುಲ್ತಾನರು ಕುಶಾಲನಗರ ಎಂಬ ಕೋಟೆ ಹೊಸತಾಗಿ ಕಟ್ಟಿಸುತ್ತಾರಷ್ಟೆ, ಆ ಕೋಟೆ ನಮೂನೆ ಯಾವ ಮೇರೆ ಇದೆ, ಆ ನೆಲ ಯಾವ ಮೇರೆ ಇದೆ, ಅದರ ಒಳಗೆ ಮಂದಿ ಎಷ್ಟು ಇದೆ, ಜಗಳ ಮಾಡುವಾಗ್ಗೆ ನಮ್ಮ ಮಂದಿ ನಿಲ್ಲುವ ಬಗ್ಗೆ ವರವಾಗಿ, ಆ ಕೋಟೆ ಒಳಗೆ ಇರುವ ಮಂದಿಗೆ ಊನವಾಗಿ, ನಮಗೆ ಆಸ್ಪದ ಇರುವ ನೆಲ ಯಾವದು ಎಂಬದಾಗಿ ನೋಡತಕ್ಕ ಬಗ್ಗೆಯೂ ನಾವು ಆ ಕೋಟೆ ಸಮೀಪಕ್ಕೆ ಹೋದರೆ, ಅದರ ಒಳಗೆ ಇರುವಂಥ ಜನ ಕಂಡು, ಜಗಳಕ್ಕೆ ಹೊರಟುಬರುತ್ತಾರೋ, ಭಯಪಟ್ಟು ಕೋಟೆ ಒಳಗೆ ಕೂಡಿ ಕೊಂಡು ಗುಂಡು ಹಾರಿಸುತ್ತಾರೊ ಎಂಬ ಅವರ ಧೈರ್ಯ-ಅಧೈರ್ಯ ನೋಡುವ ಬಗ್ಗೆಯೂ ವೀರರಾಜೇಂದ್ರ ಒಡೆಯರವರು, ತಮ್ಮ ಮಂದಿ ಸಮೇತ ಆ ದಿವಸ ಮೂರನೇ ಜಾವದಲ್ಲಿ ಹೊರಟು ಮಡಿಕೇರಿಯಿಂದ ಬರುವ ರಹ ದಾರಿಗಾಗಿ ಸಾಯಂಕಾಲಕ್ಕೆ ಐದು ಗಳಿಗೆ ಇದ್ದಂತೆ ಕುಶಾಲನಗರದ ಕೋಟೆ ಸಮೀಪಕ್ಕೆ ಹೋದಲ್ಲಿ, ಅಗಾಡಿ ಇದ್ದ ಸ್ವಲ್ಪ ಮಂದಿಯನ್ನು ಆ ಕೋಟೆ ಒಳಗೆ ಇದ್ದವರು ಸ್ವಲ್ಪ ಮಂದಿ ಇದೆ ಎಂದು ತಿಳಿದು, ಆ ಕೋಟೆಯಿಂದ ಇನ್ನೂರು ಜನ ಪರ್ಯಂತರ ವಾಲೆಕಾರರು, ಈ ಕೊಡಗು ಜನದ ಮೇಲೆ ಗುಂಡುಹಾಕಿ ಬೆನ್ನಾಡಿದಲ್ಲಿ, ಈ ಅಗಾಡಿ ಇದ್ದ ಜನ ಜಗ್ಗಿ ಹಿಂತಿರುಗಿ ಓಡಿಬರುತ್ತಾ ಇದ್ದಲ್ಲಿ, ರಾಜರು ಆ ಓಡಿಬರುವ ಹೇಡಿ ಜನರ ಮೋರೆ ಮೇಲೆ ಕಡಿದು, ತಮ್ಮ ಹತ್ತಿರ ಇದ್ದ ಜನರನ್ನು ಅವರ ಇದಿರಾಗಿ ಕಳುಹಿದಲ್ಲಿ, ಇವರ ಮೇಲೆ ಆ ಜನರು

ಗುಂಡು ಇಟ್ಟರು. ಅದನ್ನು ಗುಮಾನಕ್ಕೆ ಹಾಕದೆ ಮೇಲೆ ಬಿದ್ದು ಜಗಳ ಮಾಡಿದಲ್ಲಿ, ಆ ಜನರು ಪೆಟ್ಟು ತಾಳಲಾರದೆ ಓಡಿಹೋಗಿ, ಕೋಟೆ ಒಳಗೆ ನುಗ್ಗಿದಲ್ಲಿ, ಆ ಜನರು ಓಡಿಸಿಕೊಂಡುಹೋಗಿ, ಕೊಡಗು ಜನರು ಕೋಟೆ ಒಳಗೆ ನುಗ್ಗಿ ಕಡಿದಲ್ಲಿ, ಆ ಕೋಟೆ ಒಳಗೆ ಇದ್ದ ಏಳುನೂರು ಜನ ವಾಲೇ ಕಾರರು ಪೆಟ್ಟು ತಾಳಲಾರದೆ, ಕೋಟೆ ಬಿಟ್ಟು, ಕಾವೇರಿ ಹೊಳೆ ಬಿದ್ದು ಬೆಟ್ಟದ ಪುರದ ಮಾರ್ಗ ಹಿಡಿದು ಓಡುತ್ತಿದ್ದಲ್ಲಿ, ಈ ಕೊಡಗು ಜನರು ಬೆನ್ನಾಡಿ, ಕಾವೇರಿ ಹೊಳೆ ಒಳಗೆ ಮುನ್ನೂರು ಜನ ಪರ್ಯಂತರ ಕಡಿದು ಅಲ್ಲಿಂದ ಬೆನ್ನಾಡಿ ಬೆಟ್ಟದಪುರದ ಸಮೀಪದ ಬೆಳುಗುರಿ ಪರ್ಯಂತರ ಇನ್ನೂರು ಜನ, ದನಕರು ಕಡಿದುಹಾಕಿ, ಆ ಕುಶಾಬಿನಗರದ ಕಿಲ್ಲೇದಾರನ ತಲೆಯನ್ನು ಕುಲ್ಲಟ್ಟೆ ಪೊನ್ನಣ್ಣನು ಕಡಿದು ತಂದು, ಮಹಾರಾಜರ ಮುಂದೆ ನಿವಾಳಿಸಿ ಹಾಕಿಬಿಟ್ಟನು. ದೊರೆಗಳು ಆ ದಿವಸ ಕೋಟೆ ಒಳಗೆ ಇದ್ದು, ಮೂರನೇ ದಿವಸ ಬೆಳಿಗ್ಗೆ ಕೋಟೆ ಒಳಗೆ ಸಿಕ್ಕಿದಂಥ ಸಾಮಾನದಲ್ಲಿ ಅರಮನೆಗೆ ಸಲ್ಲುವಂಥ ಮದ್ದು, ಗುಂಡು, ಕೋವಿ ಮುಂತಾಗಿ ನಾಲ್ಕುನಾಡ ಅರಮನೆಗೆ ಸಾಗಿಸಿ, ಉಳಿಕೆ ಬಟ್ಟೆಬರೆ, ದವಸಧಾನ್ಯ, ಪಂಚಲೋಹ, ದನಕರು ಮುಂತಾಗಿ, ತಮ್ಮ ಮಂದಿಗೆ ಹಂಚಿ ಕೊಟ್ಟು, ಆ ಲಕಡಿ ಕೋಟೆಗೆ ಬೆಂಕಿ ಹಾಕಿ ಸುಟ್ಟುಬಿಟ್ಟು ನಾಲ್ಕುನಾಡ ಅರಮನೆಗೆ ಬಂದು ಇರುತ್ತಾ ಇದ್ದರು. ಆ ಮೂರನೇ ಶ್ರಾವಣ ತಿಂಗಳಲ್ಲಿ ರಾಜರು ತಮ್ಮ ಮಂದಿ ತೆಗೆದುಕೊಂಡು ಬಂದು, ಬೆಪ್ಪುನಾಡ ಲಕಡಿ ಕೋಟೆಗೆ ಮುತ್ತಿಗೆ ಹಾಕಿದಲ್ಲಿ, ಆ ಲಕ್ಡಿ ಕೋಟೆ ಒಳಗೆ ಇದ್ದ ರಾಯದುರ್ಗದ ವಾಲೆ ಕಾರರು ನಿಸ್ತರಿಸಲಾರದೆ, ಸಲ್ಲಾಕ್ಕೆ ಇಳಿದುಬಂದುದರಿಂದ, ಮಹಾರಾಜರು ಆ ಕಿಲ್ಲೇದಾರನಿಗೂ, ಆ ವಾಲೆಕಾರ ಜನರಿಗೂ, ಅವರ ಸಾಮಾನು ಸಮೇತ ಕೊಡಗಿನ ಸೀಮೆಯಿಂದ ದಾಟಿಸಿಬಿಟ್ಟು, ಆ ಕೋಟೆಯನ್ನು ಸಾಧಿಸಿಕೊಂಡು, ಅದರಲ್ಲಿ ಇದ್ದ ಮದ್ದು, ಗುಂಡು, ಫಿರಂಗಿ, ಕೋವಿ ಮುಂತಾದ್ದು ನಾಲ್ಕುನಾಡ ಅರಮನೆಗೆ ಸಾಗಿಸಿ, ದವಸಧಾನ್ಯ, ದನಕರು ಕೊಡಗು ಮಂದಿಗೆ ಹಂಚಿ ಕೊಟ್ಟು, ಆ ಲಕಡಿ ಕೋಟೆಗೆ ಬೆಂಕಿ ಹಾಕಿ ಸುಟ್ಟುಬಿಟ್ಟಲ್ಲಿ, ಆ ಸಮಾಚಾರ ಈ ಕೋಟೆಯಲ್ಲಿ ಇದ್ದ ಕಿಲ್ಲೇದಾರನು, ಪಟ್ಟಣಕ್ಕೆ ಹೋಗಿ, ಬುರಾನುದ್ದೀನರ ಸಂಗಡ ಹೇಳಿದಲ್ಲಿ, ಬುರಾನುದ್ದೀನರು ತಮ್ಮ ಸಂಗಡ ಸೈದ್ ಹಮಿದ್ ಸಿಪಾದಾರ್, ಹಜರತ್ ಖಾನ್ ಗೋರಿ ಸಿಪಾದಾರ್, ಅಕ್ಬರ್ ಮನವರಿ

ಸಿಪಾದಾರ್, ಹಫೀಜ ಮುರ್ತುಜ ಸಿಪಾದಾರನ ಸಹಾ ಕೂಡಿಸಿಕೊಂಡು, ಭಾರಿ ಫೌಜು ಸಮೇತ, ಎರಡು ಕೋಟೆಗೆ ಇರುವ ರಸ್ತು ತೆಗೆದುಕೊಂಡು ಹೊರಟು ಬಂದು, ಸೈದ್‌ಹಮೀದ್ ಸಿಪಾದಾರನನ್ನು ಫೌಜು ಸಮೇತ ಅರಕಲ್‌ಗೋಡು ಮಾರ್ಗವಾಗಿ ಯಡವನಾಡಿಗೆ ಕಳುಹಿ, ಶೇಕ್ ಅನ್ಸರ್ ಸಿಪಾದಾರನನ್ನು ಫೌಜು ಸಮೇತ ಬಾಳೆಲೆ ಮಾರ್ಗವಾಗಿ ಕೊಡಗಿನ ಸೀಮೆ ವಳಿಕೆ ರವಾನೆ ಮಾಡಿ, ತಮ್ಮ ಭಾರಿ ಫೌಜನ್ನು ತೆಗೆದುಕೊಂಡು, ರಸ್ತು ಸಾಮಾನು ಸಾಗಿಸಿ ಕೊಂಡು, ಶಿದ್ಧೇಶ್ವರನ ಬೆಟ್ಟದ ಮಾರ್ಗವಾಗಿ ಬಂದು, ಅಮ್ಮತ್ತಿ ಗ್ರಾಮದಲ್ಲಿ ಇಳುಕೊಂಡರು. ಶೇಕ್ ಅನ್ಸರನು ಕಾಂಬಾಡಿಯಲ್ಲು ಬಂದು ಇಳುಕೊಂಡನು ; ಸೈದ್‌ಹಮೀದನು ಯಡವನಾಡಲ್ಲಿ ಇಳುಕೊಂಡನು.

ಈ ಸಮಾಚಾರವನ್ನು ವೀರರಾಜೇಂದ್ರ ಒಡೆಯರವರು ಕೇಳಿ, ಆ ಸೈದ್ ಹಮೀದನ ಸಂಗಡ ಜಗಳ ಮಾಡತಕ್ಕ ಬಗ್ಗೆ, ತಕ್ಕಷ್ಟು ಜನ ಯಡವನಾಡ ಕಡೆಗೆ ಕಳುಹಿಸಿ, ಬುರಾನುದ್ದೀನರ ಸಂಗಡ ಲಡಾಯಿ ಮಾಡತಕ್ಕ ಬಗ್ಗೆ ವೀರ ರಾಜೇಂದ್ರ ಒಡೆಯರವರು ಮಂದಿ ತೆಗೆದುಕೊಂಡು ಹೋಗುತ್ತಿದ್ದಲ್ಲಿ, ಕಾಂಬಾಡಿಯಲ್ಲು ಇಳಿದು ಇದ್ದ ಶೇಕ್ ಅನ್ಸರನ ಫೌಜಿನ ಸಂಗಡ ಜಗಳ ಮಾಡಿ, ಅವನ ಕಡೆ ಐನೂರು ಜನ ಪರಿಯಂತರ ಜಾಯ ಜಖಮಿ ಆದ್ದರಿಂದ ಜಗಳ ಮಾಡುವುದಕ್ಕೆ ನಿರ್ವಾಹವಿಲ್ಲದೆ, ಉಳಿಕೆ ಮಂದಿಯನ್ನು ತೆಗೆದು ಕೊಂಡು ಹೋಗಿ, ಬುರಾನುದ್ದೀನರ ದಂಡು ಇದ್ದ ಅಮ್ಮತ್ತಿಗೆ ಸಮೀಪವಾದ್ದ ರಿಂದ, ಆ ದಂಡಿಗೆ ಕೂಡಿದನು. ಆ ಮಾರನೇ ದಿವಸ ಬುರಾನುದ್ದೀನರು ಫೌಜು ಸಮೇತ ರಸ್ತು ಸಾಮಾನು ಸಾಗಿಸಿಕೊಂಡು, ಭಾಗಮಂಡಲಕ್ಕೆ ಹೋಗ ತಕ್ಕ ಬಗ್ಗೆ, ಕಡಿಯತ್ತನಾಡ ಮಾರ್ಗವಾಗಿ ಹೋಗುತ್ತಿದ್ದಲ್ಲಿ, ಅಲ್ಲಿಯೂ ಲಡಾಯಿವಾಗಿ, ಅವರ ಕಡೆ ಕೆಲವು ಜನಕ್ಕೆ ಅಪಾಯವಾಗಿ, ಅಲ್ಲಿಂದ ಬಂದು ಪಾಡಿನಾಲ್ಕುನಾಡ ವಳಿತವಾದ ನೂರಂಬಾಡದ ಮೈದಾನದಲ್ಲು ಇಳು ಕೊಂಡರು. ಆ ಬಳಿಕ, ವೀರರಾಜೇಂದ್ರ ಒಡೆಯರವರು, ತಮ್ಮ ಕಡೆ ಮಂದಿ ಯನ್ನು ಭಾಗಮಂಡಲಕ್ಕೆ ಹೋಗುವ ಮಾರ್ಗದಲ್ಲಿ, ಮಾವಟ್ಟೆಯೆಂಬ, ಇಕ್ಕ ಟ್ಟಿನ ಜಾಗದಲ್ಲು ನಿಲ್ಲಿಸಿ, ಜಗಳಕ್ಕೆ ಕಾದು ಇದ್ದರು.

ಆ ಮಾರನೇ ದಿವಸ ಬೆಳಿಗ್ಗೆ ಬುರಾನುದ್ದೀನರು ಶೇಕ್ ಅನ್ಸರನ ದಂಡು ಸಮೇತ ಬಂದು, ಆ ಮಾವಟ್ಟೆಗೆ ತಲಪಿದಲ್ಲಿ, ಹೇರಳ ಲಡಾಯಿವಾಗಿ,

ಅವರ ದಂಡಿಗೆ ಬಹಳ ನೋವಾಗಿ, ಮಾರ್ಗವು ಇಕ್ಕಟ್ಟಾದ್ದರಿಂದ ರಸ್ತು ಯಾವತ್ತು ಸಾಗಿಸುವುದಕ್ಕೆ ಕೂಡದೆ, ಕೆಲವು ರಸ್ತು ಸಾಮಾನು ಅಲ್ಲಿಯೇ ಹಾಕಿಬಿಟ್ಟು, ಸಾಯಂಕಾಲಕ್ಕೆ ಭಾಗಮಂಡಲದ ಕೋಟೆಗೆ ಸೇರಿದರು. ಅವರು ಅಲ್ಲಿ ಬಿಟ್ಟುಹೋದ ಸಾಮಾನು ಯಾವತ್ತು ಕೊಡಗು ಜನಕ್ಕೆ ಸಿಕ್ಕಿತು. ಆ ಕೋಟೆಗೆ ರಸ್ತು ಸಾಲದೆ ಹೋದ್ದರಿಂದ, ಪೆರಿಯಾಪಟ್ಟಣದಿಂದ ರಸ್ತು ತರುವ ಬಗ್ಗೆ ದೂರವಾದ್ದರಿಂದ, ಪ್ರಯಾಸವಾದೀತು ಎಂಬುದು ತಿಳಿದು, ಮೆಣಶಿನ ಘಟ್ಟದ ಮಾರ್ಗವಾಗಿ ಹೋಗಿ, ತುಳುವನಾಡಿಂದ ಸಾಮಾನು ತರಬೇಕು ಎಂತ ಫೌಜು ಸಮೇತ ಬಂದು, ಘಟ್ಟದ ಸಮೀಪ ಪಟ್ಟಿ ಎಂಬಲ್ಲಿಗೆ ತಲಪಿದಲ್ಲಿ, ಕೊಡಗು ಜನಕ್ಕೂ ಆ ಬುರಾನುದ್ದೀನರ ದಂಡಿಗೂ ಲಡಾಯಿವಾಗಿ, ಐನೂರು ಜನ ಪರಿಯಂತರ ಅವರ ಕಡೆಯಲ್ಲಿ ಜಾಯಾ ಜಖುಮಿ ಆಯಿತು. ಆದಾಗ್ಯೂ ದಕ್ಕದೆ ದಂಡನ್ನು ತೆಗೆದುಕೊಂಡು, ತುಳುವನಾಡಿಗೆ ಹೋಗಿ, ಅಲ್ಲಿಂದ ರಸ್ತು ಸಾಗಿಸಿಕೊಂಡು ಪುನಃ ಅಲ್ಲಿಗೆ ಬಂದಲ್ಲಿ, ಕೊಡಗು ಜನವು ನಡು ಘಟ್ಟದಲ್ಲಿ ಜಗಳಾ ಮಾಡಿದಲ್ಲಿ, ಪೆಟ್ಟು ತಾಳಲಾರದೆ, ಅರೆವಾಸಿ ರಸ್ತನ್ನು ಅಲ್ಲಿಯೇ ಬಿಸಾಟುಬಿಟ್ಟು, ಬಾಕಿ ರಸ್ತನ್ನು ಸಾಗಿಸಿ ತಂದು, ಭಾಗಮಂಡಲದ ಕೋಟೆಗೆ ತಲಪಿಸಿ, ಅಲ್ಲಿ ನಾಲ್ಕು ದಿವಸ ಇದ್ದು, ಮತ್ತೊಂದು ಸಲ ರಸ್ತು ತರಬೇಕು ಎಂತ, ಸದರಿ ಘಟ್ಟ ಇಳಿಯುವ ಬಗ್ಗೆ ಬಂದಲ್ಲಿ, ಕೊಡಗು ಜನ ಲಡಾಯಿಮಾಡಿ, ಘಟ್ಟ ಇಳಿಯುವ ಬಗ್ಗೆ ಬಿಡದೆ ಹೋದ್ದರಿಂದ, ಹಿಂತಿರುಗಿ ಬಂದ ಮಾರ್ಗವನ್ನೇ ಹಿಡಿದು ಬಂದು, ಬೆಪ್ಪುನಾಡಲ್ಲು ಇಳುಕೊಂಡು, ಮಾರನೆ ದಿವಸ ಬೆಳಿಗ್ಗೆ ಟೀಪುಸುಲ್ತಾನರ ದಂಡಿನ ಸಂಗಡ ಕೂಡತಕ್ಕ ಬಗ್ಗೆ, ಹೆಗ್ಗಳದ ಘಟ್ಟದ ಮಾರ್ಗವಾಗಿ ಹೋಗುತ್ತಿದ್ದಲ್ಲಿ, ಅಲ್ಲಿ ಕೊಡಗು ಜನ ನಿಂತು ಲಡಾಯಿಮಾಡಿದಲ್ಲಿ, ಪೆಟ್ಟು ತಾಳಲಾರದೆ ಅಲ್ಲಿಂದ ಹಿಂತಿರುಗಿ, ಶಿದ್ಧೇಶ್ವರನ ಬೆಟ್ಟದ ಮಾರ್ಗವಾಗಿ ದಂಡು ಸಮೇತ ಪಟ್ಟಣಕ್ಕೆ ಹೋದರು. ಈ ಸಮಾಚಾರವನ್ನು ಯಡವನಾಡಲ್ಲಿ ಹೊಂಬಾಳೆ ನಾಯಕನ ಸಂಗಡ ಲಡಾಯಿ ಮಾಡುತ್ತಾ ಇದ್ದ ಸೈದ್ ಹಮೀದನು ಕೇಳಿ ಹೆದರಿ, ಪಟ್ಟಣಕ್ಕೆ ಹೋಗಿ ಬುರಾನುದ್ದೀನರ ದಂಡಿನ ಸಂಗಡ ಕೂಡಿದನು. ಆ ಬಳಿಕ ಬುರಾನುದ್ದೀನ್ ಶಿಪಾದಾರ್, ಸೈದ್ ಹಮೀದ್ ಶಿಪಾದಾರ್, ಶೇಕ್ ಅನ್ಸರ್ ಶಿಪಾದಾರ್ ಸಹಾ, ಈ ಮೂವರು ಸರದಾರರು ದಂಡು ಸಮೇತ ಗೆಜ್ಜಲಹಟ್ಟಿ ಘಟ್ಟ ಇಳಿದುಹೋಗಿ, ಟೀಪು

ಸುಲ್ತಾನರ ಫೌಜಿನ ಸಂಗಡ ಕೂಡಿದರು. ಆ ಬಳಿಕ ಮೂರು ತಿಂಗಳ ಮೇಲೆ ಪುಷ್ಯಮಾಸದಲ್ಲಿ ಟೀಪುಸುಲ್ತಾನರ ಫೌಜು ಮಡಿಕೇರಿ ಕೋಟೆಗೆ ಇರುವ ರಸ್ತು ಸಾಗಿಸಿಕೊಂಡು ಬರುತ್ತಿದ್ದಲ್ಲಿ, ವೀರರಾಜೇಂದ್ರ ಒಡೆಯರವರು ತಮ್ಮ ಮಂದಿ ತೆಗೆದುಕೊಂಡುಹೋಗಿ, ಹೆರೂರು ನಾಲ್ಕುನಾಡ ವಳಿತವಾದ ನೆಗದಾಳದಲ್ಲಿ, ಮಾರ್ಗ ಅಡ್ಡಗಟ್ಟಿ ಜಗಳ ಮಾಡಿದಲ್ಲಿ, ಆ ಟೀಪುಸುಲ್ತಾನರ ಫೌಜು ಯಾವತ್ತು ಮುರಿದು ಜಾಯ ಜಖಮಿ ಆಗಿ, ಹಲಾಕಾದ್ದರಿಂದ, ರಸ್ತು ಸಾಮಾನು, ದನಕರ, ಆಯುಧ ಮುಂತಾದ್ದನ್ನು ಕೊಡಗು ಜನಕ್ಕೆ ಹಂಚಿ ಕೊಟ್ಟು ಬರುವುದರೊಳಗಾಗಿ, "ವೀರರಾಜೇಂದ್ರ ಒಡೆಯರವರು ಕುಟುಂಬ ಮಕ್ಕಳನ್ನು ಕುರುಚಿ ಎಂಬ ಗ್ರಾಮದಲ್ಲಿ ಇಟ್ಟು, ಟೀಪುಸುಲ್ತಾರ ಫೌಜಿನ ಸಂಗಡ ಲಡಾಯ ಮಾಡುವ ಬಗ್ಗೆ ಹೋಗಿ ಇದ್ದಾರೆ" ಎಂಬುದಾಗಿ, ಕಿರಿನೆಲ್ಲಿ ಟಿಂಕಮುತ್ತಾ ಎಂಬವನು ಕೋಟೆ ಅರಸುಗಳಿಗೆ ತಿಳಿಸಿದ್ದರಿಂದ, ಈ ಮಾತು ಕೇಳಿ, ಕೋಟೆ ಅರಸುಗಳು ತಮ್ಮ ಕಡೆ ನಾಯಿಮಾರರು ಮುಳ್ಳು ಕುರುಂಬ ರಿಂದ ಸಹಾ ಇನ್ನೂರು ಜನವನ್ನು ಆ ಟಿಂಕಮುತ್ತನ ಸಂಗಡ ಕೊಟ್ಟು, "ರಾತ್ರೆ ವೇಳೆಯದಲ್ಲಿ ಹೋಗಿ, ಕುರುಚಿಯಲ್ಲಿ ಇರುವ ಕೊಡಗಿನ ದೊರೆಗಳ ಕುಟುಂಬ ಮಕ್ಕಳನ್ನು ಕಡಿದುಹಾಕಿ, ಅವರ ಅರಮನೆಯಲ್ಲಿ ಇರುವಂಥಾ ಬದುಕು ಸರ್ವಸ್ವವನ್ನು ಲೂಟಿ ಮಾಡಿಕೊಂಡು ಬಾ" ಎಂಬುದಾಗಿ ಹೇಳಿದ ರಿಂದ, ಅದೇ ಮೇರೆ ಆ ಟಿಂಕಮುತ್ತನು ರಾತಾರಾತ್ರೆಯೇ ಬಂದು, ಆ ಕುರುಚಿ ಗ್ರಾಮದಲ್ಲಿ ಅರಮನೆ ಕುಟುಂಬ ಇದ್ದ ಮನೆಯನ್ನು ಲೂಟಿಮಾಡಿ, ಇಬ್ಬರು ಅರಸತಿಯರನ್ನೂ ವೀರರಾಜೇಂದ್ರ ಒಡೆಯರವರ ಬಲ ಅಣ್ಣನ ಮಗ ಒಬ್ಬರನ್ನೂ, ಎರಡು ಜನ ಬಾಂದೀರನ್ನೂ ಸಹ ಅಂಬಿನಿಂದ ಇಟ್ಟು ಕೊಂದು ಹಾಕಿ, ಅಲ್ಲಿ ಇದ್ದ ಇಪ್ಪತ್ತು ಜನ ಪರಿಯಂತರ ಕೊಡಗರನ್ನು ಕಡಿದು ಹಾಕಿ, ವೀರರಾಜೇಂದ್ರ ಒಡೆಯರವರ ಹಿರಿಯವರು ಪ್ರಾರಬ್ಧದಿಂದ ಸಂಪಾದಿಸಿ ದಂಥ ಅನರ್ಘ್ಯವಾದಂಥ ಒಳ್ಳೆ ಒಳ್ಳೆ ನಗನಾಣ್ಯ, ಹಣಕಾಸು ಯಾವತ್ತನ್ನು ತೆಗೆದುಕೊಂಡು, ಅರಮನೆಗೆ ಬೆಂಕಿಹಾಕಿ ಸುಟ್ಟುಬಿಟ್ಟು, ರಾತಾರಾತ್ರಿಯೆ ಆ ಜನವನ್ನು ಕರೆದುಕೊಂಡು, ಕಾಡುಬಿದ್ದು ಹೋಗಿ, ಆ ಬಗೆ ನಗನಾಣ್ಯದಲ್ಲಿ ಒಳ್ಳೆ ಒಳ್ಳೆ ಅನರ್ಘ್ಯವಾದ ಕೆಲವು ನಗಗಳನ್ನು ಆ ಟಿಂಕಮುತ್ತನು ತೆಗೆದು ಕೊಂಡು, ಉಳಿದ ನಗನಾಣ್ಯ ಯಾವತ್ತೂ ಕೋಟೆ ಅರಸುಗಳಿಗೆ ಕೊಟ್ಟನು.

ಈ ಸಮಾಚಾರ ವೀರರಾಜೇಂದ್ರ ಒಡೆಯರವರು ಕೇಳಿ, ಆ ಕುರ್ಚಿಗೆ ಬಂದು, ನೋಡಬಾರದಂಥಾದ್ದನ್ನು ಕಣ್ಣಿಂದ ನೋಡಿ, ಈ ಕೋಟೆ ಅರಸು ಮಾಡಿದಂಥ ಮಹಾ ದೋಷಕ್ಕೆ ಮಹಾದೇವನೇ ಶಿಕ್ಷಿಸಲಿ ಎಂತ ಮನಸ್ಸಿನಲ್ಲಿ ಧ್ಯಾನಿಸಿ, ಅಲ್ಲಿಂದ ನಾಲ್ಕುನಾಡ ಅರಮನೆಗೆ ಬಂದು, ಕೋಟೆ ಅರಸು ಅರ್ಥ ಪ್ರಾಣ ತೆಗೆದುಕೊಂಡಂಥ, ಅನೇಕ ಕಾಲ ಮರೆಯದಂಥ ಉಪಕಾರ, ಇದಕ್ಕೆ ಪ್ರತಿ ಉಪಕಾರ ಮಾಡುವುದಕ್ಕೆ ನಮಗೆ ಈ ವರೆಗೆ ಸಂದರ್ಭ ಆಗಲಿಲ್ಲಾ ; ಇನ್ನು ಮುಂದೆ ಮಹಾದೇವನ ಕಟಾಕ್ಷ ಒದಗಿದರೆ, ಪ್ರತಿ ಉಪಕಾರ ಮಾಡಬಹುದು ಎಂಬುದಾಗಿ ಹೇಳಿ, ಒಂದು ಅರೆ ತಿಂಗಳು ನಾಲ್ಕುನಾಡ ಅರಮನೆಯಲ್ಲು ಇದ್ದು, ಇದೇ ಮಾಘಮಾಸದಲ್ಲಿ ಕೊಡಗು ಮಂದಿ ಯಾವತ್ತನ್ನು ತೆಗೆದು ಕೊಂಡು, ಭಾಗಮಂಡಲದ ಕೋಟೆಗೆ ಹೋಗಿ, ಮುತ್ತಿಗೆ ಹಾಕಿ, ಮಂಬಾರತ್ತು ಎಂಬ ಮೋಟೆಯಲ್ಲಿ ಫಿರಂಗಿ ಮಡಗಿ, ಆ ಫಿರಂಗಿಯಿಂದ ಖಾಸಾ ವೀರ ರಾಜೇಂದ್ರ ಒಡೆಯರೇ ಶಿಸ್ತು ನೋಡಿ, ಕೋಟೆಗೆ ಇಡುತ್ತಿದ್ದರು, ಇವರ ತಾವ ಒಳಕಿದ್ದ ಮದ್ದುಗಾರರು ಫಿರಂಗಿ ತುಂಬಿ ಕೊಡುತ್ತಾ ಇದ್ದರು. ಆ ಕೋಟೆಯಿಂದ ದೊರೆಗಳ ಮೇಲೆ ಏಳು ಫಿರಂಗಿಯಿಂದ ಗುಂಡು ಇಡುತ್ತಾ ಇದ್ದರು. ಈ ಮೊಹ ನತ್ತು ಮಾಡಿ ಐದು ದಿವಸದಲ್ಲಿ ಆ ಕೋಟೆಯನ್ನು ತೆಗೆದುಕೊಂಡರು. ಆ ಕೋಟೆ ಒಳಗೆ ಇದ್ದ ಫಿರಂಗಿ ಮದ್ದು, ಗುಂಡು, ಸಾಮಾನು ದೊರೆಗಳಿಗೆ ಸಿಕ್ಕಿತು.

ಅಲ್ಲಿ ಕನಕ, ಕಾವೇರಿ, ಸುಜ್ಯೋತಿ ಎಂಬ ಪುಣ್ಯ ನದಿಗಳು ತ್ರಿವೇಣೀ ಸಂಗಮವಾಗಿ ಇರುವಂಥ ಜಾಗದ ಹೆಸರು ಭಾಗಮಂಡಲ. ಅಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ— ಈ ಮೂರು ತ್ರಿಮೂರ್ತಿಗಳಿಗೂ ಮೂರು ದೇವಸ್ಥಾನ ಉಂಟು. ಅದರ ಮೇಲೆ ತಾಮ್ರದ ತಗಡು ಹೊದಿಸಿದೆ. ಆ ದೇವಸ್ಥಾನದ ಸುತ್ತ ಕೋಟೆ ಕಟ್ಟಿ, ಅದರ ಒಳಗೆ ಟೀಪುಸುಲ್ತಾನರ ಕಡೆ ಫೌಜು, ಕಿಲ್ಲೇದಾರ ಸಹ ಇದ್ದರು. ದೊರೆಗಳು ಆ ಕೋಟೆಗೆ ಫಿರಂಗಿಯಿಂದ ಗುಂಡು ಇಡುವಾಗ್ಗೆ ಆ ಮೂರು ದೇವಸ್ಥಾನಕ್ಕೂ ಗುರ್ತಿನ ಬಗ್ಗೆ ಮೂರು ಗುಂಡು ಹೊಡೆದಲ್ಲಿ, ಆ ದೇವ ಸ್ಥಾನಗಳ ಮೇಗಣ ತಾಮ್ರದ ತಗಡು ಕತ್ತರಿಸಿಹೋದ್ದರಿಂದ, ಆ ಕತ್ತರಿಸಿ ಹೋದ ಜಾಗಕ್ಕೆ ಬೆಳ್ಳಿತಗಡು ಹತ್ತಿಸಿರುವಂಥಾದ್ದು ಗುರ್ತು ಹಾಜರು ಇದೆ.

ಆ ಕೋಟೆಯಲ್ಲಿ ಇದ್ದ ಆಯುಧ, ಮದ್ದು, ಗುಂಡು, ಫಿರಂಗಿ ಮುಂತಾದ್ದು ನಾಲ್ಕುನಾಡ ಅರಮನೆಗೆ ಸಾಗಿಸಿ, ಆ ಬಳಿಕ ತುಳುವನಾಡ ಸೀಮೆ ಸಾಧಿಸುವ

ಬಗ್ಗೆ, ಕೊಡಗು ಮಂದಿಯನ್ನು ಹೊಂಬಾಳೆನಾಯಕನ ಸಂಗಡ ಕೂಡಿಸಿ, ಮೆಣಸಿನ ಘಟ್ಟದ ಮಾರ್ಗವಾಗಿ ಕಳುಹಿದಲ್ಲಿ, ಹೊಂಬಾಳೆನಾಯಕನು ಟೀಪು ಸುಲ್ತಾನರ ಫೌಜಿನ ಸಂಗಡ ಲಡಾಯಮಾಡಿ, ಅಮರಸುಳ್ಯದ ಸರಹದ್ದಿನ ಆಚೆ, ಕೊಡೆಯಾಲದ ಈಚೆಗೆ, ನಡು ಮಧ್ಯ ಇರುವಂಥ ಸೀಮೆಯನ್ನು ಕಟ್ಟಿಕೊಂಡು ಮೊಗರ್ನಾಡ ಹೊಳೆ ಬಳಿಯ ಒಡ್ಡು ಕಟ್ಟಿ, ಕೆಲವು ಮಂದಿಯನ್ನು ಠಾಣ್ಯ ಇಟ್ಟು, ಆ ವಿವರಕ್ಕೆ ರಾಜರಿಗೆ ಬಿನ್ನವತ್ತಳೆ ಬರಕೊಂಡಲ್ಲಿ, "ಈಗ ಹೊಸತಾಗಿ ಕಟ್ಟಿರುವ ಸೀಮೆ ಅಮಲನ್ನು ನಿನಗೆ ಮೊಕ್ರೂರು ಮಾಡಿ ಇದೆ. ಕೊಡಗು ಮಂದಿಯಲ್ಲಿ, ಅಲ್ಲಲ್ಲಿ ಠಾಣ್ಯಕ್ಕೆ ಬೇಕಾದ ಮಂದಿ ಇಟ್ಟುಕೊಂಡು, ಉಳಿಕೆ ಮಂದಿಯನ್ನು ಹಜೂರಿಗೆ ಕಳುಹಿಸುವುದು" ಎಂಬುದಾಗಿ, ನಿರೂಪ ಬರೆಸಿ ಕಳುಹಿದರಿಂದ, ಅದೇಮೇರೆ ಬಂದುಬಸ್ತುಮಾಡಿ, ಉಳಿಕೆ ಮಂದಿಯನ್ನು ಕಲಿ ಸಂದ ೪೮೯೩ನೇ ಸಾಧಾರಣ ಸಂವತ್ಸರದ ಚೈತ್ರಮಾಸದಲ್ಲಿ ಕಳುಹಿಸಿ ಕೊಟ್ಟನು. ಆ ಬಳಿಕ ಮಂಡೆಪ್ಪನ ಅಪ್ಪಯ್ಯ ನಗರಹಳ್ಳಿ ಪುಟ್ಟೀಗೌಡಗೆ ಸಹ ಅಪ್ಪಣೆಕೊಟ್ಟದ್ದು : "ಮಹಾದೇವನ ಕಟಾಕ್ಷದಿಂದ ಮಡಿಕೇರಿ ಕೋಟೆ ವಿನಾ ನಮ್ಮ ರಾಜ್ಯ ಯಾವತ್ತು ನಮ್ಮ ಕೈವಶವಾಯಿತು. ಇದಲ್ಲದೆ ತುಳುವ ರಾಜ್ಯದ ಸೀಮೆಯನ್ನು ಹೊಸದಾಗಿ ಸಾಧಿಸಿದೆವು. ಮಡಿಕೇರಿ ಕೋಟೆಯು ನಮ್ಮ ಸಂಸ್ಥಾನದ ಜಾಗವಿದೆ ; ಅಲ್ಲಿ ಜಾಫರ್‌ಕುಲ್ಲಿ ಬೇಗು ಕಿಲ್ಲೇದಾರನು ಫೌಜು ಸಮೇತ ಇದ್ದಾನೆ, ನೀವು ಮಂದಿ ತೆಗೆದುಕೊಂಡು ಹೋಗಿ, ಮಡಿಕೇರಿ ಕೋಟೆಗೆ ರಸದು ಬರುವಂಥ ಪಥ ಮಾರ್ಗಕ್ಕೆಲ್ಲಾ ಮಂದಿ ಇಟ್ಟು, ಮಾರ್ಗ ಕಟ್ಟಿ, ಉಳಿಕೆ ಮಂದಿ ತೆಗೆದುಕೊಂಡುಹೋಗಿ, ಟೀಪುಸುಲ್ತಾನರ ಸೀಮೆ ಸಾಧಿಸುವದೆಂತ, ಅಪ್ಪಣೆಕೊಟ್ಟು ಕಳುಹಿದಲ್ಲಿ, ಅದೇ ಅಪ್ಪಣೆ ಮೇರೆ ಮಂದಿ ತೆಗೆದುಕೊಂಡುಹೋಗಿ, ಮಡಕೇರಿ ಕೋಟೆಗೆ ರಸ್ತು ಬರುವಂಥ ಪಥ ಮಾರ್ಗ ಕ್ಕೆಲ್ಲಾ ಮಂದಿ ಇಟ್ಟು, ಬಂದುಬಸ್ತುಮಾಡಿ, ಟೀಪುಸುಲ್ತಾನರ ಇಲಾಖೆ ಅರಕಲಗೋಡು ಕೊಣನೂರು ಸೀಮೆ ಲೂಟಿ ಮಾಡುತ್ತಾ ಇದ್ದಲ್ಲಿ, ಆ ಎರಡು ತಾಲೂಕಿನ ರೈತರು ಲಾಚಾರಾಗಿ ಬಂದು—"ನಾವು ರೈತರಿದ್ದೇವೆ. ನಮಗೆ ದುಃಖಾ ಕೊಡಬೇಡ. ನಾವು ಟೀಪುಸುಲ್ತಾನರಿಗೆ ಒಂದು ವರಹ ತೆತ್ತರೆ, ನಿಮಗೆ ಒಂದು ರೂಪಾಯಿ ತೆತ್ತೇವು. ಈ ಮೇರೆ ನಮ್ಮ ಎರಡು ತಾಲೂಕಿ ನಿಂದ ಟೀಪುಸುಲ್ತಾನರಿಗೆ ನಾವು ಎಷ್ಟು ವರಹ ಕೊಡುತ್ತಾ ಇದ್ದೇವೋ, ಅಷ್ಟು

ರೂಪಾಯಿ ನಿಮ್ಮ ಸರಕಾರಕ್ಕೆ ತೆತ್ತು ಕೊಟ್ಟೇವು" ಎಂಬುದಾಗಿ, ಆ ಎರಡು ತಾಲೂಕಿನ ರೈತರು ಒಡಂಬಟ್ಟು, ಅದೇ ಮೇರೆ ನಿಗದಿ ಮಾಡಿದ್ದರಿಂದ, ಆ ತಾಲೂಕಿನಲ್ಲಿ ದೌಡು ಮಾಡುವಂಥಾದ್ದು ನಿಲ್ಲಿಸಿ, ಆ ಮಂಡೆಪ್ಪನ ಅಪ್ಪಯ್ಯ, ನಗರಹಳ್ಳಿ ಪುಟ್ಟೇಗೌಡ ಸಹ, ಮಂದಿ ತೆಗೆದುಕೊಂಡು ಐಗೂರು ಸೀಮೆಗೆ ಹೋಗಿ, ಅಲ್ಲಿ ಠಾಣ್ಯ ಇದ್ದ ಟೇಪುಸುಲ್ತಾನರ ಕಡೆ ಜನರನ್ನು ಹೊಡೆದು ಓಡಿಸಿಬಿಟ್ಟು, ಮಂಜಿರಾಬಾದು ತಾಲೂಕಿನ ಕೆಲವು ಸೀಮೆಯನ್ನು ಕಟ್ಟಿಕೊಂಡು, ಮಂಜಿರಾಬಾದು ಸಮೀಪದ ಅರೆಕೆರೆಯಲ್ಲು ಒಡ್ಡು ಕಟ್ಟಿ ಠಾಣ್ಯ ಇಟ್ಟು, ಆ ಠಾಣ್ಯದ ಮಂದಿಗೆ ಸರದಾರನಾಗಿ, ಈ ನಗರಹಳ್ಳಿ ಪುಟ್ಟೇಗೌಡನು ಇದ್ದನು. ಮಂಡೆಪ್ಪನ ಅಪ್ಪಯ್ಯನು ಆ ಸೀಮೆ ವಿಚಾರಿಸಿಕೊಂಡು ಬಂದು ಬಸ್ತುಮಾಡಿಕೊಂಡು ಇದ್ದನು. ಈ ಮೇರೆ ಇರುತ್ತಿದ್ದಲ್ಲಿ, ಟೇಪುಸುಲ್ತಾನರು ಫೌಜು ಸಮೇತ ರಾಮರಾಜರ ಬೆಟ್ಟಕೋಟೆಯನ್ನು ತೆಗೆದುಕೊಳ್ಳಬೇಕು ಎಂಬುದಾಗಿ, ಆ ಬೆಟ್ಟಕೋಟೆ ಸಮೀಪದಲ್ಲಿ ಇಳುಕೊಂಡು, ಮೂರು ದಿವಸದ ಮೇಲೆ ಮೂರನೇ ಜಾವದಲ್ಲಿ ಆರು ಕುಸುಮ್ಮನ್ನು ತೆಗೆದುಕೊಂಡು, ಅಹಂಕಾರದಿಂದ ಹೆಡವಳೆ ಮಾರ್ಗದಿಂದ ಆ ಬೆಟ್ಟಕೋಟೆ ನುಗ್ಗಿ, ಮೂರು ನಾಲ್ಕು ಬತೇರಿಯನ್ನು ಆಕ್ರಮಿಸಿಕೊಂಡು, ಜಗಳಕ್ಕೆ ನಿಂತಲ್ಲಿ, ಮೇಲಣ ಬತೇರಿಗಳಿಂದ ಫಿರಂಗಿ ಗುಂಡು, ಬಂದೂಕಿನ ಗುಂಡು ಸಹ ಇಟ್ಟು, ಕತ್ತಿ ತೆಗೆದುಕೊಂಡು, ಮೇಲೆ ಬಿದ್ದು ಕಡಿಯುತ್ತ ಬಂದಲ್ಲಿ, ಟೇಪುಸುಲ್ತಾನರ ಅಗಾಡಿ ಫೌಜಿನಲ್ಲಿದ್ದ ಜಮಾಬೇಗು ಎಂಬ ಶಿಪಾದಾರನು ಬಿದ್ದುಹೋಗಿ, ಆ ಕೋಟೆ ಮೇಲೆ, ಬತೇರಿಗಳ ಮೇಲೆ ಸಹ ಹತ್ತಿ ಇದ್ದಂಥ ಟೇಪುಸುಲ್ತಾನರ ಫೌಜು ಯಾವತ್ತು ಪೆಟ್ಟು ತಡೆಯಲಾರದೆ, ದಾರಿ ಕಾಣದೆ, ಕೋಟೆ ಮೇಲಣಿಂದ ಕಂದಕದ ಒಳಗೆ ಬಿದ್ದು, ಮೃತವಾದರು. ಟೇಪುಸುಲ್ತಾನರ ಅವರಂಗು ಎಂಬ ಖಾಸಾ ಪಾಲ್ಕಿ, ಖಾಸ ಮೊಹರು ಇದ್ದಂಥ, ಕಲಮ್ದಾನಿ, ಸವಾರಿ ಕುದುರೆ, ಖಾಸಾ ಕತ್ತಿ ಸಹ ಅಲ್ಲಿ ಬಿಟ್ಟು, ಟೇಪುಸುಲ್ತಾನರು ಮುಖಭಂಗಿತರಾಗಿ, ಆ ಕಂದಕದಿಂದ ಗಿಡ ಬಿದ್ದು ಬಂದು, ತಮ್ಮ ತಂಬಿಗೆ ಸೇರಿದರು. ಆ ಕಂದಕದಲ್ಲಿ ಬಹಳ ಮಂದಿ ದೊಡ್ಡ ದೊಡ್ಡ ಸರದಾರರು, ಹೇರಳ ಫೌಜು ಸಹ ಮೃತವಿಟ್ಟು ಹೋದರು. ಆ ಬಳಿಕ ಟೇಪುಸುಲ್ತಾನರು ಬೆಟ್ಟಕೋಟೆ ತೆಗೆದುಕೊಳ್ಳಬೇಕು ಎಂಬುದಾಗಿ, ಅಲ್ಲೇ ಛಾವಣಿ ಮಾಡಿಕೊಂಡು, ಸನ್ನದ್ಧರಾಗುತ್ತಾ ಇದ್ದರು.

ಇತ್ತಲಾಗಿ ತಲಚೇರಿ ಕೋಟೆ ಚೀಫ್ ರಾಬರ್ಟ್ ಟೆಲೆರು ಸಾಹೇಬರು ಕೆಲವು ಫೌಜನ್ನು ತಲಚೇರಿಯಿಂದ ಕಳುಹಿ ಕದನೂರು ಎಂಬ ಜಾಗದಲ್ಲಿ ಟೇಪುಸುಲ್ತಾನರ ಕಡೆ ಠಾಣ್ಯ ಇದ್ದ ಮಂದಿಯನ್ನು ಹೊಡೆದು, ಓಡಿಸಿಬಿಟ್ಟ ಆ ಜಾಗವನ್ನು ತೆಗೆದುಕೊಂಡರು. ಆ ಸಮಯದಲ್ಲಿ ಕಣ್ಣನೂರ ಬಲಿಯಾ ಬೀಬಿಯು ಟೇಪುಸುಲ್ತಾನರ ಕಡೆ ಫಾಜಲ್‌ಖಾನನ ಕುಸುಮ್ಮಿನ ಜನ ಆರು ಸಾವಿರ, ತನ್ನ ಕಡೆ ಮಾಪಿಳ್ಳೇರು ನಾಲ್ಕು ಸಾವಿರ ಜನ ಸಹ ಕೂಡಿಕೊಂಡು ಇದ್ದರಿಂದ, ಚೀಫ್ ರಾಬರ್ಟ್ ಟೆಲೆರು ಸಾಹೇಬರವರು ಆ ಬೀಬಿಗೆ—" ಟೇಪು ಸುಲ್ತಾನರ ಫೌಜು ನೀನು ತೆಗೆದುಕೊಂಡು ಜಗಳಮಾಡುವವಳೋ ? ಅದಲ್ಲಾ, ಟೇಪುಸುಲ್ತಾನರ ದೋಸ್ತಿ ಬಿಟ್ಟು, ಇಂಗ್ರೇಜ ಬಹಾದ್ದರ ಕಂಪನಿಯವರ ಕೂಡೆ ಕೂಡಿ ನಿಲ್ಲುವಳೋ ? " ಎಂಬುದಾಗಿ ಹೇಳಿಕಳುಹಿದ್ದಲ್ಲಿ, ಆ ಬೀಬಿಯು ಟೇಪುಸುಲ್ತಾನರ ಕಡೆ ಫೌಜಿನ ಸರದಾರನ ಕೂಡೆ ಹೇಳಿದ್ದು : " ಇಂಗ್ರೇಜ ಬಹಾದ್ದರವರ ಫೌಜನ್ನು ಉಪಾಯ ತಂತ್ರದಿಂದ ಕರೆಸುತ್ತೇನೆ. ಅವರು ಬಂದಲ್ಲಿ, ನೀವು ನಾವು ಕೂಡಿ ಅವರನ್ನು ಹೊಡೆಯಬೇಕು " ಎಂಬುದಾಗಿ ಹೇಳಿದಲ್ಲಿ, ಅವನು ಒಪ್ಪಿಕೊಂಡದರಿಂದ, ಆ ಬೀಬಿಯು ತಲಚೇರಿ ಸರದಾರ ಚೀಫ್ ರಾಬರ್ಟ್ ಟೆಲೆರು ಸಾಹೇಬರವರಿಗೆ ಹೇಳಿಕಳುಹಿದ ವಿವರ : " ಕಣ್ಣನೂರು ಕೋಟೆ ಒಳಗೆ ಇರುವ ಟೇಪುಸುಲ್ತಾನರ ಫೌಜನ್ನು ಏಳೆಂಟು ದಿವಸದ ಒಳಗೆ ಉಪಾಯದಿಂದ ಕೊಡೆಯಾಲದ ಕಡೆಗೆ ಕಳುಹಿಸಿಬಿಡುತ್ತೇನೆ. ಈ ಮಂದಿ ಕೋಟೆಯಿಂದ ಇಳಿದುಹೋದ ಬಳಿಕ, ಇಂಗ್ರೇಜಿ ಬಹಾದ್ದರರ ಫೌಜು ಕಳುಹಿಕೊಟ್ಟಲ್ಲಿ ಅವರನ್ನು ಕೋಟೆ ಒಳಕ್ಕೆ ಕರಕೊಂಡು, ಕೋಟೆ ಮೇಲೆ ಇಂಗ್ರೇಜಿ ಬಹಾದ್ದರರ ಜಾಂಡೆ ಹಾಕಿಸಿಕೊಳ್ಳುತ್ತೇನೆ " ಎಂಬುದಾಗಿ ಹೇಳಿ ಕಳುಹಿಸಿ, ಆ ಬಳಿಕ ಐದು ದಿವಸದ ಮೇಲೆ, ಬೀಬಿಯು ಆ ಟೇಪುಸುಲ್ತಾನರ ಕಡೆ ಸರದಾರನಿಗೆ ಹೇಳಿದ್ದು : " ನೀವು ನಿಮ್ಮ ಫೌಜು ತೆಗೆದುಕೊಂಡು, ಕೊಡೆಯಾಲಕ್ಕೆ ಹೋಗುತ್ತೇವೆಂಬುದಾಗಿ ಸುದ್ದಿ ಹುಟ್ಟಿಸಿಬಿಟ್ಟು, ನೀವು ಕವಾಯಿಯಲ್ಲಿ ಇಳುಕೊಂಡು ಇರ್ರಿ, ಆ ಬಳಿಕ " ಈ ಮೇರೆ ಟೇಪುಸುಲ್ತಾನರ ಫೌಜು ಕೋಟೆಯಿಂದ ಹೊರಗೆ ಹೋಯಿತು ; ನಿಮ್ಮ ಫೌಜು ತೆಗೆದುಕೊಂಡು ಇಲ್ಲಿಗೆ ಬಂದು ನಾಳೆ ದಿವಸ ಕೋಟೆ ಮೇಲೆ ನಿಮ್ಮ ಜಾಂಡೆ ಹಾಕಿಕೊಳ್ಳಿ " ಎಂಬದಾಗಿ ಹೇಳಿಕಳುಹಿಸುತ್ತೇನೆ ; ಅವರು ಫೌಜು ತೆಗೆದುಕೊಂಡು

ಇಲ್ಲಿಗೆ ಬಂದಲ್ಲಿ ಅವರನ್ನು ಕೋಟೆ ಹೊರಗೆ ಇಳಿಸಿ ಇರುತ್ತೇನೆ. ಆ ಸಮಯ ದಲ್ಲಿ ನೀವು ಫೌಜು ಸಮೇತ ರಾತಾರಾತ್ರಿಯೇ ಬಂದು, ಮಾಪಿಳೇರ ಸಹ ಕೂಡಿಕೊಂಡು ಅವರ ಫೌಜನ್ನು ಹೊಡದು ಜಯಾ ಮಾಡಬೇಕು" ಎಂಬ ದಾಗಿ ಹೇಳಿ, ಆ ಟೇಪುಸುಲ್ತಾನರ ಸರದಾರನ ಕೋಟೆಯಿಂದ ಹೊರಗೆ ಕಳು ಹಿಸಿ ಬಿಟ್ಟು "ಟೇಪುಸುಲ್ತಾನರ ಫೌಜು ಕೋಟೆ ಬಿಟ್ಟು ಹೊರಗೆ ಹೋಯಿತು; ನಿಮ್ಮ ಕಡೆ ಮಂದಿ ಜಲ್ದಿ ಕಳುಹಿಸಿಕೊಟ್ಟು, ಕೋಟೆಗೆ ಇಂಗ್ರೇಜ ಬಹಾದ್ದರ ಜಾಂಡೆ ಹಾಕಿಕೊಳ್ಳಿ" ಎಂಬುದಾಗಿ ಚೀಫ್ ರಾಬರ್ಟ್ ಟೆಲೆರು ಸಾಹೇಬ ರವರಿಗೆ ಹೇಳಿಕಳುಹಿದಲ್ಲಿ, ಆ ಮಾತನ್ನು ನಂಬಿ ಮೇಜರ್ ಡೋ ಸಾಹೇಬ ರವರಿಗೆ, "ನಿಮ್ಮ ಫೌಜು ತೆಗೆದುಕೊಂಡು ಕಣ್ಣನೂರು ಕೋಟೆಗೆ ಹೋಗಿ, ಇಂಗ್ರೇಜ ಜಾಂಡೆ ಹಾಕಿಕೊಳ್ಳಿ" ಎಂಬುದಾಗಿ ಹೇಳಿದ್ದರಿಂದ, ಅದೇ ಮೇರೆ ಆ ಮೇಜರ್ ಡೋ ಸಾಹೇಬರು ತಮ್ಮ ಮಂದಿ ತೆಗೆದುಕೊಂಡು ಬಂದು, ಕಣ್ಣ ನೂರು ಕೋಟೆ ಸಮಿಾಪದಲ್ಲಿ ಇಳುಕೊಂಡಲ್ಲಿ ಆ ಬೀಬಿಯು ಕವಾಯಿ ಎಂಬಲ್ಲಿ ಇಳುಕೊಂಡಿದ್ದ ಟೇಪುಸುಲ್ತಾನರ ಕಡೆ ಸರದಾರನಿಗೆ ಬರೆದುಕಳುಹಿದ ವಿವರ: ಇಂಗ್ರೇಜಿಯವರ ಫೌಜು ಬಂದು ಕೋಟೆ ಸಮಿಾಪದಲ್ಲಿ ಇಳಿದು ಇದೆ. ನಿಮ್ಮ ಫೌಜು ತೆಗೆದುಕೊಂಡು, ರಾತಾರಾತ್ರಿಯೇ ಇಲ್ಲಿಗೆ ಬಂದು, ನಮ್ಮ ಕಡೆ ಮಾಪಿಳ್ಳೆಯವರು ಸಹ ಕೂಡಿಕೊಂಡು, ಇಂಗ್ರೇಜಿಯವರ ಫೌಜನ್ನು ಜಾಯಾ ಮಾಡಿ" ಎಂಬುದಾಗಿ ಬರೆಸಿ ಕಳುಹಿಸಿದ್ದರಿಂದ, ಅದೇ ಮೇರೆ ಆ ಟೇಪುಸುಲ್ತಾ ನರ ಕಡೆ ಸರದಾರನು ಫೌಜು ತೆಗೆದುಕೊಂಡು ಬಂದು, ಮಾಪಿಳ್ಳೆಯವರನ್ನು ಕೂಡಿಕೊಂಡು, ರಾತ್ರೆ ಮೂರು ಜಾವದಮೇಲೆ ಇಂಗ್ರೇಜಿ ಬಹಾದ್ದರರ ಫೌಜಿನ ಮೇಲೆ ಬಿದ್ದು, ಕೆಲವು ಜನಕ್ಕೆ ಜಾಯಾ ಜಖಮಿ ಮಾಡಿದರು. ಅಷ್ಟರಲ್ಲಿ ಇಂಗ್ರೇಜಿ ಬಹಾದ್ದರರ ಫೌಜು ಎಚ್ಚರಿತು, ಈ ದಗಾ ಮಾಡುವದಕ್ಕೆ ಬಂದಂಥ ಟೇಪುಸುಲ್ತಾನರ ಜನಕ್ಕೂ, ಮಾಪಿಳ್ಳೇರಿಗೂ ಚನ್ನಾಗಿ ಪೆಟ್ಟು ಹೊಡೆದಲ್ಲಿ ಮುರದುಹೋಗಿ ಕಣ್ಣನೂರು ಕೋಟೆ ಹೊಕ್ಕರು. ಆ ಬಳಿಕ ಈ ಕಣ್ಣನೂರು ಬೀಬಿಯು ನಮ್ಮ ಫೌಜಿಗೆ ಮೋಸ ಮಾಡಬೇಕು ಎಂಬುದಾಗಿ ಕರೆಸಿದವಳೇ ಹೊರ್ತು, ಕೋಟೆ ಕೊಡುವದಕ್ಕೆ ಕರೆದವಳಲ್ಲ ಎಂಬುದಾಗಿ ಆ ಡೋ ಸಾಹೇಬರು ತಿಳಿದು, ಆ ಬೆಳಿಗ್ಗೆ ತಮ್ಮ ಫೌಜು ಸಮೇತ ತಲಚೇರಿಗೆ ಹೋಗಿ, ಈ ವೃತ್ತಾಂತವೆಲ್ಲಾ ರಾಬರ್ಟ್ ಟೆಲೆರು ಸಾಹೇಬರವರಿಗೆ ಬರದು ಕಳುಹಿದಲ್ಲಿ,

ಅವರು ಈ ವಿವರವೆಲ್ಲಾ ಮುಂಬಾಯಿ ಗೌರ್ನರ್ ಮೇಜರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬರವರಿಗೆ ಬರೆದು ಕಳುಹಿದಲ್ಲಿ; "ಒಳ್ಳೇದು, ಈ ಬಗ್ಗೆ ಮುಂಬಾಯಿ ಫೌಜು ತೆಗೆದುಕೊಂಡು, ಕೆಲವು ದಿವಸದಲ್ಲಿ ಟೇಪು ಸುಲ್ತಾನರ ಮೇಲೆ ಜಗಳಕ್ಕೆ ಹೋಗುವ ಬಗ್ಗೆ ಆ ಕಡೆಗೆ ಬರುತ್ತೇವೆ. ಆವಾಗ್ಗೆ ಆ ಕಣ್ಣನೂರು ಬೀಬಿಗೆ ತಕ್ಕ ಶಿಕ್ಷೆ ಮಾಡಿಸಬಹುದು. ಇದು ತಿಳಿದು, ದಂಡಿಗೆ ಬೇಕಾದ ಸಾಮಾನು, ಗಾಡಿ, ಎತ್ತುಗಳು ಮುಂತಾಗಿ ಜಮಾಯಿಸಿಕೊಂಡು ಇರುವುದು" ಎಂಬುದಾಗಿ, ಜವಾಬು ಬರೆಸಿ ಕಳುಹಿದ್ದರಿಂದ, ಆ ಟಲೆರು ಸಾಹೇಬರು ದಂಡಿಗೆ ಬೇಕಾದ ಕೆಲವು ಸಾಮಾನು ವಿಚಾರಿಸಿ, ತರಿಸಿ ಜಮಾಯಿಸುತ್ತ ಇದ್ದಲ್ಲಿ, ಮಲೆಯಾಳದಲ್ಲಿ ಇರುವ ಎತ್ತುಗಳು ಗಿಡ್ಡರಾಸಿ ಆಗಿ, ಗಾಡಿ ಎಳೆಯುವ ಲಾಯಕು ಅಲ್ಲವಾದ್ದರಿಂದ, ಗಾಡಿ ಎಳೆಯುವ ಲಾಯಕಿನ ದೊಡ್ಡ ಎತ್ತುಗಳ ತಲಾಷು ಮಾಡುತ್ತ ಇದ್ದರು.

ಆ ತರುವಾಯ ಕೊಡಗಿನ ದೊರೆಗಳು ವೀರರಾಜೇಂದ್ರ ಒಡೆಯರವರಿಗೆ ಕೆಲವು ಸಾಮಾನು ಬೇಕಾದ್ದರಿಂದ, "ತಲಚೇರಿ ಪ್ಯಾಟಗೆ ಹೋಗಿ, ಕ್ರಯ ಮೂಲವಾಗಿ ಸಾಮಾನು ತೆಗೆದುಕೊಂಡು, ಒಳ್ಳೆ ಊಚು ಕುದುರೆ ಸಿಕ್ಕಿದರೆ, ಒಂದು ಕುದುರೆಯನ್ನು ಕ್ರಯಕ್ಕೆ ತೆಗೆದುಕೊಂಡು ಬಾ" ಎಂಬುದಾಗಿ, ತಮ್ಮ ಬಳಿ ಇದ್ದ ಮುತ್ತುಭಟ್ಟನ ಕೈಯಲ್ಲಿ ಒಂದು ಯಾದಾಸ್ತು ಬರಕೊಟ್ಟು ಕಳುಹಿದಲ್ಲಿ, ಅವನು ತಲಚೇರಿ ಪ್ಯಾಟಗೆ ಹೋಗಿ, ಆ ಯಾದಾಸ್ತು ಮೇರೆ ಸಾಮಾನು ವಿಚಾರಿಸುತ್ತ ಇದ್ದಲ್ಲಿ, ಈ ಸಮಾಚಾರ ಚೀಫ್ ರಾಬರ್ಟ್ ಟಲೆರು ಸಾಹೇಬರು ಕೇಳಿ, ಈ ಮುತ್ತುಭಟ್ಟನನ್ನು ಕರೆಸಿ, ಟೇಪುಸುಲ್ತಾನರಿಗೂ, ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರಿಗೂ ಆದಂಥ ಜಗಳ ವೃತ್ತಾಂತ ಯಾವ ಮೇರೆ ಎಂಬುದಾಗಿ ಕೇಳಿದಲ್ಲಿ, ಆ ಮುತ್ತುಭಟ್ಟನು ಸವಿಸ್ತಾರವಾಗಿ ಹೇಳಿದಲ್ಲಿ ಅದನ್ನು ಕೇಳಿ ಆ ಸರದಾರರು ಬಹಳ ಸಂತೋಷಪಟ್ಟು, "ಈ ಮೇರೆ ಟೇಪುಸುಲ್ತಾನರು ಕೊಡಗಿನ ದೊರೆಗಳಿಗೆ ಶತ್ರು ಆಗಿದ್ದಾರಷ್ಟೆ. ಅದೇ ಮೇರೆ ಅವರು ಇಂಗ್ರೇಜಿ ಕಂಪನಿ ಸರಕಾರಕ್ಕೂ ಶತ್ರು ಆಗಿದ್ದಾರೆ. ಅದರಿಂದ ಕೊಡಗಿನ ರಾಜರಿಗೂ, ಇಂಗ್ರೇಜಿ ಬಹಾದ್ದರ ಕಂಪನಿ ಸರಕಾರಕ್ಕೂ, ಮಿತ್ರತ್ವ ವಾಂಛಲ್ಯವಿಟ್ಟು ನಡೆಯಬೇಕೆಂಬ ಅಪೇಕ್ಷೆ ನಮಗೆ ಇದೆ. ಇದು ಕಾರಣ ಅವರಿಗೆ ಬೇಕಾದ ಸಾಮಾನು ಸರಂಜಾಮು ಕುದುರೆ

ಸಹ, ಅವರು ನಿನ್ನ ಕೈಯ ಯಾದಾಸ್ತು ಬರಕೊಟ್ಟು ಇರುವ ಮೇರೆ ನಾವು ತರಿಸಿಕೊಡುತ್ತೇವೆ. ನಮ್ಮಲ್ಲಿ ಫಿರಂಗಿ ಗಾಡಿ ಎಳೆಯುವ ಬಗ್ಗೆ ಮಲೆಯಾಳ ಪಾರ್ಶ್ವಾಂತರದಲ್ಲಿ, ದೊಡ್ಡ ಎತ್ತುಗಳು ಸಿಕ್ಕುವದಿಲ್ಲ. ಅಲ್ಲಿ ದೊಡ್ಡದಾಗಿರುವಂಥ ಎತ್ತುಗಳ ವಿಚಾರಿಸಿ, ಕಂಪನಿ ಸರಕಾರಕ್ಕೆ ಕಳುಹಿಕೊಟ್ಟರೆ, ಉಪಕಾರವಾದೀತು" ಎಂಬುದಾಗಿ, ಮುತ್ತುಭಟ್ಟನ ಸಂಗಡ ಬಾಯಿಮಾತಿನಿಂದ ಹೇಳಿ, ಮಹಾರಾಜರಿಗೆ ದೋಸ್ತಿ ಕಾಗದವನ್ನು ಬರೆಸಿ, ಮುತ್ತುಭಟ್ಟನ ಕೈಯಲ್ಲಿ ಕೊಟ್ಟು, ತಲಚೇರಿಯಿಂದ ಕಲಿ ಸಂದ ೪೮೮೨ನೇ ಸಾಧಾರಣ ಸಂವತ್ಸರದ ಚೈತ್ರ ಮಾಸದಲ್ಲು ಮುತ್ತುಭಟ್ಟನ ಕೈಯ ಕಳುಹಿದರಿಂದ, ಆ ಕಾಗದವನ್ನು ತಂದು ಒಪ್ಪಿಸಿ, ಅವರು ಹೇಳಿದಂಥ ಬಾಯಿಮಾತು ಯಾವತ್ತು ಸವಿಸ್ತಾರವಾಗಿ ಶ್ರುತಪಡಿಸಿದಲ್ಲಿ, ಆ ಮಾತು ಕೇಳಿ ರಾಜರಿಗೆ ಕಂಪನಿ ಇಂಗ್ರೇಜಿ ಬಹಾದ್ದರ ಸರಕಾರದ ಮಿತ್ರತ್ವ ಬಳಸಬೇಕೆಂಬ ಮೋಹ ಹುಟ್ಟಿ, ಮುತ್ತುಭಟ್ಟನ ಸಂಗಡ ಹೇಳಿದ್ದು : " ಈ ಮೇರೆ ಅವರು ಬಾಯಿಮಾತಿನಿಂದ ಹೇಳಿಕಳುಹಿದ್ದರಿಂದಲೂ ಕಾಗದ ಬರದು ಕಳುಹಿದ್ದರಿಂದಲೂ, ನಮ್ಮ ಮನಸ್ಸಿಗೆ ಸಮ್ಮತವಿಲ್ಲ. ನಮಗೂ ಕಂಪನಿ ಇಂಗ್ರೇಜಿ ಬಹಾದ್ದರ ಸರಕಾರಕ್ಕೂ ಸಾರೋದ್ಧಾರವಾಗಿ, ಸ್ನೇಹ ಮಿತ್ರತ್ವನಡೆದುಬರಬೇಕೆಂಬ ಮೋಹ ನಮಗೆ ಬಹಳ ಇದೆ. ಅವರಿಗೂ ಈ ಮೇರೆ ಇದ್ದರೆ, ನಾವು ಅವರು ಕೂಡಿ ಭೇಟಿ ಆಗಿ, ಸೂರ್ಯ ಚಂದ್ರ ಇರುವ ಪರ್ಯಂತರಕ್ಕೂ, ಕಂಪನಿ ಇಂಗ್ರೇಜಿ ಬಹಾದ್ದರ ಸರಕಾರಕ್ಕೂ ನಮ್ಮ ಸಂಸ್ಥಾನಕ್ಕೂ ಮಿತ್ರತ್ವ ಸ್ಥಿರವಾಗಿ ನಡದುಬರಬೇಕೆಂಬದಾಗಿ, ಭಾಷಾಪತ್ರಿಕೆ ಎರಡು ಕಡೆಯಿಂದಲೂ ಬರದು, ಎರಡು ಕಡೆಯಲ್ಲೂ ಮಡಗಬೇಕು" ಎಂಬುದಾಗಿ ಬಾಯಿಮಾತಾಗಿಯೂ ಹೇಳಿ, ಅವರ ಕಾಗದಕ್ಕೆ ಜವಾಬು ಸಹಾ ಬರದು, ಮುತ್ತುಭಟ್ಟನ ಕೈಯ ಕೊಟ್ಟು ಕಳುಹಿದಲ್ಲಿ, ಅವನು ರಾಬರ್ಟ್ ಟೆಲೆರು ಸಾಹೇಬರವರ ಬಳಿಗೆ ಹೋಗಿ, ರಾಜರು ಹೇಳಿಕಳುಹಿದಂಥ ಬಾಯಿಮಾತು ಯಾವತ್ತು ವಿವರವಾಗಿ ಆ ಸಾಹೇಬರಿಗೆ ತಿಳಿಸಿ, ಆ ಕಾಗದವನ್ನು ಅವರಿಗೆ ಕೊಟ್ಟಲ್ಲಿ, ಆ ಮಾತಿಗೆ ಟೆಲೆರು ಸಾಹೇಬರು ಮುತ್ತುಭಟ್ಟನ ಸಂಗಡ " ಈ ವಿವರ ಯಾವತ್ತು ಮುಂಬಾಯಿ ಸಂಸ್ಥಾನದಲ್ಲಿರುವ ಗೌರ್ನರ್ ಮೇಜರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ ಬಹಾದ್ದರವರಿಗೆ ಬರೆದು ಕಳುಹಿಸಿ, ಇದಕ್ಕೆ ಜವಾಬನ್ನೂ ದೊರೆಗಳಿಗೆ ಬೇಕಾದ ಕುದುರೆ ಸಹ ಅವಲ್

ಮೋಸುಮಿನಲ್ಲಿ ಮುಂಬಾಯಿಯಿಂದ ತರಿಸಿ, ಕಳುಹಿಸಬಹುದು. ಈಗ ನಮಗೆ ಅಗತ್ಯ ಬೇಕಾಗಿ ಇರುವ ಫಿರಂಗಿ ಗಾಡಿ ಎಳೆಯುವ ಎತ್ತುಗಳನ್ನು ಜಮಾಯಿಸಿ, ಆ ವಿವರಕ್ಕೆ ಬರೆಸಿ ಕಳುಹಿದರೆ, ತರಿಸಿಕೊಂಡೇವು" ಎಂಬದಾಗಿ ಹೇಳಿ, ಪ್ರತಿ ಜವಾಬಾಗಿ ಒಂದು ಕಾಗದವನ್ನು ಬರೆಸಿ, ಮುತ್ತುಭಟ್ಟನ ಕೈಯ ಕೊಟ್ಟು ಪುನಃ ಕಳುಹಿಸಿದ್ದದರಿಂದ, ಅವನು ಬಂದು, ಆ ಸರದಾರರು ಹೇಳಿದ ಮೇರೆ ಬಾಯಿಮಾತು ಯಾವತ್ತು ಶ್ರುತಪಡಿಸಿ, ಆ ಕಾಗದವನ್ನು ಕೊಟ್ಟಲ್ಲಿ ವೀರ ರಾಜೇಂದ್ರ ಒಡೆಯರವರು ಆ ವಿವರ ಯಾವತ್ತು ತಿಳಿದು ಬಹಳ ಸಂತೋಷ ಬಟ್ಟು, ಗಾಡಿ ಎಳೆಯುವಂಥ ಎತ್ತುಗಳು ಕೊಡಗಿನ ಸೀಮೆಯಲ್ಲಿ ಸಿಕ್ಕದ ರಿಂದ, ಟೀಪುಸುಲ್ತಾನರ ಕಡೆ ಎತ್ತುಗಳು ಇದ್ದಂಥ ಸ್ಥಳವನ್ನು ಗೊತ್ತುಹತ್ತಿಸಿ, ಪ್ರಯತ್ನಮಾಡಿ, ಅಲ್ಲಿಂದ ಎಂಟು ನೂರು ಎತ್ತು ಪರಿಯಂತರ ತರಿಸಿ, ಅದರಲ್ಲಿ ಆದು, ಒಳ್ಳೆ ಅನುವಾದಂಥ ಗಾಡಿ ಎಳೆಯುವಂಥ ಎತ್ತು ಐನೂರ ಐವತ್ತೈ ದನ್ನು ವಿಂಗಡವಾಗಿ ಇಟ್ಟು, ಉಳಿಕೆ ಎತ್ತುಗಳನ್ನು ರೈತರಿಗೆ ಹಂಚಿಕೊಟ್ಟು, ಈ ವಿವರ ಟಲಿರು ಸಾಹೇಬರಿಗೆ ಬರೆದುಕಳುಹಿದಲ್ಲಿ, ಅಲ್ಲಿಂದ ಶಿಪಾಯಿಗಳು ಬೇಗಾರಿ ಜನರ ಸಹ ಒಬ್ಬ ಇಂಜನೇರು ಸರದಾರನ ಸಂಗಡ ಕೂಡಿಸಿ ಕಳುಹಿದ್ದ ರಿಂದ, ಅವರು ಬಂದಲ್ಲಿ, ವೀರರಾಜೇಂದ್ರ ಒಡೆಯರವರು ಆ ಆದು ಮಡಗಿಸಿ ಇದ್ದಂಥ ಎತ್ತುಗಳನ್ನು ಅವರ ತಾಬೆಗೆ ಕೊಟ್ಟು ಕಳುಹಿಸಿದರು.

ಆ ಬಳಿಕ ಟಲಿರು ಸಾಹೇಬರವರು ಕೊಡಗಿನ ಸಂಸ್ಥಾನದ ದೊರೆಗಳಿಗೆ ಬರೆಸಿ ಕಳುಹಿದ ಕಾಗದದಲ್ಲಿ : " ತಾವು ಹೇಳಿದ ಪ್ರಕಾರ ಭಾಷಾಪತ್ರಿಕೆ ಬರೆದು ಕೊಡತಕ್ಕ ಬಗ್ಗೆ ಮುಂಬಾಯಿ ಸಂಸ್ಥಾನದಿಂದ ನಮಗೆ ಹುಕುಂ ಬಂದು ಇದೆ. ಅದರಿಂದ ಇಲ್ಲಿಂದ ಒಂದು ಕಂಪನಿ ಶಿಪಾಯಿಗಳು, ನಿಷಾನಿ ಸಹ ಕೂಡಿಸಿ, ಕಪಿತಾನ್ ಬ್ರೋನ್ ಸಾಹೇಬ ಎಂಬ ಸರದಾರರನ್ನು ಕಳುಹಿಸಿ ಇದ್ದೇವೆ. ತಾವು ಇಲ್ಲಿಗೆ ಬಂದು, ತಮ್ಮ ಮುಲಾಖತಿನ ಫಾಯಿದೆಯಿಂದ ಸಂತೋಷಪಡಿಸ ಬೇಕೆಂಬದಾಗಿ" ಬರೆಸಿ ಕಳುಹಿಸಿ ಇದ್ದರು. ಅದೇ ಮೇರೆ ಆ ಕಪಿತಾನ್ ಬ್ರೋನ್ ಸಾಹೇಬರು ಬಂದು ಆ ಕಾಗದವನ್ನು ಕೊಟ್ಟು, ಕೆಲವು ವಿವರ ಬಾಯಿಮಾತಿನಿಂದಲು ಹೇಳಿದರಿಂದ, ವೀರರಾಜೇಂದ್ರ ಒಡೆಯರವರು, ಸರ್ವ ಬಗೆಯಲ್ಲು ಕಂಪನಿ ಇಂಗ್ರೇಜ ಬಹಾದ್ದರ ಸರಕಾರ ನಂಬಿ, ಆ ಸರದಾರರ ಸಂಗಡ, ಇದೇ ಆಶ್ವೀಜ ಶುದ್ಧ ವಿಜಯ ದಶಮಿಯ ದಿವಸ ಕೊಡಗಿನಿಂದ

ಹೊರಟು, ತಲಚೇರಿ ಕೋಟೆಗೆ ಹೋಗಿ, ದೊಡ್ಡ ದೊಡ್ಡ ಸರದಾರರ ಯಾವತ್ತು ಕಂಡು, ಭೇಟಿ ಆಗಿ, ದೋಸ್ತಿ ಪ್ರಸ್ತಾಪವನ್ನು ಮಾಡಿ, ಭಾಷಾಪತ್ರಿಕೆ ಪೂರ್ವೋತ್ತರವಾಗಿ ಮಾತನಾಡಿ, ಒಪ್ಪಿ, ಉಭಯ ಕಡೆಯಿಂದಲೂ ಭಾಷಾ ಪತ್ರಿಕೆ ಬರೆಸಿದ ಕ್ರಮವೆಂತೆಂದರೆ: " ಶ್ರೀಃ ಇಂದ್ಯ ಪ್ರಾಂತ್ಯಕ್ಕೆ ಬಹುಮಾನ ಪಟ್ಟೆ, ಇಂಗ್ರೇಜಿ ಕಂಪನಿ ಹೆಸರಿಗೆ ತಲಚೇರಿ ಕೋಟೆ ವ್ಯೆಯೊರು ರಾಬರ್ಟ್ ಟೆಲೆರು, ಸೇಂಗುಂದ ಮಾರ್ರು ಕೊಡಗಿನ ಹಾಲೇರಿ ವೀರರಾಜ ಅರಸುಗಳು, ತಮ್ಮ ಒಳಗೆ ಒಪ್ಪಿಗೆ ಆಗಿ, ಬರೆದುಕೊಟ್ಟ ನಂಬಿಗೆ ಕಾಗದದ ವಿವರ: ಒಂದನೇ ಕಲಂ: ಸೂರ್‍ಯ ಚಂದ್ರ ಇರುವ ಪರ್‍ಯಂತರಕ್ಕೂ ಇಕ್ಕರ್ತರ ಕಡೆ ವಿಶ್ವಾಸಕ್ಕೂ ಹೆಚ್ಚು ಕಡಮೆ ಬಾರದಂತೆ ನಡೆದುಬರುವಂಥಾದಕ್ಕೆ ಹೆಚ್ಚು ಕಡಮೆ ಬರಲಿಕ್ಕೆ ಇಲ್ಲಾ. ಎರಡನೇ ಕಲಂ: ಟೀಪುಸುಲ್ತಾನನಿಗೂ, ಅವನ ಕಡೆ ಇರುವ ಪಕ್ಷದವರು ಯಾವತ್ತು, ಎರಡು ಕಡೆಯವರು ಅವರು ನಮಗೆ ಶತ್ರು ಎಂತ ಭಾವಿಸಿಕೊಂಡು ಬರಬೇಕು. ಇಂಗ್ರೇಜರಿಗೂ, ಅವನಿಗೂ ನಡೆದುಬರುವಂಥ ಲಡಾಯಿಯಲ್ಲು, ಅರಸುಗಳಿಗೆ ಸಮಯ ಸಿಕ್ಕಿದರೆ, ಶತ್ರುವಿಗೆ ತಮ್ಮಿಂದ ಆಗುವಷ್ಟು ನಾಶಮಾಡುವುದಕ್ಕೆ ಹಾಜರಾಗಿ ಇರಬೇಕು. ಬೇರೆ ಕೊಡಗು ಮಲೆ ದಾರಿ ಇಂಗ್ರೇಜರ ಪಾಳ್ಯ ಒಂದು ಸಮಯಕ್ಕೆ ಹೋಗುವಾಗ್ಗೆ ಸನ್ಮತ ಇರಬೇಕು. ಯಾತರಿಂದ ಎಂದರೆ, ಟೀಪುಸುಲ್ತಾನನ ಕಡೆಗೆ ಹೋಗುವ ಸಮಯ ಬಂದರೆ, ಆವಾಗ್ಗೆ ನಮ್ಮ ಪಾಳ್ಯದವರಿಗೆ ರಾತೀಪು, ಜೀನಸು, ನಿಮ್ಮ ಊರಲ್ಲಿರುವಂಥಾದ್ದು ಸಹಾಯ ಕ್ರಯಕ್ಕೆ ಕೊಡಿಸಿ ಸಹಾಯ ಮಾಡಬೇಕು. ಘಟ್ಟದ ಮೇಲೆ ಟೀಪು ಊರಲ್ಲು ನಮಗೂ ಆತಗೂ ಲಡಾಯಿ ಆಗುವಾಗ್ಗೆ, ರಾಜರು ತಮಗೆ ಕೂಡಿದಷ್ಟು ಬಲ ತೆಗೆದುಕೊಂಡು, ಇಂಗ್ರೇಜರ ಕಡೆಯಲ್ಲು ಕೂಡಿ ಇರಬೇಕು. ಮೂರನೇ ಕಲಂ: ನಮ್ಮ ರಾಜ್ಯದಲ್ಲು ಕಂಪೆನಿಗೆ ಆಗುವಂಥ ಸರಕು ಮರ್ಯಾದೆಯ ಪ್ರಕಾರ ಸಕಾಯ ಕ್ರಯಕ್ಕೆ ಕಂಪನಿಗೆ ಕೊಡುವ ಬಗ್ಗೆ, ಒಪ್ಪಿಗೆ ಆಗಿ ಇದ್ದೇವೆ. ಬೇರೆ ಟೋಪಿಕಾರ ಜಾತಿಗೆ ಯಾರಿಗೂ ವ್ಯಾಪಾರ ಮಾಡುವುದಕ್ಕೆ ಒಪ್ಪಿಗೆ ಇಲ್ಲಾ. ನಾಲ್ಕನೇ ಕಲಂ; ಕಂಪನಿಗೆ ಅನ್ಯೋನ್ಯ ವಿಡಿದು ನಡೆದುಬರುವಂಥ ಅರಸುಗಳ ಪ್ರಕಾರಕ್ಕೆ, ಟೀಪುಸುಲ್ತಾನನ ಒಂದು ಹುಕುಂ ನಿಮ್ಮ ಮೇಲೆ ನಡೆಯದಂತೆ ಕಂಪನಿಯಿಂದ ಆಗುವಂಥ ಪ್ರಯತ್ನ ಮಾಡಿ, ನಿಮ್ಮನ್ನು ಇರಿಸಿಕೊಳ್ಳುತ್ತೇವೆ. ಟೀಪುಗೂ ನಮಗೂ ಒಂದು

ವೇಳೆಗೆ ಒಳ್ಳಿತಾಗಿ ಹೋಗುತ್ತದೆಯಾದರೆ, ತಹಾನಾಮೆ ಬರೆದು ಇಡುವಾಗ್ಗೆ ಅದರಲ್ಲು, ಕೊಡಗಿನ ರಾಜರು ಕಂಪನಿಗೆ ಅನ್ಯೋನ್ಯವಿಡಿದು ನಡೆದುಬರು ವಂಥಾದ್ದು ಅವರ ಮೇಲೆ ಆತನು ಒಂದು ಜೋರಾವರಿಯು ನಡಸದಂತೆ ಅದರಲ್ಲು ಬರೆಸಿಯೇವು. ಐದನೇ ಕಲಂ: ರಾಜರಿಗೆ ಒಂದು ಸಮಯಕ್ಕೆ ಇಲ್ಲಿಗೆ ಬರಬೇಕಾದರೆ, ಅವರ ಕುಟುಂಬ ಮುಂತಾಗಿ, ಆ ಊರಲ್ಲಿರುವ ರೈತರ ಕುಟುಂಬ ಮುಂತಾಗಿ ಘಟ್ಟದ ಕೆಳಗೆ ಬಂದಲ್ಲಿ, ಇಲ್ಲಿಂದ ಬಂದು ಗಾಡದಿ ಶಿಪಾಯಿಗಳ ಕಳುಹಿಸಿಕೊಟ್ಟು, ದಾರಿಮಾರ್ಗದಲ್ಲಿ ಒಂದು ಅಟಕ ಆಗದಂತೆ ತಂದು, ತಲಚೇರಿಯಲ್ಲು ಒಂದು ಮನೆ ಸಹ ಬಿಡಿಸಿಕೊಟ್ಟು, ರಾಜಸ್ಥಿತಿ ಸೌಖ್ಯವಾಗುವ ಪರಿಯಂತರ ರಕ್ಷಣೆಯ ಮಾಡಿ, ನಿಲ್ಲಿಸಿಕೊಳ್ಳುತ್ತಾ ಇದೆ. ಪುನಃ ರಾಜಸ್ಥಿತಿ ಸೌಖ್ಯವಾಗುತ್ತಲೆ, ನಿಮ್ಮ ಊರಿಗೆ ಸಂಗಡ ಮನುಷ್ಯರ ಕೂಡಿಸಿ, ಚನ್ನಾಗಿ ಕಳುಹಿಕೊಡುವಲ್ಲಿ ಅಂತರವಿಲ್ಲಾ. ಈ ಕಾರ್ಯಕ್ಕೆ ಅನ್ಯೋನ್ಯ ನಡೆದುಬರುವಲ್ಲಿ, ಎಂದಿಗೂ ಹೆಚ್ಚು ಕಡಿಮೆ ಬಾರದಂತೆ, ಇಕ್ಕರ್ತ ರಲ್ಲೂ ಅಂತರ ಬರಲಿಕ್ಕಿಲ್ಲಾ. ಈ ಕಾರ್ಯಕ್ಕೆ ಎರಡು ಕಡೆಯುವರಿಗೂ ಸಾಕ್ಷಿ: ಶ್ರೀ ದೇವರು, ಸೂರ್ಯ, ಚಂದ್ರ, ಭೂಮಿ ಸಾಕ್ಷಿ. ಸಾಧಾರಣ ಸಂವತ್ಸರದ ಆಶ್ವೀಜ. ಬ. ೫ರಲ್ಲು, ತಲಚೇರಿಯಲ್ಲಿರುವಂಥ ಮ್ಯೆಯೂರ್ ರಾಬರ್ಟ್‌ಟಲೆರರು ಕಂಪನಿ ಹೆಸರಿಗೆ, ಬಂಗಾಳದ ಗೌರ್‍ನರ್ ಜನರಲರ ಹೆಸರಿಗೂ, ಮುಂಬಾಯಿ ಗೌರ್‍ನರರ ಹೆಸರಿಗೂ ತಲಚೇರಿಯಲ್ಲು ಇರುವಂಥ ಮ್ಯೆಯೂರ ಕಂಸಲದಾರ್‍ರೂ ಕೊಡಗಿನ ಹಾಲೇರಿ ವೀರರಾಜೇಂದ್ರ ರಾಜರೂ ಒಂದು ಮನಸಾಗಿ ಈ ವರುಷ, ಈ ತಿಂಗಳು ದಿನದಲ್ಲು ಬರೆದು ಇಟ್ಟ ನಿಶ್ಚಯುಕಾಗದಕ್ಕೆ ನಮ್ಮ ಹೆಸರಲ್ಲು ಗುರ್ತು ಹಾಕಿ, ಕಂಪನಿ ಮೊಹರ ಮಾಡಿ, ಎರಡು ಕಡೆಗೂ ಬರೆದು ಕೊಟ್ಟು ಇದ್ದೇವೆ. ಶ್ರೀ ಶ್ರೀ ಶ್ರೀ ಶ್ರೀ ಶ್ರೀ. ಈ ಮೇರೆ ಉಭಯ ಕಡೆಯಿಂದಲೂ ಎರಡು ಭಾಷಾಪತ್ರ ಬರೆಸಿ, ಅದಕ್ಕೆ ಉಭಯ ಕಡೆ, ಅರಮನೆ ಮೊಹರ ದಸ್ಕತ್ತು ಮಾಡಿ, ಅದರಲ್ಲು ಒಂದನ್ನು ತಲಚೇರಿಯಲ್ಲು ಮಡಗಿ ಮತ್ತೊಂದು ವೀರ ರಾಜೇಂದ್ರ ಒಡೆಯರವರ ಕೈಯ ಕೊಟ್ಟು, ಜನರಲ್ ಸಾಹೇಬರು ಕಳುಹಿದ ಕುದುರೆಯನ್ನು ಕೊಟ್ಟು, ಉಭಯ ಕಡೆಯಿಂದಲೂ ಉಡುಗರೆ ಉತ್ಸಾಹವನ್ನು ಮಾಡಿ, ಪುನಃ ಹೊರಟು ಬರುವಾಗ್ಗೆ ಅದೇ ಕಪಿತಾನ್ ಬ್ರೋನ್ ಸಾಹೇಬ ರನ್ನೂ ಒಂದು ಕಂಪನಿ ಜನ ಸಹ ರಾಜರವರ ಸಂಗಡ ಕೂಡಿಸಿಕೊಟ್ಟು, ಕೊಡ ಗಿನ ರಾಜ್ಯಕ್ಕೆ ಕಳುಹಿಸಿಕೊಟ್ಟರು. ಅದೇ ಮೇರೆ ದೊರೆಗಳವರು ಆ ಕಪಿತಾನ್

ಬ್ರೋನ್ ಸಾಹೇಬರು ಸಹ ಬಂದು ಅರಮನೆಗೆ ತಲುಪಿದ ಬಳಿಕ, ಆ ಕಪಿತಾನ್ ಸಾಹೇಬರು ತಿರುಗಿ ಹೋಗುವಾಗ್ಗೆ, ರಾಜರವರ ಕ್ಷೇಮಸಮಾಚಾರಕ್ಕೆ ಕಾಗದವನ್ನು ಬರೆಸಿ, ತೆಗೆದುಕೊಂಡು ಹೋಗಿ, ತಲಚೇರಿ ಕೋಟೆ ಸರದಾರರು ಚೀಫ್ ರಾಬರ್ಟ್ ಟೆಲರು ಸಾಹೇಬರವರಿಗೆ ಕೊಟ್ಟರು.

ಅಷ್ಟರಲ್ಲಿ ಮಡಿಕೇರಿ ಕೋಟೆಯಲ್ಲು ಇರುವ ಟೀಪುಸುಲ್ತಾನರ ಕಡೆ ಮಂದಿಗೆ ರಸ್ತು ಮುಸ್ತೈದೆ ತೀರಿಹೋಗಿ, ಪಥಮಾರ್ಗ ಬಂದಾಗಿ ಹೋದದರಿಂದ, ಮಡಿಕೇರಿ ಕೋಟೆಯಲ್ಲು ಇದ್ದ ಜಾಫರ್‌ಕುಲ್ಲಿ ಬೇಗ್ ಕಿಲ್ಲೇದಾರನು, ಈ ರಸ್ತು ತೀರಿಹೋದ ಪೂರ್ವೋತ್ತರವಾಗಿ, ಅರ್ಜಿ ಬರೆದು ಕಳ್ಳಮಾರ್ಗವಾಗಿ ಟೀಪುಸುಲ್ತಾನರ ಬಳಿಗೆ ಕಳುಹಿದ್ದರಿಂದ, ಅವರು ಖಾದರ್‌ಖಾನ್ ಕೈಸಗಿ ಸಂಗಡ ಭಾರಿ ಫೌಜನ್ನು ಕೂಡಿಸಿ, ಕೊಡೆಯಾಲದ ಫೌಜುದಾರ ನತ್ತಡಖಾನ್ ಮಹಮ್ಮದ ಹುಸೇನಿ ಬಿಂತೂರಿ ರಸ್ತಿನ ಸಾಮಾನು ಸರಂಜಾಮು ಸಹವಾಗಿ, ಮಡಿಕೇರಿಗೆ ಕಳುಹಿದಲ್ಲಿ, ಅದೇ ಮೇರೆ ಖಾದರ್‌ಖಾನ್ ಕೈಸಗಿ ಭಾರಿ ಫೌಜು ಸಮೇತ ರಸ್ತು ತೆಗೆದುಕೊಂಡು, ಕೊಡಗಿನ ಸೀಮೆ ಅವರು ಮುಳ್ಳುಸೋಗೆ ಹೊಳೆ ಕಡಾ ದಾಟಿ, ಈಚೆ ತಡಿಯಲ್ಲು ಇಳುಕೊಂಡಲ್ಲಿ ಈ ಸಮಾಚಾರವನ್ನು ವೀರರಾಜೇಂದ್ರ ಒಡೆಯರವರು ಕೇಳಿ, ಕೊಡಗು ಮಂದಿಯನ್ನು ತೆಗೆದು ಕೊಂಡು, ಖಾಸಾ ತಾವೇ ಹೊರಟುಹೋಗಿ, ಆ ರಸ್ತು ಬರುವ ಜಾಗದಲ್ಲಿ, ಚೂದಿಚಾವಡಿಯೆಂಬ ಜಾಗದಲ್ಲಿ ಒಡ್ಡುತಳಿ ಕಟ್ಟಿ ಲಡಾಯಿಕ್ಕೆ ಕಾದು ಇದ್ದರು. ಅಷ್ಟರಲ್ಲಿ ಆ ಖಾದರ್‌ಖಾನನು ಫೌಜು ಸಮೇತ ರಸ್ತು ಸಾಗಿಸಿಕೊಂಡು, ಮೂರನೆ ದಿವಸ ಬೆಳಿಗ್ಗೆ ಎರಡು ಅರಗಳಿಗೆ ಹೊತ್ತಿನಲ್ಲಿ ಬೂದಿಚಾವಡಿಗೆ ಮುಟ್ಟಿದಲ್ಲಿ, ಜಗಳಮಾಡಿ, ಆ ಒಡ್ಡಿಗೆ ಹಲ್ಲಾ ಹತ್ತುವದಕ್ಕೆ ಬಂದಲ್ಲಿ, ಕೊಡಗು ಜನಕ್ಕೂ ಆ ಫೌಜಿಗೂ ಹೇರಳ ಲಡಾಯಿವಾಗಿ, ಕೋವಿ–ಗುಂಡಿನ ಲಡಾಯಿ ನಿಂತು, ಕೈಬೆರಸಿ, ಕತ್ತಿಯಿಂದ ಐದು ಘಳಿಗೆ ಪರಿಯಂತರ ಲಡಾಯಿವಾಗಿ, ಟೀಪುಸುಲ್ತಾನರ ಕಡೆ ಐನೂರು ಜನ ಮೃತವಾಗಿ, ಇನ್ನೂರು ಜನಕ್ಕೆ ಜಖಮಿ ಆಗಿ, ಕಡೆಗೆ ಪೆಟ್ಟು ತಡೆಯಲಾರದೆ ಓಡಿಹೋಗಿ, ಖಾದರ್‌ಖಾನ ಕೈಸಗಿಯು ಕೆಲವು ಮಂದಿ ತೆಗೆದುಕೊಂಡು, ಪಿಚಾಡಿಯಲ್ಲು ನಿಂತು ಇದ್ದಲ್ಲಿಗೆ ಕೂಡಿದರು.

ಆ ಖಾದರ್‌ಖಾನನು ಈ ಗಾಬರಿ ಆಗಿ ಬಂದ ಮಂದಿಗೆ ಸಮುದಾಯಿಸಿ, ಯಾವತ್ತು ದಂಡು ಒಟ್ಟುಗೂಡಿಕೊಂಡು, ಅಲ್ಲಿಗೆ ಸಮೀಪದಲ್ಲು ಇದ್ದ ಚಿಕ್ಕ

ದೊಂದು ಗುಡ್ಡೆ ಹತ್ತಿ, ಅದರಲ್ಲು ದಂಡು ಇಳುಕೊಂಡು, ದಂಡಿನ ಸುತ್ತಾ ರಸ್ತು ತುಂಬಿದಂಥ ಗೋಣಿಗಳನ್ನು ಕೋಟೆ ಕಟ್ಟಿದ ಹಾಗೆ ನಿಟ್ಟು ಒಟ್ಟಿ, ಅದರ ಆಶ್ರಯದೊಳಗೆ ಹೊಕ್ಕೊಂಡು, ಸಾಯಂಕಾಲದ ಪರಿಯಂತರ ಜಗಳ ಮಾಡುತ್ತಿದ್ದನು.

ಆ ಬಳಿಕ, ದಂಡಿನ ಜನ ಪುನಶ್ಚ ಹೋಗದಂತೆ, ದಂಡಿನ ಸುತ್ತಲೂ ದೊರೆಗಳು ತಮ್ಮ ಕಡೆ ಕೊಡಗು ಮಂದಿಯನ್ನು ಮುತ್ತಿಗೆ ಹಾಕಿಸಿದಲ್ಲಿ, ಕೊಡಗು ಮಂದಿಗೆ ಗೊತ್ತುಗಾರರಾಗಿ ಇರುವಂಥವರು ರಾಜರ ಬಳಿಗೆ ಬಂದು, "ನಮಗೆ ಅಪ್ಪಣೆ ಆದರೆ ಈ ರಾತ್ರೆ ಬೆಳಗಿನ ಜಾವದಲ್ಲಿ ಅವರ ದಂಡಿನ ಮೇಲೆ ಬಿದ್ದು, ಒಂದೊಂದು ಕೋವಿಗುಂಡು ಇಟ್ಟು, ಆಮೇಲೆ ಕತ್ತಿಯಿಂದ ಕಡಿದು, ಅವರ ದಂಡನ್ನು ಮುಳುಗಿಸುತ್ತಾ ಇದ್ದೇವೆ. ಆ ದಂಡಿನಲ್ಲಿರುವಂಥ ಸಾಮಾನು ಸರಂಜಾಮು ಏನು ಇದ್ದಾಗ್ಯೂ, ಲಡಾಯಿ ಮಾಡುವ ಮಂದಿಗೆ ಮಾಫು ಕೊಡಿಸಬೇಕು" ಎಂಬದಾಗಿ, ಅರಿಕೆ ಮಾಡಿ ಅಪ್ಪಣೆ ಕೇಳಿದಲ್ಲಿ, ಆ ಮಾತಿಗೆ ರಾಜರು ಒಡಂಬಟ್ಟು ಅಪ್ಪಣೆ ಕೊಡಿಸಿದ ವಿವರ: "ಪ್ರಾಕು ನಾವು ಟೀಪುಸುಲ್ತಾನರ ಇಲಾಖೆ ಪೆರಿಯಾಪಟ್ಟಣದಲ್ಲು ಇರುವಾಗ್ಗೆ ಒಂದು ದಿನ ನಂಜರಾಯಪಟ್ಟಣದ ಪಾಶ್ವಾರ್ಂತರಕ್ಕೆ ಬೇಟೆಗೆ ಹೋಗಿ, ಸಾಯಂಕಾಲವಾಗಿ ಪುನಃ ಹೋಗುವದಕ್ಕೆ ಸಂದರ್ಭ ಆಗದೆ ಉಳುಕೊಂಡು ಇದ್ದಲ್ಲಿ, ಖಾದರ್ ಖಾನ್ ಕೈಸಗಿಯು ನಮ್ಮ ಬಳಿಗೆ ಬಂದು, ನಮ್ಮನ್ನು ಕರಕೊಂಡು ಕುಶಾಬಿ ನಗರಕ್ಕೆ ಹೋಗಿ, ಬೆಳಿಗ್ಗೆ, ಸಾಯಂಕಾಲಕ್ಕೆ ಎರಡು ಹೊತ್ತಿನ ಅಡಿಗೆ ಶೋಭ ಸ್ಕರವನ್ನು ಕೊಟ್ಟು ಇದ್ದಾನೆ. ಈ ಸಮಯದಲ್ಲಿ ನಾವು ಅವನ ಪ್ರಾಣ ಉಪಕಾರ ಮಾಡಬೇಕಾದ್ದರಿಂದ, ನೀವು ಹೇಳಿದ ಹಾಗೆ ಬೆಳಗಿನ ಜಾವದಲ್ಲಿ ಟೀಪುಸುಲ್ತಾನರ ಫೌಜಿನ ಮೇಲೆ ಬಿದ್ದು, ನಿಗ್ರಹಿಸಿ, ಆ ಖಾದರ್ ಖಾನ್ ಕೈಸಗಿ ಎಂಬ ಸರದಾರನನ್ನು, ಪ್ರಾಣ ಬೆರಸಿ, ನಮಗೆ ತಂದುಕೊಟ್ಟರೆ, ಆ ದಂಡಿನಲ್ಲಿ ಇದ್ದ ಸಾಮಾನು ಯಾವತ್ತು ನಿಮಗೆ ಮಾಫು ಕೊಡಿಸಬಹುದು" ಎಂಬುದಾಗಿ ಹೇಳಿದಲ್ಲಿ, ಆ ಗೊತ್ತುಗಾರರು ಹೇಳಿಕೊಂಡದ್ದು: "ನಾವು ಕತ್ತಲೆ ವೇಳೆಯಲ್ಲಿ ಹೋಗಿ, ಅವರ ದಂಡಿನ ಮೇಲೆ ಬಿದ್ದು, ಕೈಬೆರಸಿ ಕಡಿಯು ವಾಗ್ಗೆ ಅವರ ಸರದಾರ ಖಾದರ್ ಖಾನ್ ಕೈಸಗಿ ಇಂಥಾವ ಎಂಬುದಾಗಿ ನೆಪ್ಪು ಕಾಣತಕ್ಕದ್ದು ಹೇಗೆ? ಕಾಣದೆ ಮೋಸವಾಗಿ ಹೋದರೆ, ಹೋಯಿತು. ಜೀವ

ಸಹಿತ ಈ ಕಡೆ ಮಂದಿ ಕೈಗೆ ಸಿಕ್ಕಿದರೆ, ತಮಗೆ ತಂದು ಒಪ್ಪಿಸುತ್ತೇವೆ" ಎಂಬುದಾಗಿ ಅರಿಕೆ ಮಾಡಿದಲ್ಲಿ, ಈ ಮಾತಿಗೆ ಮಹಾರಾಜರು ಒಪ್ಪದೆ, "ಹಾಗಾದರೆ ನಾವು ಮೂರಾವರ್ತಿ ಖಾದರ್‌ಖಾನನ ಹೆಸರು ಹಿಡಿಸಿ ಕರೆಸುತ್ತೇವೆ, ಅವನ ಅದೃಷ್ಟ ಚನ್ನಾಗಿ ಇದ್ದು ಬಂದರೆ, ಸರಿ; ಇಲ್ಲದಿದ್ದರೆ ನೀವು ಹೇಳಿದ ಮೇರೆ ನಾವು ಒಪ್ಪಿ ಇದ್ದೇವೆ. ಹಾಗೆ ಮಾಡಿ" ಎಂಬುದಾಗಿ ಅಪ್ಪಣೆ ಕೊಟ್ಟು, ಆ ಬಳಿಕ ಎರಡು ಜನ ಹತ್ತಿರ ಇದ್ದವರನ್ನು, ಅವರ ದಂಡಿನ ಸಮಿಾಪಕ್ಕೆ ಹೋಗಿ, "ಪ್ರಾಕು ದೊರೆಗಳು ಶಿಕಾರಿಗೆ ಬಂದು ಇದ್ದಾಗ್ಗೆ, ಅಡಿಗೆ ಶೋಭಸ್ಕರ ಕೊಟ್ಟು ಉಪಕಾರ ಮಾಡಿ ಇದ್ದೀರಿ; ಆದ್ದರಿಂದ ನಿಮಗೆ ಪ್ರಾಣ ಉಪಕಾರ ಮಾಡಬೇಕು ಎಂಬ ಮೋಹ ನಮ್ಮ ದೊರೆಗಳಿಗೆ ಹುಟ್ಟಿ ಇದೆ. ಈ ಸಮಯದಲ್ಲಿ ನೀವು ಶರಣಾಗತರಾಗಿ, ದೊರೆಗಳ ಬಳಿಗೆ ಬಂದರೆ, ಕ್ಷೇಮ ಇದೆ. ಇಲ್ಲದಿದ್ದರೆ ಎರಡು ಘಳಿಗೆ ಒಳಗೆ ನಿಮ್ಮ ಪ್ರಾಣ ವ್ಯರ್ಥವಾಗುತ್ತದೆ" ಎಂಬುದಾಗಿ ಕರೆದು ಹೇಳುವಂತೆ ಅಪ್ಪಣೆ ಕೊಟ್ಟು ಕಳುಹಿದಲ್ಲಿ, ಆ ಜನ ಹೋಗಿ, ಅದೇ ಮೇರೆ ಕರೆದು ಹೇಳಿದಲ್ಲಿ, ಈ ಮಾತು ಕೇಳಿದಾಕ್ಷಣ ಆ ಖಾದರ್‌ಖಾನ್ ಕೈಸಗಿ, ನತ್ತಡಖಾನ್, ಮಹಮ್ಮದ್ ಹುಸೇನ್ ಬಿಂತೂರಿ, ಅಮಲುದಾರ ರಜಬಲ್ಲಿ ಸಹ, ಈ ನಾಲ್ವರು ತಮ್ಮ ದಂಡಿನಿಂದ ಹೊರಟು, ವೀರರಾಜೇಂದ್ರ ಒಡೆಯರವರಿಗೆ ಶರಣಾಗತರಾಗಿ, ಬಂದು ಕಂಡಲ್ಲಿ, ಆ ಖಾದರ್‌ಖಾನನಿಗೆ ದೊರೆಗಳು ಅಪ್ಪಣೆ ಕೊಟ್ಟದ್ದು : "ಒಂದು ದಿವಸ ನೀನು ನಮಗೆ ಉಪಕಾರ ಮಾಡಿ ಇದ್ದೀಯಷ್ಟೆ. ಅದರ ಬದಲು ನಿನಗೂ ನಿನ್ನ ನೆಂಟರಿಷ್ಟರಿಗೂ, ಮಾನ ಪ್ರಾಣ ಉಳಿಸಿಬಿಟ್ಟು ಕಳುಹುತ್ತಾ ಇದ್ದೇವೆ. ಉಳಿಕೆ ಟೇಪುಸುಲ್ತಾನರ ಕಡೆ ಫೌಜನ್ನು ನಿಗ್ರಹಿಸಿ, ರಸ್ತು ಸಾಮಾನು ಯಾವತ್ತು ನಮ್ಮ ಮಂದಿಗೆ ಮಾಫು ಕೊಡಿಸುತ್ತೇವೆ" ಎಂಬದಾಗಿ, ಅಪ್ಪಣೆ ಕೊಟ್ಟಲ್ಲಿ, ಆ ಮಾತಿಗೆ ಖಾದರ್‌ಖಾನನು ಅರಿಕೆ ಮಾಡಿಕೊಂಡದ್ದು : "ಈ ದಂಡು ರಸ್ತು ಸಹ ಅತಂತ್ರವಾದಮೇಲೆ, ಟೇಪುಸುಲ್ತಾನರ ಬಳಿಗೆ ಯಾವ ಮೇರೆ ಹೋಗಬೇಕು ? ಇಲ್ಲಿಂದ ನನ್ನ ಪ್ರಾಣ ಉಳಿಸಿಕೊಂಡು ಹೋದಾಗ್ಯೂ, ನನ್ನ ಕುಟುಂಬ ಮಕ್ಕಳ ಪ್ರಾಣ ಸಹಿತ ಉಳಿಸಲಿಕ್ಕೆ ಇಲ್ಲ. ಈ ಬಗ್ಗೆ ಪ್ರಾಣ ಉಳಿಸಬೇಕು ಎಂಬುದಾಗಿ, ದಯವಿದ್ದರೆ, ಸಾಮಾನು, ಸರಂಜಾಮು, ದಂಡು ಸಮೇತ ಪ್ರಾಣ ಉಳಿಸುವ ಮಾರ್ಗದಿಂದ ಬಿಟ್ಟು

ಕೊಟ್ಟರೆ, ಈ ರಸ್ತನ್ನು ಮಡಿಕೇರಿ ಕೋಟೆಗೆ ಹಾಕಿ, ಪುನಃ ಫೌಜು ಸಮೇತ ಪಟ್ಟಣಕ್ಕೆ ಹೋದೇನು. ಈ ಮಾನ-ಪ್ರಾಣ ಉಳಿಸಿದ ಉಪಕಾರ ನನ್ನ ಜೀವ ಇರುವ ಪರಿಯಂತರ ಮರೆಯಲಿಕ್ಕೆ ಇಲ್ಲ" ಎಂಬುದಾಗಿ ಅರಿಕೆ ಮಾಡಿ ಕೊಂಡದರಿಂದ, ಆ ಮಾತನ್ನು ರಾಜರು ಚಿತ್ತಕ್ಕೆ ತೆಗೆದುಕೊಂಡು, ಕಾರೆಕಾರ ಕಾಂಗೆರ ಐಯ್ಯಣ್ಣನಿಗೆ ಅಪ್ಪಣೆ ಕೊಟ್ಟ ವಿವರ : "ನೀನು ಈ ದಂಡಿನ ಸಂಗಡ ಮಡಿಕೇರಿ ಪರಿಯಂತರ ಮಾರ್ಗದ ಒಡ್ಡು ತಳಿಗಳಲ್ಲಿ ಇರುವ ಕಾವಲುಮಂದಿ ಏನಾದರೂ ಅಡ್ಡಿ ಹರಕತ್ತು ಮಾಡದೆ ಬಿಡುವಂತೆ ತಾಕೀದಿ ಮಾಡಿಕೊಂಡು ಹೋಗಿ, ಕಿಲ್ಲೇದಾರ ಜಾಫರ್‌ಕುಲ್ಲಿ ಬೇಗು ನಮ್ಮ ಸಂಗಡ ಜಗಳ ಮಾಡತಕ್ಕ ವನೋ, ಅದಲ್ಲಾ ಸಲ್ಲಾ ಮಾಡಿಕೊಂಡು, ಕೋಟೆ ಬಿಟ್ಟು, ಈ ದಂಡಿನ ಸಂಗಡ ಹೋಗತಕ್ಕವನೊ ಎಂಬದಾಗಿ ಅವನ ಸಂಗಡ ಕೇಳಿ, ಅಲ್ಲಿಂದ ಈ ದಂಡನ್ನು ನಮ್ಮ ಗಡಿ ಮುಳ್ಳುಸೋಗೆ ಹೊಳೆ ಕಡವಿನ ಆಚೆಗೆ ದಾಟಿಸಿಬಿಟ್ಟು, ಆ ವಿವರ ಅರಿಕೆ ಮಾಡು" ಎಂಬದಾಗಿ, ಅಪ್ಪಣೆ ಕೊಟ್ಟಲ್ಲಿ, ಆ ಐಯ್ಯಣ್ಣನು ಆದೇ ಮೇರೆ ಆ ದಂಡಿನ ಸಂಗಡ ಇದ್ದುಕೊಂಡು, ರಸ್ತಿನ ಸಾಮಾನವನ್ನು ನಿಗೆವಾನಿಯಿಂದ ಮಡಿಕೇರಿಗೆ ತಲಪಿಸಿ, ದೊರೆಗಳು ಅಪ್ಪಣೆ ಕೊಟ್ಟು ಇದ್ದ ವಿವರವನ್ನು ಆ ಜಾಫರ್‌ಕುಲ್ಲಿ ಬೇಗನ ಸಂಗಡ ಹೇಳಿದಲ್ಲಿ, ಆತನು ಹೇಳಿದ್ದು : "ಕೋಟೇಲಿ ಇದ್ದ ರಸ್ತು ಯಾವತ್ತು ಮುಗಿದುಹೋಗಿ ಇತ್ತು. ಇಂದು ನಾಳೆ ಕೋಟೆಯನ್ನು ಒಪ್ಪಿಸಿ ಹೋಗಬೇಕೆಂಬ ಯೋಚನೆ ವಳಕ್ಕೆ ಇದ್ದೆನು. ಅಷ್ಟರಲ್ಲಿ ದೊರೆಗಳು ಖಾದರ್‌ಖಾನನ ಮೇಲೆ ದಯವಿಟ್ಟು, ರಸ್ತಿನ ಸರಂಜಾಮು ತಾವೇ ಮಡಿಕೇರಿ ಕೋಟೆಗೆ ತಲಪಿಸಿ ಇದ್ದಾರೆ. ಈ ಮೇರೆ ರಸ್ತು ಇದ್ದಂತೆ ಕೋಟೆ ಒಪ್ಪಿಸಿಬಿಟ್ಟು, ನಾವು ಟೇಪುಸುಲ್ತಾನರ ಬಳಿಗೆ ಹೋದರೆ, ನಮ್ಮ ಕುಟುಂಬ ಮಕ್ಕಳ ಪ್ರಾಣ ಉಳಿಸಲಿಕ್ಕೆ ಇಲ್ಲ. ಇದು ಕಾರಣ ದೊರೆಗಳ ಅಪ್ಪಣೆ ಆದರೆ, ಈ ರಸ್ತು ತೀರುವ ಪರಿಯಂತರ ಇರುತ್ತೇವೆ. ಆ ಬಳಿಕ ಕೋಟೆಯನ್ನು ಒಪ್ಪಿಸಿ, ಅಪ್ಪಣೆ ಕೇಳಿಕೊಂಡು, ನಮ್ಮ ಖಾವಂದರ ಬಳಿಗೆ ಹೋದೇವು. ಆದರಿಂದ ನಮ್ಮ ಅರ್ಥ, ಮಾನ, ಪ್ರಾಣ ಉಳಿದೀತು" ಎಂಬುದಾಗಿ ಹೇಳಿದ್ದರಿಂದ ಆ ಮಾತು ಕೇಳಿಕೊಂಡು, ಆ ಕಾಂಗೆರ ಅಯ್ಯಣ್ಣನು ಅಲ್ಲಿಂದ ಆ ಖಾದರ್‌ಖಾನನ ಸಂಗಡ ಪುನಃ ಹೋಗಿ, ಅವರ ದಂಡನ್ನು ಸರಹದ್ದಿನ ಮುಳ್ಳುಸೋಗೆ ಕಡ ದಾಟಿಸಿಬಿಟ್ಟು, ತಾನು ಮಹಾರಾಜರ ಬಳಿಗೆ

ಬಂದು, ಆ ವಿವರ ಯಾವತ್ತು ಶ್ರುತಪಡಿಸಿದನು. ಅತ್ತಲಾಗಿ ಟೀಪುಸುಲ್ತಾನರು ಮಹಾಕೋಪದಿಂದ ತಮ್ಮ ಯಾವತ್ತು ಫೌಜು ತೆಗೆದುಕೊಂಡುಹೋಗಿ, ಬೆಟ್ಟಕೋಟೆಗೆ ಮೋರ್ಚೆಗಳ ಹಾಕಿ, ಲಡಾಯಿ ಮಾಡಿ, ಹಲ್ಲಾ ಹತ್ತಿ, ತೆಗೆದು ಕೊಂಡು ಆದರಲ್ಲಿ ಇದ್ದಂಥ ಫಿರಂಗಿಗಳು, ಗುಂಡುಗಳು ಮುಂತಾದ ಸಾಮಾನು ಪಟ್ಟಣಕ್ಕೆ ಸಾಗಿಸಿ, ಆ ಕೋಟೆಯನ್ನು ಹುಡಿಗುಟ್ಟಿ, ಅಗೆದು, ನೆಲಸವು ಮಾಡಿ, ಅವರ ಸೀಮೆಯನ್ನು ಸೂರೆಮಾಡಿ, ಹೇರಳ ಹೆಣ್ಣು–ಗಂಡು ಸೆರೆ ಹಿಡಿದು, ಮನೆಮಾರಿಗೆ ಅಗ್ನಿಪ್ರವೇಶ ಮಾಡಿಸಿ, ಫೌಜು ಸಮೇತ ಪಟ್ಟಣದ ಕಡೆಗೆ ಹೋದರು.

ಆ ಬಳಿಕ ಕೆಲವು ದಿವಸ ಕಳೆದ ಮೇಲೆ, ಮುಂಬಾಯಿ ಗವರ್ನರ್ ಮೇಜರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದರವರು ಫೌಜು ಸಮೇತ ಮುಂಬಾಯಿಯಿಂದ ಹೊರಟುಬಂದು, ತಲಚೇರಿಯಲ್ಲು ಇಳುಕೊಂಡು ಕಣ್ಣೂರ ಬೀಬಿ ಮಾಡಿದಂಥ ಮೋಸದ ವಿವರ ಮೇಲೆ ಸದರಿ ಬರೆದು ಇರುವಂಥಾದ್ದು ಕೇಳಿ, ಇಂಥ ಮೋಸಮಾಡಿದಂಥ ಜನರ ಸ್ಥಾನವನ್ನು ತೆಗೆದು ಕೊಂಡು, ಈ ಜನರ ಸ್ಥಾನಭ್ರಷ್ಟಮಾಡಿ ಮುಂಬಾಯಿಗೆ ಕಳುಹಿಸಬೇಕೆಂಬದಾಗಿ ನಿಶ್ಚಯಿಸಿ, ತಮ್ಮ ಫೌಜು ತೆಗೆದುಕೊಂಡುಹೋಗಿ, ಕಣ್ಣೂರ ಬಳಿಯು ಇಳುಕೊಂಡು, ಆ ಜನರಲ್ ಸಾಹೇಬರು ರಾಜರವರ ಮಿಲಾಖತ್ತು ಆಗಬೇಕು ಎಂಬ ಅಪೇಕ್ಷೆಯಿಂದ, ಕರಕೊಂಡು ಬರುವ ಬಗ್ಗೆ ಒಬ್ಬ ಸರದಾರರು, ಒಂದು ಕಂಪನಿ ಶಿಪಾಯಿಗಳ ಸಹ ಕಳುಹಿದಲ್ಲಿ, ಆ ಸರದಾರನು ಬಂದು, "ಜನರಲ್ ಸಾಹೇಬರು ತಮ್ಮ ಭೇಟಿ ಆಗಬೇಕು ಎಂಬುದಾಗಿ ಬಹಳ ಅಪೇಕ್ಷೆಯಿಂದ ಇದ್ದಾರೆ" ಎಂತ ಹೇಳಿದಲ್ಲಿ, ರಾಜರವರು ಕೊಡಗಿನಿಂದ ಹೊರಟು ತಲಚೇರಿಗೆ ತಲಪಿದರು. ಅಲ್ಲಿಗೆ ಮುಟ್ಟುವುದಕ್ಕೆ ಒಂದು ದಿವಸ ಮುಂಚಿತವಾಗಿ, ಇಂಗ್ರೇಜರ ಫೌಜು ಲಡಾಯಮಾಡಿ ಕಣ್ಣೂರ ಕೋಟೆಯಲ್ಲು ಇದ್ದ ಟೀಪುಸುಲ್ತಾನರ ಕಡೆ ಆರು ಸಾವಿರ ಜನ, ಕಣ್ಣೂರ ಬೀಬಿ ಕಡೆ ನಾಲ್ಕು ಸಾವಿರ ಮಾಪಿಳ್ಳೆರು ಸಹ ಪೆಟ್ಟು ತಾಳಲಾರದೆ, ಸಲ್ಲಾಮಾಡುತ್ತೇವೆಂಬುದಾಗಿ, ರಾಜವಟೆ ನಡೆಸಿದಲ್ಲಿ, ಜನರಲ್ ಸಾಹೇಬರು ಹೇಳಿದ್ದು : "ಟೀಪುಸುಲ್ತಾನರ ಕಡೆ ಜನರು ಅವರು ಸಂಪಾದಿಸಿದಂಥ ಒಡವೆ ಸಹ ಬಿಟ್ಟುಕೊಡುತ್ತೇವೆ; ಹೋಗಲಿ. ಆ ಕಣ್ಣೂರ ಕೋಟೆ ಒಳಗೆ ಇರುವ ಮಾಪಿಳ್ಳೆರು ಇಂಗ್ರೇಜ ಬಹಾದ್ದರ

ಸರಕಾರದ ಫೌಜಿಗೆ ದಗಾ ಮಾಡಿದ್ದಾರೆ. ಅವರನ್ನೂ ಆ ಬೀಬಿಯನ್ನೂ ಸಹ ಹಿಡಿದು, ಅವರ ಸ್ಥಾನದಿಂದ ತೆಗೆದು, ಮುಂಬಾಯಿಗೆ ಕಳುಹಿಸಬೇಕು. ಈ ಸ್ಥಳದಲ್ಲಿ ಇರುವುದಕ್ಕೆ ಯೋಗ್ಯಸ್ಥರಲ್ಲಾ. ಇವರ ಸಂಗಡ ನಾವು ಸಲ್ಲಾ ಮಾಡಲಿಕ್ಕೆ ಇಲ್ಲಾ" ಎಂಬದಾಗಿ ಹೇಳಿದರಿಂದ, ಆ ಬೀಬಿಯು, ಆ ಮಾಪಿಳ್ಳೆರು ಸಹ ಯೋಚಿಸಿದ್ದು : ಟೀಪುಸುಲ್ತಾನರ ಕಡೆ ಜನರು ಸಲ್ಲಾಮಾಡಿಕೊಂಡು, ಕೋಟೆಯಿಂದ ಇಳಿದು, ಪಟ್ಟಣಕ್ಕೆ ಹೋಗುತ್ತಾರೆ. ನಮ್ಮ ಮಾಪಿಳ್ಳೇರಿಗೆ ಜೀವಿಸಲಿಕ್ಕೆ ಬಿಡರು. ಮಾಪಿಳ್ಳೇರು ಯಾವತ್ತನ್ನು ಇಂಗ್ರೇಜಿಯವರು ಕೊಂದುಹಾಕಿಯಾರು. ಮಲೆಯಾಳದಲ್ಲಿ ಇರುವಂಥ ಅರಸುಗಳು, ನಾಯಿ ಮಾರರು ಮುಂತಾಗಿ ಶತ್ರುಗಳಿದ್ದಾರೆ. ಕೊಡಗಿನ ದೊರೆಗಳವರು ಈಗ ತಲಚೇರಿಗೆ ಬಂದು ಇದ್ದಾರೆ. ಪ್ರಾಕು ಅವರ ಹಿರಿಯುವರ ದಿವಸದಲ್ಲಿ ಅವರ ಕಡೆ ದಳವಾಯಿಗೆ ನಾವು ಉಪಕಾರಮಾಡಿದ್ದೇವೆ. ಈ ಸಮಯದಲ್ಲಿ ನಾವು ಹೇಳಿಕೊಂಡರೆ ನಮಗೆ ಉಳಿಸಿಕೊಳ್ಳುವ ಬಗ್ಗೆ, ಅವರಿಂದ ಆಗುವಷ್ಟು ಉಪ ಕಾರ ಮಾಡ್ಯಾರು ಎಂಬುದಾಗಿ, ನಿಶ್ಚಯಮಾಡಿಕೊಂಡು, ಆ ಬೀಬಿಯು ತನ್ನ ಮಗನನ್ನು ರಾತ್ರಿಕಾಲದಲ್ಲಿ ಕಳ್ಳಮಾರ್ಗವಾಗಿ ದೋಣಿ ಮೇಲೆ ಹತ್ತಿಸಿ, ಕಾರೆ ಕಾರ ಕುಂಞಪಕ್ಕಿ ಎಂಬವನ ಕೂಡಲಿಟ್ಟು, "ಇಷ್ಟು ದಿವಸ ನಮ್ಮ ಮಗನಾಗಿ ಇದ್ದಾ, ಈಗ ತಮ್ಮ ಮಡಿಲಿಗೆ ಹಾಕಿದ್ದೇನೆ. ತಾವು ಆರೈಕೆ ಮಾಡಿಕೊಂಡರೆ ಕೀರ್ತಿ ತಮ್ಮದು ಇದೆ" ಎಂಬುದಾಗಿ ಆ ಕುಂಞಪಕ್ಕಿ ಸಂಗಡ ಬಾಯಿಮಾತಿ ನಿಂದ ಹೇಳಿ, ಕೊಡಗಿನ ರಾಜರವರಿಗೆ ಬಳಿಗೆ ಕಳುಹಿಸಿದ್ದರಿಂದ, ಅವನು ಅದೇ ಮೇರೆ ಆ ಬೀಬಿ ಮಗನನ್ನು ಕರೆದುಕೊಂಡು ತಲಚೇರಿಗೆ ಬಂದು, ಮೂಸೆ ಬೇಹಾರಿಯನ್ನು ಕೂಡಿಕೊಂಡು, ವೀರರಾಜೇಂದ್ರ ಒಡೆಯರವರು ಇಳಿದು ಇದ್ದ ಹಯಾಜನ ಮನೆಗೆ ಬಂದು, ಆ ಬೀಬಿ ಹೇಳಿದ ವಿವರ ಯಾವತ್ತೂ ಹೇಳಿಕೊಂಡಲ್ಲಿ, ಪ್ರಾಕು ನಮ್ಮ ಹಿರಿಯುವರ ಕಾಲದಲ್ಲಿ ದಳವಾಯಿಗೆ ಇವರು ಉಪಕಾರಮಾಡಿ ಇದ್ದಾರೆ ಎಂಬದನ್ನು ಗ್ರಹಿಸಿ, ಅದಕ್ಕೆ ಪ್ರತಿ ಉಪಕಾರ ಮಾಡಬೇಕೆಂಬುದಾಗಿ, ಆ ಬೆಳಿಗ್ಗೆ ಬೀಬಿ ಮಗನನ್ನು ಕರಕೊಂಡುಕೋಗಿ, ಈ ಬೀಬಿ ವೃತ್ತಾಂತ ಯಾವತ್ತು, ಚೀಫ್ ರಾಬರ್ಟ್ ಟೆಲೆರು ಸಾಹೇಬರವರ ಸಂಗಡ ಹೇಳಿದಲ್ಲಿ, ಅವರು ಈ ಮಾತು ಕೇಳಿ, "ಕಣ್ಣಾನೂರ ಬೀಬಿಯು ಇಂಗ್ರೇಜಿಯವರಿಗೆ ನಂಬಿಸಿ ದಗಾ ಮಾಡಿ ಇದ್ದಾರೆ. ಆದುದರಿಂದ ಅವಳ

ಸಂಗಡ ನಾವು ಸಲ್ಲಾಮಾಡಲಿಕ್ಕೆ ಇಲ್ಲಾ. ಅವಳ ಮಾತಾಗಿ ನಾವು ಜನರಲ್ ಸಾಹೇಬರವರಿಗೆ ಹೇಳುವದಕ್ಕೂ ಶಕ್ಯವಿಲ್ಲ" ಎಂಬುದಾಗಿ ಹೇಳಿದರು. ಆ ಮಾತಿಗೆ ಮಹಾರಾಜರವರು ಹೇಳಿದ್ದು: "ಹಾಗಾದರೆ ನಾವು ಈ ಬೀಬಿ ಮಗನನ್ನು ಕರಕೊಂಡು, ಜನರಲ್ ಸಾಹೇಬರವರ ಭೇಟಿ ಆಗುವ ಬಗ್ಗೆ ಹೋಗುತ್ತೇವೆ. ನಮ್ಮ ಸಂಗಡ ನೀವು ಬರಬೇಕು" ಎಂಬುದಾಗಿ ಹೇಳಿದಲ್ಲಿ, ಆ ಮಾತಿಗೆ ಆ ಸರದಾರರು ಒಪ್ಪಿಕೊಂಡು, ಅದೇ ಮೇರೆ ರಾಜರವರು ಆ ಸರದಾರರು ಸಹ, ಬೀಬಿ ಮಗನನ್ನು ಕರಕೊಂಡು ತಲಚೇರಿಯಿಂದ ಹೊರಟು, ಪತ್ತೇಮಾರಿ ಮೇಲೆ ಸವಾರಿ ಆಗಿ, ಇಂಗ್ರೇಜ ಬಹಾದ್ದರ ಲಷ್ಕರಿನ ಸಮೀಪ ಇಳಿದು, ಮೇಜರ್ ಜನರಲ್ ರಾಬರ್ಟ್ ಆಬರ್‌ಕ್ರಂಬಿ ಸಾಹೇಬ್ ಬಹಾದ್ದರವರ ಭೇಟಿ ಆಗಿ ವೀರರಾಜೇಂದ್ರ ಒಡೆಯರವರು ಆ ಬೀಬಿಮಗನ ಕೈಹಿಡಿದು, ಜನರಲ್ ಸಾಹೇಬರವರ ಕೈಯಲ್ಲಿ ಕೊಟ್ಟು, "ನಮ್ಮ ಮೇಲೆ ಮೆಹರ್ಬಾನಗಿ ದೃಷ್ಟಿ ಇಟ್ಟು ಈ ಮಗುವಿನ ಮಾನಪ್ರಾಣ ಉಳಿಸಿ ರಕ್ಷಣೆಯ ಮಾಡಬೇಕು" ಎಂಬುದಾಗಿ ಜಾಹೀರು ಮಾಡಿದಲ್ಲಿ, ಜನರಲ್ ಸಾಹೇಬರವರು ತಿಳಿಯದೆ ರಾಜರ ಮಾತಿನ ಮೇಲೆ "ಆದೀತು" ಎಂತ ಒಪ್ಪಿಕೊಂಡು, ಆ ಬಳಿಕ, "ಈ ಮಗು ಯಾರದು?" ಎಂಬುದಾಗಿ ರಾಬರ್ಟ್ ಟಿಲೆರು ಸಾಹೇಬರ ಸಂಗಡ ಕೇಳಿದಲ್ಲಿ, "ಈ ಮಗು ಕಣ್ಣೂರ ಬೀಬೀದು, ರಾತ್ರೆ ತಿಳಿಯದ ಹಾಗೆ ದೋಣಿ ಹತ್ತಿಸಿ ಮಹಾರಾಜರವರ ಬಳಿಗೆ ಕಳುಹಿದ್ದಾಳೆ" ಎಂಬುದಾಗಿ ಹೇಳಿದಲ್ಲಿ, ಈ ಮಾತು ಕೇಳಿ, ಜನರಲ್ ಸಾಹೇಬರವರು ಮನಸ್ಸಿನಲ್ಲಿ ಬಹಳ ದ್ವೇಷಪಟ್ಟು, "ಕಣ್ಣೂರವರು ಕಂಪನಿ ಸರಕಾರದ ಸಾಹೇಬ ಜನರಿಗೆ ಮೋಸ ಮಾಡಿ ಇದ್ದಾರೆ. ಅದಕ್ಕೆ ತಕ್ಕ ಶಿಕ್ಷೆ ಮೊಕರೂರು ಆಗಿ ಇದೆ. ಇಂಥಾ ದುಷ್ಟ ಜನರ ಮೇಲೆ ಮೆಹರ್ಬಾನಗಿ ಮಾಡಬಾರದು" ಎಂಬುದಾಗಿ ಹೇಳಿದಲ್ಲಿ, ಇದು ಒಂದಾವರ್ತಿಗೆ ನಮ್ಮ ಮೇಲಣ ಮಿತ್ರತ್ವವಾಂಛಲ್ಯದಿಂದ ಈ ಮಗುವಿನ ಮೇಲೆ ದಯವಿಟ್ಟು, ಈ ಮಗುವನ್ನು ಕಣ್ಣೂರ ಸ್ಥಾನದಲ್ಲಿ ನಿಲ್ಲಿಸಬೇಕು. ಈ ಉಪಕಾರ ನಮ್ಮ ಮೇಲೆ ಮಾಡಿದ ಹಾಗೆ ಆದೀತು" ಎಂಬುದಾಗಿ, ವೀರರಾಜೇಂದ್ರ ಒಡೆಯರವರು ಬಹಳ ಬಗೆಯಿಂದ ಹೇಳಿಕೊಂಡುದರಿಂದ, ಜನರಲ್ ಸಾಹೇಬರವರು ಒಡಂಬಟ್ಟು, "ಕಣ್ಣೂರ ಬೀಬಿಯು ತನ್ನ ಮಗನನ್ನು ತಮ್ಮ ಕೈಗೆ ಕೊಟ್ಟದರಿಂದ, ಆ ಮಗುವನ್ನು ತಾವು ನಮ್ಮ ಕೈಗೆ ಕೊಟ್ಟರಷ್ಟೆ. ಪುನಃ

ನಾವು ಈ ಮಗುವನ್ನು ತಮ್ಮ ಕೈಗೆ ಕೊಡುತ್ತೇವೆ. ತಾವು ಅದೇ ಮೇರೆ ಕಣ್ಣೂರ ಕೋಟೆ ಒಳಗೆ ಹೋಗಿ, ಈ ಮಗುವನ್ನು ಬೀಬಿ ಕೈಗೆ ಕೊಟ್ಟು, ಸಲ್ಲಾ ಮಾಡಿ, ಈ ವರಿ ಪರಿಯಂತರಕ್ಕೆ ನೀನು ಮಾಡಿದಂಥಾ ದ್ರೋಹವನ್ನು ಇಂಗ್ರೇಜ ಕಂಪನಿ ಸರಕಾರದಿಂದ ಮಾಫು ಮಾಡಿಸಿ ಇದ್ದಾರೆ. ಇನ್ನು ಮುಂದೆ ಇಂಥಾ ಅನ್ಯಾಯ ಮಾಡಿದ್ದುಂಟಾದರೆ, ಮಾಫು ಆಗಲಿಕ್ಕಿಲ್ಲ. ತಕ್ಕ ಶಿಕ್ಷೆ ಆದೀತು—ಎಂತ ಹೇಳಬೇಕು" ಎಂಬುದಾಗಿ ಹೇಳಿದರು.

ಆ ಬಳಿಕ ಆ ಜನರಲ್ ಸಾಹೇಬರವರು ಮಹಾರಾಜರವರ ಸಂಗಡ ರಾಬರ್ಟ್ ಟಿಲೆರು ಸಾಹೇಬರನ್ನು, ಮೆಸ್ತರ ಶೇಂಡಿಪೊರು ಸಾಹೇಬರನ್ನು ಸಾಮುವೆಲ್ ವಿಲ್‌ಸನ್ ಸಾಹೇಬರನ್ನು ಮುಂತಾದ ಸರದಾರರ ಕೂಡಲಿಟ್ಟು, ಕಣ್ಣೂರ ಕೋಟೆಗೆ ಕಳುಹಿದರಿಂದ, ಅದೇ ಮೇರೆ ಮಹಾರಾಜರವರು, ಆ ಸರದಾರರು ಇಂಗ್ರೇಜ ಝಾಂಡೆ ಸಹ ಆ ಕಣ್ಣೂರ ಕೋಟೆ ಒಳಗೆ ಹೋಗಿ, ಕಂಪನಿ ಸರಕಾರದ ಝಾಂಡೆಯನ್ನು ಕೋಟೆ ಮೇಲೆ ನಿಲ್ಲಿಸಿ, ಜನರಲ್ ಸಾಹೇಬರವರು ಹೇಳಿದ ಮೇರೆ ಬೀಬಿ ಮಗನನ್ನು ಬೀಬಿಗೆ ಕೊಟ್ಟು, ಯಾವತ್ತು ವಿವರವನ್ನು ಹೇಳಿ, ಚೆನ್ನಾಗಿ ಸಮದಾಯಿಸಿ, ಆ ಬಳಿಕ ತಿರುಗಾ ಬಂದು, ಅಲ್ಲಿನ ವೃತ್ತಾಂತ ಯಾವತ್ತು ಜನರಲ್ ಸಾಹೇಬರವರ ಸಂಗಡ ಹೇಳಿದಲ್ಲಿ, ಈ ಮಾತು ಕೇಳಿ ಜನರಲ್ ಸಾಹೇಬರವರು ಬಹಳ ಸಂತೋಷಪಟ್ಟು, "ನೀವು ಮಾಡಿದ ಕೆಲಸವೆಲ್ಲಾ ಒಳ್ಳೇದೆ ಸರಿ" ಎಂಬುದಾಗಿ ಹೇಳಿ, ಆ ಬಳಿಕ ಆ ಕೋಟೆ ಒಳಗೆ ಇದ್ದ ಟೀಪುಸುಲ್ತಾನರ ಕಡೆ ಜನರನ್ನು ಬಿಟ್ಟು ಕಳುಹಿಸಿಕೊಟ್ಟರು. ಆಮೇಲೆ "ಇನ್ನು ಮುಂದೆ ತಮಗೂ ನಮಗೂ ದೊಡ್ಡ ಶತ್ರುವಾದ ಟೀಪುಸುಲ್ತಾನರ ನಿಗ್ರಹಿಸುವ ಬಗ್ಗೆ ತಯಾರಾಗಬೇಕು. ಈಗ ಇಂಗ್ರೇಜ ಲಷ್ಕರು ಶ್ರೀರಂಗಪಟ್ಟಣಕ್ಕೆ ಹೋಗುವಂಥ ಘಟ್ಟದ ಮಾರ್ಗ ಯಾವತ್ತು ಟೀಪುಸುಲ್ತಾನರ ತಾಲೂಕಿನ ಒಳಗೆ ಇದೆ. ಆ ಘಟ್ಟಗಳಲ್ಲಿ ಹೇರಳ ಮಂದಿ ಇಟ್ಟು ಬಂದುಬಸ್ತು ಮಾಡಿ ಇದ್ದಾರೆ. ಅದರಿಂದ ಇಂಗ್ರೇಜ ದಂಡು ಕೊಡಗಿನ ಸೀಮೆಗಾಗಿ ಸಾಗಿಹೋಗತಕ್ಕ ಬಗ್ಗೆ ಯಾವ ಮಾರ್ಗ ಸರಾಗವಾಗಿ ಇದೆಯಂತ ನೋಡತಕ್ಕ ಬಗ್ಗೆ, ಒಬ್ಬರು ಸರದಾರರನ್ನು ಸ್ವಲ್ಪ ದಿವಸದ ಒಳಗೆ ಕಳುಹಿಸುತ್ತಾ ಇದ್ದೇವೆ. ಆ ಸರದಾರರು ಪಸಂದು ಮಾಡಿದಂಥಾ ಮಾರ್ಗವನ್ನು ತಾವು ಒಡಂಬಟ್ಟು, ದಂಡು ಸಾಗಿ

ಬರುವ ಹಾಗೆ, ದುರಸ್ತು ಮಾಡಿಸಬೇಕು" ಎಂಬುದಾಗಿ ವೀರರಾಜೇಂದ್ರ ಒಡೆಯರವರ ಸಂಗಡ ಹೇಳಿದಲ್ಲಿ, ಈ ಮಾತಿಗೆ ಒಪ್ಪಿಕೊಂಡು, ಕೊಡಗಿನ ರಾಜ್ಯಕ್ಕೆ ಬಂದರು. ಇದೇ ಸಮಯದಲ್ಲಿ ಕರ್ನಲ್ ಹಾಟ್ಲಿರ್ ಸಾಹೇಬರವರು ಫೌಜು ಸಮೇತ ಕಲ್ಲಿಕೋಟೆಗೆ ಬಂದು, ಅಲ್ಲಿ ಇದ್ದಂಥ ಟೇಪುಸುಲ್ತಾನರ ಕಡೆ ಫೌಜು ಯಾವತ್ತನ್ನು ನಿಗ್ರಹಿಸಿ, ಆ ಕೋಟೆಯನ್ನು ತೆಗೆದುಕೊಂಡು, ಅಲ್ಲಿಂದ ಕಣ್ಣಾರಿಗೆ ಬಂದು, ಆ ಜನರಲ್ ಸಾಹೇಬರವರ ದಂಡಿಗೆ ಕೂಡಿದರು. ಆ ಬಳಿಕ ಕೆಲವು ದಿವಸದಲ್ಲಿ ಮಾರ್ಗಗಳ ನೋಡತಕ್ಕ ಬಗ್ಗೆ ಕಪ್ತಾನ್ ರನೆಲ್ ಸಾಹೇಬರವರು ಬಂದು, ದೊರೆಗಳ ಭೇಟಿ ಆಗಿ, "ಇಂಗ್ರೇಜ ಬಹಾದ್ದರ ಫೌಜು ಬರತಕ್ಕ ಬಗ್ಗೆ, ಹೆಗ್ಗಳದ ಘಟ್ಟದ ಮಾರ್ಗವನ್ನು ದುರಸ್ತು ಮಾಡಿಸಿಕೊಡಬೇಕು. ಅದೇ ಮಾರ್ಗವಾಗಿ ದಂಡು ಬಂದಮೇಲೆ, ದಂಡಿಗೆ ಬೇಕಾದ ಸರಂಜಾಮು ತಮ್ಮ ಮುಖದಿಂದ ಕೊಡಿಸಿಕೊಟ್ಟು, ಸಹಾಯ ಮಾಡಬೇಕು" ಎಂಬುದಾಗಿ ಹೇಳಿದಲ್ಲಿ, ವೀರರಾಜೇಂದ್ರ ಒಡೆಯರವರು ಆ ಮಾತಿಗೆ ಒಪ್ಪಿ ಒಡಂಬಟ್ಟು, ಆ ಕಪ್ತಾನ್ ರನೆಲ್ ಸಾಹೇಬರನ್ನು ಮೂರು ದಿವಸ ಪರಿಯಂತರ ತಮ್ಮ ಬಳಿಯೆ ಮಡಗಿಕೊಂಡು, ಇಂಗ್ರೇಜ ಬಹಾದ್ದರ ಫೌಜು ಸಮೇತ ಜನರಲ್ ಸಾಹೇಬರನ್ನು ಕರಕೊಂಡು ಬರುವ ಬಗ್ಗೆ ಆ ಕಪ್ತಾನ್ ಸಾಹೇಬರನ್ನು ಪುನಃ ಲಷ್ಕರಿಗೆ ಕಳುಹಿಕೊಟ್ಟು, ಮಹಾರಾಜರು ಲಷ್ಕರಿಗೆ ಬೇಕಾದ ಸಾಮಾನು ಜಮಾಯಿಸುವ ಬಗ್ಗೆ, ಕೊಡಗಿನ ಸೀಮೆ ಒಳಗೆ ಟೇಪುಸುಲ್ತಾನರು ನುಗ್ಗಿ, ಲೂಟಿಸಿ, ಹೈರಾನು ಮಾಡಿ ಇದ್ದಾರೆ. ಇಂಥಾ ಹೈರಾನುಸೀಮೆಯಲ್ಲಿ ಯಾವ ಮೇರೆ ರಾತೀಪಿನ ಸರಂಜಾಮು ಸಿಕ್ಕೀತು? ಎರಡನೇದು, ಅರಮನೆ ಜಕೀರವೆಂತು ಕಂಡು ಇದೆ. ಯಾವತ್ತು ಒಡವೆ, ವಸ್ತು, ಹಣಕಾಸು ಮುಂತಾಗಿ ಟೇಪುಸುಲ್ತಾನರ ಲೂಟಿಗೆ ಸಿಕ್ಕಿ ಹೋಯಿತು. ಮೂರನೇದು, ತಮ್ಮ ಸೀಮೆ ಹೈರಾನಾದಾಗ್ಯೂ, ಸ್ನೇಹಿತರ ಸೀಮೆಯಿಂದ ತರಿಸಿಕೊಟ್ಟೇವು ಎಂದರೆ, ಕೊಡಗಿನ ಸೀಮೆ ಸುತ್ತಾ ಇರುವ ಸೀಮೆ ಯಾವತ್ತು, ಟೇಪುಸುಲ್ತಾನರದು ಹೊರ್ತು, ಒಬ್ಬ ದೋಸ್ತರದು ಕಾಣುವದಿಲ್ಲ. ಆ ಕಡೆಯಿಂದ ಈ ಸೀಮೆಗೆ, ಈ ಕಡೆಯಿಂದ ಆ ಸೀಮೆಗೆ ಒಬ್ಬರು ಹೋಗಿ ಬರುವದಕ್ಕೆ ಇಲ್ಲಾ. ಈ ಮೂರು ವಿಧದಿಂದ ವಿಚಾರಿಸಿ ನೋಡಿದಾಗ್ಯೂ, ಮಾರ್ಗ ತೋರಲಿಲ್ಲಾ. ಕಡೆಗೆ ಈಗ ಇಂಗ್ರೇಜ ಬಹಾದ್ದರ

ಕಂಪನಿ ಸರಕಾರವು ನಮ್ಮ ಸರಕಾರವೂ ಸ್ನೇಹ ಮಿತ್ರತ್ವದಿಂದ ಸೂರ್ಯ ಚಂದ್ರ ಇರುವ ಪರಿಯಂತರ ನಡೆದುಬರುವ ಬಗ್ಗೆ, ಹೊಸ ನೂತನವಾಗಿ ಆಣೆ ಭಾಷೆ ಯಿಂದ ಕರಾರು ಆಗಿ ಇದೆ. ಇದಲ್ಲದೆ ಇಂಗ್ರೇಜ ಬಹಾದ್ದರ ಕಂಪನಿ ಸರಕಾರದ ಜಯಪ್ರದದ ಲಷ್ಕರು ದೊಡ್ಡ ದುಷ್ಮಾನ್ ಟೇಪುಸುಲ್ತಾನರ ಸಂಗಡ ಲಡಾಯ ಮಾಡುವ ಬಗ್ಯೆ ಇದೇ ಕೊಡಗಿನ ಸೀಮೆ ಮಾರ್ಗವಾಗಿ ಬರುತ್ತಾ ಇದೆ. ಇಂಥಾ ಸಮಯದಲ್ಲಿ ರಾತೀಪು ಮುಂತಾದ ಸರಂಜಾಮು ನಮ್ಮಿಂದ ಆಗುವಷ್ಟು ಸಹಾಯ ಮಾಡದಿದ್ದರೆ, ಸ್ನೇಹಕ್ಕೆ ವಿಹಿತವಾಗಿ ಕಾಣದು ಯಂತ ಗ್ರಹಿಸಿ, ಕೆಲವು ಬೇವಿನ ಜನರನ್ನು ಟೇಪುಸುಲ್ತಾನರ ಸೀಮೆ ವಳಗೆ ಕಳುಹಿಸಿ, ಗಾಡಿಗೆ ಆಗುವಂಥಾ ಎತ್ತುಗಳು, ಸಾಮಾನು, ಸರಂಜಾಮು ಮುಂತಾಗಿ ಇರುವಂಥ ಸ್ಥಳ ಗೊತ್ತುಹತ್ತಿಸಿ, ಆ ಜಾಗಕ್ಕೆ ಲಡಾಯಿ ಮಾಡು ವಂಥ ಜನರನ್ನು ಆಯುಧಪಾಣಿ ಸಮೇತ ಕಳುಹಿಸಿ, ದುಷ್ಮಾನರ ಕಡೆ ಜನರ ಸಂಗಡ ಯುದ್ಧಮುಖದಲ್ಲಿ ಪ್ರಾಣ ವೆಚ್ಚ ಮಾಡಿಸಿ, ಕೆಲವು ಸಾಮಾನವು, ಸಾವಿರದ ಐನೂರು ಪರಿಯಂತರ ಎತ್ತುಗಳು ಸಹ ಸಂಪಾದಿಸಿ ತರಸಿ, ಈ ವಿವರ ವನ್ನು ತಲಚೇರಿಗೆ ರಾಬರ್ಟ್ ಟೆಲೆರು ಸಾಹೇಬರವರಿಗೆ ಕಾಗದ ಬರೆಸಿ, ಕಳು ಹಿದಲ್ಲಿ, " ಆ ಸರಂಜಾಮು ಯಾವತ್ತು, ದಂಡು ಇಲ್ಲಿಂದ ಕೊಡಗಿಗೆ ಬಂದ ಮೇಲೆ ಕೊಡಿಸಬೇಕು. ಈಗಲೇ ಲಷ್ಕರು ಕೂಚಾಗಿ ಬರುತ್ತದೆ. ಗಾಡಿ ಎಳೆಯುವ ಬಗ್ಯೆ ಎತ್ತುಗಳು ಅಗತ್ಯ ಬೇಕಾಗಿ ಇರುವುದರಿಂದ, ಆ ಎತ್ತು ಗಳನ್ನು ತರುವ ಬಗ್ಯೆ ಕೆಲವು ಜನರನ್ನು ಕಳುಹಿಸಿ ಇದ್ದೇವೆ. ಅವರ ತಾಬೇಲಿ ಕೊಟ್ಟು ಕಳುಹಿಸಬೇಕು " ಎಂಬುದಾಗಿ ಜವಾಬು ಬರೆದು ಕಳುಹಿದರಿಂದ, ಅದೇ ಮೇರೆಗೆ ಮಹಾರಾಜರು ವಳ್ಳೆ ಘಟ್ಟೆ ಭದ್ರವಾದ ಸಾವಿರದ ನೂರ ಹನ್ನೊಂದು ಎತ್ತು ಆದು, ಆ ಮನುಷ್ಯರ ವಶಕ್ಕೆ ಕೊಟ್ಟು, ತಲಚೇರಿ ಇಂಗ್ರೇಜ ಕಂಪನಿ ಸರಕಾರಕ್ಕೆ ಕಳುಹಿಸಿಕೊಟ್ಟರು. ಉಳಿಕೆ ರಾತೀಪಿನ ಸರಂಜಾಮು ಲಷ್ಕರಿಗೆ ಕೊಡುವ ಬಗ್ಯೆ ಪ್ರಯತ್ನಬಟ್ಟು ಜಮಾಯಿಸುತ್ತಾ ಇದ್ದರು.

ಅಷ್ಟರಲ್ಲಿ ಮಡಕೇರಿ ಕೋಟೆಯಲ್ಲಿ ಇದ್ದ ಮಂದಿಗೆ ರಸದು ತೀರಿ ಹೋಗಿ, ಲಾಚಾರಾಗಿ, ತಮ್ಮ ತಮ್ಮ ವಡವೆ ಸಹಿತ ಪ್ರಾಣದಿಂದ ಬಿಟ್ಟು ಕೊಟ್ಟರೆ, ಹೋದೇವು ಎಂಬುದಾಗಿ, ಜಾಫರ್ ಕುಲ್ಲಿ ಬೇಗು ಕಿಲ್ಲೇದಾರನ ಸಂಗಡ ಹೇಳಿದ್ದರಿಂದ, ಆ ಕಿಲ್ಲೇದಾರನು ನಾಲ್ಕು ಜನವನ್ನೂ, ಒಂದು ಬಿಳಿ

ಬಾವುಟ ಸಹ ಸಲ್ಲಾ ಮಾಡುವ ಬಗ್ಯೆ ನಾಲ್ಕುನಾಡ ಅರಮನೆಗೆ ದೊರೆಗಳ ಬಳಿಗೆ ಕಳುಹಿದಲ್ಲಿ, ಈ ವಿವರವನ್ನು ಕೇಳಿ, ರಾಜರು ಅಲ್ಲಿಂದ ಹೊರಟು ಬಂದು, ಮಡಕೇರಿ ಹಳೇ ಕೋಟೆಯಲ್ಲು ಇಳುಕೊಂಡು, ಆ ಕಿಲ್ಲೇದಾರನನ್ನು ತಮ್ಮ ಬಳಿಗೆ ಕರೆಸಿ, ಕೋಟೆ ಒಳಗೆ ಇರುವಂಥಾದ್ದೂ, ಟೀಪುಸುಲ್ತಾನರ ಸರಕಾರದ ಸಾಮಾನುಸರಂಜಾಮು ಯಾವತ್ತೂ ವಂಚಿಸದೆ, ನಮ್ಮ ಸರಕಾರಕ್ಕೆ ಒಪ್ಪಿಸಿ, ನೀನು, ನಿಮ್ಮ ಮಂದಿ ಸಹ, ನಿಮ್ಮ ನಿಮ್ಮ ಮನೆವಾರ್ತೆ ವಡವೆ ಏನು ಇದ್ದಾಗ್ಯೂ, ತೆಗೆದುಕೊಂಡು ಹೋಗಿ ಎಂಬುದಾಗಿ ಅಪ್ಪಣೆ ಕೊಟ್ಟಲ್ಲಿ ಆ ಕಿಲ್ಲೇದಾರನು ಒಪ್ಪಿಕೊಂಡು, ಐನೂರು ಜನ ಕೊಡಗರನ್ನು ಕರೆದುಕೊಂಡು ಹೋಗಿ, ಆ ಕೋಟೆ ಒಳಗೆ ಇದ್ದ ತನ್ನ ಠಾಣ್ಯದ ಮಂದಿಯನ್ನು ಹೊರಗೆ ಇಳಿಸಿ, ಅದರ ಬದಲಿಗೆ ಆ ಕೊಡಗು ಮಂದಿಯನ್ನು ನಿಲ್ಲಿಸಿ, ವೀರರಾಜೇಂದ್ರ ವಡೆಯರವರ ಕಡೆ ಜಾಂಡೆ ಕೋಟೆ ಮೇಲೆ ನಿಲ್ಲಿಸಿ, ಆ ಕೋಟೆ ಬಾಗಿಲ ಬೀಗಮುದ್ರೆಯನ್ನು, ಕಜಾನೆ, ಫಿರಂಗಿ, ಮದ್ದು, ಗುಂಡು ಮುಂತಾದ ಟೀಪು ಸುಲ್ತಾನರ ಸರಕಾರದ ಸಾಮಾನು ಇದ್ದದ್ದು ಯಾವತ್ತು ದೊರೆಗಳಿಗೆ ಒಪ್ಪಿಸಿದನು. ಆ ಮಾರನೆ ದಿವಸ ಬೆಳಿಗ್ಯೆ ರಾಜರ ಖಾಸ ಸ್ವಾರಿಯು ಆ ಕೋಟೆಗೆ ಹೋಗುವಾಗ್ಯೆ, ಮಾರ್ಗದಲ್ಲಿ ಟೀಪುಸುಲ್ತಾನರ ಕಡೆ ಠಾಣ್ಯದ ಮಂದಿ ಯಾವತ್ತು ಬಹಳ ದೈನ್ಯೋಕ್ತಿಯಿಂದ, "ನಮಗೆ ಮೂರು ತಿಂಗಳಿಂದ ಟೀಪು ಸುಲ್ತಾನರ ಸರಕಾರದಿಂದ ಸಂಬಳ ಸಿಕ್ಕಲಿಲ್ಲ. ನಮ್ಮ ಕುಟುಂಬ ಮಕ್ಕಳು ಯಾವತ್ತು, ಖರ್ಚಿಗೆ ಇಲ್ಲದೆ, ಹೈರಾನು ಆಗುತ್ತದೆ. ತಮ್ಮ ಸನ್ನಿಧಾನದಿಂದ ಖರ್ಚಿಗೆ ಕೊಟ್ಟು ರಕ್ಷಣ್ಯ ಮಾಡಬೇಕು" ಎಂಬುದಾಗಿ, ಅರಿಕೆ ಮಾಡಿಕೊಂಡದ್ದರಿಂದ, "ನಿಮ್ಮ ಕಿಲ್ಲೇದಾರನನ್ನು ಕಳುಹಿಸಿದರೆ, ನಿಮ್ಮ ಖರ್ಚಿನ ಬಗ್ಯೆ ಹಣ ಕೊಡಿಸಬಹುದು" ಎಂಬುದಾಗಿ, ಅಪ್ಪಣೆ ಕೊಟ್ಟು, ಕೊಡಗಿನ ಸಂಸ್ಥಾನದ ಹುಕುಮತ್ತಿನ ಜಾಗವಾದ ಆ ಕೋಟೆ ಒಳಗೆ ಹೋಗಿ, ಆ ಕಿಲ್ಲೇದಾರನ ಸಂಗಡ "ನಿನ್ನ ಕಡೆ ಮಂದಿ ಖರ್ಚಿಗೆ ಇಲ್ಲದೆ ಕಷ್ಟಪಡುತ್ತಾರೆ; ಅದರಿಂದ ಒಂದು ಸಾವಿರ ವರಹವನ್ನು ಇನಾಮು ಆಗಿ ಕೊಡುತ್ತೇವೆ. ಅದನ್ನು ಹಂಚಿಕೊಡು. ಇದಲ್ಲದೆ ನಿಮ್ಮ ಸಂಗಡ ವ್ಯೆಗಾವಲಿಗೆ ಕೊಡಗಿನ ಸರಹದ್ದು ಮುಳ್ಳುಸೋಗೆ ಹೊಳೆ ಪರಿಯಂತರ ಕೆಲವು ಮಂದಿಯನ್ನು ಕೊಡುತ್ತೇವೆ" ಎಂಬುದಾಗಿ ಅಪ್ಪಣೆ ಕೊಟ್ಟು, ಅದೇ ಮೇರೆ ಒಂದು ಸಾವಿರ ವರಹವನ್ನು ಆ

ಕಿಲ್ಲೇದಾರನ ಕೈಯ್ಯ ಕೊಟ್ಟಲ್ಲಿ, ಅವನು ಆ ಜನಕ್ಕೆ ಹಂಚಿ ಕೊಟ್ಟು, ರಾಜರ ಸನ್ನಿಧಾನದಿಂದ ಅಪ್ಪಣೆ ತೆಗೆದುಕೊಂಡು, ಮೈಗಾವಲಿನ ಮಂದಿ ಸಹ ಕೂಡಿಕೊಂಡು, ಪಟ್ಟಣಕ್ಕೆ ಹೋದನು. ಆ ಬಳಿಕ ಮಹಾರಾಜರು ಆ ಕೋಟೆ ಬಂದುಬಸ್ತು ಮಾಡಿಸಿಕೊಂಡು, ನಾಲ್ಕುನಾಡ ಅರಮನೆಯಲ್ಲೂ ಇರುತ್ತಾ ಇದ್ದರು.

ಇತ್ತಲಾಗಿ ಮೇಜರ್ ಜನರಲ್ ರಾಬರ್ಟ್ ಆಬರ್‍ಕ್ರಂಬಿ ಸಾಹೇಬ ಬಹಾದ್ದರವರು ಫೌಜು ಸಮೇತ ಬಂದು, ಹೆಗ್ಗಳದ ಗಟ್ಟದ ಮೈದಾನದಲ್ಲು ಇಳುಕೊಂಡು, "ನಾವು ನಮ್ಮ ದಂಡು ಸಮೇತ ನಿಮ್ಮ ಕೊಡಗಿನ ಸೀಮೆಗೆ ಬಂದು ಇಳಿದು ಇದ್ದೇವೆ. ತಮ್ಮ ಭೇಟಿ ಆಗಬೇಕೆಂಬ ಅಪೇಕ್ಷೆ ಇದೆ" ಎಂಬುದಾಗಿ, ಕಾಗದ ಬರದು ಕಳುಹಿದ್ದರಿಂದ, ಮಹಾರಾಜರು ಅರಮನೆ ಯಿಂದ ಹೊರಟು, ಆ ದಂಡಿಗೆ ಹೋಗಿ, ಆ ಜನರಲ್ ಸಾಹೇಬರವರ ಮಿಲಾ ಖತು ಆಗಿ, ಸಂತೋಷಪಟ್ಟು, ದಂಡಿಗೆ ಬೇಕಾದ ಸಾಮಾನು ತಮ್ಮಲ್ಲಿ ಕೂಡಿ ಇದ್ದಂಥಾದ್ದನ್ನು ಕೊಡಿಸಿ, ಮತ್ತು ಸಾಮಾನು ಸರಂಜಾಮು ಟೇಪುಸುಲ್ತಾನರ ಸೀಮೆಯಿಂದ ತರಿಸಿ, ದಂಡಿಗೆ ಕೊಡಿಸುತ್ತಾ ಇದ್ದರು. ಹೀಗೆ ಇರುತ್ತ ಇದ್ದಲ್ಲಿ, ಮದುರಾಜಿಯಿಂದ ಜನರಲ್ ಮೆಂಡೂಸ್ ಸಾಹೇಬ್ ಬಹಾದ್ದರವರು ಫೌಜು ಸಮೇತ ಶ್ರೀರಂಗಪಟ್ಟಣದ ಕೋಟೆ ತೆಗೆದುಕೊಳ್ಳಬೇಕೆಂಬದಾಗಿ ಹೊರಟು, ದಿಂಡುಗಲ್ಲು ಮಾರ್ಗವಾಗಿ ಬಂದು, ಕೊಯಮತ್ತೂರಲ್ಲು ಇಳುಕೊಂಡರು. ಈ ಸಮಾಚಾರ ಟೇಪುಸುಲ್ತಾನರು ಕೇಳಿ, ತಮ್ಮ ದಂಡು ತೆಗೆದುಕೊಂಡು, ಪಟ್ಟಣದಿಂದ ಹೊರಟು, ಸತ್ಯಮಂಗಲಕ್ಕೆ ಬಂದು, ಮೆಂಡೂಸ್ ಸಾಹೇಬ್ ಬಹಾದ್ದರವರ ಸಂಗಡ ಲಡಾಯಿವಾದಲ್ಲಿ, ಅದೇ ಲಡಾಯಿದಲ್ಲಿ ಟೇಪು ಸುಲ್ತಾನರ ಭಾವಮೈದುನನಾದ ಬುರಾನುದ್ದೀನರು ಬಿದ್ದುಹೋದರು. ಕಡೆಗೆ ಟೇಪುಸುಲ್ತಾನರ ದಂಡು ಇಂಗ್ರೇಜ ಬಹಾದ್ದರರ ಸಂಗಡ ಮುಖ ಸಂಧಿಸಿ ಜಗಳಾ ಮಾಡಲಾರದೆ, ಮುಂದೆ ಗಿಡ ಗುಡ್ಡೆಗಳ ಆಶ್ರಯದಿಂದ ಇಂಗ್ರೇಜ ಬಹಾದ್ದರರ ಫೌಜಿಗೆ ರಸದು ಬರುವಂಥಾ ಮಾರ್ಗಗಳ ಕಟ್ಟಿ, ಇಂಥಾ ಯೋಗ್ಯ ಅಲ್ಲದ ಅಡ್ಡಿ ಹರಕತ್ತು ಮಾಡುವುದಕ್ಕೆ ಪ್ರಾರಂಭಿಸಿದರು.

ಅಷ್ಟರಲ್ಲಿ ಬಂಗಾಳದ ಲಾರ್ಡ್ ಕಾರನ್ವಾಲೀಸ್ ಸಾಹೇಬ್ ಬಹಾದ್ದ ರವರು ಭಾರಿ ಫೌಜು ಸಮೇತ ಮದುರಾಜಿನ ಕಡೆಗೆ ಬಂದು ಇಳಿದರು ಈ

ಗಾಬರಿ ಆಗುವಂಥ ಸಮಾಚಾರ ಟೀಪುಸುಲ್ತಾನರು ಕೇಳಿ ಕೃಷ್ಣಗಿರಿ ಗಟ್ಟಿ ಇಳಿದು, ಅರಕಾಟ ಸೀಮೆಗೆ ಹೋದರು. ಇವರ ಬೆನ್ನ ಹಿಂದೆ ಜನರಲ್ ಮೆಂಡೂಸ್ ಸಾಹೇಬ್ ಬಹಾದ್ದರವರು ಫೌಜು ಸಮೇತ ಇದೇ ಗಟ್ಟಿ ಇಳಿದು ಬಂಗಾಳದ ಲಾರ್ಡ್ ಕಾರನ್ವಾಲೀಸ್ ಸಾಹೇಬ್ ಬಹಾದ್ದರವರ ಫೌಜಿನ ಸಂಗಡ ಕೂಡಿ, ಒಟ್ಟಾಗಿ ಗಟ್ಟಿ ಹತ್ತಿ ಬಂದು, ಬೆಂಗಳೂರ ಮೊಕ್ಕಾಮಿನಲ್ಲಿ ಇಳುಕೊಂಡರು. ಟೀಪುಸುಲ್ತಾನರು ತಮ್ಮ ಫೌಜು ಸಮೇತ ಬಂದು, ಅದೇ ಬೆಂಗಳೂರಲ್ಲಿ ಒಂದು ಕಡೆ ಇಳುಕೊಂಡರು. ಆ ಬಳಿಕ ಇಂಗ್ರೇಜ ಬಹಾದ್ದರವರ ಫೌಜು ಮೊರ್ಚೆ ಹಾಕಿ, ಫಿರಂಗಿ ಏರಿಸಿ, ಆ ಬೆಂಗಳೂರ ಕೋಟೆಯನ್ನು ಫಿರಂಗಿ ಗುಂಡಿನಿಂದ ಕೆಡವಿ, ಏಳು ದಿವಸದಲ್ಲಿ ಹಲ್ಲಾ ಹತ್ತಿ, ಆ ಕೋಟೆಯನ್ನು ತಮ್ಮ ಕೈವಶ ಮಾಡಿಕೊಂಡರು. ಟೀಪುಸುಲ್ತಾನರು ಎಲ್ಲಾ ಬಗೆಯಲ್ಲು ಲಾಚಾರಾಗಿ, ಮತ್ತು ಮುಂಬಾಯಿ ಲಷ್ಕರು ಕೊಡಗಿನ ಮಾರ್ಗವಾಗಿ ಬರುವುದನ್ನು ಕೇಳಿ, ತಮ್ಮ ಫೌಜು ತೆಗೆದುಕೊಂಡು, ಇಂಗ್ರೇಜ ಬಹಾದ್ದರವರ ಫೌಜು ಬರುವುದಕ್ಕಿಂತ ಮುಂದಾಗಿ, ಶ್ರೀರಂಗಪಟ್ಟಣಕ್ಕೆ ಬಂದು, ಪೆರಿಯಾಪಟ್ಟಣಕ್ಕೆ ತಮ್ಮ ಕಡೆ ಒಬ್ಬ ಸರದಾರನ, ಕೆಲವು ಫೌಜು ಸಹ, ಕಳುಹಿಸಿ, ಅದರ ಒಳಗೆ ಇರುವಂಥ ಜನವನ್ನು ಹೊರಡಿಸಿ, ಆ ಕೋಟೆ ಪಾಯುಗಳಲ್ಲು ಸುರಂಗವನ್ನು ತೆಗೆಸುತ್ತಾ ಇದ್ದರು. ಟೀಪುಸುಲ್ತಾನರು ಪಟ್ಟಣದ ಕೋಟೆ ಮುಂದೆ, ಎರಡು ಹೊಳೆ ಮಧ್ಯ ಬತ್ತೇರಿಗಳ ತಯಾರು ಮಾಡಿಸಿ, ಆ ಬತ್ತೇರಿಗಳ ಒಳಗೆ ತಮ್ಮ ಫೌಜನ್ನು ನಿಲ್ಲಿಸಿಕೊಂಡು ಇದ್ದರು. ಅಷ್ಟರಲ್ಲಿ ಲಾರ್ಡ್ ಕಾರನ್ವಾಲೀಸ್ ಸಾಹೇಬ್ ಬಹಾದ್ದರವರು, ಜನರಲ್ ಮೆಂಡೂಸ್ ಸಾಹೇಬ್ ಬಹಾದ್ದರವರು ಸಹ, ಫೌಜು ಸಮೇತ ಪಟ್ಟಣಕ್ಕೆ ತಲಪಿದರು. ಕೊಡಗಿನ ಕಡೆಯಿಂದ ಗೌರ್ನರ ಮೇಜರ ಜನ್‌ರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದರವರು, ಕೊಡಗಿನ ರಾಜರು ಸಹ ಕೂಡಿ, ಮುಂಬಯಿ ಫೌಜು ಸಮೇತ ಕೂಚಾಗಿ, ಮುತ್ತೂರು ಗ್ರಾಮದ ಸಮಿಪಕ್ಕೆ ತಲಪಿದರು. ಅಷ್ಟರಲ್ಲಿ ಪೆರಿಯಾಪಟ್ಟಣದ ಕೋಟೆಯಲ್ಲಿ ಸುರಂಗ ತೆಗೆಸುತ್ತಾ ಇದ್ದ ಟೀಪುಸುಲ್ತಾನರ ಕಡೆ ಜನರು, ಇಂಗ್ರೇಜ ಬಹಾದ್ದರರ ಲಷ್ಕರು ಇಲ್ಲಿಗೆ ಬಂದರೆ, ಪೆರಿಯಾಪಟ್ಟಣದ ಕೋಟೆ ತೆಗೆದುಕೊಂಡಾರು, ಎಂಬುದಾಗಿ ತಿಳಿದು, ಶೀಘ್ರದಲ್ಲಿ ಸುರಂಗಗಳ ಒಳಗೆ ಮದ್ದು ತುಂಬಿ, ಬೆಂಕಿ ಹಾಕಿ, ಕೋಟೆಯನ್ನು ಕೆಡವಿ

ಬಿಟ್ಟು, ಆ ಸರದಾರನು ತನ್ನ ಮಂದಿ ತೆಗೆದುಕೊಂಡು, ಶ್ರೀರಂಗಪಟ್ಟಣಕ್ಕೆ ಹೋದನು.

ಆ ಬಳಿಕ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದರವರು ಎರಡು ಪಟಾಲಂ ಪೆರಿಯಾಪಟ್ಟಣದ ಕೋಟೆ ಒಳಗೆ ಇಟ್ಟು, ಉಳಿಕೆ ಫೌಜು ಸಮೇತ ಪೆರಿಯಾಪಟ್ಟಣದ ಹಳೆ ಕೋಟೆ ಸಮೀಪದಲ್ಲು ಇಳುಕೊಂಡರು.

ಟೀಪುಸುಲ್ತಾನರು ತಮ್ಮ ಮಂದಿ ತೆಗೆದುಕೊಂಡು ಹೋಗಿ, ಇಂಗ್ರೇಜ ಬಹಾದ್ದರವರ ಫೌಜಿನ ಸಂಗಡ ಕರಿಗಟ್ಟದ ಬಳಿಯು ಲಡಾಯಿ ಮಾಡಿದಲ್ಲಿ, ಇಂಗ್ರೇಜಿಯವರ ಫೌಜು ಟೀಪುಸುಲ್ತಾನರ ಫೌಜಿನ ಮೇಲೆ ಬಲಾಢ್ಯರಾಗಿ, ಟೀಪುಸುಲ್ತಾನರ ಫೌಜನ್ನು ನಿಗ್ರಹಿಸಿದರು. ಕಡೆಗೆ ಟೀಪುಸುಲ್ತಾನರ ಫೌಜು ಓಡಿಹೋಗಿ, ಕಾವೇರಿ ಎರಡು ಹೊಳೆ ಮಧ್ಯ ಕೋಟೆ ಬತ್ತೇರಿ ಒಳಗೆ ಬಂದು, ಕೋಟೆ ಆಶ್ರಯದ ಒಳಗೆ ಇಳುಕೊಂಡರು. ಆ ಬಳಿಕ ಇಂಗ್ರೇಜ ಬಹಾದ್ದರವರ ಫೌಜು ಒಂದು ರಾತ್ರೆ ಕರಿಗಟ್ಟದ ಬೆಟ್ಟದ ಬಳಿಯು, ಇಳಿದು ಇದ್ದು, ಅಲ್ಲಿಂದ ಹೊರಟು ಹಿರೋಡ ಬೆಟ್ಟದ ಸಮೀಪದಲ್ಲಿ, ಕೊಡಗಿನ ಕಡೆಯಿಂದ ಕುಮ್ಮಕ್ಕಾಗಿ, ಪೆರಿಯಾಪಟ್ಟಣಕ್ಕೆ ಬಂದು ಇರುವ ಮುಂಬಾಯಿ ಫೌಜಿನ ದಾರಿ ನೋಡುತ್ತಾ ಮೂರು ದಿವಸ ಅಲ್ಲಿ ಮೊಕ್ಕಾಂ ಮಾಡಿ ಇದ್ದರು.

ಆ ಬಳಿಕ ಮಳೆಗಾಲ ಸಮೀಪವಾದ್ದರಿಂದ, ಲಾರ್ಡ್ ಕಾರನ್ವಾಲೀಸ್ ಸಾಹೇಬ ಬಹಾದ್ದರವರ ಫೌಜು ಅಲ್ಲಿಂದ ಹೊರಟು, ಬೆಂಗಳೂರಿಗೆ ಹೋದರು. ಮೇಜರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ ಬಹಾದ್ದರವರು ಕೊಡಗಿನ ಮಹಾರಾಜರು ಸಹ, ಸಂಗಡ ಇರುವ ಫೌಜು ಸಮೇತ, ಪೆರಿಯಾ ಪಟ್ಟಣದಿಂದ ಹೊರಟು ಬಂದು, ಹೆಗ್ಗಳದ ಗಟ್ಟದಲ್ಲು ಇಳುಕೊಂಡು, ಆ ಬಳಿಕ ಆ ಜನರಲ್ ಸಾಹೇಬರು ದೊರೆಗಳ ಸಂಗಡ ಹೇಳಿದ್ದು : "ನಾವು ಇಲ್ಲಿಂದ ತಲಚೇರಿಗೆ ಹೋಗಿ, ಇಂಗ್ರೇಜ ಬಹಾದ್ದರ ಸರಕಾರದ ಫೌಜು ಯಾವತ್ತೂ ಅಲ್ಲಿ ಮಡಗಿ ಮುಂಬಾಯಿಗೆ ಹೋಗುತ್ತೇವೆ. ಆ ಬಳಿಕ ಅವಲ್ ಮೊಸುಮ್ಮಿಗೆ ಪುನಶ್ಚ ಮುಂಬಾಯಿಂದ ಈ ಕಡೆಗೆ ಬರುತ್ತೇವೆ. ಈಗ ಕೆಲವು ಜಂಗಿ ಸಾಮಾನು, ಫಿರಂಗಿ, ಗುಂಡು, ಮದ್ದು ತಮ್ಮ ತಾಬೆಗೆ ಕೊಡುತ್ತೇವೆ. ಆರು ತಿಂಗಳು ಪರಿಯಂತರ ತಾವು ನಾಲ್ಕು ಕಡೆಯಿಂದ ರಸದಿನ ಸಾಮಾನು

ಮುಂತಾಗಿ ಹೇರಳವಾಗಿ ಪ್ರಯತ್ನದಿಂದ ತರಿಸಿ, ಜಮಾಯಿಸಬೇಕು. ಇದಲ್ಲದೆ ಕೆಲವು ರೈತ ವರ್ತಕರು ರಸದಿನ ಸಾಮಾನು ವಗೈರೆ ಟೀಪುಸುಲ್ತಾನರ ದಂಡಿಗೆ ಸಾಗಿಸುತ್ತಾರೆ; ಅವರಿಗೆ ಕವುಲು ಕರಾರಿನಿಂದ ಈ ಕಡೆಗೆ ತಿರುಗಿಸಿಕೊಂಡು, ಅವರು ಟೀಪುಸುಲ್ತಾನರ ದಂಡಿನಲ್ಲಿ ಜಿನಿಸು ಮಾರುವ ಕ್ರಯಕ್ಕಿಂತಲು ಹೆಚ್ಚು ಕ್ರಯ ಕೊಡಿಸಿ, ರಸದಿನ ಸಾಮಾನು ಜಮಾಯಿಸಬೇಕು. ಈ ಬಗ್ಯೆ ಬೇಕಾದಷ್ಟು ದ್ರವ್ಯ ಕಂಪನಿ ಸರಕಾರದಿಂದ ಕೊಡಿಸುತ್ತೇವೆ " ಎಂಬುದಾಗಿ ಹೇಳಿದಲ್ಲಿ, ಆ ಮಾತಿಗೆ ರಾಜರು ಹೇಳಿದ್ದು: "ಈಗ ತಾವು ರಸದಿನ ಸಾಮಾನದ ಕ್ರಯಕ್ಕೆ ಹಣಾ ಕೊಡ ಕೆಲಸವಿಲ್ಲಾ; ತಾವು ಹೇಳಿದ ಪ್ರಕಾರ ಟೀಪುಸುಲ್ತಾನರ ದಂಡಿಗೆ ರಸದು ಸಾಮಾನು ತಲಪಿಸುವಂಥಾ ರೈತ ವರ್ತಕರನ್ನು ಈ ಕಡೆಗೆ ಮಾಡಿಕೊಂಡು, ಕ್ರಯ ಮೂಲವಾಗಿ ಸಿಕ್ಕಿದಷ್ಟು ಸಾಮಾನಿಗೆ ಕ್ರಯವನ್ನು ನಮ್ಮ ಕೈಯ್ಯಿಂದ ಕೊಟ್ಟು, ಆ ಸಾಮಾನು ಜಮಾಯಿಸುತ್ತೇವೆ. ಸಾಮಾನದ ಕ್ರಯಕ್ಕೆ ನಮ್ಮಲ್ಲಿರುವ ಹಣ ಸಾಲದೆ ಹೋದರೆ, ತಮಗೆ ಕಾಗದ ಬರಸಿ ಕಳುಹಿ, ಸಾಮಾನದ ಕ್ರಯದ ಬಗ್ಯೆ ಹಣಾ ತರಿಸಿಕೊಂಡು, ಸಾಮಾನು ರಸದು ಜಮಾಯಿಸಿ ಮಡಗ್ಯೇವು " ಎಂತ ಹೇಳಿದರು.

ಆ ಬಳಿಕ ಆ ಜನರಲ್ ಸಾಹೇಬರು ಕೆಲವು ಫಿರಂಗಿ, ಮದ್ದು, ಗುಂಡು, ದವಸಧಾನ್ಯ ಮುಂತಾದ ಸಾಮಾನವನ್ನು ಜೋಪಾನದಲ್ಲು ಇರಿಸತಕ್ಕ ಬಗ್ಯೆ ವೀರರಾಜೇಂದ್ರ ವಡೆಯರವರ ವಶಕ್ಕೆ ಕೊಟ್ಟು, ಆ ಜನರಲ್ ಸಾಹೇಬರು ಫೌಜು ಸಮೇತ ಕಲಿ ಸಂದ ೪೮೯೩ನೇ ವಿರೋಧಿಕೃತು ಸಂವತ್ಸರದ ಜೇಷ್ಠ ಮಾಸದಲ್ಲು ಗಟ್ಟ ಇಳಿದು, ತಲಚೇರಿಗೆ ಹೋಗಿ, ಫೌಜು ಯಾವತ್ತು ಅಲ್ಲಿ ಬಿಟ್ಟು, ತಾವು ಮುಂಬಾಯಿಗೆ ಹೋದರು.

ರಾಜರು ಆ ಬಗ್ಗೆ ಅನಾಮತು ಸಾಮಾನು ಯಾವತ್ತನ್ನು ಜೋಪಾನದಲ್ಲಿ ಮಡಗಿಸಿ, ನಾಲ್ಕುನಾಡ ಅರಮನೆಗೆ ಬಂದು, ತಮ್ಮ ಕೊಡಗಿನ ಸೀಮೆಯಲ್ಲಿ ಸಿಕ್ಕಿದಂಥಾ ಕೆಲವು ಸಾಮಾನವನ್ನು ಕ್ರಯ ಕೊಟ್ಟು ತರಿಸಿ, ಜಮಾಯಿಸುತ್ತಾ, ಇದಲ್ಲದೆ ಟೀಪುಸುಲ್ತಾನರ ದಂಡಿಗೆ ರಸದು ತಲಪಿಸುತ್ತಾ ಇದ್ದಂಥಾ ರೈತರಿಗೆಲ್ಲಾ ಭರವಸ ಕೊಟ್ಟು, ತಮ್ಮ ಕಡೆಗೆ ತಿರುಗಿಸಿಕೊಂಡು, ಅವರು ಹೇಳಿದ ಮೇರೆ ಕ್ರಯ ಕೊಡಿಸಿ, ಆ ಬಗ್ಯೆ ಸಾಮಾನು ಸರಂಜಾಮು ಅವರಿಂದ ತರಿಸಿ, ಜಮಾಯಿಸುತ್ತಾ, ಈ ಕಡೆ ಸಿಕ್ಕಿದಂಥಾ ಸಾಮಾನವನ್ನು ಟೀಪುಸುಲ್ತಾನರ

ಸೀಮೆಗೆ ಕೊಡಗ ಮಂದಿಯನ್ನು ಕಳುಹಿ, ಯುದ್ಧ ಮುಖದಲ್ಲಿ ಪ್ರಾಣ ಪ್ರಯತ್ನದಿಂದ ತರಿಸುತ್ತಾ, ಮಳೆಗಾಲ ಆರು ತಿಂಗಳು ಪರಿಯಂತರ ಈ ಮೂರು ವಿಧದಿಂದ ಸಾಮಾನು ತರಿಸುವ ಬಗ್ಯೆ ಪ್ರಯತ್ನಪಟ್ಟು ಜಮಾಯಿಸುತ್ತಾ ಇದ್ದರು.

ಆ ಬಳಿಕ ಮಾರ್ಗಶಿರ ಮಾಸದಲ್ಲಿ ಮೇಜರ್ ಜನರಲ್ ರಾಬರ್ಟ್ ಆಬರಕ್ರಾಂಬಿ ಸಾಹೇಬ್ ಬಹಾದ್ದರವರು, ಜಂಗೀ ಸಾಮಾನು ಸರಂಜಾಮು ವಗೈರೆ ಸಾಗಿಸಿಕೊಂಡು, ಮುಂಬಾಯಿಂದ ತಲಚೇರಿಗೆ ಬಂದು, ಅಲ್ಲಿಂದ ಲಷ್ಕರು ಸಮೇತ ಬಂದು, ಪ್ರಾಕು ಇಳಿದು ಇದ್ದ ಹೆಗ್ಗಳದ ಗಟ್ಟದ ಮೇಲೆ ಇಳುಕೊಂಡು, ಆ ವಿವರವನ್ನು ವೀರರಾಜೇಂದ್ರ ವಡೆಯರವರಿಗೆ ಬರಸಿ ಕಳುಹಿ ತಿಳಿಸಿದಲ್ಲಿ, ರಾಜರು ಹೋಗಿ, ಆ ಜನರಲ್ ಸಾಹೇಬರ ಕಂಡು, ಭೇಟಿ ಆಗಿ ಸಂತೋಷಪಟ್ಟು, ಮೊದಲು ಅನಾಮತ್ತಾಗಿ ದೊರೆಗಳ ವಶದಲ್ಲಿ ಇಟ್ಟು ಇದ್ದಂಥಾ ಜಂಗೀ ಸಾಮಾನು, ಫಿರಂಗಿ ಮುಂತಾದ್ದನ್ನು ಪುನಃ ಅವರಿಗೆ ಕೊಟ್ಟಲ್ಲಿ, ಅವರು : " ಎರಡು ತಿಂಗಳ ತನಕ ಮೊಕ್ಕಾಂ ಮಾಡುತ್ತಾ ಇದ್ದೇವೆ. ಲಷ್ಕರಿನ ಖರ್ಚಿನ ಬಗ್ಯೆ ತಮ್ಮ ಕಡೆಯಿಂದ ಐದು ಲಕ್ಷ ಡಂಗಾಳಿ ಅಕ್ಕಿ ಕೊಡಿಸಬೇಕು " ಎಂಬುದಾಗಿ ಹೇಳಿದಲ್ಲಿ, " ಏನಾ ಬಗೆಯಿಂದಾದರೂ ನಾಲ್ಕು ಕಡೆಯಿಂದ ತರಿಸಿ ಕೊಡಿಸುತ್ತೇವೆ " ಎಂಬುದಾಗಿ ಮಹಾರಾಜರು ಹೇಳಿ, ಅದೇ ಮೇರೆ ನಾಲ್ಕು ಕಡೆ ಸೀಮೆಯಿಂದ ಆಡು, ಕುರಿ ಮುಂತಾದ ರಾತೀಪಿನ ಸಾಮಾನು ಹೇರಳವಾಗಿ ತರಿಸಿ, ಆ ಲಷ್ಕರಿಗೆ ಕೊಡಿಸುತ್ತಾ, ಐದು ಲಕ್ಷ ಡಂಗಾಳಿ ಅಕ್ಕಿಯನ್ನು ಅವರಿಗೆ ಬೇಕಾದ ಹೊತ್ತಿಗೆ ಕೊಡುವ ಬಗ್ಯೆ ಅಳಿಸಿ, ಜೋಪಾನದಲ್ಲು ಮಡಗಿಸಿ, ಈ ಮೇರೆ ಇರುತ್ತಿದ್ದಲ್ಲಿ, ಟೇಪುಸುಲ್ತಾನರು ಖಾದರ ಖಾನ ಕೈಸಗಿ ಸಂಗಡ ಹೇಳಿದ್ದು : " ನಿನ್ನ ಮೇಲೆ ಕೊಡಗಿನ ರಾಜರ ಬಹಳ ಮೆಹರ್ಬಾನಗಿ ಇದೆ. ಮೊದಲು ನೀನು ಅವರ ಕೈಗೆ ಸಿಕ್ಕಿ ಇದ್ದಾಗ್ಯೆ, ಪ್ರಾಣ ಉಳಿಸಿ ನಿನ್ನನ್ನು ಈ ಕಡೆಗೆ ಬಿಟ್ಟು ಕಳುಹಿಸಿದ್ದರು. ಈಗ ನಿನ್ನ ಮುಖಾಂತರದಿಂದ ಅವರ ಸ್ನೇಹ ಮಡಗಬೇಕು. ಈ ಬಗ್ಯೆ ನಿನಗೆ ಹಿತವಾದಿಯಾಗಿರುವಂಥಾ ಮನುಷ್ಯನ ಕರಕೊಂಡು ಬಾ " ಎಂಬುದಾಗಿ ಹೇಳಿದಲ್ಲಿ, ಆ ಖಾದರ ಖಾನನು ತನಗೆ ಆಪ್ತರಾದಂಥಾ ಜನರ ಟೇಪುಸುಲ್ತಾನರ ಬಳಿಗೆ ಕರೆದುಕೊಂಡು ಹೋಗಿ ಒಪ್ಪಿಸಿದಲ್ಲಿ, ಟೇಪುಸುಲ್ತಾನ ಬಹದ್ದೂರ್‌ರವರು ತಮ್ಮ ಕಡೆಯಿಂದ

ಒಂದು ಕಾಗದ, ಮಿೂರಸಾದಕನ ಕಡೆಯಿಂದ ಒಂದು ಕಾಗದ, ಪೂರ್ಣಯ್ಯನ ಕಡೆಯಿಂದ ಒಂದು ಕಾಗದ ಸಹಾ, ದೋಸ್ತಿ ಮಾಡುವ ಬಗ್ಯೆ ನಂಬಿಗೆ ಭಾಷೆ ಹಾಕಿ ಬರಿಸಿ ಆ ಖಾದರಖಾನನ ಕಡೆ ಬಲೆ ಆದ್ಮಿ ಹರಿಕಾರ ಡಲಾಯತ ಸಹಾ ಇದು ಜನರ ಸಂಗಡ ವೀರರಾಜೇಂದ್ರ ಒಡೆಯರವರ ಬಳಿಗೆ ಕಳುಹಿದ ರಿಂದ, ಆ ಜನವು ಕೊಡಗಿನ ಸೀಮೆ ಸರಹದ್ದಿಗೆ ಬಂದಲ್ಲಿ, ಅಲ್ಲಿ ಇದ್ದ ಪಾರ ದವರು ಆ ಕಾಗದಗಳ ಸಮೇತ ಆ ಜನರನ್ನು ರಾಜರ ಬಳಿಗೆ ಕರೆತಂದಲ್ಲಿ, ಆ ಖಾದರಖಾನನ ಕಡೆ ಮರಬೆ ಆದ್ಮಿಯು ತಾನು ತಂದಂಥಾ ಕಾಗದಗಳನ್ನು ಒಪ್ಪಿಸಿ " ಮಹಾರಾಜರು ನಮ್ಮ ಸ್ನೇಹದಿಂದ ಮುಖ ತಿರುಗಿಸಿ, ಇಂಗ್ರೇಜಿ ಯವರ ಸಂಗಡ ಕೂಡಿ ಇದ್ದೀರಿ. ನಾವು ಸಮಿೂಪದಲ್ಲಿ ಇರುವಂಥವರು ನಮ್ಮನ್ನು ದೂರಮಾಡಿ, ದೂರ ದೇಶದವರ ಸಂಗಡ ದೋಸ್ತಿ ಇಟ್ಟಿದ್ದೀರಿ. ಕಷ್ಟಕಾಲಕ್ಕೆ ಸಮಿೂಪದವರು ಹೊರ್ತು, ದೂರ ದೇಶದವರ ಸ್ನೇಹ ಕೆಲಸಕ್ಕೆ ಬಾರದು. ಹೇಗೆಂದರೆ, ಪ್ರಾಕು ಸಂವತ್ಸರದಲ್ಲಿ ಇಂಗ್ರೇಜಿಯುವರು ತಮ್ಮನ್ನು ಕರೆದುಕೊಂಡು, ದಂಡು ಸಮೇತ ಪೆರಿಯಾಪಟ್ಟಣಕ್ಕೆ ಬಂದು ಇದ್ದು, ಪುನಹಾ ಹೋಗುವಾಗ್ಯೆ, ತಮ್ಮನ್ನು ಕಾಡಿನಲ್ಲಿ ಬಿಟ್ಟು, ದಂಡು ಸಮೇತ ಅವರು ಘಟ್ಟ ಇಳಿದು ಹೋದರು. ಆ ಸಮಯದಲ್ಲಿ ನಾವು ದಂಡು ತೆಗೆದುಕೊಂಡು ಕಾಡಿನ ಸೀಮೆಗೆ ನುಗ್ಗಿ, ಲೂಟಿ ಮಾಡಿ ಇದ್ದರೆ, ಇಂಗ್ರೇಜಿಯುವರ ಸಹಾಯ ಯಾವ ಮೇರೆ ಆಗುತ್ತಿತ್ತು ? ಈಗ ಬಿದ್ದಿರುವ ನ್ಯಾಯ ತೀರಿದ ಬಳಿಕ, ಅದೇ ಮೇರೆ ಇಂಗ್ರೇಜಿಯುವರು ತಮ್ಮನ್ನು ತಮ್ಮ ಸೀಮೇಲಿ ಬಿಟ್ಟು, ಅವರು ಅವರ ಸೀಮೆಗೆ ಹೋಗುತ್ತಾರೆ. ಇಷ್ಟು ಸಮೀಪದಲ್ಲು ಇದ್ದು, ನಮ್ಮ ಸಂಗಡ ವಿರುದ್ಧಮಾಡಿಕೊಂಡು, ತಾವು ನಿರ್ವಾಹ ಮಾಡತಕ್ಕದ್ದು ಹ್ಯಾಗೆ? ಇಂದಿನ ವರಿಗೆ ನಮ್ಮ ತಮ್ಮವೊಳಗೆ ಇದ್ದಂಥಾ ಶತ್ರುತ್ವವನ್ನು ಮರೆತುಬಿಟ್ಟು, ಇನ್ನು ಮುಂದೆ ನಮಗೆ ಬಂದಂಥಾ ಕಷ್ಟವೇ ತಮ್ಮದು ಎಂಬುದಾಗಿ ಭಾವಿಸಿ, ಉಭಯ ಕಡೆಯಿಂದಲೂ ಭೇದ ಕಾಣದೆ, ಏಕೀಕರವಾಗಿ ಸ್ನೇಹ ಸಾರೋದ್ಧಾರವಾಗಿ ನಡೆದುಬರುವ ಬಗ್ಯೆ, ತಾವು ಕೇಳಿದ ನಂಬಿಗೆಭಾಷೆ ನಾವು ಬರೆದುಕೊಡುತ್ತಾ ಇದ್ದೇವೆ. ಅದೇ ಮೇರೆ ನಾವು ಕೇಳಿದ ಹಾಗೆ ತಾವು ಮಾಡಿಕೊಡಬೇಕು. ಆ ಬಳಿಕ ಮುಂಬಾಯಿಂದ ಬಂದು, ಹೆಗ್ಗಳದ ಘಟ್ಟದ ಮೇಲೆ ಇಳಿದು, ಇರುವ ಇಂಗ್ರೇಜರ ಫೌಜನ್ನು ಘಾತ ಮಾಡುವ ಬಗ್ಯೆ ಒಪ್ಪಿಗೆ ಆದರೆ, ಮಿೂರ

ಕಮುದೀ೯ನನನ್ನು ಭಾರಿ ಫೌಜು ಸಮೇತ ತಮ್ಮ ಬಳಿಗೆ ಕಳುಹಿ ಕೊಡುತ್ತಾ ಇದ್ದೇವೆ. ಆ ಬಳಿಕ ಘಟ್ಟದ ಮಾರ್ಗ, ಚಿಲ್ಲರೆ ಮಾರ್ಗಗಳ ಯಾವತ್ತು, ಬಂದು ಮಾಡಿ, ಇಂಗ್ರೇಜಿಯವರ ಫೌಜಿನ ಮೇಲೆ ಬಿದ್ದು, ಮುಳುಗಿಸಿದರೆ, ತಮ್ಮ ಸೀಮೆ ಸರಹದ್ದಿನ ಸಮೀಪದ ಹೆಗ್ಗದೇವನ ಕೋಟೆ, ಪೆರಿಯಾಪಟ್ಟಣ, ಬೆಟ್ಟದಪುರ, ಕೊಣನೂರು, ಅರಕಲ್‌ಗೋಡು ಮುಂತಾದ ತಾಲೂಕುಗಳನ್ನು ಕೊಡುತ್ತಾ ಇದ್ದೇವೆ" ಎಂಬುದಾಗಿ ಬಾಯಿಮಾತಿನಿಂದ ಹೇಳಿದನು. ಕಾಗದ ಗಳಲ್ಲೂ ಇದೇ ವಿವರವಾಗಿ ಬರೆದು ಇತ್ತು. ಈ ವಿವರವನ್ನು ಮಹಾರಾಜರು ತಿಳಕೊಂಡು, ಹೆಗ್ಗಳಕ್ಕೆ ಹೋಗಿ, ಆ ಕಾಗದಗಳನ್ನು ಜನರಲ್ ಸಾಹೇಬರವರ ಕೈಯ ಕೊಟ್ಟು, ಬಾಯಿಮಾತಿನಿಂದ ಕೇಳಿದ ವಿವರವನ್ನು ಹೇಳಿದಲ್ಲಿ "ಟೀಪು ಸುಲ್ತಾನರ ಮಾತಿನ ಮೇಲೆ, ತಾವು ನಮಗೆ ದಗಾ ಮಾಡಲಿಕ್ಕೆ ಇಲ್ಲಾ; ತಮಗೆ ನಮಗೆ ಭೇದವಿಲ್ಲಾ ಎಂಬುದಾಗಿ ನಾವು ಬಹಳ ನಂಬಿಕೊಂಡು, ಇಲ್ಲಿಗೆ ಬಂದು ಇದ್ದೇವೆ. ತಮ್ಮ ನಮ್ಮ ಕಷ್ಟ ಸುಖ ಒಂದೇ ಸರಿ" ಎಂಬುದಾಗಿ ಜನರಲ್ ಸಾಹೇಬರು ಹೇಳಿದರು. ಆ ಬಳಿಕ ಆ ಜನರಲ್ ಸಾಹೇಬರವರ ಸಂಗಡ ಮಸಲತ್ತು ಮಾಡಿ, ಟೀಪು ಸುಲ್ತಾನರಿಗೆ ಜವಾಬು ಬರೆದ ವಿವರ: "ಪರಾಕು ತಾವು ಇಂಥಾ ನಂಬಿಗೆ ಭಾಷೆಯಿಂದ ನಮ್ಮ ಸೀಮೆ, ಒಡವೆ, ಸರ್ವಸ್ವವನ್ನು ಅಪಹರಿಸಿಕೊಂಡು, ಖರಾಬುಮಾಡಿ ಇದ್ದೀರಿ. ಮಹಾದೇವನು ನಮಗೆ ಕೊಟ್ಟು ಇರುವಂಥಾ ಒಂದು ನಾಲಿಗೆಯನ್ನು ಇಂಗ್ರೇಜಿ ಬಹದ್ದೂರ ಸರಕಾರದ ಸ್ನೇಹ ಮಾಡುವಾಗ್ಯೆ, ಅವರಿಗೆ ಕೊಟ್ಟು ಇದ್ದೇವೆ. ಈಗ ನಿಮಗೆ ಕೊಡುವ ಬಗ್ಯೆ ನಿಮ್ಮಂತೆ ಎರಡು ನಾಲಿಗೆ ನಮಗೆ ಇಲ್ಲಾ" ಎಂಬುದಾಗಿ ಬರೆಸಿ, ಆ ಜನರಲ್ ಸಾಹೇಬರವರಿಗೆ ತೋರಿಸಿ, ಆ ಕಾಗದಗಳ ತಂದ ಮನುಷ್ಯರ ಕೈಯ ಕೊಟ್ಟು, ಕಳುಹಿಸಿಬಿಟ್ಟರು.

ಆ ಬಳಿಕ ಮಾಘ ಮಾಸದಲ್ಲಿ ಜನರಲ್ ಸಾಹೇಬ್ ಬಹದ್ದೂರವರು ಹೆಚ್ಚಿಗೆ ಇರುವ ಫಿರಂಗಿಗಳು, ಮದ್ದು, ಗುಂಡು ಮುಂತಾಗಿ ಹೆಗ್ಗಳದಲ್ಲು ಇಟ್ಟು ಅದರ ರಕ್ಷಣೆಯಾರ್ಥದ ಬಗ್ಯೆ ಒಂದು ಪಟಾಲಂ ಕರ್ನಲ್ ಫಿಂಚಿ ಸಾಹೇಬರ ಸಹಾ ಮಡಗಿ ಇದ್ದಲ್ಲದೆ ಮತ್ತು ಬೇಕಾದಂಥಾ ಕೆಲವು ಸಾಮಾನನ್ನು ದೊರೆಗಳು ಕೊಟ್ಟರು; ಅದನ್ನು ತೆಗೆದುಕೊಂಡು ರಶೀದಿ ಕೊಟ್ಟು, ಇನ್ನು ತಲಚೇರಿ ಕಡೆ ಯಿಂದ ಬರುವಂಥಾ ಸಾಮಾನವನ್ನು ಬರಮಾಡಿಕೊಂಡು, ಜೋಪಾನದಲ್ಲು

ಮಡಗಿಕೊಂಡು ಇರಬೇಕು. ಲಷ್ಕರಿನ ಸಂಗಡ ಸಾಗಿಸಿಕೊಂಡು ಹೋಗುವಂಥಾ ರಸ್ತು ಸಾಮಾನು ಸಾಲದೇ ಹೋದರೆ, ಸಾಮಾನು ಕಳುಹುವಂತೆ ನಿಮಗೆ ತಿಳಿಸಿಯೇವು" ಎಂಬುದಾಗಿ ಆ ಕರ್ನಲ್ ಸಾಹೇಬರವರಿಗೆ ತಾಕೀದಿ ಮಾಡಿ, ಆ ಜನರಲ್ ಸಾಹೇಬ್ ಬಹದ್ದೂರವರು ಫೌಜು ಸಮೇತ ಬೇಕಾದ ರಸ್ತು ಸಾಮಾನು ತೆಗೆದುಕೊಂಡು, ಅಲ್ಲಿಂದ ಹೊರಟುಬಂದು, ಸಿದ್ದಾಪುರದಲ್ಲು ಇಳಕೊಂಡು ಇದ್ದರು.

ಅಷ್ಟರಲ್ಲಿ ಬಂಗಾಳದ ಜನರಲ್ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರು, ಮದುರಾಸಿನ ಜನರಲ್ ಮೆಂಡೂಸ್ ಸಾಹೇಬ್ ಬಹದ್ದೂರವರು ಭಾರಿ ಫೌಜು ಸಮೇತ, ನಿಜಾಮಲ್ಲಿಖಾನರ ಫೌಜು, ಪೇಶ್ವೆರ ಫೌಜು ಸಹವಾಗಿ, ಬೆಂಗಳೂರಿಂದ ಕೂಚಾಗಿ ಶ್ರೀರಂಗಪಟ್ಟಣದ ಬಳಿಯ ಬಂದು ಇಳಿದುಕೊಂಡರು.

ಆ ಬಳಿಕ ಮೇಜರ್ ಜನರಲ್ ರಾಬರ್ಟ್ ಅಬರ್‌ಕ್ರಾಂಬಿ ಸಾಹೇಬ್ ಬಹದ್ದೂರವರು ವೀರರಾಜೇಂದ್ರ ಒಡೆಯರವರ ಸಂಗಡ ಹೇಳಿದ ವಿವರ: "ಜನರಲ್ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರು, ಜನರಲ್ ಮೆಂಡೂಸ್ ಸಾಹೇಬ್ ಬಹದ್ದೂರವರು, ಇಂಗ್ರೇಜ ಬಹದ್ದೂರ ಸರಕಾರದ ಫೌಜು ಸಮೇತ, ಹೊರಟುಬಂದು, ಶ್ರೀರಂಗಪಟ್ಟಣದ ಸಮೀಪದಲ್ಲು ಇಳಿದು ಇದ್ದಾರೆ. ಅದೇ ಮೇರೆ, ನವಾಬ ನಿಜಾಮಲ್ಲೀಖಾನರ ಫೌಜು, ಪೇಶ್ವೆಯವರ ಫೌಜು ಸಹಾ, ಪಟ್ಟಣದ ಸಮೀಪಕ್ಕೆ ಬಂದರು. ನಾವು ಫೌಜು ಸಮೇತ ಪಟ್ಟಣಕ್ಕೆ ಕೂಚಾಗಿ ಹೋಗುತ್ತೇವೆ. ರಾತೀಪಿನ ಸಾಮಾನು ಅಕ್ಕಿ ಮುಂತಾಗಿ ಕೊಡಿಸಬೇಕೆಂಬದಾಗಿ, ಮೊದಲು ತಮ್ಮ ಸಂಗಡ ಹೇಳಿ ಇದ್ದೇವಲ್ಲಾ? ಅದನ್ನು ಕೊಡಿಸಬೇಕು" ಎಂಬುದಾಗಿ ಹೇಳಿದಲ್ಲಿ, "ಮೊದಲು ಹೇಳಿದ ಮೇರೆ ಐದು ಲಕ್ಷ ಡಂಗಾಳಿ ಅಕ್ಕಿಯನ್ನು ಕೂಡಿಗೆ ಮಾಡಿಸಿ, ಕಿಗ್ಗಟ್ಟನಾಡ ಮೋದೀಖಾನೆಯಲ್ಲಿ ಜೋಪಾನದಿಂದ ಮಡಗಿಸಿ, ಅದಕ್ಕೆ ಒಬ್ಬನ ತೈನಾತಿಮಾಡಿ, ಇಂಗ್ರೇಜ ಬಹದ್ದೂರ ಸರಕಾರದ ದಂಡಿನಿಂದ ಯಾರಾದರೂ ಒಬ್ಬರು ಬಂದು, ಅಕ್ಕಿ ಕೇಳಿದರೆ ಅಳೆದುಕೊಡುವಂತೆ ತಾಕೀದಿ ಮಾಡಿದ್ದೇವೆ. ಎತ್ತು, ಆಳು ಕಳುಹಿಸಿ, ತರಿಸಿಕೊಳ್ಳಬೇಕು" ಎಂಬುದಾಗಿ ಹೇಳಿದಲ್ಲಿ, ಆ ಜನರಲ್ ಸಾಹೇಬ್ ಬಹದ್ದೂರವರು ಒಪ್ಪಿ, ಹೇರಿಕೊಂಡು

ಬರುವ ಬಗ್ಯೆ, ಹಯೂಜನ ಕಡೆ ವೆಂಕಟನಾಯುಕ ಎಂಬುವನ ಸಂಗಡ ಎತ್ತು ಆಳನ್ನು ಕೊಟ್ಟು, ಇದಕ್ಕೆಲ್ಲಾ ಒಬ್ಬ ಕಪಿತಾನರ ಗೊತ್ತುಮಾಡಿ ಕಳುಹಿಸಿ ಕೊಟ್ಟಲ್ಲಿ, ಮೋದೀಖಾನೆ ತೈನಾತಿಯಲ್ಲಿ ಇದ್ದ ಕಿಗ್ಗಟ್ಟನಾಡ ಅಮಾಲ್ ಕೆಟುವಳಿ ಅಚ್ಚುವಣ್ಣನು ಆ ಅಕ್ಕಿಯನ್ನು ಅಳೆಸಿ, ಆ ಕಪಿತಾನ್ ಸಾಹೇಬರ ವಶಕ್ಕೆ ಕೊಟ್ಟಲ್ಲಿ, ಆ ಎತ್ತುಗಳಿಗೆಲ್ಲಾ ತುಂಬುವಾಗ್ಯೆ, “ ಐದು ಲಕ್ಷ ಡಂಗಾಳಿ ಅಕ್ಕಿಯಿಂದ ಅರೆವಾಶಿ ಅಕ್ಕಿ ತುಂಬು ಆಯಿತು, ಉಳಿಕೆ ಅಕ್ಕಿ ಸಾಗಿಸಿಕೊಂಡು ಹೋಗುವ ಬಗ್ಯೆ ಎರಡನೇ ಸರ್ತಿ ಬರುತ್ತೇವೆ ” ಎಂಬುದಾಗಿ ಹೇಳಿ, ಆ ಕಪಿ ತಾನ್ ಸಾಹೇಬರು ಆ ಅಕ್ಕಿಯನ್ನು ಸಾಗಿಸಿಕೊಂಡು, ಸಿದ್ದಾಪುರದಲ್ಲು ಇಳಿದು ಇದ್ದ ದಂಡಿಗೆ ಕೂಡಿದಲ್ಲಿ, ಬಂಗಾಳದ ಜನರಲ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರು ಮದುರಾಸಿನ ಜನರಲ್ ಮೆಂಡೂಸ್ ಬಹದ್ದೂ ರವರು ಫೌಜು ಸಮೇತ, ಇದಲ್ಲದೆ ನವಾಬ ನಿಜಾಮಲ್ಲೀಖಾನರ ಫೌಜು, ಪೇಶ್ವೆಯರ ಫೌಜು ಸಹ ಕೂಡಿ ಶ್ರೀರಂಗಪಟ್ಟಣದ ಸಮೀಪದಲ್ಲು ಇಳಿದು ಇದ್ದಾರೆ, ತಾವು ಮುಂಬಾಯಿ ಫೌಜು ಸಮೇತ ಬಂದು ಹಾಜರಾಗಬೇಕು ಎಂಬುದಾಗಿ ದೊಡ್ಡ ದಂಡಿನಿಂದ ಒಬ್ಬರು ಸಾಹೇಬರು ಬರದು, ಗುಟ್ಟಿನಿಂದ ಕಳುಹಿದರಿಂದ, ಅದನ್ನು ಜನರಲ್ ರಾಬರ್ಟ್ ಆಬರ್‍ಕ್ರಂಬಿ ಸಾಹೇಬ್ ಬಹದ್ದೂರವರು ನೋಡಿಕೊಂಡು, ಆ ಕ್ಷಣವೇ ಮುಂಬಾಯಿ ದಂಡು ಯಾವ ತ್ತನ್ನೂ ತೆಗೆದುಕೊಂಡು ಹೊರಟು, ಗುಂಡಿಪಟ್ಟಣ ಎಂಬಲ್ಲಿ ಇಳುಕೊಂಡರು.

ಅದೇ ರಾತ್ರೆ ಲಾರ್ಡ್ ಕಾರ್ನವಾಲೀಸ್ ಸಾಹೇಬ್ ಬಹದ್ದೂರವರು ಇಂಗರೇಜ್ ಎರಡು ರಿಜಿಮಿಂಟನ್ನು ಕಗ್ಗೊಲೆ ಬಗ್ಯೆ ಕಳುಹಿದಲ್ಲಿ, ಆ ಎರಡು ರಿಜಮಿಂಟು ನಾಲ್ಕು ಉಕ್ಕಡದ ಒಳಗೆ ಕಿರಂಗೂರಿಂದ ಚಂದಗಾಲ ಪರಿಯಂತ್ರ ಪಾಲಹಳ್ಳಿಯಿಂದ ಗಂಜಾಮು ಪರಿಯಂತರ, ಟೀಪುಸುಲ್ತಾನರ ಫೌಜಿನ ಮೇಲೆ ಬಿದ್ದು ಹೊಡದಲ್ಲಿ, ಅವರ ಫೌಜು ಯಾವತ್ತೂ ಮುರಿದು, ರಾತ್ರೆಕಾಲ ದಲ್ಲಿ ಟೀಪುಸುಲ್ತಾನರ ದಂಡಿನ ಜನರು, ತಮ್ಮವರು ಪರರು ಎಂಬುದ ಕಾಣದೆ, ತಮ್ಮತಮ್ಮೊಳಗೆ ಕಡದಾಡುತ್ತಾ ಈ ಮೇರೆ ಬಗೆಬಗೆ ಲಡಾಯಿ ತಮ್ಮೊಳಗೆ ಮಾಡಿ ಮೃತವಾದರು. ಇಂಗ್ರೇಜಿಯವರು ಗಂಜಾಮಿನಲ್ಲಿ ಮುಂತಾಗಿ ಇದ್ದ ಬತ್ತೇರಿಗಳ ತೆಗೆದುಕೊಂಡರು. ಉಳಿಕೆ ಟೀಪುಸುಲ್ತಾನರ ದಂಡಿನ ಮಂದಿ ಚಲ್ಲವರಿದು, ಎರಡು ಮೂರು ದಿವಸದಲ್ಲು ಜಮಾ ಆಗಿ, ಕೋಟೆ ಆಶ್ರಯ

ಬಿಡಿದು ಇಳುಕೊಂಡರು.

ಅದೇ ದಿವಸ, ಪ್ರಾಕು ಟೀಪುಸುಲ್ತಾನರು ಮೋಸದಿಂದ ಹಿಡಿದುಕೊಂಡು ಹೋಗಿ, ಚೇಲೆಯರ ಮಾಡಿ, ಚಾಕರಿಯಲ್ಲು ಇಟ್ಟುಕೊಂಡು ಇದ್ದಂಥಾ ಕೊಡಗರಲ್ಲಿ ಐದು ಸಾವಿರ ಪರಿಯಂತರ ಕೊಡಗು ಜನರು ಅದೇ ಸಮಯ ಒಳ್ಳೇದು ಎಂತ ತಿಳಿದು, ಕುಟುಂಬ ಮಕ್ಕಳು ಸಹವಾಗಿ ಹನ್ನೆರಡು ಸಾವಿರ ಜನ ಪರಿಯಂತರ ಅವರ ಪೂರ್ವದ ಸ್ಥಳವಾದ ಕೊಡಗಿಗೆ ಬಂದರು.

ಆ ಮಾರನೇ ದಿವಸ ಲಾರ್ಡ್ ಕಾರ್ನವಾಲೀಸ್ ಸಾಹೇಬ್ ಬಹಾದ್ದೂರರವರು, ಜನರಲ್ ಮೆಂಡೂಸ್ ಬಹಾದ್ದೂರರವರು ಸಹ, ಲಾಲ್ ಬಾಗಿನಿಂದ ದವಲತ್‌ಬಾಗ್ ಪರಿಯಂತರ ತಮ್ಮ ದಂಡನ್ನು ಇಳಿಸಿ, ಮೋರ್ಚೆ ಹಾಕುವ ಬಗ್ಯೆ ಪ್ರಾರಂಭ ಮಾಡಿಸಿದರು. ಅದೇ ಮೇರೆ ಕಿರಂಗೂರು ಕಡೆ ಯಿಂದಲೂ ಮೋರ್ಚೆ ಹಾಕಿಸುತ್ತಾ ಇದ್ದರು. ಅವಾಗ್ಯೆ ಮೇಜರ್ ಜನ ರಲ್ ರಾಬರ್ಟ್ ಅಬರ್‌ಕ್ರಂಬಿ ಸಾಹೇಬ್ ಬಹಾದ್ದೂರವರು ಕೊಡಗಿನ ರಾಜರ ಸಂಗಡ ಹೇಳಿದ ವಿವರ : " ನಾವು ಫೌಜು ಸಮೇತ ಇಪ್ಪತ್ತು ದಿವಸದ ಕರ್ಚಿಗೆ ಬೇಕಾದ ರಾತೀಪಿನ ಸಾಮಾನು ತೆಗೆದುಕೊಂಡು ಪಟ್ಟಣಕ್ಕೆ ಹೋಗು ತ್ತೇವೆ ; ಇದು ಮುಗಿದಮೇಲೆ, ಮೂವತ್ತು ಸಾವಿರ ಪರಿಯಂತರ ಎತ್ತು, ಫೌಜು ಸಹ ಕೂಡಿಸಿ, ತಮ್ಮ ಒಳಿಗೆ ಕಳುಹುತ್ತೇವೆ. ಆದ್ದರಿಂದ ತಾವು ತಮ್ಮ ಅರಮನೆಗೆ ಹೋಗಿ, ಈಗ ಜಮಾಯಿಸಿ ಇರುವ ಸಾಮಾನು ಅಲ್ಲದೆ, ನಾಲ್ಕೂ ಕಡೆಯಿಂದ ಸಾಮಾನು ಸರಂಜಾಮು ಲಷ್ಕರಿನ ಕರ್ಚಿನ ಬಗ್ಯೆ ಕ್ರಯ ಮೂಲವಾಗಿ ಜಮಾಯಿಸಿ, ಅದು ಯಾವತ್ತನ್ನು ಕರ್ನಲ್ ಫಿಂಚಿ ಸಾಹೇಬರ ವಶಕ್ಕೆ ಕೊಟ್ಟು, ಅದಕ್ಕೆ ರಶೀತಿ ತೆಗೆದುಕೊಳ್ಳುವದು. ಇದಲ್ಲದೆ ಟೀಪುಸುಲ್ತಾನರ ದಂಡಿಗೆ ರಸತು ಸಾಗುವಂಥಾ ನಾಲ್ಕೂ ಕಡೆ ಮಾರ್ಗ ಗಳನ್ನು ಇಂಗರೇಜ ಬಹಾದ್ದೂರರ ಲಷ್ಕರಿನವರು, ಪೇಶ್ವೆಯವರ ಲಷ್ಕರಿ ನವರು ಸಹಾ ಬಂದು ಮಾಡಿದ್ದಾರೆ. ಇದಲ್ಲದೆ ನಗರದ ಶೀಮೆಯಿಂದ ಅಸ್ತಾರೆ ಗಟ್ಟಾ ಹತ್ತಿ ರಸ್ತಿನ ಸಾಮಾನು ಟೀಪುಸುಲ್ತಾನರ ಲಷ್ಕರಿಗೆ ಸಾಗಿ ಹೋಗುತ್ತಾ ಇದೆ. ತಮ್ಮ ಕಡೆ ಮಂದಿ ಕಳುಹಿಸಿ, ಯುದ್ಧಮುಖದಿಂದ ಆ ರಸ್ತನ್ನು ತಮ್ಮ ವಶಮಾಡಿಕೊಂಡು, ಕರ್ನಲ್ ಫಿಂಚಿ ಸಾಹೇಬರ ವಶಕ್ಕೆ ಕೊಡಿಸಬೇಕು " ಎಂಬುದಾಗಿ ಹೇಳಿ, ತಮ್ಮ ಮುಂಬಾಯಿ ಫೌಜು ಸಮೇತ

ಕೂಚುಮಾಡಿ, ಸುಲ್ತಾನಪೇಟೆ ಬಳಿಯು ಇಳುಕೊಂಡರು.

ಮಹಾರಾಜರು ಪುನಹಾ ಕೊಡಗಿಗೆ ಬಂದು, ಸೀಮೆ ಪಾರುಪತ್ಯಗಾರರ ಯಾವತ್ತು ಕರಸಿ, "ಈಗ ಪಟ್ಟಣದಿಂದ ಕುಟುಂಬ ಮಕ್ಕಳು ಸಹವಾಗಿ ಬಂದು ಇರುವ ಕೊಡಗು ಜನಕ್ಕೆ, ಎರಡು ತಿಂಗಳಿಗೆ ಊಟಕ್ಕೆ ಬೇಕಾದ ಸಾಮಾನು ಅರಮನೆ ತರದಿಂದ ಕೊಟ್ಟು, ಪರಾಕು ಅವರು ಇದ್ದಂಥಾ ಆಯಾ ನಾಡುಗಳಲ್ಲಿ ಮನೆಗಳ ಕಟ್ಟಿಸಿಕೊಟ್ಟು ಇಳಿಸಿ, ಆರೈಕೆ ಮಾಡುತ್ತಾ ಇರಿ. ಈಗ ನಗರದ ಸೀಮೆಯಿಂದ ರಸ್ತಿನ ಸಾಮಾನು ಅಸ್ತಾರೆ ಮಾರ್ಗವಾಗಿ ಟೇಪು ಸುಲ್ತಾನರ ದಂಡಿಗೆ ಸಾಗಿ ಹೋಗುತ್ತಾ ಇದೆ ನಾವು ಕೊಡಗ ಮಂದಿಯನ್ನು ತೆಗೆದುಕೊಂಡು ಅಲ್ಲಿಗೆ ಹೋಗಿ, ಆ ಗಟ್ಟದ ಮಾರ್ಗಗಳ ಕಟ್ಟಿ, ರಸ್ತಿನ ಸಾಮಾನು ತೆಗೆದುಕೊಂಡು, ಮತ್ತು ಟೇಪುಸುಲ್ತಾನರ ಸೀಮೆಗೆ ಹೊಕ್ಕು, ಹೇರಳ ದನಕರು ಸಾಮಾನು ಸಹಾ ತೆಗೆದುಕೊಂಡು, ಅಲ್ಲಿಂದ ಕೆಲವು ದಿವಸ ದಲ್ಲಿ ಕೊಡಗಿಗೆ ಬರುತ್ತಾ ಇದ್ದೇವೆ. ಆದರಲ್ಲಿ ದನಕರು ಯಾವತ್ತು ಈಗ ಹೊಸದಾಗಿ ಬಂದು ಇರುವ ರೈತರಿಗೆ ಕೊಡಿಸಿ, ರಸ್ತಿನ ಸಾಮಾನು ಇಂಗರೇಜ ಬಹಾದ್ದೂರ ಸರಕಾರಕ್ಕೆ ಕೊಡಬಹುದು" ಎಂಬುದಾಗಿ, ಆ ಪಾರುಪತ್ಯ ಗಾರರಿಗೆ ತಾಕೀದಿಮಾಡಿ, ಅದೇ ಮೇರೆ ದೊರೆಗಳು, ಹೇರಳ ಕೊಡಗುಮಂದಿ ತೆಗೆದುಕೊಂಡು ಹೊರಟು, ಐಗೂರ ಸೀಮೆ ತಾಲೂಕಿನ ಅರೆಕೆರೆ ಎಂಬ ಗ್ರಾಮಕ್ಕೆ ಹೋಗಿ ಇಳುಕೊಂಡು, ಅಲ್ಲಿಂದ ಐದು ಸಾವಿರ ಜನ ಕೊಡಗರನ್ನು ಆ ರಸ್ತು ತೆಗೆದುಕೊಂಡು ಬರುವ ಬಗ್ಯೆ, ಅಸ್ತಾರೆ ಗಟ್ಟಕ್ಕೆ ಕಳುಹಿಸಿದಲ್ಲಿ, ಆ ಕೊಡಗರು ಅದೇ ಅಪ್ಪಣೆ ಮೇರೆ ಅಸ್ತಾರೆ ಗಟ್ಟದ ಮಾರ್ಗಗಳನ್ನು ಕಟ್ಟಿ, ರಸ್ತು ಬರುವಂಥಾ ದಾರಿ ನೋಡುತ್ತಾ ಇದ್ದಲ್ಲಿ, ಆ ಬಗೆ ರಸ್ತು ಬಂದು ಗಟ್ಟಕ್ಕೆ ತಲುಪಿದಲ್ಲಿ, ಆ ಕೊಡಗು ಮಂದಿಯು ನಾಲ್ಕು ಕಡೆಯಿಂದ ಮುತ್ತಿ, ಆ ರಸ್ತಿನ ಎತ್ತುಗಳನ್ನು, ಅದರ ಸಂಗಡ ಇದ್ದ ಲಂಬಾಡಿಯರನ್ನು ಸಹಾ ಹಿಡಿದುಕೊಂಡು ಬರುವಾಗ್ಯೆ, ಅಸ್ತಾರೆ ಸೀಮೆಯನ್ನು ಲೂಟಿಮಾಡಿ, ಸಾಮಾನು, ದನಕರು, ಮುಂತಾಗಿ ಹಿಡಕೊಂಡು, ಯಾವತ್ತು ರಸ್ತಿನ ಸಾಮಾನು, ದನ ಕರ ಮುಂತಾಗಿ ದೊರೆಗಳ ಬಳಿಗೆ ಕಳುಹಿಸಿಬಿಟ್ಟು, ಆ ಕೊಡಗು ಮಂದಿಯು ಆ ಕಡೆ ಸೀಮೆಯಲ್ಲಿ ಲೂಟಿ ಮಾಡಿಕೊಂಡು, ಅಲ್ಲಿಯೇ ಇರುತ್ತಿದ್ದಲ್ಲಿ, ಮಹಾ ರಾಜರು ಇಂಗರೇಜ ಬಹಾದ್ದರ ಲಷ್ಕರಿಗೆ ಬೇಕಾದಂಥಾ ಸಾಮಾನವನ್ನು

ಆರಿಸಿ, ಆ ಕರ್ನಲ್ ಫಿಂಚಿ ಸಾಹೇಬರ ಬಳಿಗೆ ಸಾಗಿಸುತ್ತಾ, ಉಳಿಕೆ ಸಾಮಾನು, ದನಕರು, ಕಬ್ಬಿಣ, ಬಟ್ಟೆ, ದವಸ ಮುಂತಾಗಿ, ನಾಡುಗಳ ಪಾರು ಪತ್ಯಗಾರರ ವಶಕ್ಕೆ ಕೊಟ್ಟು, ಹೊಸದಾಗಿ ಬಂದಂಥಾ ರೈತರಿಗೆ ಅವರವರ ತರವರಿತು, ಆ ಯಾವತ್ತು ಸಾಮಾನು, ದನಕರು ಮುಂತಾದ್ದನ್ನು, ಹಂಚಿ ಕೊಡಿಸುತ್ತಾ ಇದ್ದರು.

ಅತ್ತಲಾಗಿ ಟೀಪುಸುಲ್ತಾನರು ತಮ್ಮ ಕೆಲವು ಫೌಜನ್ನು ಸುಲ್ತಾನಪೇಟೆ ಬಳಿ ಇಳುದು ಇದ್ದ ಮುಂಬಾಯಿ ಫೌಜಿನ ಸಂಗಡ ಜಗಳಾ ಮಾಡತಕ್ಕ ಬಗ್ಯೆ ಕಳುಹಿದಲ್ಲಿ, ಆ ಸುಲ್ತಾನರ ಕಡೆ ಮಂದಿಯು ಇಂಗ್ರೇಜ ಬಹದ್ದೂರರ ಫೌಜಿನ ಸಂಗಡ ಜಗಳಾ ಮಾಡಿದಲ್ಲಿ, ಅವರ ಫೌಜಿಗೆ ಬಹಳ ಪೆಟ್ಟಾಗಿ, ಹೇರಳ ಜನ ಮೃತವಾಗಿ, ಜಕಮಿ ಆಗಿ, ಕಡೆಗೆ ಎದುರಿಗೆ ನಿಲ್ಲಲಾರದೆ, ಚಲ್ಲಾಪಿಲ್ಲಿ ಆದುದ ರಿಂದ, ಟೀಪುಸುಲ್ತಾನರು ಎಲ್ಲಾ ಬಗೆಯಿಂದಲೂ ಲಾಚಾರಾಗಿ, ಗುಲಾಮಲ್ಲೀ ಖಾನನನ್ನು ನವಾಬ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ ಬಹಾದ್ದರವರ ಬಳಿಗೆ ಸಲ್ಲಾ ಮಾಡುವ ಬಗ್ಯೆ ಹೇಳಿ ಕಳುಹಿದಲ್ಲಿ, ಆ ನವಾಬ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ್ ಬಹದ್ದೂರವರು ಹೇಳಿದ್ದು: "ಟೀಪುಸುಲ್ತಾ ನರು ಮಾಡಬಾರದಂಥಾ ಕೆಲವು ತುಂಟತನ ಮಾಡಿದ್ದರಿಂದ, ಅವರ ಪಟ್ಟಣ ವನ್ನು ತೆಗೆದುಕೊಳ್ಳಬೇಕೆಂಬುದಾಗಿ, ಹೇರಳ ದ್ರವ್ಯ ವೆಚ್ಚಾ ಮಾಡಿ, ಬಂದು ಇದ್ದೇವೆ. ಆದ್ದರಿಂದ ಈ ಮೂರು ಸಂಸ್ಥಾನದವರಿಗೆ ಮೂರು ಕೋಟಿ ರೂಪಾ ಯನ್ನು ಕೊಟ್ಟು, ಮೊಕರರು ಮಾಡಿ ಇರುವ ಮೇರೆ ಕೆಲವು ಸೀಮೆಯನ್ನು ಬಿಟ್ಟುಕೊಟ್ಟರೆ, ನಾವು ಕಟ್ಟಿಕೊಂಡು ಇರುವಂಥಾ ಬೆಂಗಳೂರು ಮುಂತಾದ ಅವರ ಸೀಮೆಯನ್ನು ಬಿಟ್ಟುಕೊಟ್ಟು ನಮ್ಮ ವಿಲಾಯಿತಿಗಳಿಗೆ ಹೋಗುತ್ತೇವೆ" ಎಂಬುದಾಗಿ ಹೇಳಿದಲ್ಲಿ, ಈ ಮಾತು ಕೇಳಿ, ಗುಲಾಮಲ್ಲೀಖಾನನು ಪುನಹಾ ಬಂದು, ಉಭಯ ಕಡೆಯಿಂದ ನಡೆದ ಸಲ್ಲಾದ ಮಾತುಗಳ ಟೀಪುಸುಲ್ತಾನ ರಿಗೆ ಜಾಹೀರು ಮಾಡಿದಲ್ಲಿ, ಅವರು ಒಡಂಬಟ್ಟು, ಆ ಬಳಿಕ ಮೂರು ಸಂಸ್ಥಾನದವರು ಒಪ್ಪಿ ಖುಶಿಯಿಂದ ನಂಬಿಗೆಭಾಷೆಯಿಂದ ನಿಶ್ಚಯಿಸಿದ ಮೇರೆ ಕರಾನುನಾಮೆಗಳ ಮೊಕರರು ಮಾಡಿ, ಮೂರು ಸಂಸ್ಥಾನದಲ್ಲೂ ಮಡಗಿದರು.

ಟೀಪುಸುಲ್ತಾನರು ಮೂರು ಸಂಸ್ಥಾನದವರಿಗೂ ಕೊಡತಕ್ಕ ಸೀಮೆ ಗಳನ್ನು ವಿಂಗಡಿಸಿ, ಬಿಟ್ಟುಕೊಟ್ಟು, ಕೆಲವು ದ್ರವ್ಯವನ್ನು ನಗದು ಕೊಟ್ಟು,

ಉಳಿಕೆ ದ್ರವ್ಯದ ಬದಲಿಗೆ ತಮ್ಮ ಇಬ್ಬರು ಮಕ್ಕಳನ್ನು ನವಾಬ ವಾಲಿ ಉಲ್ ಆಲಕಾಬ್ ಲಾರ್ಡ್ ಕಾರ್ನವಾಲೀಸ್ ಸಾಹೇಬ್ ಬಹದ್ದೂರವರ ವಶಕ್ಕೆ ಕೊಟ್ಟರು. ಆ ಬಳಿಕ ಬಂಗಾಳದ ಇಂಗರೇಜು ಬಹಾದ್ದೂರವರ ಫೌಜಿನವರು ಮುಂತಾಗಿ ಬತ್ತೇರಿಗಳ ಮೋರ್ಚೆ ಮೇಲೆ ಏರಿಸಿ ಇದ್ದ ಫಿರಂಗಿಗಳನ್ನು ಇಳಿಸಿದರು. ಆ ಸಮಯದಲ್ಲಿ ಗವರ್ನರ್ ಮೇಜರ್ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹಾದ್ದೂರವರು ಕರ್ನಲ್ ಜೇಮ್ಸ್ ಹಾರ್ಟ್‌ಲಿ ಸಾಹೇಬ್ ಬಹಾದ್ದೂರವರು ಸಹಾ, ಇವರು ಇಬ್ಬರು ಮುಂಬಾಯಿ ಸರದಾರರು ನವಾಬ್ ಗವರ್ನರ್ ಜನರಲ್ ಲಾರ್ಡ್ ಕಾರ್ನವಾಲೀಸ್ ಸಾಹೇಬ್ ಬಹದ್ದೂರವರ ಬಳಿಗೆ ಹೋಗಿ, ಅಲ್ಲಿ ಮೂರು ದಿವಸ ಮೊಕ್ಕಾಂ ಮಾಡಿದಲ್ಲಿ, ಆ ನವಾಬ್ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹಾದ್ದೂರವರ ಸಂಗಡ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹಾದ್ದೂರವರು ಹೇಳಿದ ವಿವರ: ಟೀಪುಸುಲ್ತಾನರ ಸರಕಾರಕ್ಕೂ ಇಂಗರೇಜ ಬಹಾದ್ದರ ಸರಕಾರಕ್ಕೂ ಸಂಗಡ ಕೂಡಿ ಇರುವ ಸರಕಾರಗಳಿಗೂ ನಂಬಿಗೆಭಾಷೆಯಿಂದ ಸಲ್ಲಾ ಮೊಕರರು ಆಗಿ, ಟೀಪುಸುಲ್ತಾನರ ಕೈಯಿಂದ ಕೆಲವು ದ್ರವ್ಯವನ್ನು ತೆಗೆದುಕೊಂಡು, ಬಾಕಿ ಬರತಕ್ಕ ದ್ರವ್ಯಕ್ಕೆ ಅವರ ಮಕ್ಕಳನ್ನು ತೆಗೆದುಕೊಂಡು, ಬಾಕಿ ದ್ರವ್ಯ ಸಂದ ಬಳಿಕ ಅವರ ಮಕ್ಕಳ ಕಳುಹಿಸಿಕೊಡುತ್ತೇವೆಂತಾ ಹೇಳಿ ಕೆಲವು ಸೀಮೆಯನ್ನು ತೆಗೆದುಕೊಂಡು, ತಾವು ಬಂಗಾಳಕ್ಕೆ ಹೋಗುತ್ತೀರಿ, ನಾವು ನಮ್ಮ ದಂಡು ಸಮೇತ ಮುಂಬಾಯಿಗೆ ಕೊಡಗಿನ ಮಾರ್ಗವಾಗಿ ಹೋಗುತ್ತೇವೆ. ಆವಾಗ್ಯೆ ಮೊದಲು ಟೀಪುಸುಲ್ತಾನರ ಮೇಲೆ ಜಗಳಕ್ಕೆ ಪ್ರಾರಂಭವಾಗುವಾಗ್ಯೆ, ನಮ್ಮನ್ನು ತಲಚೇರಿಗೆ ಕರೆಸಿ, ಕೊಡಗಿನ ಸಂಸ್ಥಾನಕ್ಕೂ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಸೂರ್ಯ ಚಂದ್ರ ಇರುವ ಪರಿಯಂತರ ತಮ್ಮ ವಳಗೆ ಸ್ನೇಹ ಸಾರೋದ್ಧಾರವಾಗಿ ನಡೆದುಬರಬೇಕು. ಇದಲ್ಲದೆ ಟೀಪುಸುಲ್ತಾನರು ಇಂಗ್ರೇಜ ಬಹಾದ್ದರ ಸರಕಾರಕ್ಕೂ ಕೊಡಗಿನ ಸಂಸ್ಥಾನಕ್ಕೂ ದೊಡ್ಡ ಶತ್ರು ಆಗಿದ್ದಾರೆ. ಟೀಪುಸುಲ್ತಾನರ ಸಂಗಡ ಲಡಾಯಕ್ಕೆ ಇಂಗ್ರೇಜ ಬಹಾದ್ದರ ಸರಕಾರದ ಫೌಜು ಹೋಗುವಾಗ್ಯೆ, ಕೊಡಗಿನ ಸೀಮೆ ಒಳಗೆ ಮಾರ್ಗ ಕೊಡಬೇಕು. ಲಷ್ಕರಿಗೆ ಬೇಕಾದಂಥಾ ಸಾಮಾನು ಸರಂಜಾಮು ತಮ್ಮ ಕಡೆಯಿಂದ ಕೊಡಿಸಬೇಕು. ಟೀಪುಸುಲ್ತಾನರ ಸ್ನೇಹ

ಮಡಗಬಾರದು. ಮತ್ತು ಉಭಯ ಕಡೆಯಿಂದಲೂ ಆ ಸುಲ್ತಾನರ ಮೇಲೆ ಜಗಳಾ ಮಾಡುವದಕ್ಕೆ ವರ್ತಿಸಬೇಕು. ಒಂದು ಸಮಯದಲ್ಲಿ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಟೇಪುಸುಲ್ತಾನರ ಸರಕಾರಕ್ಕೂ ಸಲ್ಲಾ ಆದರೆ, ಮೊದಲು ಕೊಡಗಿನ ಸಂಸ್ಥಾನಕ್ಕೆ ಸಲ್ಲಾ ಮಾಡಿ, ಆ ಬಳಿಕ ಇಂಗ್ರೇಜ ಬಹಾದ್ದರ ಸರಕಾರಕ್ಕೆ ಸಲ್ಲಾ ಮಾಡ್ಯೇವು ಎಂಬುದಾಗಿ, ಈ ಮೇರೆ ಉಭಯ ಕಡೆಯಿಂದ ಕರಾರುನಾಮೆ ಮೊಕರರು ಆಗಿ ಇದೆ. ಅದನ್ನು ನಂಬಿ ನಾವು ನಿಮ್ಮ ಮುಂಬಾಯಿ ದಂಡು ಹೋಗುವ ಬಗ್ಯೆ, ನಮ್ಮ ಸೀಮೆಯಲ್ಲಿ ಮಾರ್ಗ ಕೊಟ್ಟು, ದಂಡಿಗೆ ಬೇಕಾದ ಸಾಮಾನು ಸರಂಜಾಮು, ಪ್ರಾಣ ಪ್ರಯತ್ನ ಮಾಡಿ, ತರಿಸಿ ಕೊಟ್ಟು, ಇಂಗ್ರೇಜ ಸರಕಾರಕ್ಕೆ ಜಯ ಆಗಲಿ ಎಂಬುದಾಗಿ ಹಾರೈಸಿಕೊಂಡು ಇದ್ದೆವು. ಅದೇ ಮೇರೆ ಇಂಗ್ರೇಜ ಸರಕಾರದ ಲಷ್ಕರು ಶ್ರೀರಂಗಪಟ್ಟಣಕ್ಕೆ ಹೋಗಿ ಟೇಪುಸುಲ್ತಾನರ ಸಂಗಡ ಲಡಾಯಿ ಮಾಡಿದಲ್ಲಿ ಅವರು ಲಾಚಾರಾಗಿ ತಮ್ಮ ಸಂಗಡ ಸಲ್ಲಾ ಮಾಡಿದ್ದರಿಂದ, ಹೇರಳ ದ್ರವ್ಯ ಕೆಲವು ಸೀಮೆಗಳ ಸಹಾ ತೆಗೆದುಕೊಂಡು, ಈ ಮೇರೆ ಟೇಪುಸುಲ್ತಾನರ ಸಂಗಡ ಸ್ನೇಹ ಬೆಳೆಸಿಕೊಂಡು, ತಾವು ಹೋಗುತ್ತೀರಿ; ನಾವು ಟೇಪು ಸುಲ್ತಾನರ ಕಡೆಯಿಂದ ಸ್ನೇಹದ ಮುಖ ತಿರುಗಿಸಿ, ಇಂಗರೇಜ ಸರಕಾರದ ದೋಸ್ತಿ ಮಡಗಿದ್ದರಿಂದಲೂ, ಟೇಪುಸುಲ್ತಾನರ ಮಾತಿಗೆ ನಾವು ಒಡಂಬಡ ದವರಾದ್ದರಿಂದಲೂ, ಅವರಿಗೆ ನಾವು ಹೇರಳ ವೈರಿಗಳಾಗಿ ಇದ್ದೇವೆ. ಹೀಗೆ ಇರುವಲ್ಲಿ, ತಾವು ಟೇಪುಸುಲ್ತಾನರ ಸಂಗಡ ದೋಸ್ತಿ ನಡತೆ ಕಾಯಂ ಮಾಡಿ ಕೊಂಡು, ನಮಗೂ ಟೇಪುಸುಲ್ತಾನರಿಗೂ ಇರುವಂಥಾ ವಿರುದ್ಧವನ್ನು ಬೆಳಸಿ, ತಮ್ಮ ವಿಲಾಯಿತಿಗಳಿಗೆ ಹೋಗುತ್ತೀರಿ. ಇಂಗರೇಜ ಬಹಾದ್ದರ ಸರಕಾರದ ಸತ್ಯ ಧರ್ಮ ಇದೇ ಮೇರೆ ಇದೆಯೋ? ಎಂತ ಈ ವಿವರ ಕೊಡಗಿನ ಮಹಾರಾಜರು ಕೇಳಿದರೆ, ಏನು ಜವಾಬು ಹೇಳಬೇಕು" ಎಂತ ಕೇಳಿದಲ್ಲಿ ಈ ವಿವರ ಯಾವತ್ತು ನವಾಬ ಮಾಲಿ ಉಲ್ ಅಲಕಾಬ್ ಲಾರ್ಡ್ ಕಾರ್ನ್ ವಾಲಿಸ್ ಸಾಹೇಬ್ ಬಹದ್ದೂರವರು ಮನಸ್ಸಿಗೆ ತಂದುಕೊಂಡು, "ಕೊಡಗಿನ ಮಹಾರಾಜರಿಗೆ ಕಂಪನಿ ಇಂಗರೇಜ ಬಹಾದ್ದರ ಸರಕಾರದಿಂದ ಕರಾರು ನಾಮಾ ಬರದುಕೊಟ್ಟು ಇರುವ ಮೇರೆಗೆ ಸಲ್ಲಾ ಮಾಡಿಕೊಡಬೇಕು. ಅದು ವಿಹಿತವದೆ" ಎಂಬುದಾಗಿ ಹೇಳಿ, "ಮೊದಲು ಕೊಡಗಿನ ಮಹಾರಾಜರ

ಕಡೆಯಿಂದ ಮಿತ್ರತ್ವ ವಾಂಛಲ್ಯವಿಟ್ಟು ಶಾಶ್ವತವಾಗಿ ನಡದುಬರಬೇಕು ಎಂಬುದಾಗಿ, ಭಾಷಾಪತ್ರಿಕೆ ಬರೆಸಿ, ಇಂಗ್ರೇಜ ಬಹಾದ್ದರ ಕಂಪನಿ ಸರಕಾರ ದಲ್ಲು ಮಡಗಿ ಇದೆ. ಆದ್ದರಿಂದ ಕಂಪನಿ ಇಂಗ್ರೇಜ ಸರಕಾರದಲ್ಲಿ ನೀವು ಸಲ್ಲಾದ ಮಾರ್ಗದಿಂದ ಯಾವ ಮೇರೆ ಸ್ನೇಹಪಾತ್ರರಾಗಿ ಇದ್ದೀರೋ, ಅದೇ ಮೇರೆ ಕೊಡಗಿನ ಮಹಾರಾಜರ ಸಂಗಡಲೂ ಸಲ್ಲಾಮಾಡಿ ಸ್ನೇಹ ಮಡಗಬೇಕು, ಅವರ ಸಂಗಡ ವಿರುದ್ಧ ಮಾಡಬಾರದು" ಎಂಬುದಾಗಿ ಟೀಪುಸುಲ್ತಾನರಿಗೆ ಕಾಗದ ಬರೆದು ಕಳುಹಿದಲ್ಲಿ, ಈ ಮಾತಿಗೆ ಟೀಪುಸುಲ್ತಾನರು ಒಡಂಬಡದೆ, ಜವಾಬು ಬರೆಸಿ, ಕಳುಹಿದ ವಿವರ : "ಪರಾಕು ಕೊಡಗಿನ ದೊರೆಗಳ ಸಂಗಡ ದೋಸ್ತಿ ನಡದುಬರಬೇಕೆಂಬದಾಗಿ ಕರಾರುನಾಮಾ ಬರಸಿ ಮಡಗಿಕೊಂಡು, ಇದ್ದೀರಿ. ಅದೇ ಮೇರೆ ತಾವು ಈಗ ನಂಬಿಗೆಭಾಷೆಯಿಂದ ಸಲ್ಲಾನಾಮಾ ಬರದುಕೊಟ್ಟು, ನಮ್ಮ ಸರಕಾರದ ದೋಸ್ತಿ ಮಡಗುತ್ತೀರಿ. ಹೀಗೆ ಇರುವಲ್ಲಿ ಇಂಗ್ರೇಜ ಸರಕಾರದವರು ನಮಗೂ ಅವರಿಗೂ ಸ್ನೇಹಿತರು ಇದ್ದೀರಿ. ಉಭಯಸ್ಥರಿಗೂ ತಾವು ಸಹಾಯ ಮಾಡಬಾರದು. ಕೊಡಗಿನ ದೊರೆಗಳ ಮಾತಿನಿಂದ ತಮಗೆ ಕೆಲಸವಿಲ್ಲ. ನಾವೂ ಅವರೂ ಭುಜಬಲ ಶಕ್ತಿ ಇದ್ದಂತೆ ನೋಡಿಕೊಳ್ಳುತ್ತೇವೆ" ಎಂಬುದಾಗಿ ಬರೆದು ಕಳುಹಿದಲ್ಲಿ, ಅದನ್ನು ನೋಡಿ, ಮಹಾ ಸಿಟ್ಟಿನಲ್ಲಿ, ಟೀಪುಸುಲ್ತಾನರು ಕೊಡಗಿನ ಮಹಾರಾಜರ ಸಂಗಡ ಸಲ್ಲಾ ಮಾಡಿ, ಸ್ನೇಹ ಮಾಡುವದಕ್ಕೆ ಮನಸ್ಸು ಇಲ್ಲಾ. ಆದ್ದರಿಂದ, ಈಗ ಕಂಪನಿ ಸರಕಾರದ ಸಂಗಡಾ ಸಲ್ಲಾ ನಿಶ್ಚೈಸಿ ಇರುವಂಥಾದ್ದು ಕೆಲಸವಿಲ್ಲ. ಟೀಪುಸುಲ್ತಾನರ ಸಂಗಡ ಲಡಾಯವೇ ಹೊರ್ತು ಸಲ್ಲಾ ಮಾಡಲಿಕ್ಕೆ ಇಲ್ಲಾ" ಎಂತ ಆ ಟೀಪುಸುಲ್ತಾನರ ವಕೀಲರ ಸಂಗಡ ಹೇಳಿ ಕಳುಹಿ, ಯಥಾಪ್ರಕಾರ ಮೋರ್ಚೆಗಳ ಮೇಲೆ ಫಿರಂಗಿಗಳ ಏರಿಸುವ ಬಗ್ಗೆ ಹುಕುಂ ಕೊಟ್ಟರು. ಆ ವಕೀಲರು ಟೀಪುಸುಲ್ತಾನರ ಬಳಿಗೆ ಬಂದು, "ಕೊಡಗಿನ ಮಹಾರಾಜರ ಸಂಗಡ ಸ್ನೇಹ ಮಡಗಿ, ಈಗ ಆಗಿರುವ ಸಲ್ಲಾ ಕಾಯಂ ಮಡಗಬೇಕು. ಆದ್ದರಿಂದ ಯಾವತ್ತೂ ಜನರಿಗೂ ಸುಖ ಉಂಟಾದೀತು" ಎಂತ ಜಾಹೀರು ಮಾಡಿದಲ್ಲಿ, ಟೀಪುಸುಲ್ತಾನರು ಈ ಮಾತನ್ನು ಮನಸ್ಸಿಗೆ ತಂದುಕೊಂಡು, "ನಾವು ಇಂಗ್ರೇಜ ಬಹಾದ್ದರ ಕಂಪನಿ ಸರಕಾರದ ಸಂಗಡ ವಿರುದ್ಧ ಬಿಟ್ಟು, ಸಲ್ಲಾ ಮಾಡಿ ಇರುವ ಮೇರೆ,

ನಮಗೂ ಕೊಡಗಿನ ದೊರೆಗಳಿಗೂ ಸಲ್ಲಾ ನಿಶ್ಚಯವೇ ಸರಿ; ಇನ್ನು ಮುಂದೆ ಕೊಡಗಿನ ದೊರೆಗಳ ಮೇಲಾಗಲೀ, ಅವರ ಸೀಮೆ ಮೇಲಾಗಲಿ, ಅವರ ರೈತರ ಮೇಲಾಗಲಿ ವಿರುದ್ಧ ಮಾಡಿದರೆ, ಇಂಗ್ರೇಜ ಸರಕಾರದ ಸಂಗಡ ಮಾಡಿದ ಹಾಗೇ ಸರಿ. ಎಲ್ಲಾ ಬಗೆಯಲ್ಲೂ ಅವರಿಗೂ ನಮಗೂ ಸ್ನೇಹವೇ ಹೊರ್ತು ವಿಕಲ್ಪ ಯೋಚಿಸಲಿಕ್ಕೆ ಇಲ್ಲಾ, ಎಂಬುದಾಗಿಯೂ, ಪರಾಕು ಇಪ್ಪತ್ತನಾಲ್ಕು ಸಾವಿರ ರೂಪಾಯಿ ನಮ್ಮ ಸರಕಾರಕ್ಕೆ ಕೊಡುತ್ತಿದ್ದರು, ಅದನ್ನು ಇಂಗ್ರೇಜ ಸರಕಾರಕ್ಕೆ ತೆಗೆದುಕೊಳ್ಳಬೇಕೆಂಬದಾಗಿ ಸಹಾ" ಬರೆದು, ಅದಕ್ಕೆ ತಮ್ಮ ದಸ್ಕತ್ತು ಮೊಹರ ಮಾಡಿ, ನವಾಬ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರ ಬಳಿಗೆ ಕಳುಹಿದಲ್ಲಿ, ಅವರು ಈ ಸಲ್ಲಾದ ವಿವರವನ್ನು ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರವರಿಗೂ, ಕರ್ನಲ್ ಹಾರ್ಟ್‌ಲಿ ಸಾಹೇಬ್ ಬಹದ್ದೂರವರಿಗೂ ತಿಳಿಸಿ, ಮೋರ್ಚೆಗಳ ಮೇಲೆ ಇದ್ದ ಫಿರಂಗಿಗಳನ್ನು ಇಳಿಸಿ, ಸಲ್ಲಾಕ್ಕೆ ನಿರ್ಣಯವಾದ್ದರಿಂದ ಸಂತೋಷಿತರಾಗಿ, ಮೇಜರ್ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರವರೂ, ಕರ್ನಲ್ ಹಾರ್ಟ್‌ಲಿ ಸಾಹೇಬ್ ಬಹದ್ದೂರವರು ಸಹಾ ಅಲ್ಲಿಂದ ತಮ್ಮ ಫೌಜು ಇಳಿದು ಇದ್ದ ಜಾಗಕ್ಕೆ ಬಂದು, "ಟೀಪುಸುಲ್ತಾನರಿಗೂ ಇಂಗ್ರೇಜ ಬಹದ್ದೂರವರ ಸರಕಾರಕ್ಕೂ ಲಡಾಯಿ ಎಂಬ ಬೆಂಕಿ ಉರಿಯುತ್ತಿದ್ದಂಥಾದ್ದು ಸ್ತಂಭನವಾಗಿ, ಸ್ಥಿರವಾದ ಸಲ್ಲಾ ನಿಶ್ಚಯವಾಗಿ ಇದೆ. ಅದೇ ಮೇರೆ, ತಮ್ಮ ಕೊಡಗಿನ ಸೀಮೆ ಮಾತಾಗಿಯೂ ಕರಾರುನಾಮಾ ಬರೆದು, ಸಲ್ಲಾ ಮೊಕರರು ಆಗಿ ಇದೆ. ಆದ್ದರಿಂದ ಟೀಪುಸುಲ್ತಾನರು ತಮ್ಮ ಮೇಲೆ ವೈರಾ ಮಾಡಲಿಕ್ಕೆ ಇಲ್ಲಾ. ತಾವು ಅವರ ಮೇಲೆ ಶತ್ರುತ್ವ ಮಡಗದೆ, ತಮ್ಮ ಮುಂದಿ ಸಮೇತ ತಾವು ಕೊಡಗು ಸೀಮೆಗೆ ಬಂದರೆ, ನಾವು ಫೌಜು ಸಮೇತ ಹೊರಟು ಮುಂಬಾಯಿಗೆ ಹೋಗತಕ್ಕ ಬಗ್ಯೆ ಕೊಡಗಿಗೆ ಬರುತ್ತೇವೆ. ಆ ಬಳಿಕ, ತಮ್ಮ ನಮ್ಮ ಭೇಟಿ ಆದಲ್ಲಿ, ಕರಾರು ನಿಶ್ಚಯ ಆದ ವಿವರ ಯಾವತ್ತು ನಾವು ನಿಮಗೆ ತಿಳಿಸ್ಯೇವು" ಎಂಬುದಾಗಿ, ಮೇಜರ್ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರವರು ವೀರರಾಜೇಂದ್ರ ವಡೆಯರವರಿಗೆ ಕಾಗದ ಬರೆಸಿ, ಮಹಾರಾಜರು ಇರುತ್ತಿದ್ದ ಐಗೂರು ಸೀಮೆ ವಳಿತವಾದ

ಅರಿಕೆರೆಗೆ ಕಳುಹಿದರು.

ಆ ಕಾಗದವನ್ನು ನೋಡಿಕೊಂಡು, ಅಲ್ಲಿ ಠಾಣ್ಯದ ನಗರಹಳ್ಳಿ ಪುಟ್ಟೇಗೌಡ ಮುಂಡೆಪ್ಪನ ಅಪ್ಪಯ್ಯನ ಸಹಾ ಇಟ್ಟು, ಸಂಗಡ ಇರುವ ಮಂದಿ ಸಮೇತ ಹೊರಟು, ನಾಲ್ಕುನಾಡ ಅರಮನೆಗೆ ಬಂದು ಇರುತ್ತಿದ್ದರು.

ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹಾದ್ದೂರವರು ಇಂಗ್ರೇಜ ಬಹಾದ್ದರ ಕಂಪನಿ ಸರಕಾರಕ್ಕೂ ಟೀಪುಸುಲ್ತಾನರಿಗೂ ಸಲ್ಲಾಮಾಡಿದಂಥಾದ್ದು ಜನರಲ್ ಮೆಂಡೂಸ್ ಸಾಹೇಬ್ ಬಹಾದ್ದೂರವರು ಒಡಂಬಡದೆ, ತಮ್ಮ ಕೈಯಿಂದ ಪಿಸ್ತೂಲಿನ ಗುಂಡಿನಿಂದ ತಮ್ಮ ಮೈಗೆ ತಾವೇ ಹೊಡೆದು ಜಕಮಿ ಮಾಡಿಕೊಂಡರು. ಆ ಬಳಿಕ ಮದರಾಸಿನ ಸರದಾರರು ಆ ಸಾಹೇಬರನ್ನು ಸಂಗಡ ಸಾಗಿಸಿಕೊಂಡು, ಮದರಾಸಿಗೆ ಹೋದರು. ಪರಶುರಾಮಭಾವುನು ಈ ಸಲ್ಲಾಕೆ ಒಡಂಬಡದೆ, ತಮ್ಮ ಫೌಜು ತೆಗೆದುಕೊಂಡು ಹೋಗುವಾಗ್ಯೆ, ಅಲ್ಲಲ್ಲಿ ಕೆಲು ಸೀಮೆಯನ್ನು ಲೂಟಿಮಾಡಿಕೊಂಡು, ತಮ್ಮ ದೇಶಕ್ಕೆ ಹೋದರು. ಹರಿಪಂಥ ಪಟಕ್ಯನು ಫೌಜು ಸಮೇತ ಸಲ್ಲಾಕ್ಕೆ ಒಡಂಬಟ್ಟು, ತಮ್ಮ ದೇಶಕ್ಕೆ ಹೋದರು. ನಿಜಾಮಲ್ಲೀಖಾನನು ಇದೇ ಮೇರೆ ಒಡಂಬಟ್ಟು, ಫೌಜು ಸಮೇತ ತಮ್ಮ ದೇಶಕ್ಕೆ ಹೋದರು. ನವಾಬ್ ಮಾಲಿ ಉಲ್ ಅಲ್ಕಾಬ್ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರು ಮದರಾಸಿನ ಮಾರ್ಗವಾಗಿ ಬಂಗಾಳಕ್ಕೆ ಹೋದರು. ಮೇಜರ್ ಜನರಲ್ ರಾಬರ್ಟ್ ಆಬಕ್ರಾರ್ಂಬಿ ಸಾಹೇಬ್ ಬಹದ್ದೂರವರು ತಮ್ಮ ಫೌಜು ಸಮೇತವಾಗಿ ಹೊರಟುಬಂದು, ಹೆಗ್ಗಳದ ಗಟ್ಟದ ಬಳಿಯ ಮೈದಾನದಲ್ಲು ಇಳಿದುಕೊಂಡರು.

ಆವಾಗ್ಯೆ ಮಹಾರಾಜರವರು ನಾಲ್ಕುನಾಡು ಅರಮನೆಯಿಂದ ಹೋಗಿ, ಆ ಜನರಲ್ ಸಾಹೇಬರವರ ಭೇಟಿ ಆದಲ್ಲಿ, ಆ ಜನರಲ್ ಸಾಹೇಬರು ಹೇಳಿದ ವಿವರ: "ಟೀಪುಸುಲ್ತಾನರು ತಮ್ಮ ಮೇಲೆ ವಿರುದ್ಧ ಮಾಡಲಿಕ್ಕೆ ಇಲ್ಲಾ. ತಾವು ಅವರ ಮೇಲೆ ವಿರುದ್ಧ ಮಾಡಗಬಾರದು. ಈಗ ಟೀಪುಸುಲ್ತಾನರ ಕೆಲವು ಸೀಮೆ ತಾವು ಕಟ್ಟಿಕೊಂಡು ಇರುವಂಥಾದ್ದನ್ನು ಬಿಟ್ಟುಕೊಟ್ಟು ತಮ್ಮ ಸೀಮೆ ಸರಹದ್ದಿನ ಬಂದುಬಸ್ತು ಮಾಡಿಕೊಂಡು, ಪರಾಕು ಟೀಪುಸುಲ್ತಾನರಿಗೆ ಕೊಡುತ್ತಾ ಇದ್ದಂಥಾ ಇಪ್ಪತ್ತನಾಲ್ಕು ಸಾವಿರ ರೂಪಾಯಿಯನ್ನು ಕಾಲಂಪ್ರತಿಯಲ್ಲು ಇಂಗ್ರೇಜ ಬಹಾದ್ದರ ಕಂಪನಿ ಸರಕಾರಕ್ಕೆ ಕೊಟ್ಟು ಬರಬೇಕು"

ಎಂಬುದಾಗಿ ಹೇಳಿದಲ್ಲಿ, ಈ ಮಾತಿಗೆ ಮಹಾರಾಜರು ಹೇಳಿದ ವಿವರ: "ಟೀಪುಸುಲ್ತಾನರು ಈ ಹಣ ನಮ್ಮ ಕಡೆಯಿಂದ ತೆಗೆದುಕೊಳ್ಳಲೂ ಇಲ್ಲಾ; ಅವರ ಮಾತಿನ ಮೇಲೆ ಈ ಹಣ ಕಂಪನಿ ಸರಕಾರಕ್ಕೆ ಕೊಡುವುದಕ್ಕೂ ಇಲ್ಲಾ; ಈಗ ಟೀಪುಸುಲ್ತಾನರ ಕೆಲು ಸೀಮೆ ನಾವು ಕಟ್ಟಿಕೊಂಡು ಇರುವಂಥಾದ್ದು ಬಿಡಲಿಕ್ಕೂ ಇಲ್ಲ. ಇಂಥಾ ಸಲ್ಲಾವು ನಮಗೆ ಬೇಕಿಲ್ಲಾ" ಎಂಬುದಾಗಿ ಹೇಳಿದಲ್ಲಿ, ಆ ಜನರಲ್ ಸಾಹೇಬರು ಈ ಮಾತು ಯಾವತ್ತು ಕೇಳಿ, ಮನಸ್ಸಿನಲ್ಲಿ ಬಹಳ ನೊಂದುಕೊಂಡು, "ತಮ್ಮ ನಮ್ಮ ಉಭಯ ಸರಕಾರವು ಭೇದವಾಗಿ ಕಾಣದೆ, ನಂಬಿಗೆಭಾಷೆಯಿಂದ ಸಲ್ಲಾ ಮೊಕರೂರು ಆಗಿ ಇದೆ. ಅದಕ್ಕೆ ವಿಕಲ್ಪ ತರಬಾರದು. ಟೀಪುಸುಲ್ತಾನರ ಸೀಮೆ ತಾವು ಸಾಧಿಸಿಕೊಂಡು ಇರುವಂಥಾದ್ದನ್ನು ಬಿಟ್ಟುಕೊಟ್ಟು, ತಮ್ಮ ಸೀಮೆ ಸರಹದ್ದು ಬಂದುಬಸ್ತು ಮಾಡಿಕೊಳ್ಳಬೇಕು. ಟೀಪುಸುಲ್ತಾನರ ಸೀಮೆ ಸರಹದ್ದು ತಮ್ಮ ಸೀಮೆ ಸರಹದ್ದು ಸಹಾ ಕೂಡಿ ಇದೆ. ಈ ಮೇರೆ ಇದ್ದರೆ, ಕಜಿಯಾ ಬಾಕಿ ಇದ್ದೀತು. ಆದ್ದರಿಂದ ಈ ಸರಹದ್ದನ್ನು ತಪಸ್ಸೀಲು ಬರದು, ಬಂದುಬಸ್ತು ಮಾಡುವ ಬಗ್ಗೆ, ಇಂಗ್ರೇರು ಸಾಹೇಬರ ಕಳುಹುತ್ತೇವೆ. ಈಗ ನಾವು ಮುಂಬಾಯಿಗೆ ಹೋಗಿ, ಪುನಹ ಅವಲ್ ಮೋಸಮ್ಮಿನಲ್ಲಿ ಕಣ್ಣೂರಿಗೆ ಬರುತ್ತೇವೆ. ಆವಾಗ್ಯೆ ತಮ್ಮ ಭೇಟಿ ಆಗಿ, ತಮ್ಮ ಮನಸ್ಸಿಗೆ ಬೇಕಾದ ಹಾಗೆ, ಸಂತೋಷ ಆಗುವಂತೆ, ಕರಾರುನಾಮಾ ಬರೆದುಕೊಟ್ಟೇವು" ಎಂಬುದಾಗಿ, ಈ ಮೇರೆ ಬಹಳ ಬಗೆಯಿಂದ ಮಹಾರಾಜರವರ ಒಡಂಬಡಿಸಿ, ಕಲಿಸಂದ ಆರ್ಲಳನೇ ಪರಿಧಾವಿ ಸಂವತ್ಸರದ ಚೈತ್ರಮಾಸದಲ್ಲಿ ಜನರಲ್ ಸಾಹೇಬರು ಫೌಜು ಸಮೇತ ತಲಚೇರಿಗೆ ಹೋದರು.

ಮಹಾರಾಜರು ನಾಲ್ಕುನಾಡು ಅರಮನೆಗೆ ಬಂದು, ಹೊಸದಾಗಿ ಸಾಧಿಸಿಕೊಂಡು ಇದ್ದಂಥಾ ಟೀಪುಸುಲ್ತಾನರ ಸೀಮೆಯನ್ನು ಬಿಟ್ಟು, ತಾಣ್ಯದ ಮಂದಿಯನ್ನು ಕರೆಸಿಕೊಂಡು, ತಮ್ಮ ಸರಹದ್ದಿನ ಬಂದುಬಸ್ತು ಮಾಡಿಸಿಕೊಂಡು ಇದ್ದರು.

ಆ ಬಳಿಕ ಅದೇ ಸಂವತ್ಸರದ ಜೇಷ್ಠ ಮಾಸದಲ್ಲಿ ಟೀಪುಸುಲ್ತಾನರ ಕಡೆಯಿಂದ ಲಂಗಡಾ ದಾಡಿ ಸೇಖ್ ಇಮಾಮು ಎಂಬ ಶಿಪಾದಾರನು ಕೊಡೆಯಾಲದ (ಮಂಗಳೂರು) ಸೀಮೆ ಗಡಿ ಯಾವತ್ತೂ ವಿಚಾರಿಸಿಕೊಂಡು, ತನ್ನ

ಕಡೆ ಜನ ಠಾಣ್ಯ ಇಟ್ಟು, ಬಂದುಬಸ್ತು ಮಾಡಿಕೊಳ್ಳುತ್ತಾ, ಪಂಜ ಬೆಳ್ಳಾರೆ ಸಮೀಪಕ್ಕೆ ಬಂದು, "ಈ ಪಂಜ ಬೆಳ್ಳಾರೆ ಎರಡು ಮಾಗಣೆಯು ನನ್ನ ಖಾವಂದರಾದ ಟೀಪುಸುಲ್ತಾನರ ಸೀಮೆಗೆ ಸೇರತಕ್ಕದ್ದು. ಇದನ್ನು ಬಿಟ್ಟು ಕೊಡಬೇಕು" ಎಂತ, ಆತನು ಹೇಳಿದಲ್ಲಿ, ಈ ಮಾತಿಗೆ ದೊರೆಗಳು ಹೇಳಿ ಕಳುಹಿದ ವಿವರ: "ಪರಾಕು ವಿಕೃತಿ ಸಂವತ್ಸರದಲ್ಲಿ, ಟೀಪುಸುಲ್ತಾನರ ತಂದೆಯಾದ ನವಾಬ್ ಹೈದರಲ್ಲೀಖಾನ್ ಬಹದ್ದೂರವರು ಸ್ನೇಹಮಾರ್ಗ ದಿಂದ ತೋರಣ ಕಟ್ಟಿ, ಕೊಡಗಿನ ದೊರೆಗಳವರಿಗೆ ಬಿಟ್ಟು ಇದ್ದಾರೆ. ಅವರ ಮಗ ಟೀಪುಸುಲ್ತಾನರು ಈಗ ಕೇಳುವಂಥಾದ್ದು ವಿಹಿತವಲ್ಲಾ" ಎಂಬುದಾಗಿ ಹೇಳಿಕಳುಹಿದಲ್ಲಿ ಈ ಮಾತು ಕೇಳಿ, ಆ ಸೇಖ್ ಇಮಾಮನು ಹೇಳಿದ್ದು: "ನವಾಬ್ ಹೈದರಲ್ಲೀಖಾನರಿಗೆ ಕೊಡಗಿನ ದೊರೆಗಳು ಸ್ನೇಹವಾಗಿ ಇದ್ದರು. ಆದ್ದರಿಂದ ದೋಸ್ತಿ ಉದ್ದಿಶ್ಯವಾಗಿ ಬಿಟ್ಟುಕೊಟ್ಟು ಇದ್ದರು. ಈಗ ಕೊಡಗಿನ ದೊರೆಗಳು ಹೈದರಲ್ಲೀಖಾನರ ಮಗ ಟೀಪುಸುಲ್ತಾನರ ಸಂಗಡ ವಿರುದ್ಧಮಡಗಿ, ಇಂಗ್ರೇಜಿಯವರ ದೋಸ್ತಿ ಮಾಡಿಕೊಂಡು, ಟೀಪುಸುಲ್ತಾನರಿಗೆ ಶತ್ರುವಾಗಿ ಇದ್ದಾರೆ. ಹೀಗೆ ಇರುವಲ್ಲಿ, ಈ ಸೀಮೆ ನಿಮಗೆ ಬಿಟ್ಟುಕೊಟ್ಟದ್ದರಿಂದ ಪ್ರಯೋಜನವೇನು?" ಎಂಬುದಾಗಿ ಹೇಳಿದಲ್ಲಿ, ಅದನ್ನು ವೀರರಾಜೇಂದ್ರ ವಡೆಯರವರು ಕೇಳಿ, ಹೈದರಲ್ಲೀಖಾನರು ಕೊಟ್ಟಂಥಾದ್ದನ್ನು, ಅವರ ಮಗ ಟೀಪುಸುಲ್ತಾನರು ಅಪೇಕ್ಷೆಪಟ್ಟು ಕೇಳಿದರೆ, ಬಿಟ್ಟುಕೊಡುವಂಥಾದ್ದು ಸಹಜವೇ ಸರಿ, ಎಂತ ತಿಳಿದು, ಆ ಪಂಜ ಬೆಳ್ಳಾರೆಯನ್ನು ಬಿಟ್ಟು, ಅಲ್ಲಿ ಇದ್ದ ಠಾಣ್ಯದ ಮಂದಿಯನ್ನು ಕರೆಸಿಕೊಂಡರು.

ಆ ಬಳಿಕ ಆ ಲಂಗಡಾ ದಾಡಿ ಸೇಖ್ ಇಮಾಮನು ಎರಡು ಮಾಗಣೆ ಯನ್ನು ಬಂದುಬಸ್ತು ಮಾಡಿಕೊಂಡು, ಪ್ರಾಕಾರಭ್ಯದಿಂದ ಸೇರಿ ಬಂದಂಥಾ ಅಮರ ಸುಳ್ಯ ಎಂಬ ಎರಡು ಮಾಗಣೆಯು ನಮಗೆ ಬರಬೇಕು. ಬಿಟ್ಟುಕೊಡಿ" ಎಂಬುದಾಗಿ ಕೇಳಿದಲ್ಲಿ, "ಈ ಮಾಗಣೆ ಎರಡು ನಮ್ಮ ಕೊಡಗಿನ ಸಂಸ್ಥಾನಕ್ಕೆ ಸೇರಿದ್ದು ಇದೆ. ನಿಮಗೆ ಸಲ್ಲತಕ್ಕದ್ದಲ್ಲಾ. ಇದರ ತಳ್ಳಿಗೆ ಬರಬೇಡ. ಮಿಗು ವರಿದು ಬಂದರೆ, ತಾಳತಕ್ಕದ್ದಲ್ಲಾ" ಎಂಬದಾಗಿ, ರಾಜರವರು ಆ ಮಾಗಣೆಗಳ ಅಮಿಲ್ದಾರನ ಮುಖಾಂತರ ಹೇಳಿಸಿ, ಈ ವಿವರಕ್ಕೆ ಮಲೆಯಾಳ ರಾಜ್ಯದಲ್ಲು ಕಮಿಶನರಾಗಿ ಇದ್ದ ಮಿಸ್ಟರ್ ವಿಲಿಯಮ್ ಪಾಲ್‌ಮರ್ ಸಾಹೇಬರು

ಮೇಜರ ಅಲೆಕ್ಸಾಂಡರ್ ಡೌ ಸಾಹೇಬರವರಿಗೆ ಸಹಾ ಬರಸಿ ಕಳುಹಿದ ಕಾಗದ ದಲ್ಲಿ : " ಟೇಪುಸುಲ್ತಾನರು ನಮ್ಮ ಸೀಮೆಗೆ ಪರಾಕು ಬಹಳವಾಗಿ ದುಃಖಾ ಕೊಟ್ಟಿದ್ದರಿಂದ, ನಾವು ಅವನ ಸೀಮೆಯಲ್ಲಿ ಕೆಲವು ಸೀಮೆಯನ್ನು ಮೆಹನತ್ತು ಮಾಡಿ ಕಟ್ಟಿಕೊಂಡು ಇದ್ದಲ್ಲಿ, ಜನರಲ್ ರಾಬರ್ಟ್ ಅಬಕ್ರಾಂಬಿ ಸಾಹೇಬ್ ಬಹದ್ದೂರವರು ಈಗ ಟೇಪುಸುಲ್ತಾನರ ಸಂಗಡ ಸಲ್ಲಾವಾಗಿ ಇದೆ. ಅವರ ಸೀಮೆಯಲ್ಲಿ ನೀವು ಕಟ್ಟಿಕೊಂಡು ಇರುವಂಥಾದ್ದನ್ನು ಬಿಟ್ಟುಕೊಟ್ಟು, ನಿಮ್ಮ ಸೀಮೆ ಸರಹದ್ದನ್ನು ನೀವು ಬಂದುಬಸ್ತು ಮಾಡಿಕೊಳ್ಳಿ ಎಂಬದಾಗಿ, ಹೇಳಿದ್ದ ರಿಂದ, ಅದೇ ಮೇರೆ ನಾವು ಕಟ್ಟಿಕೊಂಡು ಇದ್ದಂಥಾ ಅವರ ಸೀಮೆಯನ್ನು ಅವರಿಗೆ ಬಿಟ್ಟುಕೊಟ್ಟು, ನಮ್ಮ ಸೀಮೆ ಸರಹದ್ದನ್ನು ನಾವು ಬಂದುಬಸ್ತು ಮಾಡಿಕೊಂಡು ಇದ್ದೇವೆ. ಹೀಗೆ ಇರುವಲ್ಲಿ ಇಕ್ಕೇರಿಯವರ ಕಾಲದಿಂದ ನಮ್ಮ ಸಂಸ್ಥಾನಕ್ಕೆ ಸೇರಿಬಂದಂಥಾ ಅಮರ ಸುಳ್ಯ ಎಂಬ ಎರಡು ಮಾಗಣೆಯು ತಮಗೆ ಸಲ್ಲತಕ್ಕದ್ದು ಇದೆ. ಬಿಟ್ಟುಕೊಡಬೇಕೆಂಬದಾಗಿ, ಈಗ ಟೇಪು ಸುಲ್ತಾನರ ಕಡೆಯವರು ಬಂದು ಇದ್ದಾರೆ. ಈ ಮಾಗಣೆಗಳೇನಾದರೂ ಟೇಪು ಸುಲ್ತಾನರದು ಅಲ್ಲಾ. ಅವರಾದರೆ, ಮಿಗುವರಿದು ಬರುತ್ತಾರೆ. ನಾವು ಬಿಡಲಿಕ್ಕಿಲ್ಲಾ. ಪ್ರಾರಂಭ್ಯದಿಂದ ಈ ಎರಡು ಮಾಗಣೆ ನಮ್ಮ ಸಂಸ್ಥಾನಕ್ಕೆ ಸೇರಿದಂಥಾದ್ದು ಹೌದು, ಅಲ್ಲಾ ಎಂಬುದಕ್ಕೆ, ತಲಚೇರಿಲಿ ಬಹಳ ದಿವಸ ಬದುಕಿ ಬಾಳಿದಂಥಾ ಮುಪ್ಪಿನವರು ಇದ್ದಾರೆ, ಅವರನ್ನ ವಿಚಾರಿಸಿದಲ್ಲಿ ತಮಗೆ ತಿಳಿಯಬಂದೀತು. ಟೇಪುಸುಲ್ತಾನರ ಕಡೆಯವರು ಮಿಗುವರಿದು ಬಂದು, ಶರಾರತ್ತು ಮಾಡುವುದು ಸರಿ. ನಾವು ತಡೆಯಲಿಕ್ಕೆ ಇಲ್ಲಾ. ಈ ವಿವರ ನೀವು ತಿಳಿಯಲಿಲ್ಲಾ ಎಂಬುದಾಗಿ ನಾಳೆ ತಾವು ಹೇಳೀರಿ ಎಂಬುದರಿಂದ, ತಮಗೆ ಬರೆದು ತಿಳಿಸಿದ್ದೇವೆ— ಈ ಬಗ್ಯೆ ಏನೆಂಬುದಕ್ಕೂ ಜವಾಬು ಜಲದು ಬರೆದು ಕಳುಹಿಸಬೇಕು " ಎಂಬ ವಿವರವಾಗಿ ಪರಿಧಾವಿ ಸಂವತ್ಸರದ ಜೇಷ್ಠ ಶು. ೨ ದಿವಸ ಬರದು, ದೊರೆಗಳು ಕಳುಹಿಸಿಕೊಟ್ಟರು.

ಮತ್ತು ಆ ಲಂಗಡಾ ಸೇಖ್ ಇಮಾಮು ಎಂಬವನು ಸದರಿ ಮೇಲೆ ಬರದು ಇರುವಂಥಾ ವಿವರ ಹೇಳಿದಂಥಾದ್ದ ಕೇಳದೆ, ಫೌಜು ತೆಗೆದುಕೊಂಡು, ಮಿಗುವರಿದು ಬಂದು, ಆ ಅಮರ ಸುಳ್ಯದ ಸರಹದ್ದಿನಲ್ಲಿ ಠಾಣ್ಯ ಇದ್ದಂಥಾ ಮಹಾರಾಜರ ಕಡೆ ಮಂದಿ ಮೇಲೆ ಕೈಮಾಡಿ, ಆ ಮಾಗಣೆಗಳ ವಳನುಗ್ಗಿ,

ಲೂಟಿ ಮಾಡಿ, ರೈತರ ಹಿಡಿದು, ಕೆಲವರ ಕೈಕಾಲು ಕುಯ್ದು, ಕೆಲವರ ಗಲ್ಲು ಹಾಕಿ ಈ ಮೇರೆ ಶರಾರತ್ತು ನಡಿಸಿದ್ದರಿಂದ, ಇದನ್ನು ರಾಜರು ತಿಳಿದು, “ ಅವನು ಮಿಗುವರಿದು ಬಂದರೆ, ಚಿಂತೆಯೇನು ಇದೆ ? ಆ ಟೇಪುಸುಲ್ತಾನರ ಕಡೆಯವರು ಏನೊಂದೂ ಜುಲುಮೆ ಜಾಸ್ತಿ ನಡಸಿದ್ದಾಗ್ಯೂ, ನೀವು ಅವರ ಮೇಲೆ ಕೈದುಡುಕು ಮಾಡುವ ಕೆಲಸವಿಲ್ಲಾ. ಅಲ್ಲಿ ಇರುವಂಥಾ ಠಾಣ್ಯದ ಮಂದಿಗೂ, ರೈತರಿಗೂ ಸಹಾ ತೆಗೆದು, ವಳನಿಟ್ಟಿನಲ್ಲು ಮಡಗಿ, ದುಷ್ಕಾರ್ಯನ ರಿಂದ ದುಃಖ ತಟ್ಟದಂತೆ ಮಾಡಿಕೊಂಡು ಇರುವುದು. ಇದರ ಬಂದುಬಸ್ತು ಮಾಡಲಾದೀತು ಎಂಬುದಾಗಿ, ಆ ಮಾಗಣೆಗಳ ಅಮಿಲ್‌ದಾರನಿಗೆ ಅಪ್ಪಣೆ ಕೊಟ್ಟರು.

ಅಷ್ಟರಲ್ಲಿ ಬಂಗಾಳದ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರು ಮಹಾರಾಜರಿಗೆ ಬರಸಿ ಕಳುಹಿದ ಕಾಗದದಲ್ಲಿ: “ ಟೇಪುಸುಲ್ತಾನರ ವಕೀಲರು ನಮ್ಮ ಸಂಗಡ ಇರುತ್ತಾರೆ. ಅವರು ವಿಹಿತಪಡಿಸಿದ ವರ್ತಮಾನ : ತಮ್ಮ ತಾಲೂಕಿಗೂ ಟೇಪುಸುಲ್ತಾನರ ತಾಲೂಕಿಗೂ ಸರಹದ್ದು ಇದೆಯಷ್ಟೆ ; ಆ ಸರಹದ್ದು ಪ್ರಾಂತ್ಯದಲ್ಲಿ ತಮ್ಮ ತಾಲೂಕಿನ ಜನರು ತಮ್ಮ ಸರಹದ್ದಿನಲ್ಲಿ ಇದ್ದುಕೊಂಡು, ಟೇಪುಸುಲ್ತಾನರ ಸೀಮೆ ನುಗ್ಗಿ, ಕೊಳ್ಳೆ ಲೂಟಿ ಮಾಡಬೇಕು ಎಂತ ಹಂಗಾಮು ಮಾಡುತ್ತಾರೆ ಎಂತ ಹೇಳಿದ್ದರಿಂದ, ಈ ವಿವರ ಕೇಳಿ ನಮ್ಮ ಮನಸ್ಸಿಗೆ ತೋರಿದ ವಿವರ ಸರ್ವ ಪ್ರಕಾರದಲ್ಲು ತಮಗೆ ತಿಳಿದು, ತಮ್ಮ ಕಡೆಯಿಂದ ನಡೆಯಲಾರದು ಎಂದು, ನಮ್ಮ ಮನಸ್ಸಿನಲ್ಲು ನಿಶ್ಚಯ ತೋರಿ ಇದೆ. ಹೀಗೆ ತಿಳಿದು ಇದ್ದಾಗ್ಯೂ, ನಾವು ಕೇಳಿದ ವರ್ತಮಾನ ತಮಗೆ ತಿಳಿಸಬೇಕೆಂದು ತೋರಿ, ಈ ಹಂಗಾಮಿನ ಬಗ್ಯೆ ಟೇಪುಸುಲ್ತಾನರಿಗೆ ಅವರ ತಾಲೂಕಿನ ಅಮಲುದಾರರು ಬರದು ಇದ್ದ ಅರ್ಜಿಗಳನ್ನು ನಮ್ಮ ಬಳಿಗೆ ಕಳುಹಿದ್ದರಿಂದ, ತಾವು ತಿಳಿಯುವ ಬಗ್ಯೆ ಅರ್ಜೀ ನಕಲು ಕಳುಹಿದ್ದೇವೆ. ಬಂದು ತಲಪೀತು. ಈಗ ಟೇಪುಸುಲ್ತಾನರಿಗೂ ಇಂಗ್ರೇಜ ಬಹಾದ್ದೂರ ಕುಂಪನಿ ಸರಕಾರಕ್ಕೂ ಮಿತ್ರತೆ ಆಗಿ, ಕವುಲು ಕರಾರು ದೃಢವಾಗಿ ಇದೆ. ಹೀಗೆ ಇರುವಲ್ಲಿ, ಮೇಲೆ ಬರೆದ ಪ್ರಕಾರ ಹಂಗಾಮು ನಡೆದರೆ, ಯುಕ್ತವಲ್ಲಾ. ಹೀಗೆ ನಡೆದರೆ, ಒಂದೊಂದು ಮಾತಿನ ಮೇಲೆ ಜಗಳ ಹುಟ್ಟುತ್ತಾ ಇದೆ. ತಮ್ಮ ತಾಲೂಕಿನವರು ಅವರ ತಾಲೂಕಿಗೆ ನಡಸುವ ರೀತಿ, ಅವರ ಬಗೆ

ಯವರು ತಮ್ಮ ತಾಲೂಕಿಗೆ ನಡಸಿಯಾರು ಎಂತಾ, ತೋರುತ್ತಾ ಇದೆ. ಆದ್ದರಿಂದ ಈ ಕಾರ್ಯ ತ್ಯಜಿಸತಕ್ಕದ್ದು. ಸರ್ವ ಪ್ರಕಾರದಲ್ಲು ನೂತನ ಜಗಳ ಹುಟ್ಟುವ ರೀತಿ ಮಾಡದೆ ಇರಬೇಕು. ಇದರಿಂದ ಬರೆಯಬೇಕಾಗುತ್ತಾ ಇದೆ. ಟೀಪುಸುಲ್ತಾನರಿಗೂ ಇಂಗ್ರೇಜ ಬಹದ್ದೂರವರ ಸರಕಾರಕ್ಕೂ ಸಲ್ಲಾ ಮೊಕರರು ಆಗಿರುವ ಅಭಿಪ್ರಾಯ ತಮ್ಮ ತಾಲೂಕಿನ ಜನರಿಗೆ ತಿಳಿಸಿ, ಮುಂದೆ ಕತರ್ಜೆ ಇಲ್ಲದ ಹಾಗೆ ಮಾಡಿಸುವುದು" ಎಂಬುದಾಗಿ ಬರೆಸಿ ಇದ್ದರು.

ಆ ಅಮಲುದಾರರು ಬರದು ಇದ್ದ ಅರ್ಜೀ ನಕಲು: "ಸ್ವಾಮಿಯವರ ಕೈಯ ಅಪ್ಪಣೆ ತೆಗೆದುಕೊಂಡು, ಸ್ಥಳಕ್ಕೆ ಸಾಗಿಬಂದು, ಸಾಗುಸಂತು ಮಾಡುವ ಬಗ್ಯೆ ತಾಲೂಕು ಜಿರಾಯತ ಮಾಡಬೇಕೆಂದು, ದೂರ ದೇಶಕ್ಕೆ ಹೋಗಿ ಇದ್ದಂಥಾ ರೈತರನ್ನು ಕರೆಸಿ, ಜಮಾ ಮಾಡಿದಲ್ಲಿ, ಮೂರು ನಾಲ್ಕು ಸಾವಿರ ಕೊಡಗ ಜನ ಬಂದು, ನಮ್ಮ ತಾಲೂಕಿನಲ್ಲಿ ಹತ್ತು ಹನ್ನೆರಡು ಗ್ರಾಮಕ್ಕೆ ಅಗ್ನಿಪ್ರವೇಶಮಾಡಿ, ಲೂಟಮಾಡಿ, ಹೆಣ್ಣುಗಂಡು ಸೆರೆಹಿಡಿದು ಕೊಂಡು ಹೋದರು. ಆದ್ದರಿಂದ ಬಂದು ಇದ್ದ ರೈತರೆಲ್ಲಾ ಗಾಬರಿ ಆಗಿ ಓಡಿಹೋದರು. ಇದಕ್ಕೆ ಬದಲು ಅವರನ್ನು ನಾವು ತಂಬಿ ಫವುಚಾಯಿಸುವ ಬಗ್ಯೆ ಹುಜೂರು ಅಪ್ಪಣೆ ಆಗಲಿಲ್ಲಾ. ಆದ್ದರಿಂದ ಲಾಚಾರು ಇದ್ದೇವೆ. ಕೊಡಗರ ಹಂಗಾಮು ಹದ್ದು ಮೀರಿದೆ. ಮುಂದೆ ಗುಲಾಮಗೆ ಅಪ್ಪಣೆ ಆದ ಹಾಗೆ ನಡೆಯುತ್ತೇನೆ ಎಂಬುದಾಗಿ, ಇದೇ ಮೇರೆ ಪೆರಿಯಾಪಟ್ಟಣದ ಅಮಲು ದಾರನ ಅರ್ಜಿ ಒಂದು, ತೆರಕಣಾಂಬಿ ಅಮಲುದಾರನ ಅರ್ಜಿ ಒಂದು, ಬೇಲೂರು ಅಮಲುದಾರನ ಅರ್ಜಿ ಒಂದು, ಮಂಜರಾಬಾದು ಅಮಲುದಾರನ ಅರ್ಜಿ ಒಂದು, ಅಂತು ನಾಲ್ಕು ಅರ್ಜಿ ನಕಲು ಸಹಾ ಬಂದು ತಲಪಿದ್ದರಿಂದ, ಆ ಬಳಿಕ ಇದಕ್ಕೆ ಜವಾಬು ಮಹಾರಾಜರು ಬರಸಿ ಕಳುಹಿದ ವಿವರ:

"ಪರಾಕು ಟೀಪುಸುಲ್ತಾನರು ನಮ್ಮ ರಾಜ್ಯಕ್ಕೆ ಬಹಳ ದುಃಖಕೊಟ್ಟು, ಲಕ್ಷ ಹನ್ನೊಂದು ಸಾವಿರ ಪರಿಯಂತರ ರೈತರನ್ನು ಹಿಡುಕೊಂಡು ಹೋಗಿ, ಹೇರಳ ಶರಾರತ್ತು ನಡಿಸಿದ್ದರಿಂದ, ಅವರ ಸೀಮೆಗೆ ದುಃಖಕೊಡುತ್ತಾ ಇದ್ದೆವು. ಅಷ್ಟರಲ್ಲಿ ಇಂಗ್ರೇಜ ಬಹದ್ದೂರರ ಸರಕಾರಕ್ಕೂ ಟೀಪುಸುಲ್ತಾನರಿಗೂ ಸಲ್ಲಾ ಮೊಕರರು ಆದ್ದರಿಂದ, ಆ ತರುವಾಯ ಗವರ್ನರ್ ಮೇಜರ್ ಜನರಲ್ ರಾಬರ್ಟ್ ಅಬಕ್ರಾಂಬಿ ಸಾಹೇಬ್ ಬಹದ್ದೂರವರು ಮುಂಬಾಯಿಗೆ ಹೋಗುವ

ಬಗ್ಗೆ ಪಟ್ಟಣದಿಂದ ಬಂದು, ಈ ಕೊಡಗಿನ ಸೀಮೆಯಲ್ಲಿ ಇಳಿದು ಇದ್ದಲ್ಲಿ, ಇನ್ನುಮುಂದೆ ಟೀಪುಸುಲ್ತಾನರು ನಿಮ್ಮ ರಾಜ್ಯ ತಳ್ಳಿ ಬರಲಿಕ್ಕೆ ಇಲ್ಲಾ. ನೀವು ಅವರ ಸೀಮೆ ಮೇಲೆ ಶರಾರತ್ತು ಮಾಡಬಾರದು. ಅವರ ತಾಲೂಕಿನ ಸೀಮೆ ತಾವು ಎಷ್ಟು ಕಟ್ಟಿಕೊಂಡು ಇದ್ದೀರೊ, ಅದನ್ನು ಅವರಿಗೆ ಬಿಟ್ಟು ಕೊಟ್ಟು ಅಲ್ಲಿ ಇರುವಂಥಾ ತಮ್ಮ ಕಡೆ ಜನರನ್ನು ಕರಸಿಕೊಂಡು, ಷರಾಕು ಮೇರೆ ತಮ್ಮ ಸೀಮೆ ಬಂದುಬಸ್ತು ಮಾಡಿಕೊಳ್ಳಿ ಎಂಬುದಾಗಿ, ಆ ಜನರಲ್ ಸಾಹೇಬರವರು ಹೇಳಿದಲ್ಲಿ, ಅದೇ ಪ್ರಕಾರ ಈಗ ನಾವು ಕಟ್ಟಿಕೊಂಡು ಇದ್ದಂಥಾ ಐಗೂರು ಮುಂತಾದ ಸೀಮೆಯನ್ನು ಬಿಟ್ಟುಕೊಟ್ಟು, ನಮ್ಮ ತಾಲೂಕು ಸೀಮೆ ಮಾತ್ರ ಬಂದುಬಸ್ತು ಮಾಡಿಕೊಂಡು ಇರುತ್ತಿದ್ದಲ್ಲಿ, ಈಗ ಟೀಪುಸುಲ್ತಾನರ ಕಡೆ ಜನರು ಅವರ ಸೀಮೆ ಸರಹದ್ದು ಮೀರಿ ಬಂದು, ಪ್ರಾಕಾರಭ್ಯ ನಮ್ಮ ತಾಲೂಕಿನಲ್ಲು ಇರುವಂಥಾ ಅಮರ ಸುಳ್ಯ ಎರಡು ಮಾಗಣೆ ನಮಗೆ ಬಿಟ್ಟು ಕೊಡಬೇಕು ಎಂಬುದಾಗಿ ಹೇಳಿದಲ್ಲಿ, ಈ ಮಾಗಣೆ ಎರಡು ನಮ್ಮದು ನಿಮಗೆ ದರಕಾರ ಇಲ್ಲಾ. ಇದರ ತಳ್ಳಿ ನೀವು ಬರುವ ಕೆಲಸವಿಲ್ಲಾ. ಮೀರುವರಿದು ಬಂದರೆ, ನಾವು ತಾಳತಕ್ಕದ್ದಿಲ್ಲಾ ಎಂಬುದಾಗಿ ಹೇಳಿದಾಗ್ಯೂ, ಕೇಳದೆ ಮೀರುವರಿದು ಬಂದು, ನಮ್ಮ ಕಡೆ ಜನರಿಗೆ ಹೊಡದು, ನಮ್ಮ ನಂಬಿದ ರೈತ ರನ್ನು ಹಿಡಿದು ಅವರಲ್ಲಿ ಕೆಲವರ ಕೈಕಾಲು ಕುಯಿದು, ಕೆಲವರಿಗೆ ಗಲ್ಲುಹಾಕಿ, ಈ ಮೇರೆ ನಾನಾಪ್ರಕಾರ ಹಲಾಕುಮಾಡಿ, ಶರಾರತ್ತು ನಡಸಿದ್ದರಿಂದ, ಅವರ ಶರಾರತ್ತಿನ ಮೇರೆ ನಮ್ಮ ಕಡೆಯಿಂದಲು ತಂಬಿ ಫವುಚಾಯಿಸಲಾರದೆ ಬಿಟ್ಟಿ ದ್ದಲ್ಲಾ. ನಾಳೆ ಈ ನ್ಯಾಯ ದರಿಯಾಪ್ತು ಆಗುವಾಗ್ಯೆ ಜಬರದಸ್ತಿ ನಡೆದು ನಮ್ಮ ಕಡೆಯಿಂದಲೋ ? ಅವರ ಕಡೆಯಿಂದಲೋ ? ಎಂಬುದನ್ನು ತಿಳಿಯದೆ, ನಮ್ಮ ಕಡೆಯಿಂದಲೇ ಶರಾರತ್ತು ನಡಸಿದರು ಎಂತ ಕಂಡೀತು ಎಂಬುದಾಗಿ, ನಾವು ಈ ಮೇರೆ ತಿಳಿದು, ಈಗ ಅವರು ಮುಂಚಿದಾಗ್ಯೂ, ಅವರ ಮೇಲೆ ಮುಂಚಿಸಬಾರದು, ಯಾತರಿಂದ ಎಂದರೆ, ನಾಳೆ ಇಂಗ್ರೇಜ ಬಹಾದ್ದೂರ ಸರಕಾರದವರು ಯಾರ ಕಡೆಯಿಂದ ಜಬರದಸ್ತು ನಡದು ಇದೆ ಎಂತಾ ವಿಚಾರಿಸಿ ಯಾರು. ಆವಾಗ್ಯೆ ಈಗ ನಡಸಿದಂಥಾ ಶರಾರತ್ತು ತಪ್ಪು ಅವರ ಮೇಲೆ ಸಾಬೂತು ಆಗಬೇಕು ಎಂಬುದನ್ನು ಕುರಿತು, ಅವರ ಕಡೆ ಜನರು ಸರಹದ್ದು ದಾಟಿ, ಸೀಮೆ ಒಳಗೆ ಬಂದಾಗ್ಯೂ, ನೀವು ಅಡ್ಡಿ ಮಾಡಬೇಡಿ. ಅವರು

ಬಂದ ಹಾಗೆ, ನೀವು ಕಾಲು ಹಿಂದಿಟ್ಟು, ಕೆಲವು ದಿವಸ ಸೀಮೆ ಒಳಗೆ ಬಂದು ಇರಿ ಎಂತಾ, ಆ ಮಾಗಣೆಗಳ ಸರಹದ್ದಿನಲ್ಲಿ ಠಾಣ್ಯ ಇದ್ದ ಮಂದಿಗೆ ಅಪ್ಪಣೆ ಕೊಟ್ಟು, ಅದೇ ಮೇರೆ ಆ ಎರಡು ಮಾಗಣೆ ಠಾಣ್ಯದವರನ್ನು ಕರೆಸಿಕೊಂಡೆವು. ಈಗ ಟೀಪುಸುಲ್ತಾನರ ಕಡೆ ಜನರು ಅಮರ ಸುಳ್ಯದ ಮಾಗಣೆಗೆ ಬಂದು ಇದ್ದಾರೆ. ನಮ್ಮ ಕಡೆ ಜನರು ಅವರ ಸೀಮೆ ತಳ್ಳಿ ಹೋಗದೆ ಇದ್ದಾಗ್ಯೂ, ಪ್ರಾಕಾರಭ್ಯ ನಮ್ಮ ತಾಲೂಕು ಆಗಿ ಇರುವಂಥಾ ಅಮರ ಸುಳ್ಯ ಎರಡು ಮಾಗಣೆಯನ್ನು ಕಟ್ಟಿಕೊಂಡು, ಇಂಥಾ ಶರಾರತ್ತು ಅವರು ನಡೆಸಿದಾಗ್ಯೂ ನಾವು ಅವರ ಸೀಮೆಗೆ ಶರಾರತ್ತು ಮಾಡಿಸಲಿಲ್ಲಾ. ಇನ್ನುಮುಂದು ನಾವು ಅವರ ಮೇಲೆ ಶರಾರತ್ತು ನಡಸಲಿಕ್ಕೆ ಇಲ್ಲಾ. ಪರಾಕು ನವಾಬ ಹೈದರಲ್ಲೀ ಖಾನರು ಬಿದರೂರನ್ನು ಕಟ್ಟಿಕೊಂಡು, “ ಇದು ಯಾವತ್ತು ನಮ್ಮ ಸ್ವಾಧೀನ ವಾಯಿತು. ಇದರ ತಾಲೂಕಿನ ಸೀಮೆ ಯಾವದು ಇದೆ! ಈ ಅಮರ ಸುಳ್ಯ ಎರಡು ಮಾಗಣೆ ಇಕ್ಕೇರಿಗೆ ಸೇರತಕ್ಕದ್ದೋ ? ಕೊಡಗಿಗೆ ಸೇರಿ ಇದೆಯೋ ? ” ಎಂಬದಾಗಿ, ದರಿಯಾಪ್ತು ಮಾಡಿ, ಇದು ಕೊಡಗಿನ ಸಂಸ್ಥಾನಕ್ಕೆ ಸೇರಿದ್ದೇ ಸರಿ, ಎಂಬದಾಗಿ ತಿಳಿದು, ಅದು ನಮಗೆ ದರಕಾರ ಇಲ್ಲಾ ಎಂಬದಾಗಿ, ಇದರ ತಳ್ಳಿ ಬಾರದೆ ಬಿಟ್ಟು ಇದ್ದಾರೆ. ಈಗ ಅವರ ಮಗ ಟೀಪುಸುಲ್ತಾನರು ತಕರಾರು ಮಾಡಿ, ನಮಗೆ ಸೇರಿದಂಥಾ ಅಮರ ಸುಳ್ಯ ಎರಡು ಮಾಗಣೆ ಯನ್ನು ಕಟ್ಟಿಕೊಂಡು, ಶರಾರತ್ತು ಮಾಡುತ್ತಾರೆ. ಈ ಪ್ರಕಾರ ಅವರು ಮಾಡುವಾಗ್ಯೆ, ಅದಕ್ಕೆ ತಕ್ಕ ಹಾಗೆ ಮಾಡಲಾರದೆ, ನಾವು ಬಿಟ್ಟದ್ದು ಅಲ್ಲಾ. ದೋಸ್ತಾರರ ಮಾತ ಮೀರಬಾರದು ಎಂಬದರಿಂದ, ಲಾಚಾರಾಗಿ ಆ ಎರಡು ಮಾಗಣೆಯನ್ನು ಬಿಟ್ಟು ಇದ್ದೇವೆ. ಈ ಮಾತು ವಿಚಾರಿಸಿ ತೀರಿಸಿಕೊಟ್ಟರೆ ಬಹಳ ಮೆಹರ್ಬಾನಗಿ ಆದೀತು. ಇದಲ್ಲದೆ ನಮಗೂ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರರವರಿಗೂ ದೋಸ್ತಿ ಮೊಕರರು ಆಗಿ, ಆವಾಗ್ಯೆ ಮುಂಬಾಯಿ ಫೌಜು ಬಂದು ನಮ್ಮ ಸೀಮೆಯಲ್ಲಿ ಇಳಿದು ಇದ್ದಲ್ಲಿ, ಈ ವರ್ತಮಾನ ಟೀಪುಸುಲ್ತಾನರು ಕೇಳಿ, “ ತಾವು ನಮ್ಮ ಸಂಗಡ ದೋಸ್ತಿ ಮಡಗಬೇಕು. ಇಂಗ್ರೇಜರ ದೋಸ್ತಿ ಮಡಗಬಾರದು ” ಎಂಬುದಾಗಿ, ಪಿತ್ತೂರಿ ಮಾರ್ಗದಿಂದ ಅವರ ಹೆಸರಿಂದ ಕಾಗದ ಒಂದು, ಮೀರಸಾಧಕ ಪೂರ್ಣೈಯ್ಯನ ಹೆಸರಿಂದ ಸಹಾ ಕಾಗದಗಳ ನಮ್ಮ ಹೆಸರಿಗೆ ಬರೆಸಿ,

ಇಂಗ್ರೇಜ ಬಹದ್ದೂರ ಸರಕಾರದ ಮುಂಬಾಯಿ ಫೌಜನ್ನು ನಾವು ದಗಾ ಮಾಡುವ ಬಗ್ಯೆ, ಹರಿಕಾರ ಡಳಾಯಿತರ ಕೈಯ ಕೊಟ್ಟು ಕಳುಹಿಸಿದಲ್ಲಿ, ಆ ಕಾಗದಗಳ ತಂದಂಥಾ ಜನರಿಗೆ ಪಹರಾದಲ್ಲು ಮಡಗಿಸಿ, ಆ ಕಾಗದ ಗಳನ್ನು ಗವರ್ನರ್ ಮೇಜರ್ ಜನರಲ್ ರಾಬರ್ಟ್ ಆಬಕ್ರಾರ್ಂಬಿ ಸಾಹೇಬ್ ಬಹದ್ದೂರವರಿಗೆ ತೋರಿಸಿ, ಆ ವಿವರವೆಲ್ಲಾ ಅವರಿಗೆ ತಿಳಿಸಿ, ಆ ತರುವಾಯ : " ನಮಗೆ ಇರುವದು ಒಂದು ನಾಲಿಗೆ. ಅದನ್ನು ಇಂಗ್ರೇಜ ಬಹದ್ದೂರವರಿಗೆ ಕೊಟ್ಟು ಇದ್ದೇವೆ. ನಿಮಗೆ ಒಂದು ನಾಲಿಗೆ ಕೊಡುವುದಕ್ಕೆ ನಮಗೆ ಎರಡು ನಾಲಿಗೆ ಇಲ್ಲಾ " ಎಂಬದಾಗಿ, ಜವಾಬು ಬರೆಸಿ ಕಳುಹಿದ್ದರಿಂದ, ವಿರುಥಾ ಮಡಗಿಕೊಂಡು, ಇವರು ಮುಂಬಾಯಿ ಲಷ್ಕರು ಇಲ್ಲಿಗೆ ಬರುವ ಬಗ್ಯೆ ಮಾರ್ಗ ಕೊಟ್ಟು ದಂಡನ್ನು ಶ್ರೀರಂಗಪಟ್ಟಣ ಪರಿಯಂತರ ತಲಪಿಸಿದರು, ಎಂಬುದ ರಿಂದ, ನಮ್ಮೇಲೆ ಇಲ್ಲಸಲ್ಲದ ಮಾತು ಬರಮ ತಮ್ಮ ಬಳಿಗೆ ಕಳುಹುತ್ತಾರೆ. ಅದು ಯಾತರಿಂದ ಎಂದರೆ—ಇಂಗ್ರೇಜ ಬಹದ್ದೂರವರ ಸಂಗಡ ದೋಸ್ತರಾಗಿ ಇರುತ್ತೇವೆ. ಅದಕ್ಕೆ ವಿಕಲ್ಪ ಮಾಡಿ, ನಮ್ಮೇಲೆ ತಮ್ಮ ಸಿಟ್ಟು ಉಂಟು ಮಾಡಬೇಕು ಎಂಬದಾಗಿ, ಆ ಮೇರೆ ಬರೆಯುತ್ತಾ ಇದ್ದಾರೆ. ಅದನ್ನು ನಿಶ್ಚಯ ಎಂತ ತಿಳಿಯಬಾರದು. ನಮ್ಮ ದೋಸ್ತರರಾದಂಥಾ ಇಂಗ್ರೇಜ ಬಹದ್ದೂರವರ ಸರಕಾರದವರು ಮಾಡಿರುವ ಸಲ್ಲಾಕ್ಕೆ ನಾವು ವಿಾರಲಿ ಕ್ಕಿಲ್ಲಾ" ಎಂಬುದಾಗಿ ಬರದು ಕಳಿಸಿದರು. ಇವೇ ವಿವರವಾಗಿ ಮುಂಬಾಯಿ ಗವರ್ನರ್ ಜನರಲ್ ರಾಬರ್ಟ್ ಆಬಕ್ರಾರ್ಂಬಿ ಸಾಹೇಬ್ ಬಹದ್ದೂರವರಿಗೆ ಒಂದು ಕಾಗದ ಬರೆಸಿ ಕಳುಹಿದರು.

" ಈ ಅಮರಸುಳ್ಯದ ಮಾಗಣೆಗೆ ಟೀಪುಸುಲ್ತಾನರ ಕಡೆಯುವರು ಒಳ ನುಗ್ಗಿ ಬಂದು, ಈ ಪ್ರಕಾರ ಶರಾರತ್ತು ನಡಸುತ್ತಾರೆ " ಎಂಬ ಅಭಿಪ್ರಾಯ ವಾಗಿ, ಮಲೆವಾರಿ ಕಮಿಾಶನ್ ಮಿಸ್ಟರ್ ಉಯಿಲಿಂಗಿ ಪಾರಮರ ಸಾಹೇಬರಿಗೆ, ಮೇಜರ ಆಲೆಕ್ಸಾಂಡರ್ ಡೊ ಸಾಹೇಬರವರಿಗೆ ಕಾಗದ ಒಂದು ಬರೆಸಿ, ಕಳುಹಿಸಿಕೊಟ್ಟರು.

ಇದೇ ಪರಿಧಾವಿ ಸಂವತ್ಸರದ ಜೇಷ್ಠ ಶುದ್ಧ ಲರಲ್ಲು ಈ ಇಬ್ಬರು ಕಮಿಾಶನ್ ಸಾಹೇಬರು ಬರೆಸಿ ಕಳುಹಿದ ಕಾಗದದಲ್ಲಿ : " ಈಗ ನಮಗೂ ಟೀಪುಸುಲ್ತಾನರಿಗೂ ನಂಬಿಗೆ ಭಾಷೆಯಿಂದ ಸಲ್ಲಾ ಆಗಿ ಇದೆ. ಒಂದು

ವಚನ ಹೊರ್ತು, ಏನಾದರೂ ಕಜಿಯಾ ಬರಲಿಕ್ಕಿಲ್ಲಾ. ಅಥವಾ ಕಜಿಯಾ ಮುಲುಕಿನ ಕಿನಾರೆಗೆ ಬಂದರೆ, ದೋಸ್ತಿ ಮಾರ್ಗದಿಂದ ನಮ್ಮ ಕಡೆ ಒಬ್ಬ ಶ್ಯಾಣ ಗೃಹಸ್ಥಗೆ ಕಳುಹಿಸಿ, ಎರಡು ಸರಹದ್ದನ್ನು ಮಾಲುಂ ಮಾಡಿಯೇವು. ಆ ಅಮರ ಸುಳ್ಯ ಎರಡು ಮಾಗಣೆ ನಗರದ ತಾಲೂಕು ಅಲ್ಲದೆ, ತಮ್ಮ ತಾಲೂಕು ಆಗಿ ಇದ್ದರೆ ತಮ್ಮ ಮೇಲೆ ಟೀಪುಸುಲ್ತಾನರ ಶರಾರತ್ತು ನಡೆಯುಲಿಕ್ಕೆ ಇಲ್ಲಾ. ಟೀಪುಸುಲ್ತಾನರ ಕಡೆ ಮನುಷ್ಯರು ತಮ್ಮ ಮುಲುಕಿನಲ್ಲಿ ಬರಲಿಕ್ಕೆ ಬಿಡದ ಹಾಗೆ, ಬಂದುಬಸ್ತು ಮಾಡುವದು. ಆ ಬಳಿಕ ಟೀಪುಸುಲ್ತಾನರ ಕಡೆ ಸರದಾರರು ಯಾರಾದರೂ ಬಂದು ಆ ಎರಡು ಮಾಗಣೆಯನ್ನು ಕೇಳಿದರೆ, ಈ ಎರಡು ಮಾಗಣೆ ನಿಮ್ಮದಲ್ಲಾ, ನಮ್ಮ ತಾಲೂಕು ಇದೆ. ಕರಾರು ಸಲ್ಲಾ ಆದಪ್ರಕಾರ ಇಂಗ್ರೇಜ ಸಾಹೇಬರು ಬಂದುಬಸ್ತು ಮಾಡಿದ್ದಾರೆ. ಈ ಪೂರ್ವೋತ್ತರವೆಲ್ಲಾ ಇಂಗ್ರೇಜ ಬಹಾದ್ದೂರ ಸರಕಾರಕ್ಕೆ ಬರದು ಕಳುಹುತ್ತೇವೆ. ಅವರು ಆದರ ಬಂದುಬಸ್ತು ಮಾಡ್ಯಾರು ಎಂತ, ತಾವು ಜವಾಬು ಹೇಳುವದು. ಇದರ ಮೇಲು ಅವರ ಸರದಾರರು ಯಾರಾದರೂ ಬಂದರೆ, ನೀವು ತಲಚೇರಿಯಲ್ಲಿ ಇರುವ ಸರದಾರರ ಬಳಿಗೆ ಹೋಗಿ, ಇದರ ಜವಾಬು ಸವಾಲು ಮಾಡು ಎಂತ ಹೇಳುವುದು. ಆಗ ತಕರಾರು ಸಲ್ಲಾ ಆದ ಪ್ರಕಾರ ತಹಕೀಕು ಮಾಡಲಾದೀತು. ಆ ಬಳಿಕ ಇಂಥಾ ಕಜಿಯಾ ಬರಲಿಕ್ಕಿಲ್ಲಾ " ಎಂಬುದಾಗಿ ಬರದು ಕಳುಹಿದರಿಂದ, ಅದೇ ಪ್ರಕಾರ ವೀರರಾಜೇಂದ್ರವಡೆಯುರವರು ಅಮರ ಸುಳ್ಯ ಎರಡು ಮಾಗಣೆ ಸರಹದ್ದನ್ನು ಬಂದುಬಸ್ತು ಮಾಡಿಕೊಂಡು ಇರುತ್ತಾ ಇದ್ದರು.

ಆ ಬಳಿಕ ವೀರರಾಜೇಂದ್ರ ವಡೆಯರವರು ಪ್ರಾಕು ಜನರಲ್ ರಾಬರ್ಟ ಆಬಕ್ರಾಂಬಿ ಸಾಹೇಬ್ ಬಹದ್ದೂರವರು ಶ್ರೀರಂಗಪಟ್ಟಣಕ್ಕೆ ಟೀಪುಸುಲ್ತಾನರ ಮೇಲೆ ಲಡಾಯಕ್ಕೆ ಹೋಗುವ ಬಗ್ಗೆ ಬಂದು ಇದ್ದಾಗ್ಯೆ, ರಾಜರು ಆ ಜನರಲ್ ಸಾಹೇಬರವರು ಸಹಾ ಬಂದು ತಂಬಿನ ಒಳಗೆ ಕುಂತು, ಮನಸುಬಾ ಮಾಡಿದ ಯಡೆನಾಲ್ಕುನಾಡ ವಳಿತವಾದ ಮಗ್ಗುಲ ಗ್ರಾಮದಲ್ಲಿ ಕಲಿಸಂದ ೪೮೯೪ನೇ ಪರಿಧಾವಿ ಸಂವತ್ಸರದ ವೈಶಾಖ ಮಾಸದಲ್ಲಿ, ಎಲ್ಲಾ ಜನರಿಗೂ ತಿಳಿಯುವ ಬಗ್ಗೆ, ಅಲ್ಲಿ ಪೇಟೆ ಕಟ್ಟಿಸುವುದಕ್ಕೆ ನಿಶ್ಚಯ ಮಾಡಿ, ಅಪ್ಪಣೆ ಕೊಟ್ಟು, ಅದಕ್ಕೆ ವೀರರಾಜೇಂದ್ರಪೇಟೆ ಎಂಬ ಹೆಸರು ಮಡಗಿದರು.

ಈ ಮೇರೆ ಇರುತ್ತಿದ್ದಲ್ಲಿ, ಇದೇ ಸಂವತ್ಸರದ ಮಾರ್ಗಶಿರ ಬ॥ ೧೨ರಲ್ಲು ಮೇಜರ್ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರವರು ಬರೆಸಿ ಕಳುಹಿದ ಕಾಗದದಲ್ಲಿ, "ಈಗ ನಮಗೆ ಕೊಚ್ಚಿ, ಪಾಲಗಾಟಚೇರಿಗೆ ಸಹಾ ಹೋಗುವ ಬಗ್ಯೆ ಜರೂರಾಗಿ ದರಕಾರ ಉಂಟು. ಆದ್ದರಿಂದ ತಮ್ಮ ಭೇಟಿ ತೆಗೆದುಕೊಂಬ ಬಗ್ಯೆ ಅನುಕೂಲವಾಗಲಿಲ್ಲಾ. ಅಲ್ಲಿಂದ ಪುನಹಾ ತಲಚೇರಿ ಕಣ್ಣಾರ ಕಡೆಗೆ ಬಂದಾಗ್ಯೆ, ಭೇಟಿ ತೆಗೆದುಕೊಂಡು, ಯಾವತ್ತು ಪ್ರಸಂಗ ಹಕೀಕತ್ತು ಮಾತನಾಡಲಾದೀತು. ಟೀಪುಸುಲ್ತಾನರ ಸೀಮೆ ಸರಹದ್ದು ತಮ್ಮ ಸೀಮೆ ಸರಹದ್ದು ನೋಡಿ ತೀರಿಸುವಂಥಾದ್ದು, ನಮಗೆ ಜರೂರು ಇದೆ; ಯಾವ ಬಗ್ಯೆ ಎಂದರೆ, ಮುಂದೆ ಅದರಿಂದ ಕಜಿಯಾ ಬರಲಾಗದು. ಈ ಬಗ್ಯೆ ಈ ಕಾಗದ ಸಂಗಡ ಮಿಸ್ಟರ್ ಇಂಜನೇರು ಇಮಿಾಟ್ ಸಾಹೇಬರನ್ನು ಕೊಡಗು ಸೀಮೆಗೆ ಕಳುಹಿಸಿ ಇದ್ದೇವೆ. ಟೀಪುಸುಲ್ತಾನರ ಸೀಮೆ ಸರಹದ್ದು, ತಮ್ಮ ಸೀಮೆ ಸರಹದ್ದು ಸಹಾ ನೋಡಿ, ತಮಶೀಲಲ್ಲು ಬರಕೊಂಬ ಬಗ್ಯೆ, ಈ ಇಂಜನೇರು ಸಾಹೇಬರು ಮಹಾ ಬುದ್ಧಿಶಾಲಿಯರಾಗಿ ಇದ್ದಾರೆ; ಈ ಮುಲುಕಿನ ಸರಹದ್ದು ಬರೆಯುವ ಬಗ್ಯೆ ತಾವು ಎಷ್ಟು ಮೆಹರ್ಬಾನಗಿ ಮದತ್ತು ಮಾಡಲಾದೀತೋ, ಅಷ್ಟು ಮದತ್ತು ಮಾಡಬೇಕು, ಇವರು ಚೆನ್ನಾಗಿ ಅಳತೆಮಾಡಿ ಬರಕೊಂಡಾರು" ಎಂಬದಾಗಿ, ಬರೆಸಿ ಇದ್ದರು.

ಇದೇ ಮೇರೆ ಆ ಇಂಜನೇರು ಸಾಹೇಬರು ಬಂದು, ಕೊಡಗಿನ ಸೀಮೆ ಸರಹದ್ದಿಗೆ ಹೋಗಿ, ಅಮರ ಸುಳ್ಯ, ಏಳುಸಾವಿರ ಸೀಮೆ ಮುಂತಾದ ಗಡಿ ಸರಹದ್ದನ್ನು ನೋಡಿ, ವಿಚಾರಿಸಿ, ಸರಹದ್ದಿನಲ್ಲು ಕಲ್ಲುಗಳ ನೆಟ್ಟು, ತಪಸೀಲಲ್ಲು ಬರಕೊಂಡು, ಕಲಿಸಂದ ೪೮೯೫ನೇ ಪ್ರಮಾದೀಚ ಸಂವತ್ಸರದ ಚೈತ್ರ ಮಾಸದಲ್ಲಿ ಕಣ್ಣಾರಿಗೆ ಹೋದರು.

ಅಷ್ಟು ಹೊತ್ತಿಗೆ ಗವರ್ನರ್ ಮೇಜರ್ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರವರು, ಸರ್ ಜನರಲ್‌ತನದ ಹುದ್ದಾ ಆಗಿ, ಬಂಗಾಳಕ್ಕೆ ಹೋಗತಕ್ಕ ಬಗ್ಯೆ, ಕಣ್ಣಾರಿಗೆ ಬಂದು, ತಮ್ಮ ಭೇಟಿ ಆಗಬೇಕೆಂಬ ಅಪೇಕ್ಷೆ ಇದೆ ಎಂಬುದಾಗಿ, ಮಹಾರಾಜರಿಗೆ ಕಾಗದ ಬರೆಸಿ, ಮಿಸ್ಟರ್ ಮಾಸನ್ ಎಂಬ ಆಫೀಸರರ ಕೈಯ ಕೊಟ್ಟು, ಒಂದು ಕುಂಪನಿ ಸಿಪಾಯಿಗಳ ಸಹಾ ಕೂಡಿಸಿ ಕಳುಹಿಸಿಕೊಟ್ಟಲ್ಲಿ, ಅದು ಬಂದು ತಲಪುತ್ತಲೆ, ವೀರರಾಜೇಂದ್ರ ವಡೆಯರವರು ಕಣ್ಣಾರಿಗೆ ಹೋಗಿ, ಆ ಜನರಲ್ ಸಾಹೇಬರ ಕಂಡು, ಭೇಟಿ

ಆಗಿ, ಉಭಯಸ್ಥರು ಸಂತೋಷದಿಂದ ಏಳೆಂಟು ದಿವಸ ಅಲ್ಲಿ ಇರುವಾಗ್ಯೆ, ಟೀಪುಸುಲ್ತಾನರು ಹೇಳಿದ ಮೇರೆ ಇಪ್ಪತ್ತುನಾಲ್ಕು ಸಾವಿರ ರೂಪಾಯಿ ವರುಷಂಪ್ರತಿಯಲ್ಲು ಇಂಗ್ರೇಜ ಬಹದ್ದೂರವರ ಸರಕಾರಕ್ಕೆ ಕೊಡಬೇಕಲ್ಲಾ ಎಂತ, ಆ ಜನರಲ್ ಸಾಹೇಬರು ಕೇಳಿದಲ್ಲಿ, ದೊರೆಗಳವರು ಜವಾಬು ಹೇಳಿದ ವಿವರ :

“ಪ್ರಾಕಾರಭ್ಯ ನಮ್ಮ ಸಂಸ್ಥಾನದಿಂದ ಪರ ಸಂಸ್ಥಾನಕ್ಕೆ ದ್ರವ್ಯ ಕೊಡಲೂ ಇಲ್ಲಾ ; ಒಬ್ಬರು ತೆಗೆದುಕೊಳ್ಳಲೂ ಇಲ್ಲಾ. ಕೆಲು ಕಾಲದ ಮುಂದೆ ಕೊಡಗಿನ ಸಂಸ್ಥಾನದ ದೊರೆಮಕ್ಕಳಿಗೆ ತಮ್ಮ ವಳಗೆ ನ್ಯಾಯವಾಗಿ ಗೃಹಚ್ಛಿದ್ರವಾದ್ದರಿಂದ ಆವಾಗ್ಯೆ ಹೈದರಲ್ಲೀಖಾನ್ ಬಹದ್ದೂರವರು ನಮ್ಮ ತಂದೆಯವರಾದ ಲಿಂಗರಾಜೇಂದ್ರ ವಡೆಯರವರಿಗೆ ನಂಬಿಗೆಭಾಷೆ ಕೊಟ್ಟು ಕರೆಸಿ, ಉಪಾಯತಂತ್ರದಿಂದ ನಮ್ಮ ಕೊಡಗಿನ ಸೀಮೆಯನ್ನು ಸಾಧಿಸಿ ಕೊಂಡು, ಒಂಭತ್ತು ಹತ್ತು ವರ್ಷ ಪರ್ಯಂತರ ಆಕ್ರಮಿಸಿಕೊಂಡು ಇದ್ದಲ್ಲಿ, ಆ ಬಳಿಕ, ಮತ್ತೊಬ್ಬರ ಸಹಾಯಸಂಪತ್ತು ಇಲ್ಲದೆ, ಮಹಾದೇವನ ಕಟಾಕ್ಷ ದಿಂದ ಟೀಪುಸುಲ್ತಾನರ ಸಂಗಡ ನಾನಾ ಪ್ರಕಾರ ಯುದ್ಧಾಮಾಡಿ, ಕೊಡಗಿನ ರಾಜ್ಯ ಯಾವತ್ತನ್ನು ನಾವೇ ಸಾಧಿಸಿಕೊಂಡು ಇರುವಾಗ್ಯೆ, ಆ ಬಳಿಕ ಎರಡೂವರೆ ವರುಷದ ಮೇಲೆ ಇಂಗ್ರೇಜ ಬಹದ್ದೂರವರ ಕುಂಪನಿ ಸರಕಾರ ದವರಿಗೆ ಟೀಪುಸುಲ್ತಾನರ ಕಡೆಗೆ ಹೋಗುವ ಬಗ್ಯೆ, ಕೊಡಗಿನ ಸೀಮೆಗಾಗಿ ಮಾರ್ಗ ಕೊಡಬೇಕು ಎಂತಲೂ, ಮಿತ್ರತ್ವ ಶಾಶ್ವತವಾಗಿ ಇರಬೇಕು ಎಂತಲೂ ದೋಸ್ತಿ ಸ್ಥಿರವಾಗತಕ್ಕ ಬಗ್ಯೆ ಭಾಷಾಪತ್ರಿಕೆಗಳ ಬರೆಸಿ, ಅದರಲ್ಲಿ ಒಂದನ್ನು ಕುಂಪನಿ ಸರಕಾರಕ್ಕೆ ತೆಗೆದುಕೊಂಡು, ಮತ್ತೊಂದು ನಮಗೆ ಕೊಟ್ಟು ಇರುವದ ರಿಂದ, ಅದೇ ಮೇರೆ ಇಂಗ್ರೇಜ ಬಹದ್ದೂರವರ ಸರಕಾರದ ಫೌಜಿಗೆ ನಮ್ಮ ಸೀಮೆಯಲ್ಲಿ ಮಾರ್ಗ ಕೊಟ್ಟು, ನಮ್ಮಿಂದ ಆಗತಕ್ಕ ಸಹಾಯವನ್ನು ಖೈರ್ ಕಾಯಿ ಮಾರ್ಗದಿಂದ ಪ್ರಯತ್ನಪಟ್ಟು ಮಾಡಿ ಇದ್ದೇವೆ. ಮಲೆಯಾಳ ರಾಜರ ರಾಜ್ಯ ಟೀಪುಸುಲ್ತಾನರು ಆಕ್ರಮಿಸಿಕೊಂಡು ಇರುವಾಗ್ಯೆ, ಇಂಗ್ರೇಜ ಬಹದ್ದೂರವರು ಲಡಾಯ ಮಾಡಿ, ಆ ಸೀಮೆಯನ್ನು ತೆಗೆದುಕೊಂಡು, ಮಲೆಯಾಳದ ರಾಜರಿಗೆ ಆ ಸೀಮೆಯನ್ನು ಕೊಟ್ಟು ನಿಲ್ಲಿಸುವಾಗ, ಆ ರಾಜರು ಇಷ್ಟು ಇಷ್ಟು ರೂಪಾಯಿ ಟೀಪುಸುಲ್ತಾನರಿಗೆ ಕೊಡುತ್ತಾ ಇದ್ದಂಥಾದ್ದನ್ನು

ಇಂಗ್ರೇಜಿಯವರು ತೆಗೆದುಕೊಳ್ಳಲಿಯಂತಾ ಟೀಪುಸುಲ್ತಾನರು ಹೇಳು ವಂಥಾದ್ದು ಸರಿ. ಇಂಗ್ರೇಜಿಯವರು ಮಲೆಯಾಳದ ರಾಜ್ಯವನ್ನು ಆ ರಾಜ ರಿಗೆ ಕೊಟ್ಟು, ಟೀಪುಸುಲ್ತಾನರು ಹೇಳಿದ ಮೇರೆ, ಅವರ ಕೈಯಿಂದ ಖಂಡಣಿ ಹಣಾ ತೆಗೆದುಕೊಳ್ಳುವಂಥಾದ್ದು ಧರ್ಮವೇ ಸರಿ. ನಮ್ಮ ರಾಜ್ಯವನ್ನು ಟೀಪುಸುಲ್ತಾನರ ಸಂಗಡ ನಮ್ಮ ಭುಜಬಲಸಾಮರ್ಥ್ಯದಿಂದ ಜಗಳಾಮಾಡಿ ತೆಗೆದುಕೊಂಡು, ನಾವೇ ಆಳುತ್ತೇವೆ, ಇಂಗ್ರೇಜಿಯವರಿಗೆ ನಾವು ಮಿತ್ರತ್ವ ಉದ್ದಿಶ್ಯ ನಮ್ಮ ಸೀಮೆಯಲ್ಲಿ ಮಾರ್ಗ ಕೊಟ್ಟು, ಬೇಕಾದ ಸಹಾಯ ಉಪಕಾರ ಮಾಡಿದರಿಂದ ಕೊಡಗಿನ ರಾಜರವರ ಕೈಯಿಂದ ಇಪ್ಪತ್ತನಾಲ್ಕು ಸಾವಿರ ರೂಪಾಯಿ ತೆಗೆದುಕೊಳ್ಳಿಯಂತಾ, ಟೀಪುಸುಲ್ತಾನರು ಹೇಳಿದ್ದಕ್ಕೆ ಅವರ ಮಾತಿನಮೇಲೆ ನಮ್ಮ ಕೂಡೆ ಇಂಗ್ರೇಜ ಬಹದ್ದೂರ ಕುಂಪನಿ ಸರ್ ಜನರಲ್‌ರು ಕೇಳುವಂಥಾದ್ದು ಧರ್ಮವಲ್ಲಾ " ಎಂಬದಾಗಿ ಮಹಾರಾಜ ರವರು ಹೇಳಿದಲ್ಲಿ, ಆ ಜನರಲ್ ಸಾಹೇಬರು ಹೇಳಿದ್ದು : " ನಾವೇನಾದರೂ ಉಪಕಾರಮಾಡಿ, ತಮ್ಮ ಸೀಮೆ ತಮಗೆ ಸಾಧಿಸಿಕೊಡಲಿಲ್ಲಾ. ನಮ್ಮ ಉಪಕಾರದಿಂದ ತಮ್ಮ ರಾಜ್ಯ ತಾವು ಸಾಧಿಸಿಕೊಳ್ಳಲಿಲ್ಲಾ. ತಮ್ಮ ಸಾಮರ್ಥ್ಯ ದಿಂದಲೇ ತಮ್ಮ ರಾಜ್ಯ ತಾವೇ ಸಾಧಿಸಿಕೊಂಡು ಇದ್ದೀರಿ. ಮಲೆಯಾಳದ ರಾಜರು ಖಂಡಣಿ ಕೊಡುವ ಮೇರೆ ತಾವು ಖಂಡಣಿ ಕೊಡಿಯಂತಾ ನಾವು ಕೇಳುವದಿಲ್ಲಾ. ಕೊಡಗಿನ ಸಂಸ್ಥಾನಕ್ಕೂ, ಇಂಗ್ರೇಜ ಬಹದ್ದೂರವರ ಕುಂಪನಿ ಸರಕಾರಕ್ಕೂ ಸೂರ್ಯ ಚಂದ್ರ ಇರುವ ಪರಿಯಂತರಕ್ಕೂ ಸಾರೋ ದ್ಧಾರವಾಗಿ ಮಿತ್ರತ್ವ ನಡೆದುಬರಬೇಕು ಎಂತಾ, ಉಭಯಕಡೆಯಿಂದಲೂ ಭಾಷಾಪತ್ರಿಕೆ ಬರದುಕೊಟ್ಟು ಇದೆಯಷ್ಟೆ. ಅದೇ ಮೇರೆ ಈ ಮಿತ್ರತ್ವ ಶಾಶ್ವತವಾಗಿ ನಡೆದುಬರುವದಕ್ಕೆ ಯಾದಗಾರಿ ಗುರ್ತು ದೋಸ್ತಿ ಮಾರ್ಗದಿಂದ ಕೇಳುತ್ತೇವೆ. ಇಪ್ಪತ್ತನಾಲ್ಕು ಸಾವಿರ ರೂಪಾಯಿ ಇಂಗ್ರೇಜ ಬಹದ್ದೂರವರ ಕುಂಪನಿ ಸರಕಾರದ ಸ್ನೇಹದ ಉದ್ದಿಶ್ಯ ಕೊಡಬೇಕು. ಇದಕ್ಕೆ ಪ್ರತಿ ಇಂಗ್ರೇಜ ಬಹದ್ದೂರ ಕುಂಪನಿ ಸರಕಾರದಿಂದ ಮಾಡುವ ಉಪಕಾರ ಏನು ಎಂದರೆ : ಒಂದುವೇಳೆ ಶತ್ರುವಾದ ಪರರಾಯರಿಂದ ಜಗಳಾ ಬಂದಲ್ಲಿ, ಇಂಗ್ರೇಜ ಬಹದ್ದೂರ ಕುಂಪನಿಯಿಂದ ಬೇಕಾದ ಕುಮ್ಮಕು ಮದತ್ತು ಉಪಕಾರ ಮಾಡಿ, ಚತುರಂಗ ಮಾರ್ಬಲ ಸುದಾ ಬಂದು, ತಮಗೆ ವೈರಿಯಾದವನ ಫೌಜನ್ನು

ಹೊಡದು ನಿಗ್ರಹಾ ಮಾಡಿ, ತಮ್ಮ ರಾಜ್ಯದಲ್ಲಿ ಇರುವಂಥವರಿಗೆ ಸುಖದಲ್ಲಿ ಇರುವಂತೆ ಮಾಡುವ, ಈ ಸ್ನೇಹ ಉಪಕಾರದ ಉದ್ದಿಶ್ಯವಾಗಿ ಕಾಲಂಪ್ರತಿ ಯಲ್ಲು ಇಪ್ಪತ್ತನಾಲ್ಕುಸಾವಿರ ರೂಪಾಯಿ ತಾವು ಕೊಟ್ಟು ಬರಬೇಕು" ಎಂಬುದಾಗಿ ಹೇಳಿದಲ್ಲಿ, ಆ ಮಾತಿಗೆ ಒಪ್ಪಿ ಒಡಂಬಟ್ಟು, "ತಾವು ಹೇಳಿದ ಮೇರೆ ಸ್ನೇಹ ಉದ್ದಿಶ್ಯವಾಗಿ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಕೊಟ್ಟೇವು. ಈ ಮೇರೆ ನಾವು ಕೊಡುತ್ತಾ ಬಂದರೆ, ಇಂಗ್ರೇಜಿಯವರು ಮಲೆಯಾಳದ ರಾಜರಿಗೆ ಸರಕಾರದ ಕಡೆಯಿಂದ ರಾಜ್ಯ ಕೊಟ್ಟು, ಖಂಡಣೆ ತೆಗೆದುಕೊಳುತ್ತಾ ಇದ್ದರು. ಅದೇ ಮೇರೆ ಕೊಡಗಿನ ರಾಜರಿಗೂ ಕುಂಪನಿ ಸರಕಾರದ ಕಡೆಯಿಂದ ಸೀಮೆ ಕೊಟ್ಟು, ಖಂಡಣೆ ಮೊಕರರು ಮಾಡಿ ಇದ್ದಾರೆ ಎಂತಾ ಹೇಳ್ಯಾರು" ಎಂಬುದಾಗಿ, ಮಹಾರಾಜರವರು ಹೇಳುವಾಗ್ಯೆ, ಜನರಲ್ ಸಾಹೇಬರು ಹೇಳಿದ್ದು : "ಈ ಮೇರೆ ಮಾತು ಬರಲಿಕ್ಕಿಲ್ಲಾ. ತಾವು ಸ್ನೇಹ ಉದ್ದಿಶ್ಯ ಇಂಗ್ರೇಜ ಬಹದ್ದೂರೆವರ ಸರಕಾರಕ್ಕೆ ಈ ಹಣ ಕೊಡುತ್ತೀರಿ. ಆದ್ದರಿಂದ ಒಂದು ಸಮಯ ಬಂದಾಗ್ಯೆ, ಇಂಗ್ರೇಜ ಬಹದ್ದೂರವರು ಚತುರಂಗ ಮಾರ್ಬಲ ಸಮೇತ ಬಂದು, ಸಹಾಯ ಮಾಡಬೇಕು." ಎಂಬದಾಗಿ ಹೇಳಿ ಸಮ್ಮತ ಪಟ್ಟು ಈ ಒಗ್ಯೆ ಭಾಷಾ ಪತ್ರಿಕೆ ಬರಸಿ ಉಭಯಕಡೆಯಲ್ಲು ಸನದಾಗಿ ಮಡಗಿ ಇರುವ ಕ್ರಮವೆಂತೆಂದರೆ :

ಕೊಡಗಿನ ಸಂಸ್ಥಾನದ ಹಾಲೇರಿ ವೀರರಾಜೇಂದ್ರ ರಾಜರವರು ಬಹು ಮಾನವಾದ ಇಂಗ್ರೇಜ ಸರಕಾರ ಕುಂಪನಿ ಸಂಗಡ ಯಾವ ರೀತಿ ಇದ್ದಾರೆ ಎಂಬುದು ನಿಶ್ಚಯವಾಗಿ ಇಂಗ್ರೇಜ ಕುಂಪನಿ ಸರಕಾರದ ಯಾವತ್ತು ಚಾಕರ ಜನರು ತಿಳಿಯತಕ್ಕ ಬಗ್ಯೆ, ನಾವು ಬರಕೊಟ್ಟ ವಿವರ :

ಒಂದನೇ ಕಲಂ. ಮಹಾರಾಜರವರು ಟೀಪುಸುಲ್ತಾನರ ಸಂಗಡ ಯುದ್ಧಾ ಮಾಡಿ, ತಮ್ಮ ಕೊಡಗಿನ ಸೀಮೆಯನ್ನು ಸ್ವಾಧೀನಮಾಡಿಕೊಂಡರು. ಅದ ರಲ್ಲಿ ಕೆಲವು ಸೀಮೆ ಬಾಕಿ ಇದ್ದಂಥಾದ್ದನ್ನು ತಮ್ಮ ಹಿಮ್ಮತ್ತಿನಿಂದಲೇ ಸ್ವಾಧೀನ ಮಾಡಿಕೊಂಡರು. ಇದಕ್ಕೆ ಸರಕಾರ ಕುಂಪನಿ ಕಡೆಯಿಂದ ಏನಾದರೂ ಮದತ್ತು ಮಾಡಲಿಲ್ಲಾ. ಈ ಪ್ರಕಾರ ಇರುತ್ತಿದ್ದಲ್ಲಿ, ಇಂಗ್ರೇಜ ಸರಕಾರಕ್ಕೂ ಟೀಪುಸುಲ್ತಾನರಿಗೂ, ಆದ ಮೊದಲಿನ ಲಡಾಯಿದಲ್ಲಿ ದೊರೆಗಳವರು ಇಂಗ್ರೇಜ ಸರಕಾರಕ್ಕೆ : "ನೀವು ಯಾವುದಕ್ಕೂ ಯೋಚನೆ ಮಾಡುವ ಕೆಲಸವಿಲ್ಲಾ. ಏನೊಂದು ಸಹಾಯ ಸಂಪತ್ತು ಬೇಕಾದರೂ ನಾವು ಮಾಡಿಕೊಡುತ್ತೇವೆ,

ಎಂತಾ, ಕಬೂಲಾಗಿ ಹೇಳಿದರಿಂದ ಈ ಮದತ್ತುಗಾರಿಯನ್ನು ಸರಕಾರದಲ್ಲು ಕಬೂಲು ಮಾಡಿ, ರಾಜರ ಕಡೆಯಿಂದಲೂ ನಮ್ಮ ಕಡೆಯಿಂದಲೂ ಒಪ್ಪಿ, ಖುಷಿ ಆಗಿ ಸರಕಾರ ಕುಂಪನಿ ಕಡೆಯಿಂದ ತಲಚೇರಿ ಕೋಟೆ ಮಿಸ್ಟರ್ ರಾಬರ್ಟ್ ಟೈಲರ್ ಸಾಹೇಬರ ಮಾರಿಪತ್ತಿನಿಂದ ತಹನಾಮೆಯನ್ನು ಬರೆಸಿ, ತಲಚೇರಿ ಸರಕಾರದ ದಫ್ತರದಲ್ಲು ಮಡಗಿ ಇದೆ.

ಎರಡನೇ ಕಲಂ. ರಾಜರವರು ಅಂತಃಕರಣಪೂರ್ವಕವಾಗಿ ಯುದ್ಧ ವನ್ನು ತಾವು ಮಾಡಿದರು. ಮುಂಬಾಯಿ ಸಂಸ್ಥಾನದ ಕಡೆ ಫೌಜು ನಮ್ಮ ಹುಕುಮತ್ತಿನಲ್ಲಿ ಇತ್ತು. ಆ ಲಸ್ಕರಿಗೆ ಬೇಕಾದ ಎತ್ತು, ಅಕ್ಕಿ, ರಸದು ಮುಂತಾಗಿ ಯಾವತ್ತು ಕೊಟ್ಟು, ಬಹಳ ಮೆಹನತ್ತು ಮಾಡಿದರು. ಈ ಪ್ರಕಾರ ಮಾಡದೆ ಇದ್ದರೆ, ಫೌಜು ಮುಂದೆ ಸಾಗುವುದಕ್ಕೆ ಬಹಳ ಪ್ರಯಾಸ ವಿತ್ತು. ಈ ಫೌಜಿಗೆ ಕೊಟ್ಟಂಥಾ ರಸದು, ಎತ್ತಿಗೆ ಸಹಾ ಇದರ ಕ್ರಯ ರಾಜ ರವರು ತಮ್ಮ ಮನಸುಪೂರ್ವಕವಾಗಿ, ತೆಗೆದುಕೊಳ್ಳುವದಿಲ್ಲಾ ಎಂತಾ, ನಿಶ್ಚಯ ಮಾಡಿ ಇದ್ದಾರೆ.

ಮೂರನೇ ಕಲಂ. ಲಡಾಯ ಪ್ರಾರಂಭವಾದಾರಭ್ಯ ಲಡಾಯ ಆಖೈರು ಪರಿಯಂತರದಲ್ಲು, ರಾಜರವರು ಅಂತಃಕರಣಪೂರ್ವಕವಾಗಿ ಕುಂಪನಿ ಸರ ಕಾರದ ಸಂಗಡ ದೋಸ್ತಿ ಮಡಗುವದರಿಂದ, ಆ ದೋಸ್ತಿಗೆ ಟೇಪುಸುಲ್ತಾನರು ವಿಕಲ್ಪ ಮಾಡಬೇಕು ಎಂಬದಾಗಿ, ಕುಂಪನಿಗೆ ತಿಳಿಯದ ಹಾಗೆ, ಹಮೇಷ ಹಿಕಮತ್ತುಗಳ ನಡಸುತ್ತಾ ಇದ್ದರು. ಆದಾಗ್ಯೂ ರಾಜರು ಆ ಮಾತಿಗೆ ಒಡಂಬಡಲಿಲ್ಲಾ.

ನಾಲ್ಕನೇ ಕಲಂ. ಹೋದ ಮಾರ್ಚ್ ತಿಂಗಳಲ್ಲಿ ಶ್ರೀರಂಗಪಟ್ಟಣದ ಸಲ್ಲಾ ಸನದು ಕರಾರು ಆದ ಸಮಯದಲ್ಲಿ, ಲಾರ್ಡ್ ಕಾರ್ನವಾಲೀಸ್ ಸಾಹೇಬರವರು ರಾಜರವರ ಬಹುಮಾನ ಗುಣಾತಿಶಯ ನಿಷ್ಪ್ರಪಂಚಪೂರ್ವಕ ವಾಗಿ ಇರುವದ ತಿಳಿದು, ರಾಜರವರು ಆತಂಕವಿಲ್ಲದೆ ಸ್ವತಂತ್ರವಾಗಿ, ಟೇಪು ಸುಲ್ತಾನರ ಅಂಗೀಜ ಇಲ್ಲದೆ ಇರಬೇಕೆಂತಾ ನಿಶ್ಚೈಸಿ ರಾಜರವರಿಗೂ ಅವರ ದೇಶಕ್ಕೂ ಕುಂಪನಿ ಸರಕಾರದ ಆಶ್ರಯದಲ್ಲಿ ತೆಗೆದುಕೊಳ್ಳಬೇಕು ಎಂಬದಾಗಿ ಮೊಕರರು ಮಾಡಿದರು. ಈ ಬಗ್ಯೆ ಟೇಪುಸುಲ್ತಾನರು ಬಹಳವಾಗಿ ವಿರೋಧ ವಾದಂಥಾ ಮಾತನ್ನು ಹೇಳಿದರು. ಆ ಮಾತು ಯಾವತ್ತು ಖಂಡಣೆ ಮಾಡಿ

ದಲ್ಲಿ, ಆದರ ಮೇಲೆ ಟೀಪುಸುಲ್ತಾನರು " ಕೊಡಗಿನ ಸೀಮೆಯಿಂದ ವರ್ಷಂ ಪ್ರತಿಯಲ್ಲೂ ಖಂಡಣಿ ಎಂಟುಸಾವಿರ ವರಹಾ ತಮಗೆ ಬರುತ್ತಾ ಇತ್ತು. ಆದನ್ನು ಕುಂಪನಿ ಸರಕಾರಕ್ಕೆ ತೆಗೆದುಕೊಳ್ಳಬೇಕು " ಎಂತ ಹೇಳಿದರು.

ಐದನೇ ಕಲಂ. ರಾಜರವರು ಹೇಳಿದರು : " ಯಾವಾಗ್ಯೂ ತಮ್ಮ ಸೀಮೆಯಿಂದ ಎಂಟುಸಾವಿರ ವರಹಾ ಖಂಡಣಿ ಟೀಪುಸುಲ್ತಾನರಿಗೆ ಕೊಡ ಲಿಲ್ಲಾ. ಕುಂಪನಿ ಸರಕಾರದ ಸ್ನೇಹಾ ಮದತ್ತಿನ ಉದ್ದಿಶ್ಯ ನಮ್ಮ ಖುಷಿ ಯಿಂದ ವರ್ಷಂಪ್ರತಿಯಲ್ಲು ಎಂಟುಸಾವಿರ ವರಹಾ ಕೊಟ್ಟೇವು " ಎಂಬುದಾಗಿ ಹೇಳಿದರು.

ಆರನೇ ಕಲಂ. ದೊರೆಗಳವರು ತಮ್ಮ ರಾಜ್ಯಪರಿಪಾಲನೆ ಮಾಡಿ ಕೊಳ್ಳುವಲ್ಲಿ, ಸರಕಾರ ಕುಂಪನಿ ಕಡೆಯಿಂದ ಯಾವಾಗಲಾದರೂ ತಂಟೆ ತಕರಾರು ಆಗಬಾರದು ; ಏನು ಕಾರಣ ಎಂದರೆ : ರಾಜರವರು ಬಹಳ ಧೈರ್ಯ ದಿಂದ ತಮ್ಮ ರಾಜ್ಯದ ಪ್ರಜೆ ಸಂರಕ್ಷಣ್ಯ ಮಾಡಿಸಿ, ಪ್ರಜಾವೃದ್ಧಿ ಮಾಡಿಸು ವಂಥಾದ್ದಕ್ಕೆ ಸಮರ್ಥರು ಇದ್ದಾರೆ. ನಮ್ಮ ದಸ್ಕತ್ತು ಮುದ್ರೆ ಸಹಾ ಕಣ್ಣೂರ ಸ್ಥಾನದಲ್ಲು ತಾರೀಖು ೩೧ನೇ ಮಾರ್ಚ್ ಮಾಸ ಸನ್ ೧೭೯೩ರಲ್ಲು ಬರೆಸಿ ಕೊಟ್ಟದ್ದು. ರಾಬರ್ಟ್ ಆಬಕ್ರಾಂಬಿ ಸೈ ತಾಜಾ ಕಲಂ : ಸದರಿ ಬರದ ವರಹಾ ಒಂದಕ್ಕೆ ರೂಪಾಯಿ ಮೂರರ ಪ್ರಕಾರ ರಾಜರವರು ವರ್ಷಂಪ್ರತಿ ಯಲ್ಲು ತಲಚೇರಿಗೆ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಕೊಡಬೇಕು. ದಸ್ಕತ್ತು —ರಾಬರ್ಟ್ ಆಬಕ್ರಾಂಬಿ.

ಈ ಪ್ರಕಾರ ಎರಡು ಕರಾರುನಾಮೆ ಬರೆದು, ಅದರಲ್ಲಿ ಒಂದಕ್ಕೆ, ಅವರ ಕೈಯೊಳಗಣ ದಸ್ಕತ್ತು ಮೊಹರಮಾಡಿ, ಮಹಾರಾಜರವರಿಗೆ ಕೊಟ್ಟು, ಮತ್ತೊಂದು ಕರಾರುನಾಮಾ ದೊರೆಗಳವರ ಕಡೆಯಿಂದ ತೆಗೆದುಕೊಂಡು, ಸರ್ ಜನರಲ್ ರಾಬರ್ಟ್ ಆಬಕ್ರಾಂಬಿ ಸಾಹೇಬ್ ಬಹದ್ದೂರವರು ಬಂಗಾಳಕ್ಕೆ ಹೋದರು.

ಮಹಾರಾಜರವರು ಕರಾರುನಾಮಾ ತೆಗೆದುಕೊಂಡು, ತಮ್ಮ ಕೊಡಗಿನ ರಾಜ್ಯಕ್ಕೆ ಬಂದು, ಕ್ಷೇಮ ಸಂತೋಷದಲ್ಲಿ ರಾಜ್ಯಭಾರ ಮಾಡಿಕೊಂಡು ಕರಾರುನಾಮೆ ಪ್ರಕಾರ ಇಂಗ್ರೇಜ ಬಹದ್ದೂರವರ ಕುಂಪನಿ ಸರಕಾರಕ್ಕೆ ವರ್ಷ ವರ್ಷಕ್ಕೂ ಸ್ನೇಹಾ ಉದ್ದಿಶ್ಯ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಸಂದಾಯತ

ಮಾಡಿ, ಅದಕ್ಕೆ ರಶೀದಿ ತೆಗೆದುಕೊಳ್ಳುತ್ತಾ, ಕರಾರುನಾಮೆ ಪ್ರಕಾರ ಉಭಯ ಕಡೆಯಿಂದಲೂ, ಲೇಶಾಂಶ ಹೆಚ್ಚುಕಡಿಮೆ ಇಲ್ಲದೆ, ದೋಸ್ತಿಯಿಂದ ಇದ್ದಲ್ಲಿ, ಸಲ್ಲಾ ಆಗಿ ಮೂರು ವರುಷದಮೇಲೆ, ಟೀಪುಸುಲ್ತಾನರು ಸಲ್ಲಾಕ್ಕೆ ತಫಾವತು ಮಾಡುವವರಾಗಿಯೂ ನಾನಾ ಪ್ರಕಾರ ·ವಿರುದ್ಧ ಮಾಡುವ ಮತಲಪ್ಪಿನಲ್ಲಿ, ಇದ್ದಾರೆ, ಎಂಬ ಸಮಾಚಾರ ಮಹಾರಾಜರವರು ಕೇಳಿದರಿಂದ, ಅದನ್ನು ನೆಲವರ ತಿಳಿಯಬೇಕೆಂಬದಾಗಿ, ಒಂದು ಜೋಡಿ ಹರಿಕಾರರನ್ನು ಶ್ರೀರಂಗ ಪಟ್ಟಣಕ್ಕೆ ಕಳುಹಿದಲ್ಲಿ, ಆ ಜನರು ಹೋಗಿ ತಿಳುಕೊಂಡು ಬಂದು, ಮರಾಟಿ ಯವರ ಕಡೆಯಿಂದ ಇಬ್ಬರು ವಕೀಲರು ಟೀಪುಸುಲ್ತಾನರ ಬಳಿಗೆ ಬಂದು, ಮನಸುಬಾ ಮಾಡುತ್ತಾರೆಂಬುದಾಗಿ, ಅರಿಕೆ ಮಾಡಿದರಿಂದ, ದೊರೆಗಳವರು ಈ ವರ್ತಮಾನ ನೆಲವರ ತಿಳಿದು, ಮಲೆವಾರಿ ಕಮಿಶನ್ ಜಮಿಾಸ್ ಸ್ಟೀವನ್ ಸಾಹೇಬರವರಿಗೆ ಬರೆಸಿ ಕಳುಹಿದರು.

ಆ ಬಳಿಕ ಕೆಲವು ದಿವಸದ ಮೇಲೆ ಟೀಪುಸುಲ್ತಾನರು ಎರಡು ವರ್ಷ ದಿಂದ ವೀರರಾಜೇಂದ್ರ ವಡೆಯರವರ ಗಾತ ಮಾಡಬೇಕು ಎಂಬದಾಗಿ ಯೋಚಿಸಿಕೊಂಡು, ಇವರ ಬಂಧುವರ್ಗದಲ್ಲಿ ಒಬ್ಬ ಲಿಂಗರಾಜ ಎಂಬದಾಗಿ ಇದ್ದ. ಅವನಿಗೆ ವೀರರಾಜೇಂದ್ರ ವಡೆಯರವರು ಒಂದು ನಾಡು ಜಹಗೀರಿ ಕೊಟ್ಟು ಇಟ್ಟು ಇದ್ದಲ್ಲಿ, ಟೀಪುಸುಲ್ತಾನರು ಇಬ್ಬರು ಮುಸಲ್ಮಾನರನ್ನು ಆ ಲಿಂಗರಾಜನ ಬಳಿಗೆ ಕಳುಹಿಸಿ, ಕೊಡಗಿನ ರಾಜರು ಇಂಗ್ರೇಜಿಯವರ ಸಂಗಡ ಅತ್ಯಂತ ದೋಸ್ತರರಾಗಿ ಇದ್ದಾರೆ. ಆ ಉಭಯಸ್ಥರು ಕೂಡಿ, ನಮ್ಮ ದವಲತ್ತು, ಮಾನ ಸಹಾ ಕೆಡಿಸಿದರು. ಇನ್ನು ಮುಂದು ಒಂದು ಸಮಯದಲ್ಲಿ ಸಲ್ಲಾ ಬಿಗಡಾಯಿಸಿದರೆ, ಇಂಗ್ರೇಜ ಬಹದ್ದೂರ ಫೌಜನ್ನು ಕರೆಸಿ ಮೊದಲಿ ಗಿಂತಲೂ ಹತ್ತು ಪಾಲು ಹೆಚ್ಚಾಗಿ ಬೇಕಾದ ಸಾಮಾನು, ಸರಂಜಾಮು ತಯಾರು ಮಾಡಿಕೊಟ್ಟು, ಅವರನ್ನು ಪಟ್ಟಣ ಪರಿಯಂತರ ತಲಪಿಸಿ, ನಮ್ಮ ದವಲತ್ತನ್ನು ಮುಳುಗಿಸಿಬಿಟ್ಟಾರು. ಕೊಡಗಿನ ದೊರೆಗಳು ನಮಗೆ ದೊಡ್ಡ ದುಷ್ಮಾನರಾಗಿ, ಶ್ರೀರಂಗಪಟ್ಟಣದ ಸಮಿಾಪದಲ್ಲಿ ಇದ್ದಾರೆ. ಅವರನ್ನು ಎಲ್ಲಾ ಬಗೆಯಲ್ಲು ನಮ್ಮ ಸರಕಾರದ ದುಷ್ಮಾನರು ಎಂತಾ ತಿಳಿಯಬೇಕು. ಅವಾಗ್ಯೆ ನಿನಗೆ ಸರ್ಪರಾಜು ಮಾಡಿಯೇವು. ಈ ಮನಸುಬಕ್ಕೆ ನಿನಗೆ ಖುಷಿ ಇದ್ದರೆ, ಒಂದು ಕೈಕಾಗದ, ಆಣೆ ಭಾಷೆ ಹಾಕಿ, ಬರೆದು ಕಳುಹಿಸ

ಬೇಕು ಎಂಬುದಾಗಿ, ಆ ಮುಸಲ್ಮಾನರ ಸಂಗಡ ಹೇಳಿಕಳುಹಿದಲ್ಲಿ, ಆ ಲಿಂಗರಾಜನು ಈ ಮನಸುಬಕ್ಕೆ ಕಬೂಲಾಗಿ, ಒಂದು ಕಾಗದ ಬರೆದ ವಿವರ:

ನಾನು ನಿಮ್ಮ ಸರಕಾರದ ಖೈರು ಕಾದಿದ್ದೇನೆ. ಇಂಗ್ರೇಜಿಯವರ ಸ್ನೇಹಾ ನಾನು ಮಡಗುವುದಿಲ್ಲಾ. ವೀರರಾಜೇಂದ್ರ ವಡೆಯರವರನ್ನು ಏನಾ ಬಗೆಯಿಂದಾದರೂ ಹೊಡೆಯುತ್ತೇನೆ ಎಂಬದಾಗಿ, ನಂಬಿಕೆ ಆಗಿ ಬರದು ಕಳುಹಿಸಿ, ಕೊಡಗು ಜನರಲ್ಲಿ ವೀರರಾಜೇಂದ್ರ ವಡೆಯರವರ ನಿಮ್ಮಕು ಹರಾಮರಾಗಿ ದುಷ್ಮಾನರಾದಂಥಾ ಕೆಲವು ಕೊಡಗರನ್ನು ತನ್ನ ಸಂಗಡ ಕೂಡಿ ಕೊಂಡು, ಆ ನಿಮ್ಮಕುಹರಾಮ ಕೊಡಗರಿಗೆ ಟೇಪುಸುಲ್ತಾನರ ಕಡೆಯಿಂದ ಬೇಕಾದ ಐಶ್ವರ್ಯ ಕೊಡಿಸುತ್ತೇನೆ ಎಂತಾ, ತಾನು ಭರವಸಾ ಕೊಟ್ಟು, ಹೊಡೆಯುವ ಬಗ್ಯೆ ಯತ್ನ ಮಾಡಿದ ವಿವರಾ—ದೊರೆಗಳವರು ಮಡಿಕೇರಿಗೆ ಹೋಗುವಾಗ್ಯೆ ಬಿಕ್ಕಟ್ಟಾದ ಕಾಡ ಮಾರ್ಗದಲ್ಲಿ ನಿಂತು, ಗುಂಡಿನಿಂದ ಹೊಡೀರಿ ಎಂಬುದಾಗಿ, ಆ ನಿಮ್ಮಕುಹರಾಮ ಕೊಡಗರಿಗೆ ಹೇಳಿದಲ್ಲಿ, ಆ ಮಾತಿಗೆ ಆ ಜನ ಒಪ್ಪಿಕೊಂಡು, ಆ ಮೇರೆ ಮಾಡಬೇಕೆಂಬದಾಗಿ ತಯಾರಾಗಿ ಇದ್ದಲ್ಲಿ, ಈ ಮೇರೆ ಕೊಡಗರು ಸ್ವಾಮಿದ್ರೋಹ ಮಾಡಬೇಕೆಂತಾ ಯೋಚಿಸಿ ಇದ್ದಾರೆ ಎಂತಾ ತಿಳುದಲ್ಲದೆ, ಟೇಪುಸುಲ್ತಾನರು ಲಿಂಗರಾಜನು ಸಹಾ ಎರಡು ವರ್ಷ ದಿಂದ ದೊರೆಗಳ ಹೊಡೆಯಬೇಕೆಂಬದಾಗಿ ಯೋಚಿಸಿದ್ದಾರೆ ಎಂಬದು ತಿಳಿಯ ಲಿಲ್ಲಾ. ಆದ್ದರಿಂದ ಆ ನಿಮ್ಮಕುಹರಾಮ ಕೊಡಗರಿಗೆ ತಕ್ಕ ಶಿಕ್ಷೆ ಮಾಡಿಸಿ ಬಂದುಬಸ್ತು ಮಾಡಿದರು.

ಕಲಿಸಂದ ೪೮೯೭ನೆ ರಾಕ್ಷಸ ಸಂವತ್ಸರದಲ್ಲಿ ಪಾಡಿನಾಲ್ಕುನಾಡಲ್ಲಿ ಹೊಸ ನೂತನವಾಗಿ ಅರಮನೆಯನ್ನು ಕಟ್ಟಿಸಿ, ತಯಾರು ಮಾಡಿಸಿ, ಇದೇ ಸಂವತ್ಸರದ ವೈಶಾಖ ಶು. ೭ಯು ಶುಕ್ರವಾರ ಘಳಿಗೆ ೨೫ಕ್ಕೆ ಕನ್ಯಾ ಲಗ್ನದಲ್ಲಿ ವೀರ ರಾಜೇಂದ್ರ ವಡೆಯರವರು ಗೃಹಪ್ರವೇಶವಾದರು.

ಆ ಬಳಿಕ ಟೇಪುಸುಲ್ತಾನರು ಲಿಂಗರಾಜ ಎಂಬ ಪಿತೂರಿಯವ ಸಹಾ ಮನಸುಬಾ ಮಾಡಿದ ವಿವರ ಹ್ಯಾಗೆಯೆಂದರೆ: ಮೊದಲು ವೀರರಾಜೇಂದ್ರ ವಡೆಯರನ್ನು ಕೊಡಗರ ಕೈಯಿಂದ ಮೋಸಮಾಡಿಸಬೇಕು ಎಂತ ಮಾಡಿ ದಂಥಾ ಯೋಚನೆ ಸಾಧ್ಯವಿಲ್ಲದೆ ಹೋಯಿತು. ಮುಂದೆ ಹ್ಯಾಗೆ ದಗಾಮಾಡ ಬೇಕು ಎಂಬದಾಗಿ, ಟೇಪುಸುಲ್ತಾನರು ಆ ಪಿತೂರಿಯವನಿಗೆ ಕಾಗದ ಬರೆಸಿ

ಕಳುಹಿದಲ್ಲಿ, ಕೆಲವು ಫೌಜನ್ನು ರಾತಾರಾತ್ರಿ ಕಾಡುಮಾರ್ಗವಾಗಿ ನನ್ನಲ್ಲಿಗೆ ಕಳುಹಿದರೆ, ರಾತ್ರಿ ಕಾಲದಲ್ಲಿ ಅವರ ಮೇಲೆ ಬಿದ್ದು ಹೊಡೆಯುತ್ತೇನೆ ಎಂಬ ದಾಗಿ, ಅವನು ಜವಾಬು ಬರೆದು ಕಳುಹಿದಲ್ಲಿ, "ಕೊಡಗಿನ ರಾಜರಿಗೆ ಪ್ರಾಕು ಸ್ವಲ್ಪ ಜಮಿಾಯತು ಇತ್ತು. ಆ ಸಮಯದಲ್ಲಿ ನಮ್ಮ ಹೇರಳ ಫೌಜನ್ನು ಮುಳುಗಿಸಿಬಿಟ್ಟರು. ಈಗ ಅವರಿಗೆ ಜಮಿಾಯತು ಹೆಚ್ಚಾಗಿದೆ. ಇಂಗ್ರೇಜಿ ಯವರ ಕುಮ್ಮಕು ಉಂಟು. ಲಡಾಯುದ ಸಾಮಾನು ಕೂಡಿ ಇದೆ. ಹೀಗೆ ಇರುವಲ್ಲಿ, ಫೌಜು ಕಳುಹಿದರಿಂದ ಪ್ರಯೋಜನವೇನು ಇದೆ. ಬಹಳ ಬಗೆ ಹಿಕ್ಮತ್ತಿನಿಂದ, ನಿನ್ನ ಯುಕ್ತಿ ಇದ್ದಂತೆ, ಈ ಪ್ರಯಾಸದ ಕೆಲಸವನ್ನು ಮಾಡಬೇಕು ಎಂಬುದಾಗಿ, ಟೀಪುಸುಲ್ತಾನರು ಬರಸಿ ಕಳುಹಿದಲ್ಲಿ, ಈ ಪಿತೂರಿಯುವನು ಜವಾಬು ಬರದ ವಿವರ: ಇಲ್ಲಿ ಚನ್ನಾಗಿ ಶಿಸ್ತು ಹೊಡೆಯು ವಂಥಾ ಜನ ನನ್ನಲ್ಲಿ ಇಲ್ಲಾ. ಆದ್ದರಿಂದ ಅಸದುಲ್ಲಾಯಿ ಜನದಲ್ಲಿ ಆರಿಸಿ ಇತಬಾರಿ ಆಗಿ ಒಳ್ಳೆ ಶಿಸ್ತು ಹೊಡೆಯುವಂಥಾ ಎರಡು ಜನರನ್ನು ಚಕಮುಕಿ ಬಂದೂಕು, ಮದ್ದುಗುಂಡು, ಮುಂತಾದ್ದನ್ನು ಕೊಟ್ಟು, ಇಲ್ಲಿಗೆ ಕಳುಹಿಸಿದರೆ, ಅವರು ಸವಾರಿ ಹೋಗುವ ಮಾರ್ಗದಲ್ಲಿ ಇಕ್ಕಟ್ಟಿನ ಜಾಗದಲ್ಲಿ ಈ ಚೇಲೇರನ್ನು ನಿಲ್ಲಿಸಿ, ಗುಂಡಿನಿಂದ ಹೊಡಸುತ್ತೇನೆ. ಅದು ಸಂದರ್ಭ ಆಗದಿದ್ದರೆ, ಅವರು ಹಮೇಷಾ ಶಿಕಾರಿಗೆ ಹೋಗುತ್ತಾ ಇದ್ದಾರೆ. ಆವಾಗ್ಯೆ ಸಂದರ್ಭವಾದಲ್ಲಿ, ಹೊಡಿಸುತ್ತೇನೆ. ಅಥಾಪಿ ಈ ಎರಡು ಬಗೆಯಿಂದ ಸಂದರ್ಭ ಸಿಕ್ಕದೆ ಹೋದರೆ ಶಿವರಾತ್ರಿ ಹಬ್ಬದ ದಿವಸ ಮಹದೇವಪುರದಲ್ಲಿ ಬಹಳ ಫಿಕೀರಿನಲ್ಲಿ ಖುಷಿಯಿಂದ ಹಬ್ಬಾ ಮಾಡುತ್ತಾ ಇರುತ್ತಾರೆ. ಆ ಸಮಯದಲ್ಲಿ ಈ ಜನದ ವೇಷ ಬದಲು ಮಾಡಿ, ಕಠಾರಿ, ಬಾಂಕು ಮುಂತಾದ ವಳಾಯುಧ ಕೊಟ್ಟು, ಆ ಜಾತ್ರೆ ಜನರ ಸಂಗಡ ಕೂಡಿಸಿಬಿಟ್ಟು, ಆ ಜನರ ಮರೆಯಿಂದ ಜಾಯಾ ಮಾಡಿಸು ತ್ತೇನೆ. ಹ್ಯಾಗಾದರೂ ಈ ಮೂರು ಬಗೆ ಸಮಯ ಸಾಧಿಸಿ, ಅವರನ್ನು ಹೊಡೆಯಿಸುವಲ್ಲಿ ಅಂತರವಿಲ್ಲಾ ಎಂಬುದಾಗಿ, ಬರದು ಕಳುಹಿದಲ್ಲಿ, ಅದನ್ನು ನೋಡುತ್ತಲೇ ಟೀಪುಸುಲ್ತಾನರು ತಮ್ಮ ಕಾರ್ಯ ಆದೀತು ಎಂತಾ, ಬಹಳ ಸಂತೋಷಪಟ್ಟು, ಚಿಕ್ಕಂದಿನಿಂದ ಸಾಕಿದಂಥಾ, ಇತಬಾರಿ ಒಳ್ಳೆ ಶಿಸ್ತು ಹೊಡೆಯುವಂಥಾ, ತಮ್ಮ ಅಸದುಲ್ಲಾಯಿ ಚೇಲೇರು ಇಬ್ಬರನ್ನು ಆರಿಸಿ, ಆ ಎರಡು ಜನಕ್ಕೂ ಒಂದೊಂದು ಜನಕ್ಕೆ ಬಾರು ಬಂದೂಕು ಒಂದು,

ಸುಲ್ತಾನಿ ತೋಟೆ ತುಂಬಿದಂಥಾ ತೋಸ್ತಾನಿ ಒಂದು, ಖಾಸಾ ಮದ್ದು, ಕತ್ತಿ ಒಂದು, ಕಠಾರಿ ಒಂದು, ಬಾಂಕು ಒಂದು, ಬಿಚುವಾ ಒಂದು, ಈ ಮೇರೆ ಎರಡು ಜನಕ್ಕೂ ಜಂಗಿ ಸಾಮಾನು ಕೊಟ್ಟು, ತಯಾರುಮಾಡಿ ದಾರಿ ತೋರಿಸುವ ಬಗ್ಯೆ ಎರಡು ಜನ ಮುಸಲ್ಮಾನರನ್ನು ಕೂಡಿಸಿ, ನಾಲ್ಕು ಐದಾವರ್ತಿ ಕಾಗದಗಳ ಬರದು ಕಳುಹಿಸಿದಂಥಾ ಆ ಪಿತೂರಿಯುವನ ಬಳಿಗೆ ಕಳುಹಿದಲ್ಲಿ, ಅವರು ಹಗಲು ಟೀಪುಸುಲ್ತಾನರ ಸರಹದ್ದಿನಲ್ಲು ಇದ್ದುಕೊಂಡು, ರಾತ್ರಿಕಾಲದಲ್ಲಿ ಪಾರಾಚೌಕಿ ತಪ್ಪಿಸಿ, ಕಳ್ಳಮಾರ್ಗವಾಗಿ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬರುವುದು, ಬೆಳಗಾಗುತ್ತಲೇ ಕಾಡ ಒಳಗೆ ಸಾಯಂಕಾಲ ಪರಿಯಂತರ ಇರುವದು, ಸಾಯಂಕಾಲವಾಗುತ್ತಲೆ ರಾತ್ರೆಕಾಲದಲ್ಲಿ ಈ ನಾಲ್ಕು ಜನರು ಆ ಪಿತೂರಿಯುವನ ಬಳಿಯು ಚಾಕ್ರಿ ಮಾಡುವಂಥಾ ಒಬ್ಬ ಮನುಷ್ಯನ ಮನೆಗೆ ಬಂದು, ತಮ್ಮ ಮನಸ್ಸಿನ ಅಂತರಂಗವನ್ನು ಆ ಮನುಷ್ಯನ ಸಂಗಡ ಹೇಳುವದು, ಅವನು ತನ್ನ ಖಾವಂದನಾದ ಆ ಪಿತೂರಿಯುವನಿಗೆ ತಿಳಿಸುವದು. ಅವನು ಆ ನಾಲ್ಕು ಜನರ ಬಳಿಗೆ ಬಂದು, ದುಷ್ಟತನದ ಮನಸುಬಾ ಮಾಡಿಕೊಂಡು, ಸಮಯುಸಾಧಿಸುತ್ತಾ ಇದ್ದಲ್ಲಿ, ಆ ನಾಲ್ಕು ಜನರ ಸಂಗಡ ಇದ್ದ ಒಬ್ಬ ಮುಸಲ್ಮಾನರ ಹುಡುಗನು ಅವರನ್ನು ಬಿಟ್ಟು, ಮಹಾರಾಜರ ಬಳಿಗೆ ಬಂದು, " ಟೀಪುಸುಲ್ತಾನರು ಆ ಲಿಂಗರಾಜನು ಸಹಾ ಕಾಗದಗಳ ಮುಖಾಂತರದಿಂದ ಮನಸುಬಾ ಮಾಡಿ, ತಮ್ಮನ್ನು ಹೊಡೆಯುವ ಬಗ್ಯೆ ನಿಶ್ಚಯ ಮಾಡಿ ಇದ್ದಾರೆ. ಟೀಪುಸುಲ್ತಾನರು ಇಬ್ಬರು ಚೇಲೇರನ್ನೂ ಅವರಿಗೆ ಮಾರ್ಗ ತೋರಿಸುವ ಬಗ್ಯೆ ಎರಡು ಜನ ಮುಸಲ್ಮಾನರ ಸಹಾ ಕೊಟ್ಟು, ಈ ನಾಲ್ಕು ಜನರನ್ನು ಆ ಪಿತೂರಿಯುವನ ಬಳಿಗೆ ಕಳುಹಿಸಿ ಇದ್ದಾರೆ. ಟೀಪುಸುಲ್ತಾನರ ಬಳಿ ಆಣೆಭಾಷೆ ಮಾಡಿ, ಕೊಡಗಿನ ದೊರೆಗಳ ಹೊಡೆಯುತ್ತೇವೆ ಎಂತ ವೀಳ್ಯ ತೆಗೆದುಕೊಂಡು, ಶಿವರಾತ್ರಿ ಹಬ್ಬದಲ್ಲಿ ಸದ್ಯ ಘಾತ ಮಾಡುತ್ತೇವೆಯೆಂಬದಾಗಿ, ಅವರು ಹೇಳುತ್ತಾರೆ. ನಾನು ಅವರ ಸಂಗಡ ಒಂದು ವರ್ಷದಿಂದ ಇರುತ್ತೇನೆ. ಮಹಾದೇವನು ನನಗೆ ಈ ಮೇರೆ ಬುದ್ಧಿ ತೋರಿಸಿದರಿಂದ, ಈ ವಿವರ ಜಾಹೀರುಮಾಡಬೇಕು ಎಂತ ನನ್ನ ಮನಸ್ಸಿಗೆ ಕಂಡದರಿಂದ, ಈಗ ಜಾಹೀರು ಮಾಡಿ ಇದ್ದೇನೆ" ಎಂತ ಹೇಳಿದರಿಂದ " ಈ ಮಾತು ನೀನು ಹೇಳುವಂಥಾದ್ದು ಸಟೆಯೋ? ದಿಟವೋ?" ಎಂಬುದಾಗಿ, ಆ ಹುಡುಗನ

9

ಸಂಗಡ ಕೇಳಿದಲ್ಲಿ, "ಬದ್ಧವೇ ಸರಿ. ಪರೀಕ್ಷೆಮಾಡಬೇಕು. ಯಾವ ಮೇರೆ ಎಂದರೆ ಮೂರು ದಿವಸ ಪಹರಾ ಮಡಗಬೇಕು" ಎಂಬುದಾಗಿ, ಆ ಹುಡುಗನು ಹೇಳಿದರಿಂದ, ಅದೇ ಮೇರೆ ಆ ಪಿತೂರಿಯುವನ ಮನೆಗೆ ಮೂವತ್ತು ಜನ, ಅವನ ಚಾಕರನ ಮನೆಗೆ ಇಪ್ಪತ್ತು ಜನ ಸಹಾ, ರಾತ್ರಿ ಎರಡೂವರೆ ಘಳಿಗೆ ಮೇಲೆ ಪಹರಾ ಕಾಯುವದು, ಬೆಳಗಾಗುವುದಕ್ಕೆ ಎರಡು ಘಳಿಗೆ ಇದ್ದಂತೆ ಕಾಡ ಒಳಗೆ ಇರುವ ಹಾಗೆ ಹೇಳಿ, ಗುಟ್ಟಿನಿಂದ ಮಡಗಿ ಇದ್ದಲ್ಲಿ, ಎರಡು ದಿವಸ ಕಳದು, ಮೂರನೆ ದಿವಸ ರಾತ್ರಿಕಾಲದಲ್ಲಿ ಆ ನಾಲ್ಕು ಜನವು ಆ ಚಾಕರ ಮನುಷ್ಯನ ಮನೆಗೆ ಬಂದುದರಿಂದ, ಅವರಲ್ಲಿ ಒಬ್ಬ ಚೇಲೆಯನು ಪಹರ ಇದ್ದವರು ಹಿಡಕೊಂಡಲ್ಲಿ, ಅವನು ಕೂಗಿದ್ದರಿಂದ, ಮತ್ತೊಬ್ಬ ಚೇಲೆ ದಾರಿ ತೋರಿಸುವಂಥಾ ಒಬ್ಬ ಮುಸಲ್ಮಾನ ಸಹಾ ಕಾಡಿಗೆ ಓಡಿಹೋಗುತ್ತಿದ್ದಲ್ಲಿ, ಪಹರೆಯುವರು ಬೆನ್ನಾಡಿದಲ್ಲಿ ಆ ಮುಸಲ್ಮಾನನವನು ಸಿಕ್ಕದೆ, ಕಾಡು ಬಿದ್ದು ಓಡಿಹೋದ. ಆ ಚೇಲೇರವನು ಅದೇ ಮೇರೆ ಓಡಿಹೋಗುತ್ತಿದ್ದಲ್ಲಿ, ಆ ಪಹರೆಯ ಜನದಲ್ಲಿ ಒಬ್ಬನು ಕತ್ತಿಯಿಂದ ಅವನಿಗೆ ಜಖಮಿ ಮಾಡಿದ್ದಲ್ಲಿ ಬಿದ್ದು, ಮತ್ತು ಎದ್ದು ಹೋಗುವದಕ್ಕೆ ನೋಡಿದಲ್ಲಿ, ಮತ್ತೊಂದು ಜಖಮಿ ಮಾಡಿ, ಅವನ ಮುಸುಕಿ ಕಟ್ಟಿದರು. ಸಂಗಡ ಇದ್ದ ಮತ್ತೊಬ್ಬ ಮುಸಲ್ಮಾನರವನು ಅದೇ ಮೇರೆ ಓಡಿಹೋಗುತ್ತಿದ್ದಲ್ಲಿ, ಪಹರೆಯುವರು ಅವನ ಬೆನ್ನಾಡಿದಲ್ಲಿ, ಅವನು ಕತ್ತಿ ಬೀಸಿದರಿಂದ, ಅವನಿಗೂ ಜಖಮಿ ಮಾಡಿ ಮುಸುಕಿ ಕಟ್ಟಿದರು.

ಈ ಗುಲ್ಲು ಆದಂಥಾದ್ದು ಆ ಪಿತೂರಿಯುವನು ಕೇಳಿ, ಏನೋ ಮೋಸವಾಯಿತೆಂತಾ ತಿಳಿದು, ನಾಲ್ಕು ಐದು ಜನರ ಸಂಗಡ ಕರಕೊಂಡು, ಕತ್ತಿ ತೆಗೆದುಕೊಂಡು, ಮನೆಯಿಂದ ಹೊರಟು, ಆ ಚೇಲೇರ ಬಿಡಿಸಬೇಕೆಂತಾ ಹೋಗುವಾಗ್ಯೆ, ಅವನ ಮನೆ ಸುತ್ತ ಗುಟ್ಟಿನಲ್ಲಿ ಇದ್ದ ಪಹರೆಯುವರು ಅವನ ಸಂಗಡ ಇದ್ದ ಜನರಲ್ಲಿ ಎರಡು ಜನರ ಹಿಡಕೊಂಡರು. ಆವಾಗ್ಯೆ ಆ ಪಿತೂರಿಯುವನು ಅರಮನೆ ಶಿಪಾಯಿ ಜನ ಎರಡಕ್ಕೆ ಕತ್ತಿಯಿಂದ ಜಖಮಿ ಮಾಡಿದರಿಂದ, ಅರಮನೆ ಶಿಪಾಯಿಗಳಿಗೆ ಜಾಯಾ ಮಾಡಿ, ಚೇಲೇರನ್ನು ಸಂಗಡ ಕರೆದುಕೊಂಡು, ಟೀಪುಸುಲ್ತಾನರ ಬಳಿಗೆ ಓಡಿಹೋಗುತ್ತಾನೆಯೆಂತಾ, ಉಳಿಕೆ. ಪಹರೆಯ ಜನರು ತಿಳಿದು, ಅವನಿಗೂ ಅವನ ಸಂಗಡ ಇದ್ದ ಒಬ್ಬ ಕೊಡಗನಿಗೂ ಕತ್ತಿಯಿಂದ ಹೊಡದುಹಾಕಿದರು.

ಆ ಬಳಿಕ ತಲಚೇರಿ ಸರದಾರರು ಹಂಡಲಿ ಯುಸಕುವೆರು ಸಾಹೇಬ ರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ, ಟೀಪುಸುಲ್ತಾನರ ಚೇಲೇರು ಮೋಸಗಾರಿಕೆಯಿಂದ ನಮ್ಮನ್ನು ಪ್ರಾಣಘಾತ ಮಾಡುವ ಬಗ್ಯೆ ಬಂದು ಇದ್ದರು. ಅವರಲ್ಲಿ ಒಬ್ಬ ಚೇಲಿಗೆ ಜಖಮಿ ಆಗಿ, ಮತ್ತೊಬ್ಬನಿಗೆ ಏನೂ ಗಾಯವಿಲ್ಲದೆ ಸಿಕ್ಕಿ ಇದ್ದಾರೆ. ಇವರಿಗೆ ಮಾರ್ಗ ತೋರಿಸುವ ಬಗ್ಯೆ, ಇವರ ಸಂಗಡ ಇಬ್ಬರು ಮುಸಲ್ಮಾನರು ಇದ್ದರು. ಅವರಲ್ಲಿ ಒಬ್ಬ ಕಾಡು ಬಿದ್ದು ಓಡಿಹೋದಾ. ಮತ್ತೊಬ್ಬ ಮುಸಲ್ಮಾನರವನಿಗೆ ಘಾಯ ಹೆಚ್ಚಾಗಿ, ಮೂರು ದಿವಸ ಪರಿಯಂತರ ಇದ್ದು, ಆ ಬಳಿಕ ಸತ್ತುಹೋದನು. ಆ ಎರಡು ಜನ ಚೇಲೇರ ಕೈಯಲ್ಲಿ ಇದ್ದ ಹತ್ಯಾರು, ಚಕಮುಕಿ ಬಂದೂಕು ಎರಡು, ತೋಸ್ತಾನು ಎರಡು, ಕಠಾರಿ ಒಂದು, ಕತ್ತಿ ಎರಡು, ಬಾಂಕು ಒಂದು, ಬಿಚುವಾ ಒಂದು ಸಹಾ ಆ ಎರಡು ಜನ ಚೇಲೇರ ಸಂಗಡ ಇದೆ. ಈ ಮಾತಿನ ಸಾಕ್ಷಿ ಬಗ್ಯೆ ನಮಗೆ ಸುದ್ದಿ ಹೇಳಿದಂಥಾ ಮುಸಲ್ಮಾನರ ಹುಡುಗ ಒಂದು, ಆ ಸಮಯದಲ್ಲಿ ಹಾಜರು ಇದ್ದ ತಾಂಬಾ ಜನ ಒಂದು, ನಮ್ಮ ಚಾಕರ ವೆಂಕಟಾಚಲ ಜನ ಒಂದು, ಸಹಾ ಕಳುಹಿಸಿದ್ದೇವೆ. ನಯಭಯದಿಂದ ಅವರಿಂದ ವಿಚಾರಿಸಿದರೆ, ಯಾವತ್ತು ವಿವರವು ತಮಗೆ ತಿಳಿಯಬಂದೀತು. ಈ ಇಬ್ಬರು ಚೇಲೇರು ಬಹಳ ತಕ್ಷೀರುವಂತರಿದ್ದಾರೆ. ಮಾವು ಮಾಡುವಂಥಾದ್ದಕ್ಕೆ ತಕ್ಕಂಥವರಲ್ಲಾ. ಫಿರಂಗಿ ಬಾಯಿಗೆ ಕಟ್ಟಿ ಹಾರಿಸಿ ಕೊಂದುಹಾಕುವಂಥಾದ್ದು ವಿಹಿತವದೆ. ಅಥಾಪಿ ತಾವು ಅವರಿಗೆ ಶಿಕ್ಷೆ ಮಾಡದೆ ಇದ್ದರೆ, ಇಲ್ಲಿಗೆ ಕಳುಹಿಸಿ ಕೊಡುವಂತೆ ಮಾಡಿಸಬೇಕು. ಅವರಿಗೆ ತಕ್ಕ ಶಿಕ್ಷೆ ಮಾಡಿಸುತ್ತಾ ಇದ್ದೇವೆ. ಅವರಿಗೆ ಶಿಕ್ಷೆ ಮಾಡದೆ ಬಿಟ್ಟುಬಿಟ್ಟರೆ, ನಮ್ಮ ಸೀಮೆ ಮಾರ್ಗಗಳನ್ನೆಲ್ಲಾ ಬಹಳ ದಿವಸ ಈ ಸೀಮೆಯಲ್ಲಿ ಇದ್ದು ಕಂಡು ಇದ್ದಾರೆ, ಮತ್ತು ಇದೇ ಮೇರೆಗೆ ಹತ್ತು ಇಪ್ಪತ್ತು ಜನರ ಸಂಗಡ ತೆಗೆದುಕೊಂಡು ಬಂದು ದಗಾ ಮಾಡ್ಯಾರು. ಆದ್ದರಿಂದ ಇವಂದಿರ ಉಳಿಸಬಾರದು. ತಾವು ನಮಗೆ ಅತ್ಯಂತ ದೋಸ್ತರರು ಇದ್ದೀರಿ. ಹೆಚ್ಚಾಗಿ ಬರೆಯತಕ್ಕದ್ದು ಏನು ಇದೆ. ಸುಂದರಜಿ ಪ್ರಭುವಿನ ಮುಖವಚನದಿಂದ ಎಲ್ಲಾ ವಿವರವು ತಿಳಿಯಬಂದೀತು. ಮೇಲಾಗಿ ಬಂಗಾಳದ

**ಮಹಾರಾಜಶ್ರೀ ಜನರಲ್ ಸರ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹದ್ದೂರವರಿಗೆ ಕಾಗದ ಒಂದು, ಮುಂಬಾಯಿ ಗವರ್ನರ್ ಜನಾಟನ್ ಡಾಂಕಿನ್ಸ್**

ಸಾಹೇಬ್ ಬಹದ್ದೂರವರಿಗೆ ಕಾಗದ ಒಂದು ಸಹಾ ಇದೇ ವಿವರವಾಗಿ ಬರಸಿ ಕಳುಹಿಸಿ ಇದ್ದೇವೆ. ಅಲ್ಲಲ್ಲಿಗೆ ತಲಪಿಸಿ, ಅದರ ಜವಾಬು ತರಿಸಿ ಕಳುಹಿಸ ಬೇಕು ಎಂಬುದಾಗಿ ಬರದು, ಆ ಎರಡು ಜನ ಚೇಲೇರನ್ನೂ ಅದರ ಹತ್ಯಾರು ಸಹಾ ಕಳುಹಿಸಿಕೊಟ್ಟರು.

ಹೀಗೆ ಇರುತ್ತಿದ್ದಲ್ಲಿ ವೀರರಾಜೇಂದ್ರ ವಡೆಯರವರ ಮೊದಲಿನ ಕುಟುಂಬದ ಗರ್ಭದಲ್ಲಿ ಕುಮಾರರು ಉದ್ಭವಿಸಲಿಲ್ಲವಾದ ಕಾರಣ, ಕಲಿಸಂದ ೪೮೯೪ಲನೆ ನಳ ಸಂವತ್ಸರದ ಮಾಘ ಶು. ೧ರಲ್ಲು ರಾಜಪಟ್ಟಾಭಿಷೇಕ ವಿವಾಹ ಪ್ರಸ್ತ ಸಹಾ ಆಗಬೇಕು ಎಂಬುದಾಗಿ ನಿಶ್ಚೈಸಿ, ಮಹಾರಾಜಶ್ರೀ ಬಂಗಾಳದ ಜನರಲ್ ಸರ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹದ್ದೂರವರಿಗೂ, ಮುಂಬಾಯಿ ಗವರ್ನರ್ ಗಜಂನ್ ಪರಜಂಗ್ ಮುಮ್ತಾಜ್ ಉದ್ದೌಲ್ಲ ಡಾಂಕಿನ್ ಸಾಹೇಬ್ ಬಹದ್ದೂರವರಿಗೂ, ಮತ್ತು ಕೆಲವು ಇಂಗ್ರೇಜ ಸರ ದಾರರಿಗೂ ಸಹಾ, ಈ ಶುಭಮುಹೋತ್ಸವ ಆಗುವ ವರ್ತಮಾನಕ್ಕೆ ಕಾಗದ ಬರಸಿ ಕಳುಹಿಸಿಕೊಟ್ಟದರಿಂದ, ಈ ಶುಭಕೆಲಸವನ್ನು ತಾವು ನಿಶ್ಚಯಮಾಡಿದ ದಿವಸಕ್ಕೆ ಶೀಘ್ರವಾಗಿ ಆಗುಮಾಡಬೇಕು ಎಂಬುದಾಗಿ, ಸಂತೋಷಪಟ್ಟು ಜವಾಬುಗಳ ಬರೆಸಿ ಕಳುಹಿಸಿಕೊಟ್ಟರು.

ಅದೇ ಮೇರೆ ನಾಲ್ಕುನಾಡ ಅರಮನೆಯಲ್ಲಿ ರಾಜಪಟ್ಟಾಭಿಷೇಕದ ಗದ್ದಿಗೆ ವಿವಾಹಮಂಟಪ ಸಹಾ ಬಹು ರಮಣೀಯವಾಗಿ ರಚಿಸಿ, ಆ ಬಳಿಕ ಮಹಾ ರಾಜರವರು ತಮಗೆ ರಾಜಪಟ್ಟಾಭಿಷೇಕ ವಿವಾಹ ಪ್ರಸ್ತ ಸಹಾ ನಿಶ್ಚೈಸಿ ಇದ್ದೇವೆ. ಈ ಬಗ್ಗೆ ನಾವು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ದೋಸ್ತದಾರರಾದ್ದರಿಂದ, ಈ ಶುಭಕೆಲಸಕ್ಕೆ ತಾವೇ ಇಲ್ಲಿಗೆ ಬರಬೇಕು. ತಮಗೆ ಸರಕಾರದ ಜಂಬ್ರ ಇದ್ದು, ಬರುವದಕ್ಕೆ ಅನುಕೂಲವಾಗದಿದ್ದರೆ ಒಬ್ಬರು ಸರದಾರರನ್ನು, ಎರಡು ಜನ ಸಾಹೇಬರನ್ನು, ಕೆಲವು ಸರಕಾರದ ಶಿಪಾಯಿಗಳನ್ನು ಸರಕಾರದ ನಿಶಾನಿ ಸಹಾ ಕಳುಹಿಸಬೇಕು ಎಂಬದಾಗಿ, ಮಲೆವಾರಿ ಕಮಿಶನರಲ್ಲಿ ಮುಖ್ಯಸ್ಥರಾಗಿ ಇದ್ದಂಥಾ ವಿಲ್ಸನ್ ಸಾಹೇಬರಿಗೆ ಬರಸಿ ಕಳುಹಿಸಿಕೊಟ್ಟಲ್ಲಿ, ಅವರು ಅತ್ಯಂತ ಹರುಷಿತರಾಗಿ, ಸರಕಾರದ ಜಂಬ್ರವಾದ್ದರಿಂದ, ನಮಗೆ ಬರುವುದಕ್ಕೆ ಸಂದರ್ಭ ಆಗದ್ದರಿಂದ, ಈ ಶುಭ ಕೆಲಸ ಆಗುಮಾಡುವ ಬಗ್ಯೆ, ಸರದಾರರು ಅಲೆಕ್ಸಾಂಡರ್ ಬೆಲ್ ಸಾಹೇಬರ

ಸಂಗಡ ಒಬ್ಬರು ಕಪಿತಾನ್ ಸಾಹೇಬರನ್ನು ಒಂದು ಕುಂಪನಿ ಶಿಪಾಯಿಗಳ ಇಂಗ್ರೇಜ ಬಹಾದ್ದರ ಕಂಪನಿ ಸರಕಾರದ ನಿಶಾನಿ ಸಹಾ, ಕಳುಹಿಸಿ ಇದ್ದೇವೆ, ಎಂಬದಾಗಿ ಜವಾಬು ಬರದು ಕಳುಹಿದರು.

ಅದೇ ಮೇರೆ ಆ ಸರದಾರರು, ಶಿಪಾಯಿಗಳು, ಸರಕಾರದ ನಿಶಾನಿ ಸಹಾ ಕೊಡಗಿಗೆ ಬಂದಲ್ಲಿ, ಈ ಸರದಾರರನ್ನು ಮಹಾ ಉತ್ಸಾಹದಿಂದ ಇದುರು ಗೊಂಡು ಕರಕೊಂಡುಬಂದು, ಸಲಾಮು ಫಿರಂಗಿಗಳ ಹಾರಿಸಿ, ಬಿಡಾರದಲ್ಲು ಇಳಿಸಿ, ನಾಲ್ಕಾ ಕಡೆ ದೇಶದಿಂದ ಈ ಮಹೋತ್ಸವಕ್ಕೆ ಬರುವಂಥಾ ಸರ್ವೇ ಜನರನ್ನು ಅಡ್ಡಿ ಹರಕತ್ತು ಮಾಡದೆ, ಬಿಡುವಂತೆ, ತಮ್ಮ ಸೀಮೆ ಉಕ್ಕಡ ಪಹರೆಯವರಿಗೆ ಅಪ್ಪಣೆಕೊಟ್ಟು ಇದ್ದಲ್ಲಿ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸೀಮೆಯಿಂದಲೂ ಟೇಪುಸುಲ್ತಾನರ ಸೀಮೆಯಿಂದಲೂ ಅನೇಕ ಜನರು ಮಹಾ ಸಂತೋಷದಿಂದ ಬಂದು ಕೂಡಿದರು.

ಬರುವಂಥಾ ಜನರಿಗೆಲ್ಲಾ ಇಳುದುಕೊಳ್ಳುವ ಬಗ್ಯೆ, ಪಡಿಬಿಡಾರ, ಬ್ರಹ್ಮಪುರಿ ಮುಂತಾಗಿ ತಯಾರಾಗಿ ಇದ್ದದ್ದರಲ್ಲಿ ಇಳಿಸಿ, ಈ ಯಾವತ್ತು ಜನರಿಗೆ ಬಹಳ ಸಂತೋಷಪಡಿಸಿ, ಅನೇಕ ಉತ್ಸಾಹ ಸಂಭ್ರಮದಿಂದ ಕಲಿಸಂದ ೪೮೯೮ನೆ ನಳ ಸಂವತ್ಸರದ ಮಾಘ ಶು ೧೦ ಭಾನುವಾರ ಬೆಳಗಾದ ಗಳಿಗೆ ಐದಕ್ಕೆ ರಾಜಾಧಿರಾಜಯೋಗ ಕೂಡಿದಂಥಾ ಶುಭಲಗ್ನ ಶುಭಮುಹೂರ್ತದಲ್ಲಿ ವೀರರಾಜೇಂದ್ರ ವಡೆಯರವರಿಗೆ ರಾಜಪಟ್ಟಾಭಿಷೇಕವು ಸಲಕ್ಷಣದಿಂದ ಅನೇಕ ಸಂಭ್ರಮದಿಂದ ಆಯಿತು. ಈ ಪಟ್ಟಾಭಿಷೇಕ ಆಗುವಾಗ್ಯೆ ಗುರುಹಿರಿಯ ರಾದಂಥವರೆಲ್ಲ ಅನೇಕ ಆಶೀರ್ವಾದಗಳಮಾಡಿ, ಸೇಸೆಯನಿಕ್ಕಿದರು. ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕಡೆಯಿಂದ ಬಹುಮಾನವಾದ ಉಡುಗರೆ ಯನ್ನು ಕೊಟ್ಟು, ಸೇಸೆಯನಿಕ್ಕಿದರು. ಮೇಲಾದ ಪರಿವಾರ ಸಮಸ್ತ ಜನರು ಕಾಣಿಕೆಗಳ ಮಡಗಿ, ಸೇಸೆಯನಿಕ್ಕಿದರು.

ಈ ಮೇರೆ ರಾಜಪಟ್ಟಾಭಿಷೇಕವಾದ ಬಳಿಕ, ಮುಂದೆ ರಾಜತ್ವಕ್ಕೆ ಪಟ್ಟದ ಕುಮಾರರು ಆಗಬೇಕು ಎಂಬ ಅಪೇಕ್ಷೆಯಿಂದ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸರದಾರರನ್ನೂ ಶಿಪಾಯಿಗಳನ್ನೂ ಇಂಗ್ರೇಜ ಸರಕಾರದ ನಿಶಾನಿ ಸಹಾ ಬಹಳ ಮಾನಮರ್ಯಾದಿಯಿಂದ ಇದುರುಗೊಂಡು, ಕರತಂದು, ಸಲಾಮು ಫಿರಂಗಿಗಳನ್ನು ಹಾರಿಸಿ, ಸಮಸ್ತ ಜನರನ್ನು ಬರಮಾಡಿ, ಸಭೆ ಸೇರಿಸಿ,

ಲಗ್ನವನ್ನು ಸಾಧಿಸಿ, ಕಲ್ಯಾಣ ಆಗುವಾಗ್ಯೆ, ಮಹಾದೇವರಾಣಿಯವರಿಗೆ: "ನಿಮ್ಮ ಗರ್ಭದಲ್ಲು ಜನಿಸಿದಂಥಾ ಮಕ್ಕಳಿಗೆ ನಮ್ಮ ಕೊಡಗಿನ ಸಂಸ್ಥಾನದ ರಾಜತ್ವವನ್ನು ಕೊಡುತ್ತೇವೆ" ಎಂಬದಾಗಿ ಪ್ರತಿಜ್ಞೆಮಾಡಿ, ಸಮಸ್ತ ಜನರ ಮುಂದಿಟ್ಟು, ಇಂಗ್ರೇಜ ಸರದಾರರ ಶಾಯಿದಿಯಿಂದ, ಗುರುಹಿರಿಯರ ಕೈಯಿಂದ, ಶುಭಮುಹೂರ್ತದಲ್ಲಿ ಬಹಳ ವೇದೋಕ್ತಿಯಿಂದ ವೀರರಾಜೇಂದ್ರ ವಡೆಯರವರು ಮಹಾದೇವರಾಣಿಯವರನ್ನು ಇದೇ ಮಾಘ ಶು. ೧೧ ಭಾನು ವಾರ, ರಾತ್ರೆ ಗಳಿಗೆ ೧೯ಕ್ಕೆ ವೃಶ್ಚಿಕಲಗ್ನದಲ್ಲಿ, ಧಾರೆಯನೆರಸಿಕೊಂಡು, ವಿವಾಹ ವಾದರು. ಇವರ ಗರ್ಭದಲ್ಲಿ ಜನಿಸಿದಂಥಾ ಕುಮಾರರು ವೀರರಾಜೇಂದ್ರ ವಡೆಯ ರವರ ಹೆಸರಿಗೂ ದೌಲತ್ತಿಗೂ ರಾಜಪಟ್ಟಕ್ಕೂ ಬಾಧ್ಯರಿದ್ದಾರೆ. ಇಂಗ್ರೇಜ ದೊಡ್ಡ ಸರಕಾರಕ್ಕೆ ಅರಿಕೆ ಆಗುವ ಬಗ್ಗೆಯೂ, ಸಮಸ್ತ ಜನರು ತಿಳಿಯುವ ಬಗ್ಗೆಯೂ, ಈ ಸಾಧನದಲ್ಲಿ ಬರೆಸಿ, ಕೊಡಗಿನ ರಾಜಸ್ಥಾನದಲ್ಲಿ ಇಟ್ಟು ಇದೆ.

ಈ ಮೇರೆ ಇರುತ್ತಿದ್ದಲ್ಲಿ, ಕೆಲವು ದಿವಸದ ಮೇಲೆ ಬಂಗಾಳದ ಸರ್ ಜಾನ್ ಶೋರ್ ಸಾಹೇಬ್ ಬಹದ್ದರವರು ಬರೆಸಿ ಕಳುಹಿದ ಕಾಗದದಲ್ಲಿ, "ದುಷ್ಮಾನರಾದ ಟೀಪುಸುಲ್ತಾನರ ಕಡೆಯಿಂದ ನಾಲ್ಕು ಜನ ತಮ್ಮನ್ನ ಘಾತ ಮಾಡುವ ಬಗ್ಯೆ ಬಂದು ಇದ್ದರು ಎಂಬುದ ಕೇಳುವದು ನಮ್ಮನಸ್ಸಿಗೆ ಬಹಳ ಕರಕರೆ ಆಯಿತು. ಆಮೇಲೆ ಮಹಾದೇವನ ಕಟಾಕ್ಷದಿಂದ ತಾವು ಆ ದುಷ್ಮಾನರ ಕೈಯಿಂದ ಸಲಾಮತ್ತು ಆಗಿ ಇದ್ದೀರಿ ಎಂಬುದು ಕೇಳಿ, ಸಂತೋಷವಾಯಿತು. ತಾವು ಖೇದವಿಲ್ಲದೆ, ಕುಂಪನಿ ಸರಕಾರದ ಕ್ಷೇಮ ಹಾರೈಸುವಂಥವರಿದ್ದೀರಿ, ಆದ್ದರಿಂದ ಈ ಮುಲಾಮತ್ತು ಬಂದು ಇದ್ದಂಥಾದ್ದು ಮಹಾದೇವನ ಕಟಾಕ್ಷದಿಂದ ಪರಿಹಾರವಾಯಿತು. ಮಹಾದೇವನು ಹಮೇಶ ಇದೇ ಮೇರೆ ದುಷ್ಮಾನರ ಕೈಯಿಂದ ತಮಗೆ ಸಲಾಮತ್ತಾಗಿ ಮಡಗಬೇಕು" ಎಂಬುದಾಗಿ ಮಹಾರಾಜರವರ ಹೆಸರಿಗೆ ಬರದು ಇದ್ದರು.

ಇದೇ ವಿವರವಾಗಿ ಸರ್ ಜನರಲ್ ರಾಬರ್ಟ್ ಆಬರ್‍ಕ್ರಂಬಿ ಸಾಹೇಬ್ ಬಹದ್ದರವರು ಬರೆಸಿ ಕಳುಹಿಸಿ ಇದ್ದರು: ಇದೇ ನಳ ಸಂವತ್ಸರದ ಪುಷ್ಯ ಶು. ೧೧ರಲ್ಲು ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬ್ ಬಹದ್ದರವರು ಬರೆಸಿ ಕಳುಹಿದ ಕಾಗದದಲ್ಲಿ: "ಟೀಪುಸುಲ್ತಾನರು ತಮಗೆ ದಗಾಮಾಡುವ ಬಗ್ಯೆ ಕಳುಹಿದ ಚೀಲೇರನ್ನು ಮಲೆವಾರಿ ಕಮಿಶನ್ ಸಾಹೇಬರವರ ಬಳಿಗೆ

ಕಳುಹಿಸಿ ಇದ್ದೀರಷ್ಟೆ. ಆ ಚೇಲೇರನ್ನು ತಮ್ಮ ಹುಕುಮ್ ಆದಾಗ್ಯೆ, ತಮ್ಮ ಬಳಿಗೆ ಕಳುಹಿಸಿ ಕೊಟ್ಟಾರು. ಟೀಪುಸುಲ್ತಾನರು ಎಂಥವರು ಇದ್ದಾರೆ ಎಂದರೆ, ಯಾವಾಗಲಾದರೂ ತಮ್ಮ ಕಡೆ ಮನುಷ್ಯರಿಗೆ ಕೊಡಗಿನ ದೊರೆಗಳು ಕೊಂದುಹಾಕಿ ಇದ್ದಾರೆಯಂತಾ, ಫಿರಿಯಾದಿ ಮಾಡ್ಯಾರು. ಈ ಚೇಲೇರ ಸೋಬತ್ತಿನಲ್ಲಿ ಇದ್ದ ಎರಡು ಜನಕ್ಕೆ ತಾವು ಚೆನ್ನಾಗಿ ಶಿಕ್ಷೆಮಾಡಿದಂಥಾದ್ದು, ಲೋಕದ ಯಾವತ್ತು ಜನರು ತಿಳಿದು ಇದ್ದಾರೆ. ಈ ಚೇಲೇರನ್ನು ಕೈದಿನಲ್ಲಿ ಜೀವ ಸಹಿತ ಮಡಗಿದರೆ, ಟೀಪುಸುಲ್ತಾನರು ಫಿರಿಯಾದಿಮಾಡಿದಾಗ್ಯೆ, ಶಾಯಿದಿ ಕೊಡಬಹುದು" ಎಂಬುದಾಗಿ ಬರೆಸಿ ಕಳುಹಿದರಿಂದಲೂ, ಮಲೆವಾರಿ ಕಮಿಶನ್‌ರಾಗಿ ಇದ್ದ ರಿಬಟ್ಟ ಸಾಹೇಬರವರು ಆ ಎರಡು ಜನ ಚೇಲೇರನ್ನು ಪಹರೆಯ ಮೇಲೆ ಕಳುಹಿಸಿ ಕೊಟ್ಟದ್ದರಿಂದಲೂ, ಆ ಚೇಲೇರು ಮಾಡಿದ ತಕ್ಸೀರಿಗೆ ಜೀವ ಸಹಿತ ಬಿಡಬಾರದು, ಆದಾಗ್ಯೂ ನಾಳೆ ಸಾಕ್ಷಿ ಬಗ್ಯೆ ಬೇಕಾದೀತು. ಈ ಬಗ್ಯೆ ಇವರು ಈ ಸೀಮೆಯಲ್ಲಿ ಚೋರವೃತ್ತಿಯಲ್ಲಿ ತಿರಿಗಿ ಕಾಡು ಮಾರ್ಗ ಯಾವತ್ತು ಕಂಡು ಇದ್ದಾರೆ. ಆದ್ದರಿಂದ ಈ ಜನರ ಹೀಗೆ ಮಡಗಿದರೆ, ವಿಕಲ್ಪ ಮಾಡ್ಯಾರು, ಎಂಬುದಾಗಿ ಗ್ರಹಿಸಿ, ಆ ಎರಡು ಜನ ಚೇಲೇರನ್ನು ಒಂದೊಂದು ಕಾಲು ಕುಯಿಸಿ, ಅವಂದಿರಿಗೆ ಅನ್ನ ಬಟ್ಟೆಯನ್ನು ಅರಮನೆ ತರದಿಂದ ಕೊಡಿಸಿಕೊಡುತ್ತಾ, ಸಾಕ್ಷಿ ಬಗ್ಯೆ ವೀರರಾಜೇಂದ್ರಪೇಟೆಯಲ್ಲಿ ಮಡಗಿಸಿದರು.

ಈ ಬಗ್ಯೆ ವಿಲಾಯಿತಿಯಿಂದ ಮುಂಬಾಯಿ ಗವರ್ನರ್ ಜನಾಟಂನ್ ಡಾಂಕಿಂನ್ ಸಾಹೇಬರವರ ಹೆಸರಿಗೆ ಬರದು ಕಳುಹಿದ ಕಾಗದದ ನಕಲನ್ನು ಮಲೆವಾರಿ ಕಮಿಶನ್ ಸಾಹೇಬರವರು ರಾಜರವರ ಬಳಿಗೆ ಕಳುಹಿಸಿ ಇದ್ದರು. ಅದರಲ್ಲಿ ಬರದು ಇರುವ ವಿವರ: "ವಿಲಾಯಿತಿ ದೊಸಂನ್ ನಗರದಲ್ಲು ಇರುವಂಥಾ ಪ್ರಧಾನರು ಮುಂಬಾಯಿ ಗವರ್ನರ್ ಸಾಹೇಬರವರಿಗೆ ಬರದ ವಿವರ: ಕೊಡಗಿನ ರಾಜರರವರಿಗೆ ದಗಾಮಾಡುವುದಕ್ಕೆ ಟೀಪುಸುಲ್ತಾನರು ಸಿದ್ಧಾಂತ ನೋಡಿದಲ್ಲಿ, ಫಲವಿಲ್ಲದ ಹಾಗೆ ಹೋಯಿತು ಎಂತಾ, ತಿಳಿದು ಇದ್ದೇವೆ. ಆದ್ದರಿಂದ ನಮಗೆ ಎಷ್ಟೋ ಸಂತೋಷವೂ ಉತ್ಸಾಹವೂ ಆಗುತ್ತಾ ಇದೆ" ಎಂಬದಾಗಿ, ಬರದು ಇದ್ದರು.

ಆ ಬಳಿಕ ಟೀಪುಸುಲ್ತಾನರ ಕಡೆ ಸೆರಖಾನ, ಮೊಜುಂಖಾನ, ಸಹಾ

ಫೌಜು ಸಮೇತ ಬಿಸಲೆಗಟ್ಟದ ಮಾರ್ಗವಾಗಿ ಕೊಡೆಯಾಲಕ್ಕೆ ಬಂದು, ಕುಂಬಳೆ ರಾಮಂತ ರೈ ಎಂಬುವನು ಟೀಪುಸುಲ್ತಾನರ ಸೀಮೆ ಮೇಲೆ ಶರಾರತ್ತು ಮಾಡುತ್ತಾ ಇದ್ದದ್ದರಿಂದ, ಅಲ್ಲಿಗೆ ಹೋಗಿ, ಅವನಿಗೆ ತಂಬಿ ಪಹುಂಚಾಯಿಸಿ, ಪುನಹಾ ಕೊಡೆಯಾಲಕ್ಕೆ ಹೋದರು.

ಆ ಬಳಿಕ ಕೊಡೆಯಾಲದ ಆಸಫ್ ಶೇಖ್ ಶಾಬುದ್ದೀನನು ತಲಚೇರಿ ಕೋಟೆ ಕಮಿಷನರ ಹೆಸರಿಗೆ ಬರದು ಇದ್ದ ಕಾಗದದಲ್ಲಿ, ಕಾಂತಮಂಗಲ, ಕೊಲ್ಲೂರಬಾಚಿ, ಸುಳ್ಯ ಅಮರದ ಸೀಮೆ ಪ್ರಾಕಾರಭ್ಯ ಸರಕಾರದ ತಾಲೂಕು ಇರುವಲ್ಲಿ, ಇತ್ತಲಾಗಿ ಸರಕಾರಕ್ಕೂ ನಿಮ್ಮ ಕುಂಪನಿಯುವರಿಗೂ ಸ್ವಲ್ಪ ಕಟ್ಟೆ ಬಂದ ಸಮಯದಲ್ಲಿ, ಕೊಡಗಿನ ರಾಜರು ಕೊಲ್ಲೂರಬಾಚಿ, ಕಾಂತಮಂಗಲ, ಸುಳ್ಯ ಅಮರ ಸೀಮೆ ವಗೈರೆ ಹಾಕಿಕೊಂಡು, ರೈತರ ಕಡೆಯಿಂದ ಹಣಕಾಸು ಎತ್ತಿಕೊಂಡರು. ಸರಕಾರಕ್ಕೂ, ತಮ್ಮ ಕುಂಪನಿಗೆ ಸಹಾ ಸಲ್ಲಾ ಆದ ಬಳಿಕ, ಈ ಕೊಡಗಿನ ದೊರೆಗಳು ಸದರಹು ಆ ಸೀಮೆ ಬಿಡದೆ, ಹಾಕಿಕೊಂಡು ಬರುವದರಿಂದ, ಈ ಕೈಫೀಯತ್ತು ಹುಜೂರಲ್ಲು ಅರಿಕೆ ಆಗಿ, ಕಾಂತಮಂಗಲ, ಕೊಲ್ಲೂರಬಾಚಿ, ಸುಳ್ಯ ವಗೈರೆ ಸಾಬಕು ಸರಕಾರದ ಇಲಾಖೆ ಒಳಗೆ ಇರುವ ಸೀಮೆಯನ್ನು ಯಥಾಪ್ರಕಾರ ಸರಕಾರ ತಾಲೂಕು ಮಾಡಿ, ಕೊಲ್ಲೂರಬಾಚಿ, ಕಾಂತಮಂಗಲದಲ್ಲು ಕೋಟೆ ಕಟ್ಟೆ ಬರುವಂತೆ ಮಿೂರ ಆಸಫ್ ಸಿರಖಾನರಿಗೆ, ಮಿೂರ ಸದೂರು, ಮಿೂರ ಇಬ್ರಾಹಿಮ್ ಸಾಹೇಬರಿಗೆ ಸಹಾ ಅಪ್ಪಣೆ ಆದ ಕಾರಣ, ಭಾರಿ ಫೌಜು ಸಮೇತ ಬಂದು, ಜಮಾಲಾಬಾದಿಗೆ ದಾಖಲಾದಲ್ಲಿ ನಮಗೂ ಅವರ ಸಂಗಡ ಇರುವಂತೆ ಅಪ್ಪಣೆ ಬಂದು ಇರುವದರಿಂದ ಸದರಿ ಬರದ ವಿವರವನ್ನು ಆ ಸರದಾರರು ನಮ್ಮ ಸಂಗಡ ಹೇಳಿ, ಕೊಡಗಿನ ರಾಜರು ಕುಂಪನಿ ಆಶ್ರಯದಲ್ಲಿ ಇದ್ದಾರೆ, ನಾವು ಫೌಜುಸಮೇತ ಆ ಸೀಮೆಗೆ ಹೋದರೆ, ಲಡಾಯಿ ಆಗುವದು ಸರಿ. ಇಂಗ್ರೇಜಿಯವರು ಕುಮ್ಮಕು ಮಾಡ್ಯಾರು, ಎಂತ ಹೇಳಿದಲ್ಲಿ, ಇಂಗ್ರೇಜ ಸರಕಾರಕ್ಕೂ ನಮ್ಮ ಸರಕಾರಕ್ಕೂ ಭಾರಿ ಜವಾಬು ಸವಾಲಿನಿಂದ ಸಲ್ಲಾ ಆಗಿ ಇರುವಂಥಾ ವಿಷಯ ಇದುವರಿಗೂ ಕುಂಪನಿ ಸರಕಾರದವರು ಯಾವದೊಂದು ಸರಕಾರದ ಕೆಲಸದಲ್ಲಿಯೂ ವಿವೇಕದಿಂದಲೆ ನಡದುಬಂದು ಇದ್ದಾರೆ. ಕೊಡಗಿನ ದೊರೆಗಳು ಈ ಸೀಮೆ ಹಾಕಿಕೊಂಡು ಇರುವಂಥಾದ್ದು ಕುಂಪನಿ ಸರಕಾರಕ್ಕೆ ದಾಖಲು ಇಲ್ಲಾ. ಈ ವಿವರ ಅವರಿಗೆ ತಿಳಿದರೆ, ಆ

ಸೀಮೆ ಬಿಡಿಸಿಕೊಟ್ಟಾರೆಂಬುದಾಗಿ, ನಾವು ಅರಿಕೆಮಾಡಿದಲ್ಲಿ, ಹಾಗಾದರೆ ನಿಮ್ಮ ಹೆಸರಿಂದ ಬರದು ಕಳುಹಿಸಿ ಎಂತ ನಮಗೆ ಹುಕುಂ ಕೊಟ್ಟದರಿಂದ, ನಾವು ತಮಗೆ ತಿಳಿಸಿ ಇದ್ದೇವೆ ಎಂಬದಾಗಿ, ಬರದು ಕಳುಹಿದಲ್ಲಿ, ಆದಕ್ಕೆ ದರ ಜವಾಬಾಗಿ ಮುಲೆವಾರಿ ಕಮಿಶನ್ ಜೋನ್ ಸ್ಪೆನ್ಸರ್ ಸಾಹೇಬರವರು ಬರದು ಕಳುಹಿದ ಕಾಗದದಲ್ಲಿ: "ಶ್ರೀರಂಗಪಟ್ಟಣದಲ್ಲು ಸಲ್ಲಾ ಕರಾರುನಾಮೆ ಆದಂಥಾ ಏಳನೆ ಕಲಮಿನಲ್ಲಿ ಗಡಿ ಸರಹದ್ದಿನಲ್ಲಿ ಏನೊಂದು ತಂಟೆ ತಕರಾರು ಬಂದಾಗ್ಯೂ, ಉಭಯಕಡೆಯಿಂದಲೂ ಜನ ನಿಂತು, ನ್ಯಾಯವಿದ್ದ ಪ್ರಕಾರ ವಾಜಾಬಿ ಆಗಿ ತೀರಿಸಬೇಕು ಎಂತ ಕರಾರು ಬರದು ಉಭಯಕಡೆಯಲ್ಲು ಮಡಗಿ ಇದೆ. ಹೀಗೆ ಇರುವಲ್ಲಿ ಕಾಂತಮಂಗಲ, ಕೊಲ್ಲೂರಬಾಚಿ ಎಂದರೆ ಸುಳ್ಯದ ಸೀಮೆ ಒಳಗಾಗಿ ತೋರುತ್ತದೆ. ಸುಳ್ಯ ಅಮರ ಸೀಮೆಯು ಕೊಡಗಿನ ದೊರೆಗಳದಾಗಿ ಕಾಣುತ್ತದೆ. ನೀವು ಫೌಜು ಸಮೇತ ಜೋರಾವರಿಯಿಂದ ಆ ಸೀಮೆ ಒಳನುಗ್ಗಿದ್ದೀ ಆದರೆ, ಶ್ರೀರಂಗಪಟ್ಟಣದಲ್ಲು ಸಲ್ಲಾ ಕರಾರುನಾಮೆ ಬರದ ಪ್ರಕಾರ, ಸಖಿ ಆಗಿ ನಡಸುವಂಥಾದ್ದಕ್ಕೆ ಟೀಪುಸುಲ್ತಾನರ ಮನಸ್ಸಿಗೆ ಇಲ್ಲಾ ಎಂಬುದಾಗಿ ತೋರಿಸಿಕೊಟ್ಟದ್ದು ಆಗುತ್ತಾ ಇದೆಯಷ್ಟೆ. ಆ ಪ್ರಕಾರ ಅದೇ ಹೌದಾದರೆ, ಈ ವರ್ತಮಾನ ಆ ಕ್ಷಣ ಹಿಂದೂಸ್ಥಾನದಲ್ಲಿ ಬಹುಮಾನ ವಾದ ಬಂಗಾಳದ ಸಂಸ್ಥಾನಕ್ಕೆ ತಿಳಿಯಪಡಿಸೇವು. ಆದಕಾರಣ ಸಖಿತ್ವ ಪ್ರಕಾರ ನಡೆಯಬೇಕು" ಎಂಬದಾಗಿ ಬರಮು ಕಳುಹಿಸಿ, ಕಮಿಶನ್ ಸಾಹೇಬರು ಕಲಿ ಸಂದ ೪೯೦೦ನೇ ಕಾಳಯುಕ್ತಿ ಸಂವತ್ಸರದ ಚೈತ್ರ ಶು. ೧೩ರಲ್ಲು, ವೀರರಾಜೇಂದ್ರ ಒಡೆಯರವರಿಗೆ ಬರದು ಕಳುಹಿದ ಕಾಗದದಲ್ಲಿ: ಜಮಾಲಾಬಾದ ದಿವಾನನಿಂದ ಒಂದು ಕಾಗದ ತಲಚೇರಿ ಕಮಿಶರ್ ಸರದಾರರ ಹೆಸರಿಗೆ ಬಂದದರ ಅಭಿಪ್ರಾಯ ತಮಗೆ ತಿಳಿಯುವ ಬಗ್ಯೆ ಆದರ ನಕಲು ಕಳುಹಿಸಿ ಇದ್ದೇವೆ. ಅದರಲ್ಲು ಕಾಂತಮಂಗಲದಲ್ಲಿ, ಕೊಲ್ಲೂರಬಾಚಿಯಲ್ಲಿ, ಕೋಟೆ ಕಟ್ಟಬೇಕೆಂಬದಾಗಿ, ಸುಳ್ಯ ಅಮರ ಸೀಮೆ ಆಕ್ರಮಿಸಿ ಸರಕಾರಕ್ಕೆ ದಾಖಲು ಮಾಡಬೇಕು ಎಂಬುದಾಗಿಯೂ, ಟೀಪುಸುಲ್ತಾನರ ಅಪ್ಪಣೆ ಬಂದಿರುವದರಿಂದ, ಆ ದೇಶ ಬಿಟ್ಟುಕೊಡಬೇಕೆಂಬುದಾಗಿ, ತಮಗೆ ಬರದು ಕಳುಹಿಸ ಹೇಳಿ ಬರದು ಇರುವದನ್ನು ಓದಿ ನೋಡಿದರೆ, ತಿಳಿಯಬಂದೀತು. ಅದಕ್ಕೆ ಜವಾಬು ನಾವು ಬರದ ನಕಲನ್ನು ಈ ಕಾಗದದ ಸಂಗಡ ಬರದು ಕಳುಹಿಸಿ

ಇದ್ದೇವೆ. ಅದು ತಮಗೆ ಒಪ್ಪಿದರೆ, ತಮ್ಮಿಂದ ಬೇಕಾದ ಪ್ರಕಾರ ಹೇಳಲಿಕ್ಕೆ ಮಾರ್ಗ ಉಂಟಷ್ಟೆ. ಸುಳ್ಯದ ಸೀಮೆಯಲ್ಲಿ ಟೇಪುಸುಲ್ತಾನರು ಜೋರಾವರಿಯಿಂದ ಬರುತ್ತಾರೆ ಎಂಬುದಾಗಿ, ತಮಗೆ ವರ್ತಮಾನ ಬಂದರೆ, ಅದಕ್ಕೆ ಬಹುಮಾನವಾದ ಇಂಗ್ರೇಜ ಕುಂಪನಿ ಸಂಸ್ಥಾನದಿಂದ ಬಹಳ ಸರ್ತಿ ಟೇಪು ಸುಲ್ತಾನರಿಗೆ ಹೇಳಿ ಇರುವ ಪ್ರಕಾರ ತಾವೂನು ಅವರಿಗೆ ಹೇಳಬೇಕು. ಅದು ಏನು ಎಂದರೆ, ಉಭಯುಕಡೆಯಿಂದಲೂ ಆಳುಗಳ ಸಮನಾಗಿ ನಿಲ್ಲಿಸಿ ಸರಹದ್ದು ತಕರಾರು ವಿಸ್ತಾರ ಮಾಡಬೇಕು ಎಂಬುದಾಗಿ ಹೇಳುವುದು. ಕುಂಪನಿಯಿಂದ ಮೊಕರರು ಮಾಡಿದ ಪ್ರಕಾರ ನೀವು ಸಖಿ ಆಗಿ ವಿಚಾರಿಸಿ, ನಿಶ್ಚಯ ಮಾಡು ವದಕ್ಕಾಗಿ ಒಂದು ಮಾರ್ಗ ಉಂಟಾದರೆ—ಜಲದಾಗಿ ಜೋರಾವರಿಯಿಂದ ಸೀಮೆಯಲ್ಲಿ ಬಂದು, ಅವಕಾಶ ಆಕ್ರಮಿಸಿಕೊಳ್ಳುವದಕ್ಕಿಂತಾ ಸಖಿ ಪ್ರಕಾರ ತೀರಿಸುವಂಥಾದ್ದು, ಮಾನವಾಗಿಯೂ ಬುದ್ಧಿ ಆಗಿಯೂ ಒಳ್ಳೇದಾಗುತ್ತಾ ಇದೆ ಎಂಬುದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಈ ಅಮರ ಸುಳ್ಯದ ಮಾತನ್ನು ವಾಜಬಿ ದರಿಯಾಪ್ತು ಮಾಡುವ ಬಗ್ಯೆ, ಮಲೆವಾರಿ ಕಮಿಾಷನ್ ಸಾಹೇಬರು ಕೇಪ್ಟನ್ ಮಾವಿನಿ ಸಾಹೇಬರವರನ್ನು ಕಾಳಯುಕ್ತಿ ಸಂವತ್ಸರದ ವೈಶಾಖ ಮಾಸದಲ್ಲಿ ಕಳುಹಿಸಿ ಕೊಟ್ಟದರಿಂದ, ಆ ಸಾಹೇಬರು ಬಂದು, ಮಹಾರಾಜರವರನ್ನು ಕಂಡು, ಭೇಟಿ ಆಗಿ, ಕೊಡಗಿನ ಸಂಸ್ಥಾನದ ಕರಣೀಕ ಸುಬ್ಬಯನನ್ನು ಕೂಡಿಸಿಕೊಂಡು, ಅಮರಸುಳ್ಯದ ಸರಹದ್ದಿನಲ್ಲು ಹೋಗಿ, ಇಳುಕೊಂಡು, "ನಾವು ಕುಂಪನಿ ಬಹಾದ್ದರ ಸರಕಾರದ ಕಡೆಯಿಂದ ಕೊಡಗಿನ ಮಹಾರಾಜರ ತಾಲೂಕಿನ ಅಮರಸುಳ್ಯದ ಸೀಮೆ ಸರಹದ್ದಿನ ಮಾತು ತೀರಿಸುವ ಬಗ್ಯೆ ಬಂದು ಇದ್ದೇವೆ" ಎಂಬ ವಿವರವಾಗಿ, ಮಿಾರ ಆಸಫ್ ಸೇರಖಾನಗೆ ಬರದು ಕಳುಹಿಸಿಕೊಟ್ಟಲ್ಲಿ ಆ ಸೇರಖಾನನು: "ನಮ್ಮ ಕಡೆಯಿಂದ ಒಬ್ಬ ವಕೀಲಗೆ ಕಳುಹಿಸಿಕೊಡು ತ್ತೇವೆ" ಎಂತ, ಮೊದಲು ಬರದು ಕಳುಹಿದನು. ಅಷ್ಟರಲ್ಲಿ ಕೊಡೆಯಾಲಕ್ಕೆ ಫರಾಶೀಸರ ಕೆಲವು ಮಂದಿ ಬಂದು, ಇಳಿದಿದ್ದರಿಂದ, "ಈಗ ಮಳೆಗಾಲ ಸಮಿಾಪವಾಯಿತು. ಈ ಮಳೆಗಾಲದಲ್ಲಿ ನಮ್ಮ ಫೌಜು ಇಲ್ಲಿ ನಿಭಾಯಿಸು ವದಿಲ್ಲಾ. ಈ ಸರಹದ್ದಿನ ತಕರಾರು ಮುಂದೆ ಕಾರ್ತೀಕ ಮಾಸದಲ್ಲಿ ನೋಡಿ ಕೊಳ್ಳಬಹುದು" ಎಂಬದಾಗಿ ಎರಡನೇ ದಫಾ ಕಾಗದ ಬರದು ಕಳುಹಿಸಿ,

ತನ್ನ ಫೌಜು ತೆಗೆದುಕೊಂಡು, ಜಮಾಲಾಬಾದಿಗೆ ಹೋದನು.

ಕೇಪ್ಟನ್ ಮಾವಿನಿಸಾಹೇಬರವರು ವೀರರಾಜೇಂದ್ರ ವಡೆಯರವರ ಬಳಿಗೆ ಬಂದು ಭೇಟಿ ಆಗಿ, ಮಳೆಗಾಲ ಎರಡು ತಿಂಗಳು ಇದ್ದು, ಶ್ರಾವಣ ತಿಂಗಳಲ್ಲು ಪುನಹಾ ಗಟ್ಟಾ ಇಳಿದು, ಕಲ್ಲೀಕೋಟೆಗೆ ಮಲೆವಾರಿ ಕಮಿಶನ್ ಸಾಹೇಬರವರ ಬಳಿಗೆ ಹೋದರು.

ಫರಾಶೀಸರ ಇಬ್ಬರು ಸರದಾರರು, ಎಪ್ಪತ್ತು ಎಂಬತ್ತು ಜನ ಸಹಾ, ಕೊಡೆಯಾಲದಲ್ಲಿ ಇದ್ದವರನ್ನು ಸೇರಖಾನನು ಕರೆದುಕೊಂಡು ಪಟ್ಟಣಕ್ಕೆ ಹೋದನು.

ಹೀಗೆ ಇರುತ್ತಿದ್ದಲ್ಲಿ ಕಾಳಯುಕ್ತಿ ಸಂವತ್ಸರದ ಆಶ್ವೀಜ ಬ. ೧೦ರಲ್ಲು ಕೇಪ್ಟನ್ ಮಾವಿನಿ ಸಾಹೇಬರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ, “ ಇದೇ ಸಂವತ್ಸರದ ಶ್ರಾವಣಮಾಸ ಕರ್ಕಾಟಕ ಇಪ್ಪತ್ತನೇ ತೇದಿಯಲ್ಲಿ ಫರಾಶೀಸರ ದೊಡ್ಡ ಜಹಜು ಹದಿಮೂರು, ಇಂಗ್ರೇಜಿಯವರ ಜಹಜು ಹದಿಮೂರು, ಇದು ಒಂದಕ್ಕೊಂದು ಭೇಟಿ ಆಯಿತು. ಫರಾಶೀಸರ ಜಹಜು ಕೆಲವು ಜಹಜಿನಲ್ಲಿ ಎಪ್ಪತ್ತೆರಡು ತೋಫು ಇತ್ತು. ಎಂಭತ್ತು ತೋಫು ಕೆಲವು ಜಹಜಿನಲ್ಲಿ ಇತ್ತು. ಒಂದು ಜಹಜಿನಲ್ಲಿ ನೂರಯಿಪ್ಪತ್ತು ತೋಫು ಇತ್ತು. ಇಂಗ್ರೇಜಿನವರ ಜಹಜಿನಲ್ಲಿ, ಹನ್ನೆರಡು ಜಹಜಿನಲ್ಲಿ ಸರಾಸರಿ ಎಪ್ಪತ್ತನಾಲ್ಕು ತೋಫು ಇತ್ತು. ಒಂದರಲ್ಲಿ ಐವತ್ತು ತೋಫು ಇತ್ತು. ದೊಡ್ಡ ಲಡಾಯಿ ಆರಂಭವಾಗಿ ಹದಿನೆಂಟು ಮಣಿ ತನಕ ಆಯಿತು. ಕಡೆಗೆ ಇಂಗ್ರೇಜ ಸರದಾರರು ದೊಡ್ಡ ಪತ್ತೆ ಮಾಡಿದರು. ಫರಾಶೀಸರ ಹದಿಮೂರು ಜಹಜಿನಲ್ಲಿ ಒಂಭತ್ತು ಜಹಜು ಹಿಡಿದರು. ಎರಡು ಜಹಜು ಬೆಂದು, ಹಾರಿ ಹೋಯಿತು. ಅದರಲ್ಲಿ ಒಂದು ಜಹಜಿನಲ್ಲಿ ನೂರ ಇಪ್ಪತ್ತು ತೋಫು ಇತ್ತು. ಯಾವತ್ತು ಪುಡಿಪುಡಿ ಆಗಿಹೋಯಿತು. ಅದರಲ್ಲಿ ಫರಾಶೀಸರ ಸರದಾರ ಇದ್ದವನು ಸತ್ತುಹೋದಾ. ಎರಡು ಜಹಜು ಲಡಾಯಿದ ಹೊಗೆಯಲ್ಲಿ ಓಡಿ ಹೋಯಿತು. ಫರಾಶೀಸರವರಲ್ಲಿ ಎಷ್ಟು ಜನ ಇದ್ದರೋ? ಏನೇನು ಇತ್ತೋ? ಅದು ಒಂದು ಸಂಖ್ಯೆ ಯಾರಿಗೂ ತಿಳಿಯದು. ಇದು ದೊಡ್ಡ ಜಹಜಿನ ವರ್ತಮಾನ. ಇನ್ನು ಚಿಕ್ಕ ಜಹಜುಗಳು ಎಷ್ಟು ಇತ್ತೊ? ಎಷ್ಟು ಹೋಯಿತೋ? ಏನೋ? ಇದು ಒಂದು ಯಾರಿಗೂ ಲೆಖ್ಖವಿಲ್ಲಾ. ಇಂದಿನವರೆಗೆ ಇಂಥಾ

ಲಡಾಯಿ ಎಲ್ಲಿಯೂ ಆದುದಿಲ್ಲಾ. ಇಂಗ್ರೇಜ ಬಹದ್ದರವರ ಕೈಲಿ ಸಿಕ್ಕಿದ್ದು ಜಹಜು ಒಂಭತ್ತರಲ್ಲಿ ಏಳನೂರು ತೋಫು ಇತ್ತು. ದೊಡ್ಡದು ಎರಡು ಜಹಜು ಬೆಂದುಹೋದ್ದರಲ್ಲಿ, ಇನ್ನೂರು ತೋಫು ಇತ್ತು. ಈಗ ಫರಾಶೀಸರವರು ಸಮುದ್ರದಲ್ಲು ಇಳಿದು ಮುಖ ತೋರಿಸುವದಕ್ಕೆ ಕೂಡದು. ಕಳ್ಳತನವಾಗಿ ಎಲ್ಲಾದರೂ ಓಡಾಡುವದಲ್ಲದೆ, ಇಂಗ್ರೇಜ ಜಹಜು ಇರುವ ಕಡೆಗೆ ಬರುವ ದಿಲ್ಲಾ. ಈ ಸಂತೋಷಕ್ಕೆ ಜನರಲ್ ಸಾಹೇಬರ ಹುಕುಂ ಮೇರೆ ಇಪ್ಪತ್ತ ನಾಲ್ಕು ತೋಫು ಹೊಡದರು. ತಮ್ಮ ನಮ್ಮ ಸರಕಾರ ಎರಡು ಭೇದವಿಲ್ಲವಾದ ಕಾರಣ, ನಮ್ಮ ಮನಸ್ಸಿನಲ್ಲಿ ಇರುವ ಸಂತೋಷ ತಮಗೆ ತಿಳಿಯಪಡಿಸಬೇಕೆಂಬ ದಾಗಿ, ಜನರಲ್ ಹಾರ್ಟಲಿ ಸಾಹೇಬ್ ಬಹದ್ದೂರವರ ಹುಕುಂ ಮೇರೆ ಬರದು ಇದ್ದೇವೆ" ಎಂಬದಾಗಿ, ಬರದು ಇದ್ದದ್ದರಿಂದ, ಇದಕ್ಕೆ ದರ ಜವಾಬಾಗಿ ಮಹಾರಾಜರು ಬರದು ಕಳುಹಿದ ಕಾಗದದಲ್ಲಿ " ಈ ವರ್ತಮಾನ ಕೇಳಿ ನಮಗೆ ಬಹಳ ಸಂತೋಷವಾಯಿತು. ಆ ದೊಡ್ಡ ಸರಕಾರಕ್ಕೆ ಜಯ, ಶ್ರೇಯಸ್ಸು, ದೌಲತ್ತು ದಿನೇದಿನೇ ವರ್ಧನೆ ಆಗಬೇಕು ಎಂತ, ನಾವು ಮಹಾದೇವನಿಗೆ ಬೇಡಿ ಕೊಳ್ಳುತ್ತೇವೆ. ಇಂಥಾ ಜಯಮುಖ ಸಂತೋಷದ ವರ್ತಮಾನ ತಾವು ಬರೆಸಿ ಕಳುಹಿದರಿಂದ, ಇಂಥಾ ಸಂತೋಷ ನಮಗೆ ಈ ವರೆಗೂ ಉಂಟಾಗಲಿಲ್ಲಾ. ಯಾತರಿಂದ ಎಂದರೆ: ನಮ್ಮ ಮನಸ್ಸಿಗೆ ಐದು ಸಂತೋಷ ಉಂಟಾಯಿತು. ಒಂದನೇ ಸಂತೋಷ: ಆ ದೊಡ್ಡ ಸರಕಾರಕ್ಕೆ ಜಯಮುಖವಾದ್ದು. ಎರಡನೇ ಸಂತೋಷ: ಇಂಗ್ರೇಜ ಬಹಾದ್ದರ ಸರಕಾರಕ್ಕೆ ಶತ್ರು ಆದ ಫರಾಶೀಸರಿಗೆ ಅಪಜಯವಾದಂಥಾದ್ದು. ಮೂರನೇ ಸಂತೋಷ: ಫರಾಶೀಸರು ಕುಮ್ಮಕು ಬರುತ್ತಾರೆ ಎಂತಾ, ಟೇಪುಸುಲ್ತಾನರು ಬಹಳ ನಂಬಿಕೊಂಡು ಅವರ ದಾರಿ ನೋಡುತ್ತಾ ಇದ್ದರಷ್ಟೆ. ಆ ಸಂತೋಷವು ಬೆಂಕಿ ಒಳಗೆ ಬಿದ್ದು ಅವರಿಗೆ ಬಲ ತಪ್ಪಿದಂಥಾದ್ದು. ನಾಲ್ಕನೇ ಸಂತೋಷ: ಟೇಪುಸುಲ್ತಾನರು ನಮ್ಮ ಸೀಮೆ ಸಮೀಪದಲ್ಲಿ ಇರುವದರಿಂದ, ಇಂಗ್ರೇಜ ಸರಕಾರಕ್ಕೆ ಜಯವಾದ ಸಂತೋಷಕ್ಕೆ ನಮ್ಮ ರಾಜ್ಯದಲ್ಲು ಇರುವ ಸರ್ವೇ ಜನರು ಕೇಳಿ, ಸಂತೋಷಪಡುವಂಥಾ ದ್ದನ್ನು ಟೇಪುಸುಲ್ತಾನರು ಕೇಳಿ ಅವರ ಹಿಮ್ಮತ್ತು ಗರ್ವಭಂಗವಾಗಿ, ಮೋರೆ ಚಿಕ್ಕದು ಮಾಡಿಕೊಂಡದ್ದ ಕೇಳಿ ನೋಡುವಂಥಾದ್ದು. ಐದನೇ ಸಂತೋಷ: ಇದಕ್ಕೆ ಸಮುದ್ರದ ತೆರೆ ಉಕ್ಕಿಬರುವೋಪಾದಿ ನಮ್ಮ ಮನಸ್ಸಿಗೆ ಹರುಷ

ಉಕ್ಕಿಬರುವಂಥಾದ್ದು. ಈ ಮೇರೆ ನಮ್ಮ ಮನಸ್ಸಿಗೆ ಅನೇಕ ಹರುಷವಾಗಿ ಇಂಗ್ರೇಜ ಸರಕಾರಕ್ಕೆ ದಿನೇ ದಿನೇ ಜಯಮುಖವಾಗಿ ದೌಲತ್ತು ಅಭಿವೃದ್ಧಿ ಆಗಿ ಬರಬೇಕೆಂಬದಾಗಿ ಪ್ರಾರ್ಥನೆ ಮಾಡಿ, ಆ ದೊಡ್ಡ ಸರಕಾರದ ಕೆಲಸಾ ಪತ್ತೆ ಆಗುವಂತೆ, ಫರಾಶೀಸರ ನಿಗ್ರಹಮಾಡಿದಂಥಾ ಸರದಾರರಿಗೆ ಇಪ್ಪತಾ ವಂದು ಸಲಾಂ ಫಿರಂಗಿಯನ್ನು ಹಾರಿಸಿ ಇದ್ದೇವೆ" ಎಂಬುದಾಗಿ ಬರದು ಕಳುಹಿದರು.

ಆ ಬಳಿಕ ಇದೇ ಸಂವತ್ಸರದ ಆಶ್ವೀಜ ಬ. ೯ರಲ್ಲು ಮಲೆವಾರಿ ಕಮಿಶನ್ ಸ್ಪೆನ್ಸರ್ ಸಾಹೇಬರವರು ಬರದು ಕಳುಹಿದ ಕಾಗದದಲ್ಲಿ : "ಅಮರಸುಳ್ಯ, ಏಳುಸಾವಿರ ಸೀಮೆ ಸಹಾ ತಮಗೆ ಅವಕಾಶವೋ ? ಟೇಪುಸುಲ್ತಾನರಿಗೆ ಅವಕಾಶವೋ ? ಎಂಬದರ ವಿಚಾರಿಸಿ ತಿಳಿಯುವ ಬಗ್ಯೆ, ಕಮಿಶನರಲ್ಲಿ ಇರುವ ಜೊಸ್ಸೆ ಯುಟಾಪು ಸಾಹೇಬರ, ಕೇಪ್ಟನ್ ಮಾವಿಸಿ ಸಾಹೇಬರ ಸಹಾ ತಮ್ಮ ಬಳಿಗೆ ಕಳುಹಿಸಿ ಇದ್ದೇವೆ. ಇದೇ ಬಗ್ಯೆ ಟೇಪುಸುಲ್ತಾನರು, ಈ ತರ್ಕ ತೀರಿಸುವ ಬಗ್ಯೆ, ತಮ್ಮ ಕಡೆಯಿಂದ ಸೇಖ್ ಶ್ಯಾಬುದ್ದೀನರಿಗೂ ಮಿರ ಮಹಮ್ಮದಲ್ಲಿಯನ್ನೂ ಕಳುಹಿಸಿ ಇದ್ದಾರೆ. ಕುಂಪನಿ ಸರಕಾರದ ಎರಡು ಸಾಹೇಬರು ಟೇಪುಸುಲ್ತಾನರ ಕಡೆಯವರ ಬಳಿಗೆ ಹೋದರು. ಆದ್ದರಿಂದ ಅಮರ ಸುಳ್ಯ, ಏಳುಸಾವಿರ ಸೀಮೆ ಮಾತಿನ ಬಗ್ಯೆ ಸಂಹದ್ದು ಮಾತುಕಥೆ ತಿಳಿದಂಥಾ ಜನರನ್ನು ತಯಾರುಮಾಡಿ, ಈ ಸಾಹೇಬರು ಹೇಳಿದ ಮೇರೆ ಕೊಡಬೇಕು. ವಾಜಬಿ ಮಾಡ್ಯಾರು" ಎಂಬದಾಗಿ, ಬರದು ಕಳುಹಿಸಿ ಇದ್ದರು.

ಅದೇ ಪ್ರಕಾರ ಆ ಎರಡು ಸಾಹೇಬರು ಬಂದಲ್ಲಿ, ಅವರ ವಶಕ್ಕೆ ಸರಹದ್ದಿನ ಮಾತುಕಥೆ ತಿಳಿದಂಥ ಹಳಬ ಮನುಷ್ಯರು ಕರಣೀಕ ಸುಬ್ಬಯ್ಯನ ಸಹ, ಕೊಟ್ಟಲ್ಲಿ, ಇವರು ಸುಳ್ಯದ ಮಾಗಣೆಗೆ ಹೋಗಿ ಸೋಣಂಗೇರಿ ಎಂಬಲ್ಲಿ ಇಳುಕೊಂಡು, ಉಭಯಕಡೆ ಸೀಮೆ ಮಾತುಕಥೆ ಕೇಳಿ ನಿರ್ಣಯಮಾಡುವ ಬಗ್ಯೆ, ಟೇಪುಸುಲ್ತಾನರ ತಾಲೂಕಿನ ಐನರ್ನಾಡು ಎಂಬ ಗ್ರಾಮದಲ್ಲಿ ಜಾಗಾ ಮಾಡಿ, ಕುಂಪನಿ ಸರಕಾರದ ಸರದಾರರೂ ಟೇಪುಸುಲ್ತಾನರ ಕಡೆಯವರೂ ಈ ಅಮರ ಸುಳ್ಯದ ಸರಹದ್ದಿನ ಮಾತುಕಥೆ ಬಗ್ಯೆ ಎರಡು ಕಡೆ ಜನಾ ಕೂಡಿ ಸವಾಲು ಜವಾಬು ಮಾಡಿದಲ್ಲಿ, ಅಮರ ಸುಳ್ಯ ಎಂಬ ಎರಡು ಮಾಗಣೆಯು

ಇಕ್ಕೇರಿ ಸಂಸ್ಥಾನಕ್ಕೆ ಸೇರಿದ್ದು ಎಂತಾ, ಟೀಪುಸುಲ್ತಾನರ ಕಡೆಯುವರು ಹೇಳಿದಲ್ಲಿ, “ ಈ ಮಾತು ಸಹಜವೇ ಸರಿ. ಪ್ರಾಕು ಈ ಸೀಮೆ ಇಕ್ಕೇರಿಯುವರದು. ಇತ್ತಲಾಗಿ ಚರಕಲ ರಾಜರು ಇಕ್ಕೇರಿ ಸಂಸ್ಥಾನಕ್ಕೆ ಕೊಡತಕ್ಕಂಥಾ ಖಂಡಣೆ ಹಣಕ್ಕೆ ಕೊಡಗಿನ ಸಂಸ್ಥಾನದ ದೊರೆಗಳ ಜಾಮೀನು ಹೇಳಿಸಿ, ಅರೆವಾಸಿ ಹಣ ಕೊಟ್ಟು, ಅರೆವಾಸಿ ಕೊಡದೆ ದಗಾ ಮಾಡಿದರಿಂದ, ಈ ಸಂಸ್ಥಾನದಿಂದ ಆ ಬಾಕಿ ದ್ರವ್ಯವನ್ನು ಸಲಾಯಿಸಿ ಕೊಟ್ಟಲ್ಲಿ, ಆ ಚರಕಲ ರಾಜರು ಪೂರ್ತಿ ಹಣ ಕೊಡದೆ, ದಗಾ ಮಾಡಿದಾಗ್ಯೂ, ಆ ಬಗ್ಯೆ ಹಣ ತಮ್ಮ ಕೈಯಿಂದ ಕೊಟ್ಟರಿ. ತಮಗೆ ಬಹಳ ಲುಕ್ಸಾನು ಆಯಿತು ಎಂಬದಾಗಿ, ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರು, ಈ ದಾಕ್ಷಿಣ್ಯ ಉದ್ದಿಶ್ಯ ಮೂಡ ಒಂಬತ್ತು ಮಾಗಣೆಗಳಿಂದ ಈ ಗಟ್ಟದ ಸರಹದ್ದಿಗೆ ಸೇರಿದ ಕೆಲವು ಗ್ರಾಮಗಳನ್ನು ವಿಂಗಡಿಸಿ, ಹಾಲು ಬೆಣ್ಣೆ ಬಗ್ಯೆ ಎಂತ, ಆ ಗ್ರಾಮಗಳಿಗೆ ಅಮರದ ಮಾಗಣೆ ಎಂತಾ ಹೆಸರು ಇಟ್ಟು, ತೋರಣ ಕಟ್ಟಿ, ದೊಡ್ಡವೀರಪ್ಪ ವಡೆಯರವರಿಗೆ ಮಂಗಳೂರ ತಾಲುಕಿನಿಂದ ಬಿಟ್ಟುಕೊಟ್ಟರು. ಆ ಬಳಿಕ ಕಾವೇರಿ ಅಮ್ಮ ದೇವರಿಗೆ ಪೂಜೆ ಬಗ್ಯೆ, ಈ ಕೊಡಗಿನ ಸೀಮೆಯಲ್ಲಿ ತೆಂಗಿನಕಾಯಿ ಫಲವಿಲ್ಲವಾದ್ದರಿಂದ ಈ ಬಗ್ಯೆ ಸುಳ್ಯದ ಮಾಗಣೆಯನ್ನು ಬಿಟ್ಟುಕೊಡಬೇಕು. ಅದರ ಕ್ರಯದ ಹಣವನ್ನು ಕೊಡುತ್ತೇವೆ ಎಂಬದಾಗಿ, ದೊಡ್ಡವೀರಪ್ಪ ವಡೆಯರವರು ಹೇಳಿದಲ್ಲಿ ಈ ಮಾತಿಗೆ ಸೋಮಶೇಖರನಾಯಕರವರು ಒಪ್ಪಿ, ಸುಳ್ಯದ ಮಾಗಣೆಯನ್ನು ವಿಂಗಡಿಸಿ, ಬೆಗಮಲೆ ವಡ್ಡಿನಲ್ಲಿ ತೋರಣ ಕಟ್ಟಿಸಿ, ಬಿಟ್ಟುಕೊಟ್ಟರು. ಇದರ ಕ್ರಯದ ಹಣವನ್ನು ಕಾವೇರಿ ಅಮ್ಮ ದೇವರ ಭಂಡಾರದಿಂದ ಕೊಟ್ಟು ಇದ್ದಾರೆ” ಎಂಬದಾಗಿ ಹೇಳಿದಲ್ಲಿ, “ ಈ ಮಾಗಣೆಗಳು ನಿಮ್ಮದಾಗಿ ಇದ್ದರೆ ಲೆಕ್ಕ ತೋರಿ” ಎಂತ, ಟೀಪುಸುಲ್ತಾನರ ಕಡೆಯವರು ಹೇಳಿದರು. ಅದಕ್ಕೆ ಜವಾಬು ಮಹಾರಾಜರವರ ಕಡೆಯುವರು ಹೇಳಿದ್ದು : “ ನಮ್ಮ ರಾಜರಿಗೆ ದೋಸ್ತಿಯಲ್ಲಿ ದಗಾ ಮಾಡಿ, ಈ ಸಂಸ್ಥಾನವನ್ನೇ ನಿಮ್ಮ ಟೀಪುಸುಲ್ತಾನರು ತೆಗೆದುಕೊಂಡರಷ್ಟೆ. ನಮ್ಮಲ್ಲಿ ಲೆಕ್ಕ ಹ್ಯಾಗೆ ಇದ್ದೀತು ? ಲೆಕ್ಕವು ನಿಮ್ಮಲ್ಲೇ ಇದ್ದೀತು” ಎಂಬದಾಗಿ, ಹೇಳಿದಲ್ಲಿ ಇಕ್ಕೇರಿ ಸಂಸ್ಥಾನದಲ್ಲು ಬರದ ಲೆಕ್ಕ ಎಂತಾ, ವಂದು ಕಡುತ ತಂದು, ಮಡಗಿಕೊಂಡು, ಕೊಡಗಿನ ಸಂಸ್ಥಾನದಿಂದ ಎರಡು ಸಾವಿರ ಜನ ಇಕ್ಕೇರಿ ಸಂಸ್ಥಾನದಲ್ಲಿ ಚಾಕ್ರಿ ಮಾಡಿಕೊಂಡು ಇದ್ದರು. ಅವರ ಸಂಬಳದ

ಖರ್ಚಿನ ಉದ್ದಿಶ್ಯ ನವಾಬ ಹೈದರಲ್ಲೀಖಾನರು ನಗರದ ಸಂಸ್ಥಾನವನ್ನು ತೆಗೆದುಕೊಂಡ ಚಿತ್ರಭಾನು ಸಂವತ್ಸರಕ್ಕೆ ಅರುವತ್ತನೆ ಪ್ರಾಕು ಕಳುದ ಚಿತ್ರ ಭಾನು ಸಂವತ್ಸರದಲ್ಲಿ, ಅಮರದ ಮಾಗಣೆಯನ್ನು ಇಕ್ಕೇರಿ ಸೋಮಶೇಖರ ನಾಯಕರವರು ಕೊಟ್ಟದ್ದು ಎಂಬದಾಗಿ, ಲೆಕ್ಕದಲ್ಲು ಬರದು ಇದೆ. ನೋಡಿ" ಎಂತ, ಕಡುತ ಬಿಚ್ಚಿ, ಸೇಖಶ್ಯಾಬುದ್ದೀನನು ವಿಾರಮಹಮದಲ್ಲಿ ಸಹಾ ಕಮಿಷನ್ ಜೊತೆ ಯಂಟಾಪು ಸಾಹೇಬರಿಗೆ, ಮಾವಿನಿ ಸಾಹೇಬರವರಿಗೆ ಸಹಾ, ತೋರಿಸಿದಲ್ಲಿ, ಆ ಕಡುತದಲ್ಲು ಮಧ್ಯ ಮೂರು ಪಂಕ್ತಿ ತಿಕ್ಕಿ ಬರದು ಇದ್ದದ್ದನ್ನು ಮಹಾರಾಜರ ಕಡೆಯವರು ತಿಳಿದು, ಒಂದು ಹರಿ ವಳಗೆ ಮೇಲೆ ಕೆಳಗೆ ಸಹಾ ಒಬ್ಬನ ಬರಹಾ, ಮಧ್ಯ ಮೂರು ಪಂಕ್ತಿ ತಿಕ್ಕಿ, ಕೊಡಗಿನ ಸಂಸ್ಥಾನದ ಎರಡು ಸಾವಿರ ಜನದ ಸಂಬಳದ ಉದ್ದಿಶ್ಯ ಅಮರ ಉತ್ತಾರವಾಗಿ ಇಕ್ಕೇರಿ ಸಂಸ್ಥಾನದಿಂದ ಬಿಟ್ಟುಕೊಟ್ಟದ್ದು ಎಂತ. ಹೊಸ್ತಾಗಿ ತಿಕ್ಕಿ ಬರದ್ದಾಗಿ ಕಾಣತ್ತಾ ಇದೆ, ಈ ಲೆಕ್ಕ ನಾವು ಒಪ್ಪಲಿಕ್ಕಿಲ್ಲಾ" ಎಂಬದಾಗಿ ಹೇಳಿದಲ್ಲಿ, "ಹಾಗಾದರೆ, ಈ ಲೆಕ್ಕ ಸುಳ್ಳೊ?" ಎಂತಾ ಕೇಳಿದರು. ಆಹಾಗ್ಯೆ ಇದರ ಜವಾಬು ನಾಳೆ ದಿವಸ ಹೇಳಿಯೇವು; ನೀವು ಹೋಗಿ ಇಳುಕೊಳ್ಳಿ, ನಾವು ಹೋಗಿ ಇಳುಕೊಳ್ಳುತ್ತೇವೆ" ಎಂಬದಾಗಿ, ಇಂಗ್ರೇಜ ಸರಕಾರದ ಕಡೆ ಸಾಹೇಬರು ಹೇಳಿ, ಸೋಣಂಗೇರಿಗೆ ಬಂದರು. ಅವರು ಬೆಳ್ಳಾರೆಗೆ ಹೋಗಿ ಇಳುಕೊಂಡರು.

ಆ ಬಳಿಕ ಕರಣೀಕ ಸುಬ್ಬೈಯನ ಸಂಗಡ ಇಂಗ್ರೇಜ ಸರದಾರರು ಹೇಳಿದ್ದು: "ಈ ವಿವರ ದೊರೆಗಳು ನಮಗೆ ತಿಳಿಸಲಿಲ್ಲಾ. ಈ ಬಗ್ಯೆ ನೀನು ಈಗ ಅರ್ಜಿ ಬರಕೊಂಡು, ದೊರೆಗಳು ತಿಳಿದು ಇರುವದನ್ನು ಬರದು ತರಿಸು" ಎಂಬದಾಗಿ, ಹೇಳಿದಲ್ಲಿ, ಅವನು ಆ ವಿವರಕ್ಕೆ ಬಿನ್ನವತ್ತಳೆ ಬರಕೊಂಡದ ರಿಂದ, ಅದಕ್ಕೆ ಜವಾಬಾಗಿ ಕರಣೀಕ ಸುಬ್ಬೈಯನಿಗೆ ಅಪ್ಪಣೆ ಕೊಡಿಸಿದ ವಿವರ:

"ಈ ಸಂಸ್ಥಾನದಿಂದ ಎರಡು ಸಾವಿರ ಕೊಡಗು ಮಂದಿ ಇಕ್ಕೇರಿ ಸಂಸ್ಥಾನದಲ್ಲು ಸಂಬಳಕ್ಕೆ ನಿಂತು, ಚಾಕ್ರಿ ಮಾಡಿದರಿಂದ, ಆ ಜನದ ಸಂಬಳದ ಉದ್ದಿಶ್ಯ ಅಮರ ಉತ್ತಾರವಾಗಿ ಬಿಟ್ಟುಕೊಟ್ಟು ಇದ್ದಾರೆ ಎಂಬದಾಗಿ, ಟೀಪು ಸುಲ್ತಾನರ ಕಡೆಯವರು ಹೇಳುತ್ತಾರಷ್ಟೆ. ಆ ಅಮರದ ಮಾಗಣೆ ಎರಡು

ಸಾವಿರ ವರಹಾ ಶಿಸ್ತಿನದು ಇದೆ. ಇದಲ್ಲದೆ ಈ ಕೊಡಗಿನ ರಾಜ್ಯದ ಕೊಡಗು ಮಂದಿ ಈ ಸೀಮೆ ಬಿಟ್ಟು ಪರಸಂಸ್ಥಾನಕ್ಕೆ ಹೋಗಿ, ಈ ವರೆಗೂ ಸಂಬಳಕ್ಕೆ ಚಾಕ್ರಿ ನಿಂತದ್ದಾಗಿ ಇಲ್ಲಾ. ಆದಾಗ್ಯಾದರೂ ಎರಡು ಸಾವಿರ ಜನಕ್ಕೆ ಸಂಬಳದ ಉದ್ದಿಶ್ಯ ಎರಡು ಸಾವಿರ ವರಹಾ ಶಿಸ್ತಿನ ಅಮರದ ಮಾಗಣೆ ಕೊಟ್ಟರೆ, ಜನ ಒಂದಕ್ಕೆ ವರ್ಷ ಒಂದಕ್ಕೆ ಒಂದು ವರಹದ ಮೇರೆ ಬಿತ್ತಷ್ಟೆ. ಇದರಿಂದ ಆ ಜನರ ಅನ್ನ ಬಟ್ಟೆ ಮುಂತಾದ ಖರ್ಚು ಯಾವ ಮೇರೆ ಕಳೆಯುತ್ತಾ ಇತ್ತು. ಆ ಜನರು ತಮ್ಮ ಹೆಂಡರುಮಕ್ಕಳಿಗೆ ಅನ್ನ ವಸ್ತ್ರ ಕೊಟ್ಟು ಯಾವ ಮೇರೆ ನಿಭಾಯಿಸುತ್ತಾ ಇದ್ದರು. ಇಷ್ಟು ಮಂದಿಯನ್ನು ನಮ್ಮ ದೊಡ್ಡ ಅಜ್ಜೈನವರು ಇಕ್ಕೇರಿಯವರ ಬಳಿಯ ಚಾಕ್ರಿಗೆ ನಿಲ್ಲಿಸಿ, ಅವರ ಹೆಂಡರ ಮಕ್ಕಳ ಆರೈಕೆ ಮಾಡುವಂಥಾದ್ದಕ್ಕೆ ಈ ಮಾಗಣೆಯಿಂದ ಆ ಜನರ ಖರ್ಚು ಕಳದು, ಇವರಿಗೆ ಏನು ಫಾಯಿದೆ ಬರುತ್ತಾ ಇತ್ತು. ಇದನ್ನೆಲ್ಲಾ ತಮ್ಮನಸ್ಸಿನಲ್ಲಿ ದರಿಯಾಪ್ತು ಮಾಡಿದಲ್ಲಿ, ಆ ಟೀಪುಸುಲ್ತಾನರ ಕಡೆಯವರು ಹೇಳುವಂಥಾ ಮಾತು ಸಹಜ, ಅಸಹಜ ಎಂಬುದು ತಮಗೆ ತಿಳಿಯಬಂದೀತು ಎಂಬದಾಗಿ, ಯುಟಾಪು ಸಾಹೇಬರು ಮಾವಿನಿ ಸಾಹೇಬರಿಗೆ ಸಹಾ ಜಾಹೀರು ಮಾಡುವದು" ಎಂಬದಾಗಿ, ಬರೆಸಿ ಕಳುಹಿದರಿಂದ, ಇದೇ ವಿವರವನ್ನು ಕರಣೀಕ ಸುಬ್ಬೈಯನು ಆ ಸಾಹೇಬರಿಗೆ ಜಾಹೀರು ಮಾಡಿದಲ್ಲಿ ಅವರು ಕರಣೀಕ ಸುಬ್ಬೈಯನನ್ನು ಕರೆದುಕೊಂಡು, ಆ ಬೆಳಿಗ್ಗೆ ಐನಾರ್ಡು ಎಂಬಲ್ಲಿಗೆ ಹೋದಲ್ಲಿ, ಆ ಕಡೆ ಸೇಖಶ್ಯಾಬುದ್ದೀನನು, ಮಿರಾರಮಹಮ್ಮದಲ್ಲೀ ಸಹಾ ಬಂದರು. ಅವರ ಸಂಗಡ ಈ ಸಾಹೇಬರು ಹೇಳಿದ್ದು : " ಕೊಡಗಿನ ದೊರೆಗಳು ಇಕ್ಕೇರಿ ಸಂಸ್ಥಾನದಲ್ಲಿ ಎರಡು ಸಾವಿರ ಜನ ಚಾಕ್ರಿ ಇಟ್ಟದ್ದರಿಂದ, ಆ ಜನರ ಸಂಬಳದ ಉದ್ದಿಶ್ಯ ಅಮರ ಉತ್ತಾರವಾಗಿ ಬಿಟ್ಟುಕೊಟ್ಟು ಇದ್ದರು. ಈಗ ಅವರ ಕಡೆ ಜನವು ಚಾಕ್ರಿಯಲ್ಲಿ ಇಲ್ಲಾ. ಈ ಮಾಗಣೆಯನ್ನು ಬಿಟ್ಟುಕೊಡುವುದಿಲ್ಲಾ, ಎಂತಾ ಹೇಳಿದಿರಷ್ಟೆ. ಈ ಬಗ್ಯೆ ಕೊಡಗಿನ ರಾಜರು ಆ ಮೇರೆ ಎರಡು ಸಾವಿರ ಜನರನ್ನು ಚಾಕ್ರಿಗೆ ನಿಲ್ಲಿಸಿದ್ದಕ್ಕೆ, ಸಂಬಳದ ಉದ್ದಿಶ್ಯ ಅವರು ಅಮರ ಎರಡು ಸಾವಿರ ವರಾಹದ ಮಾಗಣೆ ಬಿಟ್ಟುಕೊಟ್ಟರೆ ಜನ ಒಂದಕ್ಕೆ ಒಂದು ವರ್ಷಕ್ಕೆ ಒಂದು ವರಹಾ ಆಯಿತಷ್ಟೆ. ಈ ಸಂಬಳ ತೆಗೆದುಕೊಂಡು ಆ ಜನರು ತಮ್ಮ ಅನ್ನ ವಸ್ತ್ರ ಖರ್ಚು, ತಮ್ಮ ಕುಟುಂಬ ಮಕ್ಕಳ ಅನ್ನ ಬಟ್ಟೆ

ಖರ್ಚು ಮುಂತಾಗಿ, ಯಾವ ಮೇರೆ ನಿಭಾಯಿಸುತ್ತಾ ಇದ್ದರು, ಈ ಮೇರೆ ತಮ್ಮ ಜನ, ಇಕ್ಕೇರಿಯವರಲ್ಲಿ ಚಾಕ್ರಿಗೆ ನಿಲ್ಲಿಸಿ, ಅವರ ಸಂಬಳದ ಖರ್ಚಿನ ಉದ್ದಿಶ್ಯ ಈ ಮಾಗಣೆಯನ್ನು ದೊಡ್ಡವೀರಪ್ಪ ವಡೆಯರವರು ತೆಗೆದುಕೊಂಡು, ಆ ಮಂದಿ ಖರ್ಚು ಕಳದು, ತಮಗೆ ಏನು ಫಾಯಿದೆ ಉಂಟು ಎಂತಾ, ಈ ಕೆಲಸಕ್ಕೆ ಒಪ್ಪಿಕೊಂಡರು. ಈ ತಪಶೀಲು ಹೇಳಬೇಕು" ಎಂತಾ, ಕೇಳು ವಾಗ್ಯೆ, ಅವರು ಹೇಳಿದ್ದು: "ಇವರ ಕಡೆ ಎರಡು ಸಾವಿರ ಜನದ ಸಂಬಳ ವನ್ನು ಇಕ್ಕೇರಿಯಲ್ಲೇ ನಗದು ಕೊಡುತ್ತಿದ್ದರು. ದೋಸ್ತಿ ಉದ್ದಿಶ್ಯ ಕೊಡಗಿನ ರಾಜರಿಗೆ ಈ ಅಮರದ ಮಾಗಣೆಯನ್ನು ಬಿಟ್ಟುಕೊಟ್ಟು ಇದ್ದರು ಎಂತಾ, ಹೇಳಿದರಿಂದ, ಆ ಮಾತಿಗೆ ಯುಟಾಪು ಸಾಹೇಬರು, ಮಾವಿನಿ ಸಾಹೇಬರು ಸಹಾ ಹೇಳಿದ್ದು: ಆ ಇಕ್ಕೇರಿಯವರ ಬಳಿಯಲ್ಲಿ ಎರಡು ಸಾವಿರ ಜನ ಚಾಕ್ರಿ ಇಟ್ಟದ್ದಕ್ಕೆ ಅವರ ಸಂಬಳ ಅಲ್ಲೇ ಕೊಡುತ್ತಿದ್ದರು. ಈಗ ರಾಜರ ಕಡೆ ಜನ ಚಾಕ್ರಿಯಲ್ಲು ಇಲ್ಲಾ, ನೀವು ಸಂಬಳವು ಕೊಡ ಕೆಲಸವಿಲ್ಲಾ, ದೋಸ್ತಿ ಉದ್ದಿಶ್ಯ ಬಿಟ್ಟುಕೊಟ್ಟಂಥಾ ಅಮರದ ಮಾಗಣೆ ನಮಗೆ ಸಲಬೇಕು ಎಂಬ ದಾಗಿ ಕೇಳುವದಕ್ಕೆ ಕಾರಣವೇನು? ನವಾಬ ಹೈದರಲ್ಲೀಖಾನರು ಇಕ್ಕೇರಿ ಸಂಸ್ಥಾನ ತೆಗೆದುಕೊಂಡು ಚಿತ್ರಭಾನು ಸಂವತ್ಸರಕ್ಕೆ ಅರುವತ್ತನೆ ಮೊದಲ ಚಿತ್ರಭಾನು ಸಂವತ್ಸರದಿಂದ ಕೊಡಗಿನ ಸಂಸ್ಥಾನಕ್ಕೆ ಸೇರಿಬಂದಂಥಾ ಅಮರ ಸುಳ್ಯವು ನಿಮಗೆ ಬರಬೇಕು ಎಂಬದಾಗಿ, ವ್ಯಾಜ್ಯ ಹಿಡಿದು, ಮೊನ್ನೆ ದಿವಸ ಜನದ ಸಂಬಳದ ಉದ್ದಿಶ್ಯ ಬಿಟ್ಟದ್ದು ಎಂತಾ, ಹೇಳಿದಿರಿ. ಈ ದಿನ ಕೇಳು ವಾಗ್ಯೆ, ಆ ಜನದ ಸಂಬಳ ಇಕ್ಕೇರಿಯಲ್ಲೇ ಸಲ್ಲುತ್ತಾ ಇತ್ತು. ಇದನ್ನು ದೋಸ್ತಿ ಉದ್ದಿಶ್ಯ ಬಿಟ್ಟದ್ದು ಎಂತಾ ಹೇಳುತ್ತೀರಿ. ಈ ಪ್ರಕಾರ ಗಳಿಗ್ಯೆ ಒಂದೊಂದು ಮಾತು ಆಗುವದರಿಂದ, ನಿಮ್ಮ ಮಾತು ತಫಾವತು ಆಗಿ ಕಾಣು ತ್ತದೆ" ಎಂಬದಾಗಿ, ಇಂಗ್ರೇಜಿ ಸರದಾರರು ಹೇಳಿದಲ್ಲಿ, ಅದಕ್ಕೆ ಟೀಪು ಸುಲ್ತಾನರ ಕಡೆಯವರು ಜವಾಬು ಕೊಡುವದಕ್ಕೆ ಮಾತು ಇಲ್ಲದೆ ಸುಮ್ಮ ನಾದರು.

ಆ ಬಳಿಕ ಏಳು ಸಾವಿರ ಸೀಮೆ ತಕರಾರು ಏನು ಎಂತಾ, ಟೀಪು ಸುಲ್ತಾನರ ಕಡೆ ವಕೀಲರ ಕೇಳಿದಲ್ಲಿ, ಅದರ ವಿವರ ನಮಗೆ ತಿಳಿಯದು ಎಂಬ ದಾಗಿ ಹೇಳಿದರು.

ಆವಾಗ್ಯೆ ಈ ಅಮರ ಸುಳ್ಯ ಏಳು ಸಾವಿರ ಸೀಮೆ ಸಹಾ ತಕರಾರು ಫೈಸಲಾ ಮಾಡಿ ತೀರಿಸುವ ಬಗ್ಯೆ, ಸೇಖಶ್ಯಾಬುದ್ದೀನ್ ಮಿಾರಮುಹಮ್ಮದಲ್ಲಿಗೆ ಸಹಾ, ವಕೀಲತನ ನೇಮುಕಾ ಮಾಡಿ ಕಳುಹಿದ್ದೇವೆ ಎಂತಾ, ಟೀಪುಸುಲ್ತಾನರು ಇಂಗ್ರೇಜ ಸರಕಾರಕ್ಕೆ ಬರದು ಕಳುಹಿದ ಕಾಗದ ಹಾಜರು ಇದೆ ಎಂತಾ ಕಾಗದ ತೆಗೆದು ತೋರಿಸಿ, ನಿಮ್ಮ ಖಾವಂದರು ಈ ಮೇರೆ ದಸ್ತೈವಜು ಬರದು ಕಳುಹಿಸಿದಂತೆ, ಅಮರಸುಳ್ಯದ ಮಾತಿಗೆ ನಾವು ಬಂದವರು ಎಂಬದಾಗಿ ಹೇಳಿ ಏಳುಸಾವಿರ ಸೀಮೆ ಮಾತಿಗೆ ನಾವು ತಿಳಿದವರಲ್ಲಾ ಎಂಬದಾಗಿ ಹೇಳಿದರೆ, ಇದು ಯಾವ ಸಲುವಳಿ ಮಾತು ? ನಿಮ್ಮ ಮಾತಿನಲ್ಲಿ, ಲೆಖ್ಖದಲ್ಲಿ ಸಹಾ, ಒಂದೂ ಸಹಾಜ ಕಾಣುವದಿಲ್ಲಾ. ಸುಮ್ಮನೆ ತಕರಾರು ಮಾಡುವದಾಗಿ ಕಾಣುತ್ತಾ ಇದೆ ಎಂತಾ, ಯುಟಾಪು ಸಾಹೇಬರು, ಮಾವಿನಿ ಸಾಹೇಬರು ಸಹಾ ಹೇಳಿದಲ್ಲಿ, ಇದಕ್ಕೆ ಬದಲು ಜವಾಬು ಹೇಳುವದಕ್ಕೆ ಮಾರ್ಗವಿಲ್ಲದೆ, “ ಈಗ ನಮಗೆ ಜರೂರು ಕೆಲಸವಿದೆ. ನಾವು ಹೋಗುತ್ತೇವೆ. ನೀವು ಹೋಗಿ ” ಎಂತಾ ಹೇಳುವಾಗ್ಯೆ, “ ಮಾತಿನ ಜವಾಬು ಸವಾಲಿನ ಉದ್ದಿಶ್ಯ ಬಂದು, ಇದ ತೀರಿಸದೆ, ಈಗ ನಾವು ಹೋಗುತ್ತೇವೆ, ಜರೂರು ಕೆಲಸವಿದೆ ಎಂದರೆ, ಇದು ಯಾವ ವಿವೇಕವಿದೆ ” ಎಂತಾ, ಕೇಳುವಾಗ್ಯೆ, “ ನಮಗೆ ಇದು ತಿಳಿಯುವದು ಇಲ್ಲಾ. ಟೀಪುಸುಲ್ತಾನರಿಗೆ ಬರದು ಕಳುಹಿಸಿ, ಅಲ್ಲಿಂದ ಬರದು ಬಂದ ವಿವರಕ್ಕೆ ಬರದು ಕಳುಹುತ್ತೇವೆ. ಈಗ ನೀವು ಹೋಗಿ, ನಾವು ಹೋಗುತ್ತೇವೆ ” ಎಂತಾ, ಹೇಳಿ ಅವರು ಕೊಡೆಯಾಲಕ್ಕೆ ಹೋದರು.

ಯುಟಾಪು ಸಾಹೇಬರು, ಮಾವಿನಿ ಸಾಹೇಬರು ಸಹಾ ನಾಲ್ಕುನಾಡ ಅರಮನೆಗೆ ಬಂದು ವೀರರಾಜೇಂದ್ರ ವಡೆಯರವರ ಕಂಡು, ಈ ಪ್ರಸ್ತಾಪ ಯಾವತ್ತೂ ಹೇಳಿ, ಕೆಲವು ದಿವಸ ಇದ್ದು, ಆ ಬಳಿಕ ಮಹಾರಾಜರವರು, ಯುಟಾಪು ಸಾಹೇಬರು ಸಹಾ, ಕಾಳಯುಕ್ತಿ ಸಂವತ್ಸರದ ಪುಷ್ಯ ಶು. ೧ರಲ್ಲು ಚಂದ್ರವಾರ ದಿವಸ ನಂಜರಾಯಪಟ್ಟಣಕ್ಕೆ ಬೇಟಿ ಬಗ್ಯೆ ಹೋದರು. ಮಾವಿನಿ ಸಾಹೇಬರವರು ಶರೀರಕ್ಕೆ ಆಲಸ್ಯವಾಗಿ, ವೀರರಾಜೇಂದ್ರಪೇಟೆಗೆ ಹೋಗಿ ಇದ್ದರು.

ಅಷ್ಟು ಹೊತ್ತಿಗೆ ಮಹಾರಾಜಶ್ರೀ ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗಟನ್ ಸಾಹೇಬ್ ಬಹಾದ್ದುರವರು ಮಹಾರಾಜರವರಿಗೆ

ಬರೆಸಿ ಕಳುಹಿದ ಕಾಗದವು ನಂಜರಾಯಪಟ್ಟಣಕ್ಕೆ ಬಂದು ಮುಟ್ಟಿತು. ಅದ ರಲ್ಲು: "ಇಂಗ್ರೇಜ ಸರಕಾರದ ತಾಲೂಕು ಹಿಂದುಸ್ಥಾನದ ಬಂದುಬಸ್ತಿನ ಕೆಲಸದ ಬಗ್ಯೆ, ಬಂಗಾಳಕ್ಕೆ ನಾವು ಬಂದಂಥಾ ಸಮಾಚಾರ ತಿಳಿದು ಇದ್ದೀತು. ನಾವು ಭೇದವಿಲ್ಲದೆ ದೋಸ್ತಿಯಿಂದ ಕೂಡಿ ಇರುವಂಥಾದ್ದು ತಿಳುದು ಇದೆ. ಮತ್ತೆ ತಮ್ಮ ದೋಸ್ತಿ ಒಳ್ಳೆತನ, ತಾವು ಜಾಹೀರು ಮಾಡಿದರಿಂದ, ಮಾಲುಂ ಆಯಿತು. ಅದೇ ಮೇರೆ ನಿಮ್ಮ ಲಾಭ ಒಳ್ಳೇತನವಾಗಿ ಇರುವಂಥಾದ್ದು ಅಂತರವಿಲ್ಲದೆ ಇಂಗ್ರೇಜ ಕುಂಪನಿ ಸರಕಾರದ ಒಳಗೆ ಕೂಡಿ ಇದೆ. ಈ ಸಮಯ ದಲ್ಲಿ ಹೀಗೆ ತಿಳಿದ್ದರಿಂದ, ತಮ್ಮ ಸೀಮೆ ಆರೈಕೆ ಬಗ್ಯೂ, ನಿಗಾಬಾನಿಯಿಂದ ಮಡಗುವದಕ್ಕೂ, ಲಡಾಯ ಪ್ರಯತ್ನಗಳು ಜರೂರು ಇದೆ. ಆದ್ದರಿಂದ, ತಮಗೆ ಸಮಾಚಾರ ಕೊಡುತ್ತೇವೆ. ಟೀಪುಸುಲ್ತಾನರು ವಕೀಲರ ಮೊರಿಸ್ ಬಂದರಕ್ಕೆ ಫರಾಶೀಸರ ಬಳಿಗೆ ಕಳುಹಿಸಿದ್ದು, ಇಂಗ್ರೇಜ ಸರಕಾರದ ಸಂಗಡ ಲಡಾಯ ಮಾಡುವ ಬಗ್ಯೆ ಎಂತಾ, ಈ ಸಮಾಚಾರ ನಿಶ್ಚಯವಾಗಿ ತಿಳಿಯ ಬಂತು. ಆ ಬಳಿಕ ಆ ವಿವರದಿಂದ, ಆ ದುಷ್ಮಾನ ಫರಾಶೀಸರ ಫೌಜು ಅವರ ಸೀಮೆಯಲ್ಲಿ ಇಳಿಯುವಂಥಾ ದಾರಿ ನೋಡುತ್ತಾ ಇದ್ದಾರೆ. ಅವರು ಬಂದ ಕೂಡಲೇ, ಕುಂಪನಿ ಬಹಾದ್ದೂರ ಸರಕಾರದ ಸಂಗಡ ಲಡಾಯ ಮಾಡ್ಯಾರು ಎಂತಾ, ಟೀಪುಸುಲ್ತಾನರ ಕಡೆಯಿಂದ ಈ ವಿವರ ತಿಳಿಯುಬರುತ್ತಾ ಇದೆ. ಇದು ಯಾವತ್ತು ತಮಗೆ ಕೇಳಪಟ್ಟು ಇದ್ದೀತು. ಹಿಂದುಸ್ಥಾನದಲ್ಲಿ ಇರುವ ಯಾವತ್ತರಿಗೂ ತಿಳುವಳಿಕೆ ಆಗಿ ಇದ್ದೀತು. ಶ್ರೀರಂಗಪಟ್ಟಣದಲ್ಲಿ ಇಂಗ್ರೇಜ ಸರಕಾರಕ್ಕೂ, ಇವರ ಕೂಡಿದ ಸರಕಾರಕ್ಕೂ, ಟೀಪುಸುಲ್ತಾನರಿಗೂ ಸಲ್ಲಾ ನಾಮಾ ಮೊಕರರು ಆದಂಥಾದ್ದಕ್ಕೆ, ಅಂದಿನಾರಭ್ಯ ಸದರಿ ಸರಕಾರದಿಂದ ಆದಕ್ಕೆ ಹೆಚ್ಚು ಕಡಮೆ ತಫಾವತು ಆಗಲಿಲ್ಲಾ. ಈ ಮೂರು ಸರಕಾರ ದಿಂದಲೂ ಟೀಪುಸುಲ್ತಾನರಲ್ಲಿ ದೋಸ್ತಿ ನಡಸುವದಕ್ಕೆ ಸಲ್ಲಾ ಮಾಡುವ ಬಗ್ಯೆ ಯಾವಾಗಲೂ ಕಡಮೆ ಇಲ್ಲದೆ ಅಪೇಕ್ಷಿಸುತ್ತಾರೆ. ಹೀಗೆ ಇರುವಲ್ಲಿ ಟೀಪು ಸುಲ್ತಾನರ ಕೆಲಸದಿಂದ ಇಂಗ್ರೇಜ ಬಹಾದ್ದೂರ ಸರಕಾರಕ್ಕೂ ಅವರ ದೋಸ್ತಿ ಮಾಡಿದಂಥಾ ಸರಕಾರಕ್ಕೂ ವಿಕಲ್ಪದಿಂದ ಬದಲು ಯೋಚಿಸುವದು ಹೊರ್ತು, ಮತ್ತೊಂದು ಕಾಣುವದಿಲ್ಲಾ. ಇದರಿಂದ ಇಂಗ್ರೇಜ ಸರಕಾರಕ್ಕೂ, ಅವರಿಗೆ ಒಳ್ಳೇದು ಹಾರೈಸುವಂಥಾ ದೋಸ್ತಾರರ ಸರಕಾರಕ್ಕೂ, ಹುಷಾರಿಯಿಂದ

ತಮ್ಮ ಜಾಗ್ರತೆಯಲ್ಲಿ ಇರುವದಕ್ಕೆ ಬೇಕಾಗಿ ಇದೆ. ಇದರಿಂದ ನಮ್ಮ ಜಾಗಾ ಸಂರಕ್ಷಣ್ಯ ಮಾಡುವ ಬಗ್ಯೆ, ಗುಪ್ತದಿಂದ ಪ್ರಯತ್ನ ಮಾಡುವಂಥಾದ್ದಕ್ಕೆ ಜರೂರು ಇದೆ, ಮಾಡಬೇಕು. ಇದರ ಮೇಲೂ ಟೀಪುಸುಲ್ತಾನರ ಕಡೆಯಿಂದ ಇಂಥಾ ತಂಟೆ ಜಾಹೇರು ಆದ್ದರಿಂದಲೂ, ಟೀಪುಸುಲ್ತಾನರು ಮುಚ್ಚುಮರೆ ಇಲ್ಲದೆ ಖಸ್ತು ಮಾಡಿದರಿಂದ ಇಂಗ್ರೇಜ ಬಹಾದ್ದುರ ಕುಂಪನಿ ಸರಕಾರದ ಫೌಜು ತಯಾರುಮಾಡುವದಕ್ಕೆ ನಮಗೆ ಜರೂರು ಆಯಿತು. ಈಗ ಜಲದಿನಿಂದ ಲಡಾಯಿ ಮಾಡುವದಕ್ಕೆ ಸಿದ್ಧವಾಗಬೇಕೆಂಬದು ನಿಶ್ಚಯವಾಗಿಯೂ ನಮ್ಮ ಮನಸ್ಸಿನಲ್ಲಿ ಇತ್ತಿಲ್ಲಾ. ಈ ಸಲ್ಲಾವನ್ನು ಹಿಂದುಸ್ಥಾನದಲ್ಲಿ ಮತ್ತು ಕಾಯಂ ಮಡಗಬೇಕು ಎಂಬದು ನಮಗೆ ಇರಾದೆ ಇತ್ತು. ಮೊದಲು ವೇಳೆಯದಲ್ಲಿ ಇಂಗ್ರೇಜ ಸರಕಾರ ಆ ಸರಕಾರಕ್ಕೆ ಕೂಡಿದಂಥಾ ಸರಕಾರಕ್ಕೂ ನಿಧಾನವಾದ ಹೊತ್ತಿನಲ್ಲಿ ಮನಸ್ಸಿಗೆ ಸಮಾಧಾನವಾಗಿ ಇತ್ತು. ಈಗ ಆ ಸುಲ್ತಾನರಿಂದ ಈ ಸರಕಾರಗಳಿಗೆ ಆಗುವಂಥಾದ್ದರಿಂದ ಯಾವತ್ತು ನಿಷ್ಫಲವಾಗಿ ಕಾಣುವದೇ ಹೊರ್ತು ಫಲ ಕಾಣಬರುವದಿಲ್ಲಾ. ಲಡಾಯಿ ಮಾಡಬೇಕೆಂಬ ಇರಾದೆ ನಮ್ಮ ಮನಸ್ಸಿನಲ್ಲು ಇತ್ತಿಲ್ಲಾ. ಆದಾಗ್ಯೂ ಮುಂದೆ ಹ್ಯಾಗೆ ಆಗುತ್ತದೋ ಎಂಬ ಸಂಶಯದಿಂದ ದೂರದೃಷ್ಟಿ ಇಟ್ಟು, ತಯಾರು ಮಾಡುವಂಥಾದ್ದು ಜಾಣತನವಿದೆ. ಇದರಿಂದ ಕುಂಪನಿ ಬಹಾದ್ದುರ ಸರಕಾರದ ಫೌಜು ಜಮಾ ಆಗಿ, ಒಂದು ಸಮಯದಲ್ಲಿ ಕೆಲಸಕ್ಕೆ ಕೂಡಿಬರುವಂತೆ ಅಪ್ಪಣೆ ಆಗಿ ಇದೆ. ಇದಲ್ಲದೆ ನಮ್ಮ ಸರಕಾರಕ್ಕೆ ಕೂಡಿದಂಥಾ ಸರಕಾರದವರು, ಟೀಪುಸುಲ್ತಾನರ ಸಂಗಡ ಮೊದಲು ಕರಾರು ಯಾವ ಮೇರೆ ಆಯಿತೋ, ಆ ಪ್ರಕಾರ ತಮ್ಮ ತಮ್ಮ ಸೀಮೆಯನ್ನು ಬಂದುಬಸ್ತು ಮಾಡಿಕೊಂಡು, ಸುಖದಿಂದ ಇರಬೇಕಲ್ಲದೆ, ಈ ಮೇರೆ ದುಷ್ಮಾನತನ ಅಪೇಕ್ಷಿಸಬಾರದು ಎಂಬದಾಗಿ ಕೇಳುವಂತೆ ಹುಕುಂ ಮಾಡಿ ಇದೆ. ಲಡಾಯಿ ಆಗುವಂಥಾದ್ದರ ಒಳಗೆ, ಮಹಾದೇವನು ಆ ಕಷ್ಟ ಪರಿಹರಿಸ್ಯಾನು. ಟೀಪುಸುಲ್ತಾನರ ಫೌಜಿನ ಪರಾಕ್ರಮವು ಸಂಶಯವಿಲ್ಲದೆ ನಿಮ್ಮ ಸೀಮೆ ಮೇಲೆ ತಿಳಿಯಬಂದೀತು. ಇದುಕಾರಣ ದೋಸ್ತಿಯಿಂದ ಬರೆಯುತ್ತಾ ಇದ್ದೇವೆ. ತಮ್ಮ ಸೀಮೆ ರಕ್ಷಣ್ಯಾರ್ಥದ ಬಗ್ಯೆ ಬೇಕಾದ್ದು ತಯಾರುಮಾಡಿಕೊಂಡು, ದೋಸ್ತರರ ಸಂಗಡ ಕೂಡಿ ಇರುವಂಥಾದ್ದು ಒಳ್ಳೇದು ಇದೆ. ತಾವು ಫೌಜು ತಯಾರು ಮಾಡುವಲ್ಲಿ ಶೀಘ್ರ ಜಮಾ

ಯಿಸಬೇಕೆಂಬ ಮನಸ್ಸು ಇಡುತ್ತೇವೆ. ಈ ಫೌಜು ಜರೂರು ಹೊತ್ತಿನಲ್ಲಿ ಕುಂಪನಿ ಬಹಾದ್ದುರ ಸರಕಾರ, ಅವರ ಕೂಡಿ ಇರುವಂಥಾ ಸರಕಾರದ ಫೌಜಿನ ಸಂಗಡ ಏಕೀಕರವಾಗಿ, ಆವಾಗ್ಯೆ ಕೆಲಸ ಬಿದ್ದರೆ, ಲಡಾಯಿ ತೀರಿಸುವ ಬಗ್ಯೆ ಕೂಡಿ ಇರುವಂತೆ, ತಯಾರುಮಾಡುತ್ತಾ ಇರಬೇಕು. ಶಿವನ ಕಟಾಕ್ಷದಿಂದ ತಾವು ಬಹಳ ಬುದ್ಧಿವಂತರು, ದೂರದೃಷ್ಟಿ ಇಡುವಂಥವರು ಇದ್ದೀರಿ. ಈ ಕೈಫೀಯತ್ತು ಯಾವತ್ತು ತಿಳಿಯಬರುತ್ತಾ ಇದ್ದೀತು. ಈಗ ರೂಬುರೂಬು ಬಂದು ಇರುವಂಥಾ ಕಷ್ಟ ಪರಿಹರಿಸುವದಕ್ಕೆ ಇದೇ ಒಳ್ಳೇದು ಇದೆ. ಅದು ಏನಂದರೆ—ಲಡಾಯಿಗೆ ಜವಾಬು ಕೊಡುವದಕ್ಕೆ ಎಲ್ಲಾರಿಗಿಂತಲೂ ಮುಂಚಿತವಾಗಿ ತಾವು ಯಾವತ್ತೂ ತಯಾರು ಮಾಡಬೇಕು. ತಮಗೆ ಒಳ್ಳೇದು ಆಗುವ ಬಗ್ಯೆ, ಫೌಜು ತಯಾರುಮಾಡುವದಕ್ಕೆ ಇಲ್ಲಿಂದ ಬರೆಯಬೇಕಾಯಿತು. ಅದು ತಮ್ಮ ರಕ್ಷಣ್ಯ ಎಂತಾ ಕಾಣಬೇಕು. ಯಾವಾಗ್ಯೂ ತಮ್ಮ ಫೌಜು ತಯಾರು ಮಡಗುವುದರಲ್ಲಿ ಪರಾಂಬರಿಕೆ ಮಡಗಿ, ಅಥಾಪಿಸಿ, ಅಂಥಾದ್ದೊಂದು ಟೀಪುಸುಲ್ತಾನರಿಂದ ಲಡಾಯಿ ಬೀಳುವ ಸಂಗತಿ ಬಂದರೂ ನಿಥಾನಿಸಬೇಕು. ಇದರಿಂದ ತಮಗೆ ಒಳ್ಳೇದು ಇದೆ" ಎಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಈ ಕಾಗದನನ್ನು ನೋಡಿಕೊಂಡು, ದೊರೆಗಳವರು, ಯುಟಾಪು ಸಾಹೇಬರು ಸಹಾ, ವೀರರಾಜೇಂದ್ರಪೇಟೆಗೆ ಬಂದು, ಬಂಗಾಳದ ಗವರ್ನರ್ ಸಾಹೇಬರು ಬರದದ್ದಕ್ಕೆ ಬದಲು ಜವಾಬು: "ತಾವು ಬರೆದ ಮೇರೆ ನಮ್ಮಿಂದ ಆಗುವಂಥಾದ್ದನ್ನು ತಯಾರು ಮಾಡಿಕೊಂಡು, ನಮ್ಮ ಸರಹದ್ದು ದಾಟದೆ, ಬಂದುಬಸ್ತಾಗಿ ಇರುತ್ತೇವೆ. ಟೀಪುಸುಲ್ತಾನರು ವಿಕಲ್ಪ ಯೋಚಿಸಿ ಇದ್ದಾರೆ ಎಂಬುದು ನಮಗೆ ತಿಳಿಯುವ ಬಗ್ಯೆ, ಮೆಹರ್ಬಾನಗಿಯಿಂದ ತಾವು ಬರೆಸಿ ಕಳುಹಿದ್ದು ತಿಳಿದು, ಬಹಳ ಸಂತೋಷವಾಯಿತು" ಎಂಬ ಇತ್ಯಾದಿ ವಿವರಗಳಾಗಿ ಬರೆಸಿ, ಈ ಕಾಗದವನ್ನು ಬಂಗಾಳಕ್ಕೆ ಕಳುಹುವ ಬಗ್ಯೆ, ಜನರಲ್ ಹಾಟ್ಲೆ ಸಾಹೇಬರವರ ಬಳಿಗೆ ಕಳುಹಿಸಿ ಕೊಟ್ಟರು.

ಆ ಬಳಿಕ ಜನರಲ್ ಹಾಟ್ಲೆ ಸಾಹೇಬರವರು ಪುಷ್ಯ ಶು. ೨ರಲ್ಲು ಮಹಾರಾಜರಿಗೆ ಬರೆಸಿ ಕಳುಹಿದ ಕಾಗದದಲ್ಲಿ: ಹಿಂದು ಸೀಮೆಯಲ್ಲಿ ಸರ್ವ ಕಾರ್ಯವು ಬಹುಮಾನವಾದ ಇಂಗ್ರೇಜ ಕುಂಪನಿಗೆ ಅವಕಾಶಗಳು ಸ್ವಾಧೀನ

ಮಾಡಿಕೊಳ್ಳತಕ್ಕ ಬೇಕಾದಕ್ಕೂ, ಅವಕಾಶಗಳು ಕುಂಪನಿ ದೋಸ್ತಾರರು ಬಿಡುವ ಬಗ್ಯೂ, ಟೇಪುಸುಲ್ತಾನರು ಫರಾಶೀಸರ ಸಂಗಡ ದೋಸ್ತಿ ಆಗಿ ಇರುವ ಸಂಗತಿಯಿಂದ ಸುಲ್ತಾನರಿಗೆ ಜಯಿಸಬೇಕಾದ್ದಕ್ಕೆ ಅಗತ್ಯವಾಗಿ ಇರುವದನ್ನು ಸಹಾ, ತಮಗೆ ವಿವರವಾಗಿ ತಿಳಿಸುವ ಬಗ್ಯೆ, ಬಹುಮಾನವಾದ ಬಂಗಾಳದ ಗವರ್ನರ್ ಸಾಹೇಬರವರು ತಮ್ಮ ಹೆಸರಿಗೆ ಬರದು ಕಳುಹಿದ ಕಾಗದವನ್ನು ತಮ್ಮ ಕೈಯಲ್ಲಿ ಕೊಡುವ ಹಾಗೆ, ಈ ಇಪ್ಪತ್ತಮೂರನೇ ತೇದಿ, ಮಾರ್ಗಶಿರ ಬ. ೧ಳ ದಿವಸ ಕೇಪ್ಟನ್ ಮಾವಿನಿ ಸಾಹೇಬರವರ ಬಳಿಗೆ ಕಳುಹಿಸಿ ಇದ್ದೇವೆ. ಟೇಪುಸುಲ್ತಾನರು ಇಲ್ಲಿಗೆ ಬರುವವರಾಗಿ ಇದ್ದಾರೆ. ಆದ್ದರಿಂದ ಅದ ನಿಗ್ರಹ ಮಾಡಬೇಕಾದಾಗ್ಯೂ ಅವರು ನಡೆಯುವ ಸಂಗತಿಗೆ ತಕ್ಕಹಾಗೆ ಅಲ್ಲಿಗೆ ಹೋಗುವ ಹಾಗೆ ಬೇಕಾಗಿ ಬಂದರೆ, ಆ ಪ್ರಕಾರ ಮಾಡುವುದಕ್ಕೂ, ಫೌಜು ನಿಲ್ಲುವ ಬಗ್ಯೂ, ಇಳಿಸುವ ಬಗ್ಯೂ ಸಹಾ, ಬಹುಮಾನವಾದ ಗವರ್ನರ್ ಸಾಹೇಬರವರು ಯೋಚನೆ ಮಾಡಿ, ಅಪ್ಪಣೆ ಕೊಟ್ಟು ಇದ್ದಾರೆ. ಇದರ ನಿಮಿತ್ಯವಾಗಿ ಬಹುಮಾನವಾದ ಇಂಗ್ರೇಜ ಫೌಜುಗಳು, ಮರಾಟಿಯವರ ಫೌಜೂ, ನಿಜಾಮಲ್ಲಿ ಫೌಜು ಸಹಾ ಕೂಡಿ, ಅಲ್ಲಿ ಅಲ್ಲಿ ಸರಹದ್ದುಗಳ ಬಳಿಗೆ ಬಂದು, ಕೂಡುತ್ತಾ ಇವೆ. ಬಹುಮಾನವಾದ ಇಂಗ್ರೇಜ ಕುಂಪನಿ ದೋಸ್ತಾರರಿಂದ ಆಗುವಂಥಾ ಸಹಾಯುಗಳು ಬೇಕಾಗಿ ಬರುತ್ತಾ ಇದೆ. ಅಕ್ಕಿ, ಆಳು, ಎತ್ತು, ಇನ್ನು ಬೇಕಾದ ಸಾಮಾನುಸರಂಜಾಮುಗಳನ್ನು, ತಯಾರು ಮಾಡುವ ಹಾಗೆ ಬರೆಸಿ, ಮೊದಲು ಕಳುಹಿಸಿ ಇದೆಯಷ್ಟೆ. ಪ್ರಾಕು ನೀವು ಬಹುಮಾನವಾದ ಇಂಗ್ರೇಜ ಕುಂಪನಿ ಸರಕಾರಕ್ಕೆ ಬೇಕಾದ ಸಹಾಯು ಸಂಪತ್ತುಗಳ ಮಾಡಿಕೊಟ್ಟು ಇರುವ ಹಾಗೆ, ತಾಮಸ ಮಾಡದೆ, ಅಗತ್ಯವಾಗಿಯೂ ಅತಿ ಜಾಗ್ರತೆಯಾಗಿಯೂ ಸಹಾಯು ತಾವು ಮಾಡೀರಿ ಎಂಬದಾಗಿ, ನಾವು ನಿಶ್ಚಯು ಮಾಡಿ ಇದ್ದೇವೆ. ಲಡಾಯಿಗೆ ಬೇಕಾದ್ದನ್ನು ತಯಾರು ಮಾಡುವದಕ್ಕೆ ಪ್ರಯತ್ನ ಮಾಡುತ್ತಾ ಇದ್ದೀತು. ಆದಾಗ್ಯೂ ಯುದ್ಧಕ್ಕೆ ಹೋಗಬೇಕೆಂಬದಾಗಿ, ನಿಶ್ಚೈಸಲಿಲ್ಲಾ. ಆದ್ದರಿಂದ ಲಡಾಯು ಮಾಡುವಾ ಎಂಬದಾಗಿ, ತಮಗೆ ನಿಶ್ಚಯುವಾಗಿ ಬರದು ಕಳುಹುವ ಪರಿಯುಂತರಕ್ಕೂ, ಟೇಪುಸುಲ್ತಾನರ ಅವಕಾಶವಾಗಿರುವ ರಾಜ್ಯದಲ್ಲಿ ತಾವು ಹೆಚ್ಚು ಕಡಿಮೆ ಮಾಡಬಾರದು ಎಂಬದಾಗಿ, ತಮ್ಮ ಮನಸ್ಸಿಗೆ ನಿಶ್ಚಯುವಾಗಿ ತಿಳಿಸ

ಬೇಕು, ಎಂಬದಾಗಿ, ಬಹುಮಾನವಾದ ಗವರ್ನರ್ ಸಾಹೇಬರಿಂದ ನಮಗೆ ಬರದು ಬಂದು ಇದೆ. ಯುದ್ಧಾ ಮಾಡಬೇಕೆಂಬದಾಗಿ ನಿಶ್ಚಯವಾಗಿ ಬರದು ಬಂದರೆ, ಆ ಕ್ಷಣ ತಮಗೆ ಬರದು ಕಳುಹುತ್ತಾ ಇದ್ದೇವೆ. ಆ ಮಧ್ಯೆ ತಮ್ಮಿಂದ ಆಗುವಂಥಾ ಪ್ರಯತ್ನಗಳ ಮಾಡಿ, ಮೈಸೂರಿಗೆ ಹೋಗಬೇಕಾದ್ದಕ್ಕೆ ಒಳ್ಳೆ ರಹದಾರಿ ಮಾಡಿ ನಿಮ್ಮ ಪ್ರಯತ್ನದಿಂದ ಆಗುವಂಥಾ ಸಾಮಾನು ಸರಂಜಾಮು ತಯಾರುಮಾಡಿ, ತಮ್ಮ ಸೀಮೆಯಲ್ಲಿ ಫೌಜು ನಿಲ್ಲುವ ಹಾಗೆ ಒಂದು ಸ್ಥಳ ಮುಂತಾದ್ದು ತಯಾರು ಮಾಡಿಕೊಳ್ಳಬೇಕು. ತಾವು ಕುಂಪನಿಗೆ ಬಾಯಾಚಾರ ದೋಸ್ತಾರರಾದ್ದರಿಂದ, ಇದಕ್ಕಿಂತಾ ಅಧಿಕವಾಗಿ ಬರದು ಕಳುಹತಕ್ಕದ್ದಿಲ್ಲವಷ್ಟೆ" ಎಂಬದಾಗಿ, ಬರದು ಇದ್ದರು.

ಇದಕ್ಕೆ ಜವಾಬು ಪುಷ್ಯ ಶು. ೧೦ರಲ್ಲು ಮಹಾರಾಜರವರು ಬರಸಿ ಕಳುಹಿದ ಕಾಗದದಲ್ಲಿ : ಈ ಸಮಯದಲ್ಲಿ ನಾವು ಖಬರದಾರಿ ಹುಷಾರಿಯಿಂದ ಕ್ಷೇಮದಲ್ಲಿ ಇರಬೇಕು ಎಂಬದಾಗಿ, ತಾವು ಹಾರೈಸಿ, ಇಂಥಾ ಸಮಾಚಾರ ಬರದು ಕಳುಹಿದ್ದೇ ಹೊರ್ತು, ಮತ್ತೊಂದಲ್ಲಾ ಎಂಬದಾಗಿ, ನಮ್ಮ ಮನಸ್ಸಿಗೆ ತಿಳಿಯಬಂತು. ಮಹಾರಾಜಶ್ರೀ ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್ ಬಹಾದ್ದುರವರು ನಮಗೆ ಬರಸಿ ಕಳುಹಿದ ಫಾರ್ಶಿ ಕಾಗದವನ್ನು ತಾವು ಕಳುಹಿದ್ದು, ಕೇಪ್ಟನ್ ಮಾವಿನಿ ಸಾಹೇಬರ ಮುಖಾಂತರ ಬಂದು ನಮಗೆ ತಲಪಿತು. ಅದರಿಂದೆಲ್ಲಾ ವಿವರವು ನಮಗೆ ತಿಳಿಯಬಂತು. ಅದಕ್ಕೆ ಈಗ ಬದಲು ಜವಾಬು ಬರೆಸಿ, ತಮ್ಮ ಬಳಿಗೆ ಕಳುಹಿಸಿ ಇದ್ದೇವೆ. ಇದನ್ನು ಅವರಿಗೆ ಮುಟ್ಟಿಸಿ, ಇದಕ್ಕೆ ಬದಲು ದರಜವಾಬು ತರಿಸಿ ಕಳುಹಿಸಬೇಕು. ಇದಲ್ಲದೆ ಇಂಗ್ರೇಜ ದಂಡು ಗಟ್ಟಾ ಹತ್ತಿ ಬರುತ್ತಾ ಇದೆ. ನಮಗೆ ಬಹಳ ಸಹಾಯ ಸಂಪತ್ತು ಮಾಡಬೇಕು ಎಂತಾ, ಬರೆಸಿದ್ದು ಸರಿಯಷ್ಟೆ. ಈ ಬಗ್ಗೆ ಪ್ರಾಕು ಇಂಗ್ರೇಜ ಲಷ್ಕರು ಇಲ್ಲಿಗೆ ಬಂದು ಇದ್ದಾಗ್ಯೆ, ನಾವು ಮೆಹನತ್ತು ಮಾಡಿದಂಥಾದ್ದು ತಮಗೂ ಜಾಹೀರು ಇದೆ. ಅದಕ್ಕಿಂತಾ ಹತ್ತು ಪಾಲು ಹೆಚ್ಚಾಗಿ ಇನ್ನೂ ಇಂಗ್ರೇಜ ಬಹಾದ್ದುರ ಕುಂಪನಿ ಸರಕಾರಕ್ಕೆ ಸಹಾಯ ಮಾಡಬೇಕು ಎಂಬದಾಗಿ, ನಾವು ನಿಶ್ಚೈಸಿ ಇದ್ದೇವೆ. ಅದು ತಾವು ಇಲ್ಲಿಗೆ ಬಂದ ಮೇಲೆ ತಮಗೆ ಕಂಡುಬಂದೀತು" ಎಂಬ ವಿವರವಾಗಿ ಬರೆಸಿ ಕಳುಹಿಸಿಕೊಟ್ಟರು.

ಆಮೇಲೆ ಯುಟಾಪು ಸಾಹೇಬರು, ಮಾವಿನಿ ಸಾಹೇಬರು ಸಹಾ, "ಇಂಗ್ರೇಜ ಸರಕಾರದ ಕೆಲಸಕ್ಕೆ ಕೆಲವು ಅಕ್ಕಿ ಮುಂತಾದ್ದು ಬೇಕಾಗುತ್ತ ಇದೆ. ತಾವು ಎಷ್ಟು ಜಮಾಯಿಸಿ ಇಟ್ಟೀರಿ" ಎಂಬದಾಗಿ, ದೊರೆಗಳವರ ಕೇಳಿದಲ್ಲಿ, "ಆ ದೊಡ್ಡ ಸರಕಾರಕ್ಕೆ ನಮ್ಮಿಂದ ಎಷ್ಟು ಕುಮುಕು ಆದೀತು ಎಂತಾ, ನಾವು ಹೇಳಬೇಕು. ನಮ್ಮ ಸೀಮೆಯಿಂದ ಏಳುಸಾವಿರ ಭಟ್ಟಿ ಅಕ್ಕಿಯನ್ನು ಮೂರು ತಿಂಗಳ ಒಳಗೆ ಹೆಗ್ಗಳದಿಂದ ಇತ್ತಲಾಗಿ ಒಂದು ಹರದಾರಿ ಒಳಗೆ ಜಮಾಯಿಸಿ ಕೊಟ್ಟೇವು. ಇದು ಆದಮೇಲೆ, ಮತ್ತು ನಮ್ಮಿಂದ ಆಗುವಷ್ಟು ವಂಚನೆ ಇಲ್ಲದೆ ಪ್ರಯತ್ನ ಮಾಡಿ, ಜಮಾಯಿಸಿ ಕೊಟ್ಟೇವು ಎಂಬದಾಗಿ ಹೇಳಿ, ಈ ಅರ್ಥಕ್ಕೆ ಇಂಗ್ರೇಜ ಸರಕಾರಕ್ಕೆ ಬರಕೊಟ್ಟರು.

ಈ ಬಗ್ಯೆ ಆ ಎರಡು ಸಾಹೇಬರು ಮಹಾರಾಜರವರಿಗೆ ಬರದುಕೊಟ್ಟ ವಿವರ: "ಗಟ್ಟದ ಮೇಲೆ ಇರುವ ಕೊಡಗಿನ ಸೀಮೆಯಲ್ಲಿ ಸರಕಾರದ ಕೆಲಸದ ಉದ್ದಿಶ್ಯವಾಗಿ ಅಕ್ಕಿ ಆಗಬೇಕಾದ್ದರಿಂದ, ಮಿಸ್ಟರ್ ಯುಟಾಪು ಸಾಹೇಬರು, ಕೇಪ್ಟನ್ ಮಾವಿನಿ ಸಾಹೇಬರು ಸಹಾ, ನಾವು ಎರಡು ಜನವು ಕೊಡಗಿನ ಸೀಮೆಯಲ್ಲಿ ಕಮಿಶನರಾದೆವು. ಕುಂಪನಿ ಸರಕಾರದ ಕಡೆಯಿಂದ ಕೊಡಗು ಸಂಸ್ಥಾನದ ಹಾಲೇರಿ ವೀರರಾಜೇಂದ್ರ ವಡೆಯರವರ ಸಂಗಡ ಮೊಕರರು ಮಾಡಿದೆವು. ಅದು ಏನು ಎಂದರೆ—ಸರಕಾರಕ್ಕೆ ಅಕ್ಕಿ ಮುಂತಾದ್ದು ಕಡಮೆ ಆಗಬಾರದು. ಅದನ್ನು ದೊರೆಗಳವರು ತಮ್ಮ ಕೈಯ ಹಣದಿಂದ ಜಮಾ ಮಾಡಿ ಕೊಡಬೇಕು. ಈ ಬಗ್ಯೆ ನಮ್ಮ ಎರಡು ಜನರ ಹೆಸರಿನಿಂದ ಒಂದು ಬರಕೊಡಬೇಕು ಎಂದು, ರಾಜರವರು ಹೇಳಿದರಿಂದ, ನಾವು ಬರ ಕೊಟ್ಟು ಇದ್ದೇವೆ. ಇಂಗ್ರೇಜ ರಾತಲು ಎರಡಕ್ಕೆ ಪಕ್ಕಾ ಸೇರು ಒಂದು, ಇಂಥಾ ಸೇರು ಅರುವತ್ತಕ್ಕೆ ಅಕ್ಕಿ ಭಟ್ಟಿ ಒಂದು, ಈ ಮೇರೆ ಅಕ್ಕಿ ಭಟ್ಟಿ ಏಳು ಸಾವಿರ ಭಟ್ಟಿ ಅಕ್ಕಿಯನ್ನು ಜಮಾ ಮಾಡಿ, ಅಗ್ಗದಿಂದ ಸರಕಾರಕ್ಕೆ ಕೊಟ್ಟೇವು" ಎಂಬದಾಗಿ ದೊರೆಗಳು ಹೇಳಿದರು. ಶಿದ್ಧೇಶ್ವರನ ಗದ್ದಿಗೆ ಇತ್ತಲಾಗಿ ಪುದಿಚೇರಿಗಟ್ಟದ ಇತ್ತಲಾಗಿ, ಒಂದು ಹರದಾರಿ ಒಳಗೆ, ಈ ತಿಥಿ ಆರಭ್ಯ ಮೂರು ತಿಂಗಳ ಒಳಗೆ, ನಾವು ಹ್ಯಾಗೆ ಕೊಡುವದಕ್ಕೆ ಆದೀತು ಎಂಬದಾಗಿ ದೊರೆಗಳು ಹೇಳಿದರು. ಮತ್ತೆ ಹ್ಯಾಗಾದರೂ ಪ್ರಯತ್ನ ಮಾಡಿ ಈ ಅಕ್ಕಿ ಮೂರು ತಿಂಗಳ ಒಳಗೆ ಕೊಟ್ಟೇವು. ಇದರಲ್ಲಿ ಇನ್ನು ಒಂದು ತಿಂಗಳ ಒಳಗೆ

ಕೆಲವು ಅಕ್ಕಿ ಕೊಡುತ್ತೇವೆ. ಮತ್ತೆ ಎರಡು ತಿಂಗಳಿಗೆ ಯಾವತ್ತು ಅಕ್ಕಿ ಕೊಟ್ಟೇವು ಎಂತಾ ಹೇಳಿದರು. ನಾವು ಎರಡು ಜನರು ಮನಸ್ಸಿನಲ್ಲಿ ತಿಳಿದು ಇದ್ದೇವೆ. ದೊರೆಗಳವರ ಕಡೆಯಿಂದ ಮೂವತ್ತು ಸಾವಿರ ಭಟ್ಟಿ ಅಕ್ಕಿ ನಮ್ಮ ಕುಂಪನಿ ಸರಕಾರಕ್ಕೆ ಸಂದೀತು. ಈ ಪ್ರಕಾರ ನಾವು ಇಬ್ಬರೂ ಸೈ ಹಾಕಿ ಆನರೇಬಲ್ ಕುಂಪನಿ ಮೊಹರ ಮಾಡಿ, ಕೊಡಗಿನ ಸಂಸ್ಥಾನದ ವೀರ ರಾಜೇಂದ್ರಪೇಟೆಯಲ್ಲಿ ಈ ಕಾಗದ ಬರದುಕೊಟ್ಟು ಇದ್ದೇವೆ. ಇದೇ ವಿವರ ವಾಗಿ ದೊರೆಗಳವರು ಒಂದು ಕಾಗದ ಬರೆದುಕೊಟ್ಟು ಇದ್ದಾರೆ. ಅದರಲ್ಲಿ ಇಷ್ಟು ವಿವರ ಬರೆಯಲಿಲ್ಲಾ. ಆದಾಗ್ಯೂ ನಾವು ಹೇಳಿದ ಮಾತಿಗೆ ತಪಾವತು ಬಾರದು. ನಾವು ಆಡಿದ ಮೇರೆ ಜಮಾಯಿಸಿ ಕೊಟ್ಟೇವು ಎಂಬುದಾಗಿ ಹೇಳಿದರು" ಎಂದು, ಜನವರಿ ತಾರೀಕು ೧೨, ವರ್ಷ ೧೭೯೩, ಈ ಪ್ರಕಾರ ಮಹಾರಾಜರವರಿಗೆ ಬರದುಕೊಟ್ಟು, ಈ ಎರಡು ಸಾಹೇಬರು ಗಟ್ಟಾ ಇಳಿದು ಕಲ್ಲಿಕೋಟೆಗೆ ಹೋದರು.

ಮಹಾರಾಜರವರು ತಮ್ಮ ಸರಕಾರದಿಂದ ಹಣಾ ಕೊಟ್ಟು, ಸೀಮೆಯಿಂದ ಅಕ್ಕಿಯನ್ನು ತರಿಸಿ, ವೀರರಾಜೇಂದ್ರಪೇಟೆಯಲ್ಲು ಮೋತಿಖಾನೆ ಕಟ್ಟಿಸಿ, ಜಮಾಯಿಸುತ್ತಾ ಇರುತ್ತಾ ಇರಲಾಗಿ, ಆ ಬಳಿಕ ಇದೇ ಸಂವತ್ಸರದ ಮಾರ್ಗಶಿರ ಬ. ೧೩ರಲ್ಲು ಮುಂಬಾಯಿ ಗವರ್ನರ್ ಜನಾಟಂನ್ ಡಾಂಕಿನ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ "ತಾವು ಸದಾಸರ್ವಕಾಲದಲ್ಲು ಕುಂಪನಿ ವಿಶ್ವಾಸಿಗಳಾಗಿ ನಡದುಬಂದು ಇದ್ದೀರಷ್ಟೆ. ಈಗ ಇಂಗ್ರೇಜ ಬಹಾದ್ದು ರವರು, ರಾಜೆಶ್ರೀ ಪೇಶ್ವೆಯವರು, ನಿಜಾಮಲ್ಲಿಯವರು ಸಹಾ ಕೂಡಿ, ಟೇಪು ಸುಲ್ತಾನರು ಸಕಲರಿಗೂ ದೊಡ್ಡ ಶತ್ರುವಾದ್ದರಿಂದ, ಈಗ ಆತನ ಕೈಯ ಲಡಾಯ ಮಾಡುವ ಬಗ್ಗೆ ಹೊರಟು ಇದ್ದಾರೆ. ಆ ಬಗ್ಗೆ ಈ ಕೆಲಸ ನಿಮಿತ್ಯ ವಾಗಿ ತಾವು ಬಹಳ ವಿಶ್ವಾಸವಾಗಿ ನಡದುಕೊಳ್ಳುತ್ತೀರಿ ಎಂತಾ, ನಮಗೂ ವಿಶ್ವಾಸವಾಗಿ ಕಾಣಬರುತ್ತಾ ಇದೆ. ಟೇಪುಸುಲ್ತಾನರು ಫರಾಶೀಸರ ವಿಶ್ವಾಸ ಹಿಡಿದು ನಡದುಕೊಳ್ಳುವುದರಿಂದ, ಈ ಮೂರು ರಾಜ್ಯದ ಖಾವಂದರು ಅವರ ಮೇಲೆ ನೀತಿ ನ್ಯಾಯ ಪ್ರಕಾರ ಯುದ್ಧ ಶಿಬ್ಬತಿಗೋಸ್ಕರ ಹೊರಟುಬಂದರು. ಆ ಬಗ್ಗೆ ಅವರ ಫೌಜುಗಳು ಅವರ ಗಡಿ ಸರಹದ್ದಿನಲ್ಲಿ ಬಂದುನಿಲ್ಲುವ ಪ್ರಕಾರ ಬಂದು ಇದ್ದಾರೆ. ಬೇರೆ ಮದುರಾಜಿಯಿಂದ ಇಂಗ್ರೇಜ ಬಹಾದ್ದುರವರ

ಫೌಜು ಪೂರ್ವ ಮಾರ್ಗದಿಂದ ಶ್ರೀರಂಗಪಟ್ಟಣದ ಪೂರ್ವ ಭಾಗಕ್ಕೆ ಬಂದು ತಲಪುವದರೊಳಗೆ, ಮಲೆಯಾಳದಿಂದ ಇಂಗ್ರೇಜ ಬಹಾದ್ದುರರ ಫೌಜು ಪ್ರಾಕು ಬಂದ ಮೇರೆಗೆ, ದುಷ್ಟಾನರ ಸೀಮೆಗೆ ಹೋಗುವ ಬಗ್ಗೆ, ತಮ್ಮ ರಾಜ್ಯದ ಮಾರ್ಗದಿಂದ ಬಂದಾರು. ಬಂದಲ್ಲಿ ಪ್ರಾಕು ಪ್ರಕಾರ ಫೌಜಿಗೆ ಬೇಕಾದ ಜೀನಸು ಸರಂಜಾಮೆ ತಮ್ಮ ರಾಜ್ಯದಿಂದ ಆಗುವಷ್ಟು ರಸ್ತು, ಮುತ್ಸೈದೆ, ಬೇಕಾದ ಸಾಮಾನು ಯಾವತ್ತೂ ಬೇಗದಿಂದ ತಯಾರು ಮಾಡಿಸುವದಕ್ಕೆ ಸಹಾಯ ಮಾಡಬೇಕು. ಮುಂಬಾಯಿ ತಾಲೂಕಿನಲ್ಲಿ ಇದ್ದ ಕುಂಪನಿ ಫೌಜಿಗೆ, ಬಾದಶಾಹರ ಕಡೆ ಜನರಿಗೆ ಸಹಾ, ದೊಡ್ಡ ಫೌಜಿನ ಖಾವಂದರಾಗಿ ರಾಜಶ್ರೀ ಜನರಲ್ ಸ್ಟೋಯರ್ಟ್ ಸಾಹೇಬರು ಸರದಾರರಾಗಿ ಬಂದಾರು. ಇವರು ಬಹಳ ಕೆಲಸಗಳ ಜಯಿಸಿ ಇದ್ದದ್ದರಿಂದ, ದಂಡಿಗೆ ದೊಡ್ಡ ಸರದಾರ ರಾಗಿ ಇದ್ದಾರೆ. ಇದರಿಂದ ಸರ್ ಜರ್ನಲ್ ರಾಬರ್ಟ್ ಅಬರ್ಕ್ರಂಬಿ ಸಾಹೇಬ್ ಬಹಾದ್ದುರವರು ತಮ್ಮ ಸಂಗಡ ಯಾವ ಮೇರೆ ದೋಸ್ತಿ ಮಡಗಿ ಇದ್ದಾರೋ, ಅದೇ ಮೇರೆ ಇವರು ಇದ್ದಾರು" ಎಂಬ ವಿವರಗಳಾಗಿ, ಬರಸಿ ಕಳುಹಿಸಿ ಇದ್ದರು.

ಅದಕ್ಕೆ ದರ ಜವಾಬಾಗಿ ಕೊಡಗಿನ ಮಹಾರಾಜರವರು ಶು. ೧೨ರಲ್ಲು ಬರಸಿ ಕಳುಹಿದ ಕಾಗದದಲ್ಲಿ : "ನಮ್ಮ ರಾಜ್ಯದ ವಳಗೆ ಬತ್ತ, ಒಂದು ಹೊರ್ತು ಮೇಲಾದ ವಿದಳ ನವಧಾನ್ಯ ಮುಂತಾದ್ದು ಆಗುವದಿಲ್ಲಾ ಎಂಬದು ತಮಗೂ ತಿಳುದು ಇದೆಯಷ್ಟೆ. ಈ ಬಗ್ಗೆ ನಮ್ಮ ಸೀಮೆಗೆ ಮೂರು ದಿಕ್ಕು ದುಷ್ಟಾನ ರಾದ ಟೇಪುಸುಲ್ತಾನರ ಸೀಮೆ ಮುಟ್ಟೆ ಇದೆ. ಒಂದೇ ಜನ ಅಚೆ ಈಚೆ ತಿರುಗದಂತೆ, ಏಳೆಂಟು ತಿಂಗಳಿಂದ ಬಂದು ಮಾಡಿ ಇದ್ದಾರೆ. ಆದಾಗ್ಯೂ ನಮ್ಮ ರಾಜ್ಯದಲ್ಲಿ ಆಗುವಂಥಾದ್ದನ್ನು ನಾವು ಮೆಹನತ್ತು ಮಾಡಿ, ಇದ್ದಷ್ಟು ಕೊಡಿಸಿಕೊಟ್ಟೇವು ಎಂತಾ, ಯುಟಾಪು ಸಾಹೇಬರಿಗೆ ಮಾವಿನಿ ಸಾಹೇಬರಿಗೆ ಸಹಾ ಬರದು ಕೊಟ್ಟು ಇದ್ದೇವೆ. ಇದಲ್ಲದೆ ನಮ್ಮ ರಾಜ್ಯದಲ್ಲಿ ಇಲ್ಲದಂಥಾದ್ದ ಪರಸೀಮೆಯಿಂದಾದರೂ ಪ್ರಯತ್ನ ಮಾಡಿ ತರಿಸಿಕೊಡಿ ಎಂತಾ, ಬಂದಂಥಾ ಜನರಲ್ ಸಾಹೇಬರು ನಮಗೆ ಯಾವಾಗ ಹೇಳುತ್ತಾರೋ, ಆವಾಗ ನಮ್ಮ ರಾಜ್ಯದಲ್ಲಿ ಇರುವಂಥಾದ್ದ ಕೊಟ್ಟು, ಇಲ್ಲದಕ್ಕೆ ವಂಚನೆ ಇಲ್ಲದೆ ಪ್ರಾಣಪ್ರಯತ್ನ ಮಾಡಿ, ದುಷ್ಟಾನರ ಸೀಮೆಯಿಂದ ತಂದುಕೊಟ್ಟು, ಕುಂಪನಿ ಸರಕಾರಕ್ಕೆ

ಸಹಾಯ ಮಾಡಬೇಕು ಎಂಬ ಅಪೇಕ್ಷೆ ಸಂತೋಷ ನಮ್ಮಲ್ಲಿ ಬಹಳ ಇದೆ. ಮೊದಲಿಗಿಂತಲೂ ಹತ್ತುಪಾಲು ಹೆಚ್ಚಾಗಿ ದೋಸ್ತಿಯಿಂದ ಕುಂಪನಿ ಸರಕಾರದ ಕೆಲಸ ಮಾಡಿಯೇವು, ನಾವು ಮಾಡುವಂಥಾ ಸಹಾಯವನ್ನು ಜನರಲ್ ಸಾಹೇಬರು ಇಲ್ಲಿಗೆ ಬಂದ ಬಳಿಕಾ ಅವರ ಕಡೆಯಿಂದ ತಮಗೆ ತಿಳಿದೀತು ” ಎಂಬ ವಿವರವಾಗಿ ಬರೆಸಿ ಕಳುಹಿದರು.

ಆ ಬಳಿಕ ಬಂಗಾಳದ ಮಹಾರಾಜಶ್ರೀ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: “ ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬರವರು ವರ್ಷ ೧೭೯೯ನೇ ಜನವರಿ ತಾರೀಕು ೪ರಲ್ಲು ತಮಗೆ ಬರಸಿ ಕಳುಹಿದ ಕಾಗದ ನಕಲು ನಮ್ಮ ಬಳಿಗೆ ಕಳುಹಿಸಿ ಇದ್ದರು. ಅದರ ಮೊದಲು ನಾವು ಒಂದು ದೋಸ್ತಿ ಕಾಗದ ಸೆಪ್ಟೆಂಬರ್ ತಿಂಗಳು ೧ನೇ ತಾರೀಕು ವರ್ಷ ೧೭೯೮ರಲ್ಲು ಬರಸಿ ಕಳುಹಿಸಿ ಇದ್ದೆವಷ್ಟೆ. ಇಂಗ್ರೇಜ ಬಹಾದ್ದುರ ಕುಂಪನಿ ಸರಕಾರಕ್ಕೂ, ಮತ್ತು ಕೂಡಿ ಇರುವಂಥಾ ಸರಕಾರಕ್ಕೂ, ಟೀಪುಸುಲ್ತಾನರು ದುಷ್ಮಾನತನದಿಂದ ತಿರುಗಿ ಬಿದ್ದದ್ದರಿಂದ ನಿಭಾಯಿಸುವದಕ್ಕೆ ಬೇಕಾದ ಸಾಮಾನು ಜಮಾಯಿಸುವ ಜರೂರು ಆಯಿತು. ಆದ್ದರಿಂದ ತಮಗೆ ಕಾಗದ ಬರಸಿ ಕಳುಹಿಸಿ ಇದ್ದೆವಷ್ಟೆ. ಮೇಲೆ ಬರದ ನಕಲು ವಿಚಾರಿಸಿದಲ್ಲಿಯೂ, ಅದೇ ಮೇರೆ ಸಿಗಾಮಾನಿ ಸಾಮಾನು ತಯಾರು ಮಾಡಿಸುವದಕ್ಕೆ ಆ ಸಾಹೇಬರು ತಮಗೆ ಬರಸಿ ಕಳುಹಿಸಿ ಇದ್ದಾರೆ ಎಂಬುದು ತಿಳಿಯಬಂತು. ಈ ಅಭಿಪ್ರಾಯವಾಗಿ ನಮ್ಮ ಮನಸ್ಸಿನಲ್ಲು ಇರುವಂಥಾ, ಮೇಲೆ ಬರದ ತಾರೀಕಿನ ಕಾಗದದಿಂದ ವಿವರವಾಗಿ ತಿಳಿಯಬಂದು ಇದ್ದೀತು. ದೋಸ್ತಿಯಿಂದ ತಿಳಿಯಪಡಿಸಿ ಇದ್ದೇವೆ. ಒಂದು ಸಮಯದಲ್ಲಿ ಇಂಗ್ರೇಜ ಸರಕಾರದವರು, ಮತ್ತು ಕೂಡಿ ಇರುವಂಥಾ ಸರಕಾರದವರು ಸಹಾ, ಮೂರು ಸರಕಾರದವರು ಟೀಪುಸುಲ್ತಾನರ ಸಂಗಡ ಸಮಾಧಾನವಾದ ಸಮಯದಲ್ಲಿ, ನಾನಾಪ್ರಕಾರ ವಳ್ಳೇದು ಆಗುವ ಬಗ್ಯೆ ಮಾಡಿದಂಥಾದ್ದಕ್ಕೆ ಅಲಾಭವೇ ಹೊರ್ತು, ಮತ್ತೊಂದು ಕಾಣುವದಿಲ್ಲಾ. ಲಡಾಯ ಆಗಬೇಕೆಂಬ ಅಪೇಕ್ಷೆ ನಮಗೆ ಇತ್ತಿಲ್ಲಾ. ತಮಗೆ ನಾವು ದೋಸ್ತಿಯಿಂದ ಕಾಗದ ಬರದು ಇದ್ದೆವಲ್ಲಾ. ಅಂದಿನಾರಭ್ಯ ಈ ವರೆಗೂ ಇಂಗ್ರೇಜ ಸರಕಾರದ ಫೌಜು, ಇದಕ್ಕೆ ಕೂಡಿದ ಸರಕಾರದ ಫೌಜು ಸಹಾ, ತಯಾರಾಗುತ್ತಾ

ಇದೆ. ಮೊದಲು ಇಂಗ್ರೇಜ ಸರಕಾರಕ್ಕೂ ಟೀಪುಸುಲ್ತಾನರಿಗೂ ಆದಂಥಾ ಸಲ್ಲವನ್ನು ಈ ಹಿಂದುಸ್ಥಾನದ ವಳಗೆ ಕಾಯಂ ಮಡಗಬೇಕು ಎಂಬದು ಈಗಲೂ ನಮ್ಮ ಮನಸ್ಸಿನಲ್ಲು ಅಭಿಲಾಷೆ ಇರುತ್ತಾ ಇದೆ. ಅದರ ಒಳಗೆ ಯಾವ ತರದಲ್ಲೂ ಕಡಮೆ ಆಗಲಿಲ್ಲಾ. ಬದಲು ಮಾಡಬೇಕೆಂಬದು ಯೋಚಿಸ ಲಿಲ್ಲಾ. ತಮಗೆ ಮಾಲುಂ ಆಗಬೇಕೆಂತಾ ಬರದು ಇದ್ದೇವೆ. ಟೀಪುಸುಲ್ತಾ ನರ ಕೆಲಸ ಕಾಣುವದರ ವಳಗೆ ವಳ್ಳೆತಾಗಿ ಇರಬೇಕು ಎಂಬ ಗುರ್ತು ವಿಚಾರ ಕಾಣಬರುವದಿಲ್ಲಾ. ಟೀಪುಸುಲ್ತಾನರು ಮುಂದಣ ದೃಷ್ಟಿ ಇಡದ್ದ ರಿಂದ, ಲಡಾಯಿ ಆಗುವಂಥಾ ಕೆಲಸ ಎಲ್ಲಿ ಬೀಳುತ್ತಾ ಇದೋ ಆ ಮೇರೆ ಮಹಾದೇವನು ಮಾಡಬಾರದು. ತಮಗೂ ವಿಹಿತವದೆ. ಲಡಾಯಿಕ್ಕೆ ಬೇಕಾದ ಸಾಮಾನು ತಯಾರುಮಾಡುವಲ್ಲಿ ಕಡಮೆ ಮಾಡಬಾರದು. ಮುಂದೆ ತಯಾರು ಮಾಡಿ ಮಡಗಬೇಕು. ಮೊದಲಾಗಿ ತಮ್ಮ ಕಡೆಯಿಂದ ಒಂದು ಹರಕತ್ತು ಆಗದಂತೆ ಜಾಗ್ರತೆಯಾಗಿ, ತಮ್ಮ ಜಾಗದಲ್ಲಿ ತಯಾರಾಗಿ ಇರಬೇಕು. ಇದರ ಮೇಲು ಲಾಚಾರಿಯಿಂದ ಲಡಾಯಿದ ಕೆಲಸ ಬಿದ್ದರೆ, ಇಂಗ್ರೇಜ ಕುಂಪನಿ ಬಹಾದ್ದುರರ ಲಷ್ಕರು ನಡೆಯುವಂಥಾ ಮಾರ್ಗ, ಲಡಾಯಿಕ್ಕೆ ಬೇಕಾದ ವಿವರ ಸಹಾ, ಹಿಂದಳಿಂದ ತಿಳಿಯಬಂದೀತು. ಆ ಸಾಹೇಬರು, ಲಡಾಯಿಕ್ಕೆ ಬೇಕಾದ ಯಾವದೊಂದು ಕುಮಕು ಸರಂಜಾಮು ತಯಾರು ಮಾಡಬೇಕು ಎಂತಾ, ಬರದುಕಳುಹಿಸಿದ್ದಾರೋ, ಅದೇ ವಿವರ ಮೇಲೆ ಬರದು ಇದ್ದೇವೆ. ಮುಲೆವಾರಿ ಸೀಮೆ ಫೌಜಿಗೆ ಮೊಕರರು ಆಗಿ ಇರುವ ಜನರಲ್ ಸ್ಟೋಯರ್ಟ್ ಸಾಹೇಬರ ಕಡೆಯಿಂದ ಕಾಗದಗಳು ತಮಗೆ ತಲಪೀತು. ಜನರಲ್ ಸಾಹೇಬರ ಫೌಜು ರವಾನೆ ಆಗುವ ಬಗ್ಗೆ ಬೇಕಾದ ಸಾಮಾನು, ಸರಂಜಾಮು, ತಮ್ಮಿಂದ ಆದಷ್ಟು ಸಹಾಯ ಮಾಡೀರಿ ಎಂಬ ಅಪೇಕ್ಷೆ ನಮಗೆ ಇದೆ. ಮತ್ತು ನಮ್ಮ ಕಡೆಯಿಂದ ಒಂದರ ಹಿಂದೆ ಒಂದು ಕಾಗದಗಳು ಬಂದು ತಲಪೀತು. ತಾವು ಮಾಡುವಂಥಾ ಪ್ರಯತ್ನದಿಂದ ನಮಗೆ ಒಳ್ಳೇದು ಆದೀತು ಎಂಬ ನಿಶ್ಚಯವಿದೆ. ಇದಕ್ಕೆ ಮೊದಲು ಈ ಕಡೆಯಿಂದ ಮಿಾರ ಮಜಲೀಸ್ ಮುಲೆವಾರಿ ಕಮಿಾಶನ್ ಸ್ಪೆನ್ಸರ್ ಸಾಹೇಬರಿಗೆ ಅಪ್ಪಣೆ ಕೊಟ್ಟು ಇದ್ದೇವೆ. ಅವರು ವಂದು ಸಾಹೇಬರು ತಮ್ಮ ಬಳಿ ಇರುವ ಬಗ್ಗೆ ವಕೀಲನೋಪಾದಿ, ಈ ವಿಕಲ್ಪಗಳು ತೀರುವ ಪರಿಯಂತರ, ಮೊಕರರು ಮಾಡ್ಯಾರು. ಅವರು ಬಂದು ತಲಪಿದ ಬಳಿಕ,

ಅವರನ್ನು ನಮ್ಮ ಸರಿಯಾಗಿ ಕಂಡು, ದೋಸ್ತುದಾರರ ಕೆಲಸ ಒಳ್ಳೇದಾಗು ವಂಥಾದ್ದಕ್ಕೆ ಅವರು ಹೇಳಿದಂಥಾದ್ದನ್ನು ಕಬೂಲು ಮಾಡಿ, ಕೇಳಬೇಕು" ಎಂಬದಾಗಿ, ಬರೆಸಿ ಕಳುಹಿಸಿಕೊಟ್ಟರು.

ಇದಕ್ಕೆ ಜವಾಬು ಮಾಘ ಶು. ೧ರಲ್ಲು ಬರಸಿ ಕಳುಹಿದ ಕಾಗದದಲ್ಲಿ: "ತಾವು ಬರಸಿ ಕಳುಹಿದ ಕಾಗದದಲ್ಲಿ ಮುಂಬಾಯಿ ಗವರ್ನರ್ ಸಾಹೇಬ ರವರು ಜನವರಿ ಮಾಸ ೪ನೇ ತೇದಿಯಲ್ಲು ತಮಗೆ ಬರಸಿ ಕಳುಹಿದ ಕಾಗದದ ನಕಲು ನಮ್ಮ ಬಳಿಗೆ ಕಳುಹಿಸಿ ಇದ್ದರು. ಅದರಲ್ಲಿ ಟೇಪುಸುಲ್ತಾನರು ಬಹು ಮಾನಪಟ್ಟ ಇಂಗ್ರೇಜ ಕುಂಪನಿಯವರನ್ನೂ, ಅವರ ಬಂಧುಜನಗಳನ್ನೂ, ಆಕ್ರಮಿಸುವದಕ್ಕೆ, ಭಾವಿಸಿ ಇರುವದಕ್ಕೆ ವಿರುದ್ಧಾಮಾಡುವದಕ್ಕೆ ಪ್ರಯತ್ನ ಮಾಡಬೇಕು ಎಂತಾ, ಹೋದ ಸೆಪ್ಟೆಂಬರ್ ಮಾಸ ೧ನೇ ತೇದಿಯಲ್ಲಿ ನಾವು ತಮಗೆ ಬರೆದು ಕಳುಹಿದ ತಾತ್ಪರ್ಯವಾಗಿ ಡಾಂಕಿನ್ ಸಾಹೇಬರು ತಮಗೆ ಬರೆದು ಕಳುಹಿಸಿದ್ದಾರಷ್ಟೆ. ಅದೇ ಮೇರೆ ತಾವು ಪ್ರಯತ್ನ ಮಾಡೀರಿ ಎಂಬ ವಿವರಗಳಾಗಿ ಬರೆಸಿ ಕಳುಹಿದ್ದು ಸರಿಯಷ್ಟೆ. ಈ ಬಗ್ಗೆ ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬರವರ ಕಾಗದಕ್ಕೆ ದರ ಜವಾಬು ವಿವರವಾಗಿ ನಾವು ಬರಸಿ ಕಳುಹಿಸಿದ್ದೇವೆ. ಆ ವಿವರವು ಡಾಂಕಿನ್ ಸಾಹೇಬರವರ ಕಾಗದದಿಂದ ತಮಗೆ ಜಾಹೀರಾಗಿ ಇದ್ದೀತು; ತಾವು ನಮಗೆ ಬರಸಿ ಕಳುಹಿದ ಕಾಗದಕ್ಕೂ ಜವಾಬು ಬರಸಿ ಕಳುಹಿಸಿದ್ದೇವೆ. ಅದು ತಮ್ಮ ಬಳಿಗೆ ಬಂದು ತಲಪಿ ಇದ್ದೀತು. ಮೇಲಾಗಿ ಮಹಾರಾಜಶ್ರೀ ಸರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದುರವರು ಈ ಕಡೆಗೆ ಬಂದು ಇದ್ದಾಗ್ಯೆ, ನಾವು ಕುಂಪನಿ ಕೆಲಸದ ಮೇಲೆ ಮೆಹನತ್ತು ಮಾಡಿದಂಥಾದ್ದು ಸಾಹೇಬ ಜನರ ಕಡೆಯಿಂದ ತಮಗೆ ಜಾಹೀರಾಗಿ ಉಂಟಷ್ಟೆ. ಅದಕ್ಕಿಂತಲೂ ಹೆಚ್ಚಾಗಿ ಈಗ ನಮ್ಮ ಸರ್ವ ಶಕ್ತಿಯಿಂದ ನಮ್ಮಿಂದ ಆಗುವಷ್ಟು ನಾವು ತನು ಮನ ವಂಚನೆ ಇಲ್ಲದೆ, ಮೆಹನತ್ತು ಮಾಡಿ, ಸಹಾಯ ಮಾಡಬೇಕು ಎಂಬ ಅಪೇಕ್ಷೆ ಸಂತೋಷ ನಮ್ಮ ಮನಸ್ಸಿನಲ್ಲಿ ಬಹಳ ಇದೆ. ಈ ಬಗ್ಯೆ ಜನರಲ್ ಸ್ಟೋಯರ್ಟ್ ಸಾಹೇಬರವರು ಇಲ್ಲಿಗೆ ಬಂದಮೇಲೆ, ನಾವು ಕುಂಪನಿ ಕೆಲಸದಲ್ಲಿ ಮೆಹನತ್ತು ಮಾಡುವಂಥಾದ್ದನ್ನು ಅವರ ಕಾಗದಗಳಿಂದ ತಮಗೆ ಜಾಹೀರು ಆದೀತು. ಮೇಲಾಗಿ ಈಗ ತಾವು ಬರೆಸಿ ಕಳುಹಿಸಿ ಇರುವ ಕಾಗದದಲ್ಲಿ, ಯುದ್ಧ ಮಾಡು ವದಕ್ಕಿಂತಾ ಮುಂಚೆ ಟೇಪುಸುಲ್ತಾನರ ಸೀಮೇಲಿ ಹೋಗಿ ಶರಾರತ್ತು

ಮಾಡದೆ ಇರಬೇಕೆಂಬದಾಗಿ ಬರೆಸಿ ಇದ್ದದ್ದು ಸರಿಯಷ್ಟೆ. ಈ ಬಗ್ಯೆ ಬಹು ಮಾನವಾದ ಇಂಗ್ರೇಜ ಕುಂಪನಿ ಬಹಾದ್ದುರ ಸರಕಾರದ ದೋಸ್ತಿ ನಮಗೆ ಫಲಿಸಿದಾರಭ್ಯದಿಂದಾ ಇಂದಿನವರಿಗೆ ಕುಂಪನಿ ಸರಕಾರದ ಹುಕುಂ ಮೇರೆ ಹೆಚ್ಚು ಕಡಿಮೆ ಇಲ್ಲದೆ ನಡದುಬಂದು ಇರುವದರಿಂದ, ಇನ್ನುಮುಂದೆಯೂ ಕುಂಪನಿ ಹುಕುಮ್ಮಿನ್ನು ಮಿಾರಿ ನಡೆಯುಲಿಕ್ಕೆ ಇಲ್ಲಾ" ಎಂಬದಾಗಿ, ಬರೆಸಿ ಕಳುಹಿದರು.

ಆ ಬಳಿಕ ಮುಂಬಾಯಿ ಗವರ್ನರ್ ಜನಾಟನ್ ಡಾಂಕಿನ್ ಸಾಹೇಬ ರವರು ಪುಷ್ಯ ಬ. ೪ರಲ್ಲು ಬರೆಸಿ ಕಳುಹಿದ ಕಾಗದದಲ್ಲಿ: "ಟೀಪುಸುಲ್ತಾನರ ಸೀಮೆ ಕೆಡಿಸುವ ಬಗ್ಯೆ, ಮುಂಬಾಯಿ ಫೌಜು ತೆಗೆದುಕೊಂಡು, ರಾಜಶ್ರೀ ಜನರಲ್ ಸ್ಟೋಯರ್ಟ್ ಸಾಹೇಬ ಶಿಫಾಸಾಲಾರವರು ಮಲೆವಾರಿ ಮಾರ್ಗ ವಾಗಿ ಹೊರಟುಬರುತ್ತಾರೆ. ಇವರೂ ತಾವೂ ಕೂಡಿ ಏಕಸ್ಥರಾಗಿ ಇರಬೇಕು ಎಂಬದರಿಂದ ಬರದು ಇದ್ದೇವೆ. ಈಗ ತಮಗೆ ಪ್ರಮಾಣ ಕೊಟ್ಟು ಬರಸು ತ್ತೇವೆ. ಇವರು ಯಾವ ವೇಳ್ಯಕ್ಕೆ, ಏನು ಬೇಕು ಎಂತಾ, ಬರದು ಕಳುಹಿ ಸ್ಯಾರೋ ಅದನ್ನು ಅವರು ಬರಸಿ ಕಳುಹಿದ ಪ್ರಕಾರಕ್ಕೆ ಆಗಲೇ ಸರಂಜಾಮು ಮಾಡಿಸಿ ಕೊಡಿಸಬೇಕು. ಈ ಪ್ರಕಾರ ಮಾಡಿಸಿದರೆ, ತಮ್ಮ ಹೆಸರು ಬಹಳ ಕೀರ್ತಿಯಾಗುತ್ತದೆ. ಸರಕಾರ ಕುಂಪನಿ ಬಹಾದ್ದುರವರ ಮೆಹರ್ಬಾನಗಿ ತಮ್ಮ ಮೇಲೆ ಇದ್ದೀತು. ಇವರು ಹೇಳಿದ ಪ್ರಕಾರಕ್ಕೆ ನಡಸಿಕೊಡಬೇಕು ಎಂತಾ, ನಮಗೆ ಈ ಕೆಲಸದಲ್ಲು ಬಹಳ ಅಪೇಕ್ಷೆಯಿದೆ. ಇದರ ಬದಲಿಗೆ ವಳ್ಳಿತಾಗಿ ಬಂದೀತು. ಈ ಕೆಲಸದಲ್ಲೂ ಯಾವನೊಂದು ಕೆಲಸದಲ್ಲಿಯೂ ತಮ್ಮ ರಾಜ್ಯ ದಿಂದ ಆಗುವಂಥಾ ಸಾಹಿತ್ಯ ಮಾಡಿಸಿಕೊಟ್ಟು, ಕೆಲಸ ಅನುಕೂಲ ಮಾಡಿಸಿ ಕೊಟ್ಟಲ್ಲಿ, ತಮ್ಮ ಉಪಕಾರ ನಮ್ಮೇಲೆ ಬಹಳ ಆಗುತ್ತಿದೆ" ಎಂಬದಾಗಿ, ಬರೆಸಿ ಕಳುಹಿಸಿದ್ದರು.

ಇದಕ್ಕೆ ದರ ಜವಾಬು ಮಹಾರಾಜರವರು ಬರಸಿ ಕಳುಹಿದ ಕಾಗದದಲ್ಲಿ: "ಸರಕಾರ ಕುಂಪನಿಗೆ ಕುಮುಕು ಮದತ್ತು ಮಾಡಬೇಕೆಂಬ ಅಭಿಪ್ರಾಯ ಗಳಾಗಿ ಬರೆಸಿ ಕಳುಹಿಸಿದ್ದೀರಿ. ನಾವು ಕುಂಪನಿ ಸರಕಾರದ ದೋಸ್ತಾರರಾಗಿ ದ್ದೇವೆ. ಪ್ರಾಕು ಸರ್ ಜನರಲ್ ರಾಬರ್ಟ್ ಅಬರ್ಕ್ರಂಬಿ ಸಾಹೇಬ ಬಹಾದ್ದು ರವರ ದಿವಸಕ್ಕೆ ನಮ್ಮಿಂದ ಆಗುವಷ್ಟು ಸಕಾಯ ಮಾಡಿದ್ದೇವೆ. ಈಗಲೂ

ಅದಕ್ಕಿಂತಾ ಹೆಚ್ಚಾಗಿ ನಮ್ಮಿಂದ ಆದಷ್ಟು ಸಹಾಯ ಸಂಪತ್ತು ಮಾಡಿಯೇವು. ಈ ಬಗ್ಯೆ ಲಷ್ಕರು ತೆಗೆದುಕೊಂಡು ಜನರಲ್ ಸಾಹೇಬರು ಬಂದಲ್ಲಿ, ನಾವು ಮಾಡುವಂಥಾ ಕುಂಪನಿ ಕಾರ್ಯಗಳು, ಸಹಾಯ ಸಂಪತ್ತು ಸಹಾ, ಅವರ ಕಡೆಯಿಂದ ತಮಗೆ ಜಾಹೇರಾದೀತು " ಎಂಬದಾಗಿ ಬರೆಸಿ ಕಳುಹಿಸಿಕೊಟ್ಟರು.

ಆ ಬಳಿಕ ಜನರಲ್ ಸ್ಟ್ರೋಯರ್ಟ್ ಸಾಹೇಬರವರು ಪುಷ್ಯ ಬ. ೩೦ರಲ್ಲು ಬರೆಸಿ ಕಳುಹಿದ ಕಾಗದದಲ್ಲಿ: " ನಮಗೆ ಸಖಿ ಆದ ಮುಂಬಯಿ ಗವರ್ನರ್ ಡಾಂಕಿನ್ ಸಾಹೇಬರವರು ತಮಗೆ ಬರದಿರುವ ಕಾಗದವನ್ನು, ಈ ಕಾಗದದ ಸಂಗಡ ತಮ್ಮ ಬಳಿಗೆ ಕಳುಹಿಸುವದರಿಂದ, ನಮಗೆ ಬಹಳ ಸಂತೋಷವಾಗಿದೆ. ಆ ಕಾಗದದಲ್ಲಿ ಬರದು ಇರುವ ಪ್ರಕಾರ, ಕಾರ್ಯಗಳ ನಡಸುವ ಬಗ್ಯೆ, ನಾವು ಮಲೆಯಾಳಕ್ಕೆ ಬಂದು ಇದ್ದೇವೆ ಎಂಬದಾಗಿ, ತಮಗೆ ಸಮಾಚಾರ ತಿಳಿಸುವದರಿಂದಾ ನಮಗೆ ಅತ್ಯಂತ ಸಂತೋಷವಾಗಿದೆ. ಈಗ ತಾವು ವದಗಿಸಿಕೊಂಡಂಥಾ ಉಪಕಾರಗಳು ಒಂದು ಕ್ಷಣದಲ್ಲಿ ತಮ್ಮ ಸ್ವತಾ ಪ್ರಯತ್ನದಿಂದಾ ತಯಾರುಮಾಡಿ ಕೊಟ್ಟಂಥಾದ್ದು ಜನರಲ್ ಹಾಟ್ಲಿ ಸಾಹೇಬರವರ ಮುಖ ವಚನದಿಂದಾ ತಿಳುದು, ಬಹಳ ಸಂತೋಷವಾಯಿತು. ಬಹುಮಾನವಾದ ಕುಂಪನಿ ಸರಕಾರಕ್ಕೆ ಸಹಾಯವಾಗಿ ಇರುವಂಥಾ ಆಗ್ರಹ ತಮಗೆ ಇದೆ ಎಂಬದಾಗಿಯೂ, ಏನಾದರೂ ಹುಕುಂ ಮಾಡಿದ ಪ್ರಕಾರ, ಒಂದಾದರೂ ತಪ್ಪದೆ, ವಿಶ್ವಾಸವಾಗಿ ನಡಸುವಂಥವರು ಎಂಬದಾಗಿಯೂ, ನಾವು ಹಲವು ಪ್ರಕಾರದಲ್ಲು ಬಹಳ ದಿನದಿಂದ ಕೇಳಿ ಇದ್ದೇವೆ. ಈ ಪ್ರಕಾರವಾಗಿ ಇರುವ ತಮ್ಮ ಮರ್ಯಾದೆಯೂ ತಮ್ಮ ಮನೋಬುದ್ಧಿಯೂ ತಮ್ಮ ದೃಢಚಿತ್ತವೂ ಸಾಕ್ಷಿ ಇರಲಿಕ್ಕಾಗಿ, ತಮ್ಮ ರಾಜ್ಯಕ್ಕೆ ಸುಖಸಂತೋಷದಲ್ಲಿ ಇರಿಸಲಾದೀತು. ತಮ್ಮ ಸಂಸ್ಥಾನಕ್ಕೆ ಟೇಪುಸುಲ್ತಾನರನ್ನು ಬಹಳ ವರ್ಷದಿಂದ ಅತ್ಯಂತ ಬಹಳ ದೊಡ್ಡ ದುಷ್ಮಾನರಾಗಿ ಇರುವಂಥಾದ್ದು ಯಾವತ್ತು ತಮಗೆ ಬರಸಿಕಳುಹಿಸ ಬೇಡವಷ್ಟೆ. ಟೇಪುಸುಲ್ತಾನರು ಬಹುಮಾನವಾದ ಇಂಗ್ರೇಜ ಕುಂಪನಿಗೂ ಇವರ ಬಂಧುಗಳಿಗೂ, ಅವರವರ ಗುಣದೋಷಗಳು ಇಲ್ಲದಹಾಗೆ, ಉಪದ್ರಪಡಿಸುವ ದಾರಿ ಉಂಟುಮಾಡಬೇಕು ಎಂಬದಾಗಿ, ಕೆಲದಿವಸದ ಮುಂಚೆ ಯೋಚನೆ ಮಾಡಿಕೊಂಡು ಇದ್ದಾರೆ. ಇದರ ತಕ್ಕಂಥಾ ನ್ಯಾಯವಾಗಿ ನಡಸುವ ಬಗ್ಯೆ, ಈಗ ಪ್ರಯತ್ನಮಾಡಿದ್ದು, ಇನ್ನು ಇದಕ್ಕಿಂತಾ ಹೆಚ್ಚಾಗಿ

ತಾವು ಮಾಡಿಸೀರಿ ಎಂಬದಾಗಿ, ನಮಗೆ ನಿಶ್ಚಯವುಂಟು. ಅಷ್ಟರ ಮಧ್ಯೆ ಈಗ ಯೋಚನೆಮಾಡಿ ಇರಿಸುವ ದಾರಿಯಲ್ಲಿ ನಡದ ಕಾರ್ಯಗಳು ಯಾವತ್ತು ನಿಶ್ಚಯಮಾಡಿ ಇಟ್ಟ ಪ್ರಕಾರ, ಸಫಲವಾಗಿ ನಡಸುವ ಬಗ್ಯೆ ಯುಟಾಪು ಸಾಹೇಬರು, ಮಾವಿನಿ ಸಾಹೇಬರು ಸಹಾ ತಮ್ಮಿಂದ ಕರಾರುಮಾಡಿ ಇರುವ ಪ್ರಕಾರ, ಅತಿ ಜಾಗ್ರತೆಮಾಡಿ ಇರುವಂಥಾದ್ದು ತಮ್ಮಿಂದ ಆದಂಥಾ ಪ್ರಯತ್ನಗಳು ತಾವು ಮಾಡಿಸತಕ್ಕದ್ದು. ಈ ಪ್ರಕಾರ ತಾವು ಮಾಡಿಸುವಂಥಾ ಸಹಾಯಗಳು ಅದರ ಸಲವಾಗಿ ತಾವು ಖರ್ಚುಮಾಡುವಂಥಾದ್ದು ಸಮಗ್ರವಾಗಿ ತಮಗೆ ಲಭಿತವಾದೀತು. ಇದಲ್ಲದೆ ಈ ಸಮಯದಲ್ಲಿ ಬಹುಮಾನವಾದ ಕುಂಪನಿ ಅವರ ಬಂಧುಗಳು ಸಹಾ ಕೂಡಿ ನಡಸುವಂಥಾ ಕಾರ್ಯಗಳು ತಮ್ಮ ಸಹಾಯ ದಿಂದಾ ಸಫಲವಾಗಿ ಬಂತು ಎಂಬದಾಗಿ, ಬಂಗಾಳದ ಬಹುಮಾನವಾದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬ ಬಹಾದ್ದುರವರಿಗೆ ಶೃತಪಡಿಸುವದರಲ್ಲಿ ನಮಗೆ ಅತ್ಯಂತ ಅಗತ್ಯವಾಗಿ ಇರುವ ಸಂತೋಷ ಉಂಟಾಗಿ ಇದೆ ಎಂಬದಾಗಿ, ತಾವು ವಿಚಾರಿಸಿ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು ಇರಬೇಕು. ಈ ಸಹಾಯವಲ್ಲದೆ ಆನೆಗಳನ್ನೂ, ಯತ್ತು ಗಳನ್ನೂ ಎಷ್ಟಾದರೂ ಸಿಕ್ಕಿದಷ್ಟು ಆಗಮಾಡಿಸಿಕೊಡಬೇಕು. ಸ್ವಲ್ಪ ದಿವಸದಲ್ಲಿ ಇಂಗ್ರೇಜ ಲಷ್ಕರು ತಮ್ಮ ಸೀಮೆ ದಾರಿಗಾಗಿ ಹೋಗಬೇಕೆಂಬದಾಗಿ ನಿಶ್ಚಯ ಮಾಡಿರುವುದರಿಂದ, ತಮ್ಮ ನಮ್ಮ ಭೇಟಿ ಆಗುವ ಸಂಗತಿಯಿಂದಾ, ತಮ್ಮ ಸತ್ಯದಿಂದಾ ಕೆಲವು ಸಮಾಚಾರಗಳು ಯಾವತ್ತು ಹೇಳಿಕೊಳ್ಳುವ ಬಗ್ಯೆ ಸಮಯ ಉಂಟಾದೀತು ಎಂಬದಾಗಿ, ನಾವು ಅತ್ಯಂತ ಸಂತೋಷದಿಂದ ಇದ್ದೇವೆ" ಎಂಬದಾಗಿ, ಬರೆಸಿಕಳುಹಿದರಿಂದ ಇದಕ್ಕೆ ದರ ಜವಾಬಾಗಿ—

ಮಹಾರಾಜರವರು ಮಾಘ ಶು. ೩ರಲ್ಲು ಬರೆಸಿಕಳುಹಿದ ಕಾಗದದಲ್ಲಿ: ಡಾಂಕಿನ್ ಸಾಹೇಬರವರು ಬರಸಿಕಳುಹಿದ ಕಾಗದವು ತಮ್ಮ ಕಾಗದದ ಸಂಗಡ ಬಂದು ತಲಪಿತು. ಅದಕ್ಕೆ ಜವಾಬು ಬರೆಸಿ, ಇದೇ ಕಾಗದದ ಸಂಗಡ ಕಳುಹಿಸಿದ್ದೇವೆ. ಅದನ್ನು ಅಲ್ಲಿಗೆ ತಲಪಿಸಬೇಕು. ತಾವು ಯಾವಾಗ ಇಲ್ಲಿಗೆ ಬಂದೀರೋ, ಯಾವಾಗ ತಮ್ಮ ಭೇಟಿ ಲಭಿಸೀತೋ, ತಾವು ನಾವು ಕೂಡಿ ಯಾವಾಗ ಮೊಖ್ಖಾ ಪ್ರಸಂಗಿಸಿಯೇವೊ ಎಂಬ ಅಪೇಕ್ಷೆಯಿಂದ, ತಮ್ಮ ದಾರಿ ನೋಡುತ್ತಾ ಇದ್ದೇವೆ. ಮೇಲಾಗಿ ಕುಂಪನಿ ಕೆಲಸದ ಬಗ್ಯೆ ಯತ್ತು, ಆನೆ

ಸಹಾ ಸಿಕ್ಕಿದಷ್ಟು ಕೊಡಿಸಬೇಕು ಯಂತಾ ಬರೆದ ಬಗ್ಯೆ, ಇಲ್ಲಿ ನಮ್ಮ ಬಳಿಯು ಹತ್ತುಹದಿನೈದು ಆನೆ ಇತ್ತು. ಅದರಲ್ಲಿ ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬರು ಬರೆಸಿ ಕಳುಹಿದ ಮೇರೆ ಮಿಸ್ಟರ್ ಮೆಕಾನೋಕಿ ಸಾಹೇಬರಿಗೆ ಐದು ಆನೆ ಕೊಟ್ಟು ಇದ್ದೇವೆ. ಆ ಬಳಿಕ ನಮಗೆ ದೋಸ್ತುದಾರರಾದ ಇಂಗ್ರೇಜ ಸರದಾರರಿಗೆ ಕೆಲು ಆನೆ ಕೊಟ್ಟುಹೋಯಿತು. ಬಾಕಿ ನಿಂತ ಆನೆಯಲ್ಲಿ ಸಣ್ಣ ಮರಿಯಾಗಿ ಕುಂಪನಿ ಚಾಕ್ರಿಗೆ ಬಾರದಂಥಾ ಎರಡುಮೂರು ಮರಿ ಆನೆ ಇಲ್ಲಿ ಮಡಗಿಕೊಂಡು ಇದ್ದದ್ದರಲ್ಲಿ ದೊಡ್ಡದಾಗಿ ಇದ್ದ ಐದು ಆನೆ ಯನ್ನು ಕೆಲವು ದಿವಸದಲ್ಲಿ ಜನರಲ್ ಹಾಟ್ಲೆ ಸಾಹೇಬರವರ ಬಳಿಗೆ ಕಳುಹಿಸಿ ದ್ದೇವೆ. ಇನ್ನು ಕುಂಪನಿ ಕೆಲಸಕ್ಕೆ ಆಗುವಂಥಾ ದೊಡ್ಡ ಆನೆ ಹಾಜರು ಇಲ್ಲ. ಇದಲ್ಲದೆ ಯತ್ತಿನ ವಿಷಯವಾಗಿ ಬರೆದ ಬಗ್ಯೆ, ನಮ್ಮ ಸೀಮೆಗೆ ಮೂರು ದಿಕ್ಕು ದುಷ್ಮಾನರ ಸೀಮೆ ಆದ್ದರಿಂದ, ನಮ್ಮ ಸೀಮೆಗೆ ಒಂದೇ ತೃಣ ಬಾರದಂತೆ, ಪಥಮಾರ್ಗವೆಲ್ಲಾ ಈಗ ಏಳು ಎಂಟು ತಿಂಗಳಿಂದ ಬಂದುಮಾಡಿ, ಬಹಳ ಮುಷ್ಕೀಲು ಮಾಡಿದ್ದಾರೆ. ನಮ್ಮ ಸೀಮೆಗೆ ತಲಚೇರಿ ಮಾರ್ಗ ಒಂದು ಸರಾಗವಿದೆ. ಅಲ್ಲಿಗೆ ಇಲ್ಲಿಂದ ಯತ್ತುಗಳು ಹೋಗುವದಲ್ಲದೆ, ಅಲ್ಲಿಂದ ಇಲ್ಲಿಗೆ ಬರುವದಿಲ್ಲ. ಇದರಮೇಲೆ ವೀರರಾಜೇಂದ್ರಪೇಟೆ ಮುಂತಾದ ಪೇಟೆ ವರ್ತಕರ ಬಳಿ ಇದ್ದ ಯತ್ತು ಕರುಗಳು ಎಲ್ಲಾ ಅವರವರು ತೆಗೆದುಕೊಂಡು ಹೋಗಿ, ಬಾಡಿಗೆ ಬಗ್ಯೆ ಕುಂಪನಿ ಸರಕಾರದಲ್ಲು ಚಾಕ್ರಿಗೆ ನಿಂತು ಇದ್ದಾರೆ. ಇದರಮೇಲೆ ನಾಡಮುಳ ರೈತರ ಆರಂಭದ ಬಗ್ಗೆಯೂ, ತಮ್ಮ ತಮ್ಮ ಚಲುವಿಗೆ ಗಟ್ಟದ ಕೆಳಗೆ ಹೋಗಿ, ಉಪ್ಪು ಮುಂತಾದ್ದು ತಂದುಕೊಳ್ಳುವ ಬಗ್ಗೆಯೂ, ವಕ್ಕಲು ಒಂದಕ್ಕೆ ಮಂದಾದು ಯರಡು ಆರು ಯತ್ತು ಕರು ಇದೆ. ಇದಕ್ಕೆ ನಾವು ಕುಂಪನಿ ಸರಕಾರಕ್ಕೆ ಕೊಡುವ ಬಗ್ಯೆ ಒಪ್ಪಿಕೊಂಡು ಇರುವ ಅಕ್ಕಿ ಯನ್ನು ಬರಕೊಟ್ಟದ್ದಕ್ಕೆ ದ್ವಿಗುಣವಾಗಿ ಜಮಾಯಿಸಬೇಕುಯಂತಾ ನಾವು ಯೋಚಿಸಿ, ರೈತರಿಗೆ ಅಕ್ಕಿ ಕ್ರಯದ ಹಣ ಕೊಟ್ಟು, ಸೀಮೆಯಿಂದ ಬರತಕ್ಕ ಹಣಕ್ಕೂ ಅಕ್ಕಿಯನ್ನೇ ಕೊಡಬೇಕೆಂತಾ, ನಾವು ಜರೂರು ಮಾಡುವದರಿಂದಾ, ವೀರರಾಜೇಂದ್ರಪೇಟೆ ಉಗ್ರಾಣಕ್ಕೆ, ದಿವಾರಾತ್ರಿಯಲ್ಲು ಪುರಸತ್ತು ಇಲ್ಲದೆ, ಅಕ್ಕಿ ಹೊರುತ್ತಾರೆ. ಈ ಸಮಯದಲ್ಲಿ ರೈತರ ಬಳಿಯು ಇರುವ ಯತ್ತುಗಳ ನಾವು ತೆಗದರೆ, ಕುಂಪನಿ ಸರಕಾರಕ್ಕೆ ಜಮಾಯಿಸುವ ಅಕ್ಕಿ ಜಲ್ದು ಬಾರದೆ,

ತಾಮಸವಾದೀತು. ಇದುಕಾರಣ, ನಮ್ಮ ಮನಸ್ಸಿನಲ್ಲಿ ಇರುವ ಪ್ರಕಾರ, ಕುಂಪನಿ ಸರಕಾರಕ್ಕೆ ಕೊಡತಕ್ಕ ಬಗ್ಯೆ, ಹದಿನ್ಯೆದುಸಾವಿರ ಭಟ್ಟಿ ಅಕ್ಕಿ ಜಮಾ ಆದಬಳಿಕ, ವಿಚಾರಿಸಿ ತಲಾಸು ಮಾಡಿ, ಸಿಕ್ಕಿದಷ್ಟು ಎತ್ತು ನಾವು ವಂಚನೆ ಇಲ್ಲದೆ ಕುಂಪನಿ ಚಾಕ್ರಿಗೆ ಹಾಜರು ಮಾಡಿಯೇವು. ಬಂಗಾಳದ ಮಹಾರಾಜ ಶ್ರೀ ಸರ್ ಜನರಲ್ ರಾಬರ್ಟ್ ಆಬರ್‍ಕ್ರಂಬಿ ಸಾಹೇಬ ಬಹಾದ್ದುರವರ ದಿವಸ ದಲ್ಲಿ ನಾವು ಕುಂಪನಿ ಕೆಲಸ ಎಷ್ಟು ಮಾಡಿದ್ದೇವೋ, ಅದಕ್ಕಿಂತಾ ಹೆಚ್ಚಾಗಿ ಈಗ ನಮ್ಮಿಂದ ಆಗುವಷ್ಟು ಪ್ರಯತ್ನಪಟ್ಟು ಕುಂಪನಿ ಸರಕಾರಕ್ಕೆ ಸಹಾಯ ಮಾಡಬೇಕು ಎಂಬ ಅಪೇಕ್ಷೆ ಬಹಳ ಇದೆ. ಈ ಬಗ್ಯೆ ತಾವು ಇಲ್ಲಿಗೆ ಬಂದ ಮೇಲೆ, ಕುಂಪನಿ ಸರಕಾರದ ಕಾರ್ಯ ನಾವು ಮಾಡುವಂಥಾದ್ದು ತಾವು ಕಾಣುವಂಥಾದ್ದಕ್ಕೆ ವಿಶೇಷ ಬರೆಸಿ ಕಳುಹತಕ್ಕದ್ದು ಏನು ಇದೆ ಎಂತಾ ಬರೆಸಿ ಕಳುಹಿಸಿಕೊಟ್ಟರು.

ಆ ಬಳಿಕ ಜನರಲ್ ಹಾಟ್ಲಿ ಸಾಹೇಬರವರು ಪುಷ್ಯ ಶು. ೬ರಲ್ಲು ಬರೆಸಿ ಕಳುಹಿದ ಕಾಗದದಲ್ಲಿ: "ಕೊಡಗು ಸೀಮೆಯಲ್ಲಿ ನಮಗೆ ಕೊಡುವ ಬಗ್ಯೆ ಕರಾರುಮಾಡಿ ಇರುವ ಅಕ್ಕಿ ಜತೆ ಮಾಡುವುದಕ್ಕೆ ಮುಂಚೆ, ದಂಡು ಇದ್ದ ಠಾವಿನಲ್ಲಿ ಮನೆ ಕಟ್ಟುವ ಹಾಗೆ ಆ ಬಗ್ಯೆ ಸಾಮಾನು ಶೇಕರ ಮಾಡುವ ಬಗ್ಯೆಯೂ ಈ ಇಂಜನೇರು ಕೇಪ್ಟನ್ ಜಾನ್‌ಸನ್ ಸಾಹೇಬರು ಮೋರ್ಚೆ ಸಾಮಾನು ತಯಾರುಮಾಡುವಂತೆ ಸಹಾ ಹುಕುಂ ಕೊಟ್ಟು ಇದ್ದೇವೆ. ಅವರಿಗೆ ಬೇಕಾದ ಸಾಮಾನುಗಳನ್ನೂ ಆಳುಗಳನ್ನೂ ಕೂಡಿಸಿಕೊಡಬೇಕು, ಎಂಬ ವಿವರವಾಗಿ, ಬರಸಿ ಕಳುಹಿದಲ್ಲಿ, ಅದಕ್ಕೆ ಜವಾಬಾಗಿ, ಮಹಾರಾಜರವರು ಪುಷ್ಯ ಶು. ೧೧ರಲ್ಲು ಬರೆಸಿ ಕಳುಹಿದ ಕಾಗದದಲ್ಲಿ: "ತಾವು ಬರೆಸಿ ಕಳುಹಿದ ಮೇರೆ ಬೇಕಾದ ಸಾಮಾನು, ಕಾಮಗಾರಿ ಕೆಲಸಾ ಮಾಡುವ ಬಗ್ಯೆ ಆಳುಗಳ ಸಹಾ, ದೊರಕಿಸಿಕೊಟ್ಟು, ನೀವು ಬರದ ಮೇರೆ ಈಗ ಜಾನ್‌ಸನ್ ಸಾಹೇಬರ ವಶಕ್ಕೆ ಇನ್ನೂರ ಮೂವತ್ತ್ಯೆದು ಜನರನ್ನು ಕೊಡಿಸಿದ್ದೇವೆ, ಇನ್ನು ಸಿಕ್ಕಿದಷ್ಟು ಜನ ಕೊಡಿಸುತ್ತೇವೆ. ಕುಂಪನಿ ಚಾಕ್ರಿ ಬಗ್ಯೆ ಐದು ಆನೆಯನ್ನು ಫಾರ್ಶಿ ಬೇಲಾಸನ ಸಂಗಡ ನಿನ್ನೆ ದಿನ ತಮ್ಮ ಬಳಿಗೆ ಕಳುಹಿಸಿ ಇದ್ದೇವೆ" ಎಂಬ ದಾಗಿ, ಬರೆಸಿ ಕಳುಹಿಸಿಕೊಟ್ಟರು.

ಆ ಬಳಿಕ ಯುಟಾಪು ಸಾಹೇಬರ ಮಾವಿನಿ ಸಾಹೇಬರ ಸಂಗಡ ನೀವು

ಹೇಳಿ ಬರಸಿಕೊಟ್ಟ ಮೇರೆ ಅಲ್ಲದೆ, ಅಧಿಕವಾಗಿ, ಏನು ಸಾಮಾನು ಸಿಕ್ಕೀತು ಯಂತಾ, ಜನರಲ್ ಹಾಟ್ಲಿ ಸಾಹೇಬರು ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬು ಪುಷ್ಯ ಬ. ೧೦ರಲ್ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಮಿಸ್ಟರ್ ಯುಟಾಪು ಸಾಹೇಬರೂ ಕೇಪ್ಟನ್ ಮಾವಿನಿ ಸಾಹೇಬರಿಗೆ ಸಹಾ, ನಾವು ಬರಸಿಕೊಟ್ಟ ಕಾಗದದಲ್ಲಿ: ರಾತಲು ಒಂದಕ್ಕೆ ರೂಪಾಯಿ ತೂಕ ನಾಲ್ವತ್ತು, ಇಂಥಾ ರಾತಲು ಎರಡಕ್ಕೆ ಪಕ್ಕಾ ಸೇರು ಒಂದು, ಇಂಥಾ ಪಕ್ಕಾ ಸೇರು ಅರುವತ್ತಕ್ಕೆ ಭಟ್ಟಿ ಒಂದು, ಇಂಥಾ ಭಟ್ಟಿಯಲ್ಲಿ ಏಳು ಸಾವಿರ ಭಟ್ಟಿ ಅಕ್ಕಿಯನ್ನು ಕುಂಪನಿ ಸರಕಾರಕ್ಕೆ ಮೂರು ತಿಂಗಳ ಒಳಗೆ ಸಂದಾಯ ಮಾಡಿ ಕೊಡುತ್ತೇವೆ ಎಂಬದಾಗಿ, ಬರಸಿ ಕೊಟ್ಟು ಇರುವುದು ಸರಿಯಷ್ಟೆ. ಆ ಬಗ್ಗೆ ಏಳುಸಾವಿರ ಭಟ್ಟಿ ಅಕ್ಕಿಯು ಈವರೆಗೆ ವೀರರಾಜೇಂದ್ರಪೇಟೆ ಮೋತಿಖಾನೆ ಯಲ್ಲಿ ಹಾಜರು ಇದೆ. ಈ ಅಕ್ಕಿ ತಾವು ಯಾವಾಗ ಕೇಳಿದಾಗ್ಯೂ, ಆ ಕ್ಷಣ ನಾವು ಕೊಡಿಸಿಕೊಟ್ಟೇವು. ಇದಲ್ಲದೆ ಇನ್ನು ಏಳೆಂಟುಸಾವಿರ ಭಟ್ಟಿ ಅಕ್ಕಿ ಯನ್ನು ಯೇನಾ ಪ್ರಯತ್ನದಿಂದಾದರೂ ಜಮಾಯಿಸಿ, ಇಂಗ್ರೇಜ ಬಹದ್ದೂರ ಕುಂಪನಿ ಸರಕಾರಕ್ಕೆ ಒಟ್ಟು ಹದಿನೈದುಸಾವಿರ ಭಟ್ಟಿ ಅಕ್ಕಿಯನ್ನು ಇಂದಿಗೆ ತಿಂಗಳು ವಳಗೆ ಕೊಡಬೇಕೆಂಬದಾಗಿ ನಮ್ಮ ಮನಸಿನಲ್ಲಿ ಯೋಚಿಸಿ, ಈಗ ಯೇಳೆಂಟುಸಾವಿರ ಭಟ್ಟಿ ಅಕ್ಕಿಗೆ ಕೊಡತಕ್ಕ ಕ್ರಯವನ್ನುಕೊಟ್ಟು ಏವರಾ ಮಾಡಿದ್ದೇವೆ. ಈ ಅಕ್ಕಿಯನ್ನು ವೀರರಾಜೇಂದ್ರಪೇಟೆ ಉಗ್ರಾಣದಲ್ಲಿ ಕೂಡಿಸಿ, ಇಂಗ್ರೇಜ ಲಷ್ಕರು ಇಲ್ಲಿಗೆ ಬಂದು, ಮುಂದೆ ಕೂಚಾಗುವದರ ವಳಗೆ, ಇಂಗ್ರೇಜ ಸರಕಾರಕ್ಕೆ ಒಪ್ಪಿಸಬೇಕು ಎಂಬದಾಗಿ, ನಾವು ನಿಶ್ಚಯಮಾಡಿ ಇದ್ದೇವೆ. ಈ ಬಗ್ಗೆ ಹದಿನೈದುಸಾವಿರ ಭಟ್ಟಿ ಅಕ್ಕಿಯನ್ನು ಒಪ್ಪಿಸಿ, ಇದರ ಮೇಲೆ ಮತ್ತೂ ಸಿಕ್ಕಿದಷ್ಟು ಮೆಹನತ್ತು ಮಾಡಿ ಕೂಡಿಸ್ಯೇವು. ಉಳಿಕೆ ವಿದಳ ಮುಂತಾದ ಸಾಮಾನು ನಮ್ಮ ರಾಜ್ಯದಲ್ಲಿ ಬೆಳೆಯುವುದಿಲ್ಲಾ. ಪರ ತಾಲೂಕಿ ನಿಂದ ಬರಬೇಕು ಎಂಬದು ತಾವು ಬಲ್ಲಿರಿ. ಈ ಬಗ್ಯೆ ನಮ್ಮ ಸೀಮೆಗೆ ಮೂರು ದಿಕ್ಕು ದುಷ್ಮಾನರ ಸೀಮೆ ಆದ್ದರಿಂದಾ ಈ ಕಡೆಗೆ ಒಂದು ತೃಣ ಬಾರದಂತೆ, ಟೀಪುಸುಲ್ತಾನರು ಗಡಿ ಗಡಿಗೆಲ್ಲಾ ಜನ ಇಟ್ಟು, ಬಂದುಬಸ್ತು ಮಾಡಿದ್ದಾರೆ. ಈ ವಿವರ ಯುಟಾಪು ಸಾಹೇಬರು ಮಾವಿನಿ ಸಾಹೇಬರು ಸಹಾ ಕಂಡು ಕೇಳಿದ್ದಾರೆ. ಇದರ ಮೇಲೆ ಲಡಾಯಿ ಶುರು ಆದಬಳಿಕ, ತಮ್ಮ

ರಾಜ್ಯದಲ್ಲಿ ಇಲ್ಲದ್ದಕ್ಕೆ ತಮ್ಮ ಕಡೆ ಜನ ಕಳುಹಿಸಿ, ಪರತಾಲೂಕಿನಿಂದ ಪ್ರಯತ್ನಮಾಡಿ, ಸಂಪಾದಿಸಿ ಕೊಡಬೇಕು ಎಂತ ತಾವು ಯಾವಾಗ ಹುಕುಂ ಕೊಡುತ್ತೀರೋ, ಆವಾಗ್ಯೆ ಪರತಾಲೂಕಿಗೆ ಜನ ಕಳುಹಿಸಿ, ಸಿಕ್ಕಿದ್ದನ್ನು ತರಿಸಿ ಕೊಟ್ಟೇವು. ಹೀಗೆ ಇರುವಲ್ಲಿ ಇಂಥಾ ಸಾಮಾನು ಸಿಕ್ಕೀತು ಯಂತಾ, ಈಗಲೇ ಹ್ಯಾಗೆ ಬರೆಸಿ ಕಳುಹಿಸಬೇಕು ? ಮೇಲಾಗಿ ಜಾನ್‌ಸನ್ ಸಾಹೇಬರ ವಶಕ್ಕೆ ಇನ್ನೂರಮೂವತ್ತೈದು ಕಾಮಾಟಿ ಜನ ಮೊದಲು ಕೊಡಿಸಿದ್ದಲ್ಲದೆ, ಈಚೆಗೆ ಕೆಲು ಆಳು ಜಮಾಯಿಸಿ ನಾನೂರು ಜನ ಸುಮಾರು ಕೊಡಿಸಿದಲ್ಲಿ, ಎಂಬದಾಗಿ ನಮಗೆ ನಿಶ್ಚಯವಾಗಿ ತಿಳಿದು ಇರುವುದು ನಿಜವೇ ಸರಿ. ಇಷ್ಟು ಆಳು ಕೆಲಸವಿಲ್ಲಾ ಯಂತಾ, ಮುನ್ನೂರಸಾಲ್ಕು ಜನ ಮಡಗಿಕೊಂಡು ಉಳಿಕೆ ಜನರನ್ನು ಕುಂಪನಿ ಸರಕಾರಕ್ಕೆ ಇರುವ ಅಕ್ಕಿ ಮಾಡುವ ಬಗ್ಯೆ ಕಳುಹಿಸಿಕೊಟ್ಟರು " ಎಂಬದಾಗಿ ಬರೆಸಿ ಕಳುಹಿದರು.

ಇದಕ್ಕೆ ಜವಾಬಾಗಿ ಮಾಘ ಶು. ೨ರಲ್ಲು ಜನರಲ್ ಹಾಟ್ಲಿ ಸಾಹೇಬರು ಬರೆಸಿ ಕಳುಹಿದ ಕಾಗದದಲ್ಲಿ : " ಯುಟಾಪು ಸಾಹೇಬರು ಮಾವಿಸಿ ಸಾಹೇಬರ ಸಂಗಡ ಕರಾರುಮಾಡಿದ ಅಕ್ಕಿ ವೀರರಾಜೇಂದ್ರಪೇಟೆ ಮೋದಿಖಾನೆಯಲ್ಲಿ ಹಾಜರು ಇದೆ ಎಂಬದಾಗಿಯೂ, ಇದಲ್ಲದೆ ಏಳೆಂಟು ಸಾವಿರ ಭಟ್ಟಿ ಅಕ್ಕಿ ಸರ್ವ ಪ್ರಯತ್ನದಿಂದ ಇಂಗ್ರೇಜ ಕುಂಪನಿ ಸರಕಾರಕ್ಕೆ ಕೊಟ್ಟೇವು ಎಂಬದಾಗಿಯೂ, ದೋಸ್ತಿಯಿಂದ ಬರೆಸಿ ಕಳುಹಿದ ವಿವರ ತಿಳಿಯಲಾಯಿತು. ಈ ಕಾಗದದಿಂದ ಇಷ್ಟು ಪರಿಯಂತರ ಬಹುಮಾನವಾದ ಇಂಗ್ರೇಜ ಕುಂಪನಿ ಸರಕಾರಕ್ಕೆ ಸಹಾಯ ಮಾಡುವಂಥಾದ್ದು ತಮ್ಮ ಪ್ರಯತ್ನದಿಂದ ಸಫಲ ವಾಯಿತು. ಇನ್ನು ಒಂದು ತಿಂಗಳ ವಳಗೆ ಅಧಿಕವಾಗಿ ಸಹಾಯ ಮಾಡ ಬೇಕಾದ್ದಕ್ಕೆ ಕರಾರು ಮಾಡಿ ಇರುವ ವರ್ತಮಾನ ತಿಳಿದು, ನಮಗೆ ಅತ್ಯಂತ ಬಹಳ ಸಂತೋಷವಾಗಿ ಇದೆ. ಬಹುಮಾನವಾದ ಇಂಗ್ರೇಜ ಕುಂಪನಿಯಿಂದ ತಮ್ಮಲ್ಲಿರುವ ಸ್ನೇಹ ವಿಶ್ವಾಸ ಪರಿಪೂರ್ಣವಾಗಿ ಇರುವದರಿಂದ, ತಮಗೂ ಕುಂಪನಿಯಲ್ಲಿ ಇರುವ ಬಾಯಾಚಾರ ದೋಸ್ತಿಯೂ, ತಮ್ಮ ಶ್ರೇಯಸ್ಸೂ ನಮಗೆ ಚೆನ್ನಾಗಿ ತಿಳಿದು ಇರುವದರಿಂದ, ಈಗ ಕುಂಪನಿ ಸರಕಾರಕ್ಕೆ ಈ ಪ್ರಕಾರವಾಗಿ ಇರುವ ಅಗತ್ಯದ ಕೆಲಸಕ್ಕೆ ನಿಮ್ಮಿಂದ ಆದಂಥಾ ಪ್ರಯತ್ನಗಳು ಬೇಕಾಗಿ ಇದೆ. ಅದನ್ನು ಕಾಣಬೇಕಾಗಿ ಇರುವ ಅಗತ್ಯವಲ್ಲದೆ, ತಮ್ಮಲ್ಲಿ ಕುಂಪನಿಗೆ ಅನುಭವಿಸುವಂಥಾದ್ದು ನಿಜವೇ ಸರಿ" ಎಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಆ ಬಳಿಕ ಮಾಘ ಶು. ೮ರಲ್ಲು ಜನರಲ್ ಹಾಟ್ಲಿ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ, " ತಮ್ಮ ಬಳಿಯು ಇರುವದಕ್ಕಾಗಿ ಪರಿಚರಿಕೆ ಇರುವವ ರಲ್ಲಿ ಒಬ್ಬರ ಇರಿಸುವದಕ್ಕೆ ಬಹುಮಾನವಾದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬರವರು, ಮಳೆಯಾಳದಲ್ಲಿ ಇರುವ ಕಮಿಶನರ್ ಸ್ಪೆನ್ಸರ್ ಸಾಹೇಬರವರು ಬರಸಿ ಕಳುಹಿದ ಪ್ರಕಾರ, ತಾವು ತಿಳಿದು ಇದ್ದೀರಷ್ಟೆ. ಅದೇ ಪ್ರಕಾರ ತಮ್ಮ ಬಳಿಯು ಇರುವದಕ್ಕಾಗಿ ಸ್ಪೆನ್ಸರ್ ಸಾಹೇಬರವರು ಕೇಪ್ಟನ್ ಮಾವಿನಿ ಸಾಹೇಬರವರನ್ನ ನೇಮಕ ಮಾಡಿ ಇದ್ದಾರೆ. ಇಂಗ್ರೇಜ ಲಷ್ಕರಿಗೆ ಸೇನಾಪತಿ ಆಗಿ ಇರುವ ಲೆಪ್ಟನೆಂಟ್ ಜನರಲ್ ಸ್ಟೋಯರ್ಟ್ ಸಾಹೇಬ ಬಹದ್ದೂರರವರು ಕೇಪ್ಟನ್ ಮಾವಿನಿ ಸಾಹೇಬರವರನ್ನ ತಮ್ಮ ಬಳಿ ಇರು ವದಕ್ಕಾಗಿ ವಳ್ಳೇ ಸಂತೋಷವಾಗಿದ್ದಾರೆ. ಈಗ ಬಹುಮಾನವಾದ ಇಂಗ್ರೇಜ ಕುಂಪನಿ ಕೆಲಸಕ್ಕೆ ಬಹಳ ಅಗತ್ಯ ಇರುವದರಿಂದ, ಕೇಪ್ಟನ್ ಮಾವಿನಿ ಸಾಹೇಬ ರವರನ್ನ ಕೊಡಗಿನ ಸೀಮೆಗೆ ಈಗಲೇ ಕಳುಹಬೇಕಾಗಿ ಇದೆ. ಆ ಪ್ರಕಾರ ಮಾವಿನಿ ಸಾಹೇಬರು ನಡಕೊಳ್ಳುವದಕ್ಕೆ ಹುಕುಂನಾಮೆ ಬರೆಯುವದಕ್ಕೆ ಮೊದಲೇ ಪಯಣಾ ಮಾಡಿ ಕಳುಹಿಸಬೇಕಾಗಿರುವದರಿಂದ, ಆ ಹುಕುಂನಾಮೆ ಹಿಂದಳಿಂದ ಬಂದು ಸೇರೀತು. ಮಾವಿನಿ ಸಾಹೇಬರು ತಮ್ಮ ಬಳಿಗೆ ಬಂದು ಸೇರಿದಮೇಲೆ, ಬಹುಮಾನವಾದ ಇಂಗ್ರೇಜ ಕುಂಪನಿಯೂ, ತಾವೂ ಉಂಟಾದ ಲೇವಾದೇವಿ ಯಾವತ್ತು ಮಾವಿನಿ ಸಾಹೇಬರ ಮುಖಾಂತರ ಬೇಕಾಗಿರುವದ ರಿಂದ, ಈ ಸಮಯದಲ್ಲಿ ತಮ್ಮ ಮನಸ್ಸಿನಲ್ಲಿ ಸ್ವಲ್ಪವಾದರೂ ವಂಚನೆ ಇಲ್ಲದ, ಮಾವಿನಿ ಸಾಹೇಬರಿಗೆ ತಿಳಿಸೀರಿ ಎಂಬದಾಗಿ, ನಾವು ನಿಶ್ಚಯಮಾಡಿ ಇದ್ದೇವೆ. ಬಹುಮಾನವಾದ ಇಂಗ್ರೇಜ ಕುಂಪನಿಗೆ ಬಹಳ ಜರೂರಾಗಿ ಇರುವ ಕೆಲಸಕ್ಕೆ ತಾವು ಬಹಳ ಬಹುಮಾನವಾದ ಪ್ರಯತ್ನ ಮಾಡಿ, ಕೊಡಿಸಿಕೊಡುವಂಥಾದ್ದು ನಡದು ಬರುವಂಥಾದ್ದರಲ್ಲಿ ಮಾವಿನಿ ಸಾಹೇಬರನ್ನ ನೇಮಕಮಾಡಿದ ಪ್ರಕಾರ, ಇವರ ಸಂಗಡ ತಮ್ಮಿಂದ ಆದಷ್ಟು ಪ್ರಯತ್ನ ಮಾಡೀರಿ ಎಂಬದಾಗಿ, ಒಂದೂ ಸಂಶಯವಿಲ್ಲದೆ, ನಾವು ನಿಶ್ಚಯ ಮಾಡಿದ್ದೇವೆ. ಇಷ್ಟು ದಿವಸ ಪರಿಯಂತರವು ತಮಗೂ ಮಾವಿನಿ ಸಾಹೇಬರಿಗೂ ಅತ್ಯಂತ ಸಖಿ ಆಗಿ ಇರುವದರಿಂದ, ಈ ಸಮಯದಲ್ಲಿ ಇದಕ್ಕಿಂತ ಅಧಿಕವಾಗಿ ಬರದು ಕಳುಹಿಸುವ ಕೆಲಸವಿಲ್ಲವಷ್ಟೆ. ತಮಗೆ ತಿಳಿಸುವಂಥಾದ್ದು ಯಾವತ್ತು ಮಾವಿನಿ ಸಾಹೇಬರು ಚನ್ನಾಗಿ ತಿಳುದು

ಇದ್ದಾರೆ. ಮಾವಿನಿ ಸಾಹೇಬರು ತಮಗೆ ತಿಳಿಸುವಂಥಾದ್ದು ಯಾವತ್ತು ನಾವು ಮೊಖ್ತಾ ಕಂಡು ಹೇಳಿಕೊಳ್ಳುವ ಮೇರೆಗೆ ಆಗುತ್ತಾ ಇದೆ ಎಂಬದಾಗಿ, ನಿಶ್ಚಯುವಾದೀತು ಎಂತಾ, ನಾವು ಸಂತೋಷದಿಂದ ಇದ್ದೇವೆ" ಎಂಬದಾಗಿ, ಬರದು ಇದ್ದರು.

ಇದೇ ಮೇರೆ ಇವರನ್ನು ವಕೀಲತನಕ್ಕೆ ಕಳುಹಿಸಿ ಇದ್ದೇವೆಯಂತಾ, ಜನರಲ್ ಸ್ಟೋಯರ್ಟ್ ಸಾಹೇಬರು, ಕಮಿಷನ್ ಸ್ಪೆನ್ಸರ್ ಸಾಹೇಬರು ಸಹಾ ಬರದು ಇದ್ದರು.

ಅದೇ ಪ್ರಕಾರ ಮಾವಿನಿ ಸಾಹೇಬರವರು ವೀರರಾಜೇಂದ್ರ ವಡೆಯರವರ ಕಂಡು, ಭೇಟಿ ಆಗಿ ವಕೀಲರಾಗಿ ನಿಂತರು.

ಆ ಬಳಿಕ ಜನರಲ್ ಸ್ಟೋಯರ್ಟ್ ಸಾಹೇಬರವರು ಮಾಘ ಶು. ೩ರಲ್ಲು ಬರೆಸಿ ಕಳುಹಿದ ಕಾಗದದಲ್ಲಿ: "ತಾವು ಮಾಡಿದಂಥಾ ಪ್ರಯತ್ನಗಳು ಕೇಳಿ, ನಮಗೆ ಸಂತೋಷ ಉಂಟಾದ್ದು ಎರಡನೆ ಸರ್ತಿ ತಮಗೆ ಬರದು ಕಳುಹಿಸುವ ಸಂಗತಿ ಉಂಟಾಯಿತು. ಮೊದಲು ಯುಟಾಪು ಸಾಹೇಬರು, ಮಾವಿನಿ ಸಾಹೇಬರು, ತಾವು ಸಹಾ ಕರಾರುಮಾಡಿ ಇರುವದು, ಏಳು ಸಾವಿರ ಭಟ್ಟಿ ಅಕ್ಕಿ ಕೊಟ್ಟೇವು ಎಂಬದಾಗಿ ಅಷ್ಟೆ ನಿಶ್ಚಯ ಮಾಡಿದ್ದು. ಎರಡನೆ ಸರ್ತಿ ಜನರಲ್ ಹಾಟ್ಲೆ ಸಾಹೇಬರವರಿಗೆ ಬರದು ಕಳುಹಿದ ಕಾಗದದಲ್ಲಿ, ಏಳೆಂಟು ಸಾವಿರ ಭಟ್ಟಿ ಅಕ್ಕಿ ಕುಂಪನಿ ಸರಕಾರಕ್ಕೆ ಹೆಚ್ಚಾಗಿ ಕೊಡುತ್ತೇವೆಂಬದಾಗಿ, ಬರದು ಇದ್ದೀರಷ್ಟೆ. ಈಗ ವಿಶೇಷವಾಗಿ, ಬರುವ ತಿಂಗಳ ವಳಗೆ ಅಂತೂ ಇಪ್ಪತ್ತೈದು ಸಾವಿರ ಭಟ್ಟಿ ಅಕ್ಕಿ ಆಗುಮಾಡಿಕೊಡಬೇಕು ಎಂಬದಾಗಿ, ಪ್ರಯತ್ನಮಾಡುತ್ತಾ ಇದ್ದೀರಿ ಎಂಬದಾಗಿ, ಇರುವ ಸಂಗತಿ ನಮಗೆ ತೋರಿ ಇರುವದರಿಂದ, ತಮಗೆ ಸಿಕ್ಕಿದಷ್ಟು ಎಷ್ಟಾದರೂ ತಯಾರುಮಾಡಿಕೊಡಬೇಕು. ಅಕ್ಕಿ ಇಲ್ಲಿಂದ, ನಾಲ್ಕಾ ಕಡೆ ಗಟ್ಟ ಹತ್ತಿಸುತ್ತೇವೆಂಬದಾಗಿ, ತಾವು ಕೇಳಿ ತಿಳಿದು ಇರುವದರಿಂದ, ತಮ್ಮ ಸೀಮೇಲಿ ಸಿಕ್ಕಿದಷ್ಟು ಕುಂಪನಿಗೆ ಬೇಕಾಗಿ ಬರುವದಿಲ್ಲಾ ಯಂತಾ, ತಾವು ನಿಶ್ಚೈಸದೆ ಬಹಳ ಪ್ರಯತ್ನಮಾಡಿ ಸಿಕ್ಕಿದ್ದು ಯಾವತ್ತನ್ನು ತಯಾರುಮಾಡಿಸಿ ಕೊಡಿಸಬೇಕು. ಅದು ಎಷ್ಟಾದರೂ ಯಾವತ್ತೂ ಬಹುಮಾನವಾದ ಇಂಗ್ರೇಜ ಕುಂಪನಿ ಸರಕಾರಕ್ಕೆ ತೆಗೆದು ಕೊಳ್ಳುತ್ತಾ ಇದ್ದೇವೆ. ಆದ್ದರಿಂದ ಇಷ್ಟು ದಿನ ಪರಿಯಂತರ ಉಂಟಾದ

ಪ್ರಯತ್ನಗಳ ಹಾಗೆ ಇನ್ನೂ ಅದೇಪ್ರಕಾರ ಪ್ರಯತ್ನ ಉಂಟಾದೀತು ಎಂಬದಾಗಿ, ನಮಗೆ ನಿಶ್ಚಯ ಉಂಟು. ತಮ್ಮ ಸೀಮೆ ವಳಗೆ ಭತ್ತಾ ಕುಯಿದು ಆದ ಸಮಯ ವಾದ್ದರಿಂದಾ, ಅದು ಆದ ಕೂಡಲೇ ಸರಕಾರಕ್ಕೆ ಸಹಾಯ ಮಾಡುವದಕ್ಕಾಗಿ ಅಧಿಕ ಮನುಷ್ಯರು ಉಂಟಾದೀತು ಎಂಬದಾಗಿ, ನಮಗೆ ತೋರಿ ಇರುವದ ರಿಂದಾ, ಕಲ್ಲುಹಾಳಿ ಗಟ್ಟದ ಬುಡದಿಂದಲೂ ಲಷ್ಕರು ಇರುವ ಜಾಗದಲ್ಲಿ ಸಾಮಾನು, ಸರಂಜಾಮು, ರಸದುಗಳ ಸಾಗಿಸುವ ಬಗ್ಯೆ, ಇಲ್ಲಿ ಆಳು ಸಾಲದೆ ಇರುವದರಿಂದ, ಈ ಕಾರ್ಯಕ್ಕೆ ಕೆಲವು ಮನುಷ್ಯರ ಅಪ್ಪಣೆ ಕೊಟ್ಟು ತಾವು ಕಳುಹಿದರೆ, ಅಧಿಕವಾಗಿ ಇರುವ ಸಹಾಯ ಆಗುತ್ತಾ ಇದೆ. ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಿಲುವಾನು ಆಳು ಉಂಟಷ್ಟೆ. ಆ ಕೆಲಸ ಸ್ವಲ್ಪ ದಿವಸದಲ್ಲಿ ಕಟ್ಟಿ ಆದೀತಷ್ಟೆ. ಆ ಬಗ್ಯೆ ಆಳುಗಳು, ಸಾಮಾನು ಹೊರುವ ಬಗ್ಯೆ, ಉಂಟಾದೀತೆಂಬ ಅಪೇಕ್ಷೆಯಲ್ಲಿ ಇದ್ದೇವೆ, ಎಂಬ ವಿವರವಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬಾಗಿ ಈ ಶು. ೮ರಲ್ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಇಂಗ್ರೇಜ ಕುಂಪನಿ ಸರಕಾರಕ್ಕೆ ಕೊಡತಕ್ಕ ಬಗ್ಯೆ ಇರುವ ಅಕ್ಕಿಯನ್ನು ವೀರರಾಜೇಂದ್ರಪೇಟೆ ಮೋದಿಖಾನೆಗೆ ಸಾಗಿಸುವ ಕೆಲಸ ದಲ್ಲಿ ನಮ್ಮ ಸೀಮೆಯಲ್ಲಿ ಇರುವ ಯಾವತ್ತೂ ಜನರು ರಾತ್ರೆ ಹಗಲು ಅದೇ ಕೆಲಸದ ಮೇಲೆ ಇದ್ದಾರಾದ್ದರಿಂದಾ, ಈ ಸಮಯದಲ್ಲಿ ಗಟ್ಟದ ಕೆಳಗಣಿಂದ ರಸದು ಮುಟ್ಟಿಸುವಂಥಾದ್ದಕ್ಕೆ ಎತ್ತು ಆಳುಗಳು ಸಿಕ್ಕುವದಕ್ಕಿಲ್ಲ. ಈಗ ವೀರರಾಜೇಂಗ್ರಪೇಟೆ ಮೋದಿಖಾನೆಯಲ್ಲಿ ಇಪ್ಪತ್ತೈದು ಸಾವಿರ ಭಟ್ಟಿ ಅಕ್ಕಿ ಜಮಾ ಆಗಿ ಇದೆ. ಇದರಮೇಲೆ ಇನ್ನು ಎಂಟು ಹತ್ತು ಸಾವಿರ ಭಟ್ಟಿ ಅಕ್ಕಿ ಯನ್ನು, ಲಷ್ಕರು ಬರುವದರ ಒಳಗೆ ಜಮಾ ಮಾಡಬೇಕೆಂಬ ಪ್ರಯತ್ನದಲ್ಲು ಇದ್ದೇವೆ. ಈ ಭಾರಿ ಕೆಲಸ ತೀರಿದ ಬಳಿಕ, ಆದಷ್ಟು ಎತ್ತು ಆಳು ಜಮಾ ಮಾಡಿ ಕೊಟ್ಟೇವು" ಎಂಬ ಇತ್ಯಾದಿ ವಿವರಗಳಾಗಿ ಬರೆಸಿ ಕಳುಹಿಸಿಕೊಟ್ಟರು.

ಇದಕ್ಕೆ ಮಾಘ ಶು. ೧೨ರಲ್ಲು ಜನರಲ್ ಸ್ಟೋಯರ್ಟ್ ಸಾಹೇಬರವರು ಬರದು ಕಳುಹಿದ ಕಾಗದದಲ್ಲಿ: "ತಾವು ಬರದಂಥಾದ್ದು ನಿಜವೇ ಸರಿ ಎಂಬ ದಾಗಿ ನಮಗೆ ತೋರಿ ಇದೆ. ದಂಡಿಗೆ ಅಕ್ಕಿ ಕೊಡುವ ಬಗ್ಯೆ, ಅಲ್ಲಿ ಉಂಟಾಗುವಂಥಾ ಅಕ್ಕಿ ಯಾವತ್ತು ತಯಾರು ಮಾಡಿಸಿ ಇರಿಸಬೇಕು,

ಎಂಬದಾಗಿ, ಇರುವ ಭಾರಿ ಕೆಲಸವಾದ್ದರಿಂದಾ, ಅಕ್ಕಿ ತಲಪಿಸುವ ಬಗ್ಯೆ ಬೇಕಾದ ಆಳುಗಳನ್ನೂ ಎತ್ತುಗಳನ್ನೂ ಸದ್ಯ ಇಲ್ಲಿಗೆ ಕಳುಹಬೇಡವಷ್ಟೆ. ಅಕ್ಕಿ ಸಿಕ್ಕಿದಷ್ಟು ತಯಾರುಮಾಡುವದಕ್ಕೆ ಮೊದಲೇ ಆಳುಗಳು ಎತ್ತುಗಳು ನಮಗೆ ಜರೂರು ಇಲ್ಲಾ. ಆ ಕೆಲಸ ತಯಾರು ಆದಮೇಲೆ, ಆ ಬಗ್ಗೆ ಆಳು ಎತ್ತುಗಳನ್ನು ಬೇಕಾಗಿ ಇರುತ್ತದೆ. ಆವಾಗ್ಯೆ ತಾವು ಕೊಟ್ಟೇರಿ ಎಂಬದಾಗಿ, ನಿಶ್ಚಯುಮಾಡಿ ಇದ್ದೇವೆ. ಈಗ ವೀರರಾಜೇಂದ್ರಪೇಟೆಯುಲ್ಲಿ ಅಕ್ಕಿ ತಯಾರು ಮಾಡಿ ಇಟ್ಟು ಇರುವದೂ, ಇನ್ನು ಸ್ವಲ್ಪ ದಿವಸಜಲ್ಲಿ ಎಂಟು ಹತ್ತು ಸಾವಿರ ಭಟ್ಟಿ ಅಕ್ಕಿ ಕೊಡಬೇಕು ಎಂಬದಾಗಿ ತಾವು ನಿಶ್ಚಯುಮಾಡಿ ಇರುವದೂ, ಬರದು ಬಂದದ್ದರಿಂದಾ, ಅತ್ಯಂತ ಸಂತೋಷವಾಯಿತು. ತಾವು ಪ್ರಯತ್ನ ಮಾಡಿ ಇರುವಂಥಾದ್ದೂ, ಮಾಡುವಂಥಾದ್ದೂ ಅದು ಅತ್ಯಂತ ಬಹಳ ಬಹುಮಾನ ಎಂಬದರಿಂದಾ, ನಮ್ಮ ಮನಸ್ಸಿನಲ್ಲಿ ಬಿಟ್ಟುಹೋಗದಂತೆ ಚೆನ್ನಾಗಿ ಇಟ್ಟು ಇದ್ದೇವೆ" ಎಂಬ ವಿವರವಾಗಿ, ಬರದು ಕಳುಹಿಸಿಕೊಟ್ಟರು.

ಆ ಬಳಿಕ ಕೆಲವು ದಿವಸದ ಮೇಲೆ ಇಂಗ್ರೇಜ ಸರಕಾರದ ಲಷ್ಕರನ್ನು ತೆಗೆದುಕೊಂಡು, ಜನರಲ್ ಸ್ಟೋಯರ್ಟ್ ಸಾಹೇಬರು, ಹಾಟ್ಲಿ ಸಾಹೇಬರು ಸಹಾ, ಹೆಗ್ಗಳದ ಗಟ್ಟಾ ಹತ್ತಿ ಬಂದು ಹೆಗ್ಗಳದಲ್ಲು ಇಳುದರು. ಆ ದಂಡಿಗೆ ವೀರರಾಜೇಂದ್ರ ಒಡೆಯುರವರು ಹೋದಲ್ಲಿ, ಸಲಾಂ ಫಿರಂಗಿಗಳ ಹಾರಿಸಿ, ಯಾವತ್ತು ಸರದಾರರು ಕಂಡು ಮುಲಾಖತ್ತು ಆಯಿತು. ಅಲ್ಲಿಂದ ದಂಡು ಕೂಚಾಗಿ ಬಂದು, ವೀರರಾಜೇಂದ್ರಪೇಟೆಯುಲ್ಲು ಮೊಕ್ಕಾಂ ಆಯಿತು. ಅಲ್ಲಿ ಕುಂಪನಿ ಸರಕಾರಕ್ಕೆ ಕೂಡುವ ಉದ್ದಿಶ್ಯ ಜಮಾ ಮಾಡಿದಂಥಾ ಅಕ್ಕಿ ಮೋದಿಖಾನೆಯನ್ನು ನೋಡಿ, ಜನರಲ್ ಸಾಹೇಬರು, "ಇದರಲ್ಲು ಎಷ್ಟು ಅಕ್ಕಿ ಉಂಟು" ಎಂಬದಾಗಿ, ಕೇಳಿದಲ್ಲಿ, "ನಾಲ್ವತ್ತು ಸಾವಿರ ಭಟ್ಟಿ ಅಕ್ಕಿ ಇದೆ" ಎಂಬದಾಗಿ ಮಹಾರಾಜರವರು ಹೇಳುವಾಗ್ಯೆ, "ತಾವು ಕರಾರು ಮಾಡಿ ಕೊಂಡದ್ದಕ್ಕಿಂತಾ ಹತ್ತು ಪಾಲು ಹೆಚ್ಚಾಗಿ ಜಮಾಯಿಸಿದ್ದೀರಿ; ಇಷ್ಟು ರಸದು ಜಮಾ ಆದೀತು ಎಂಬದಾಗಿ, ನಮ್ಮ ಮನಸಿನಲ್ಲು ಇತ್ತಿಲ್ಲಾ; ಈ ಕೆಲಸ ಮತ್ತೊಬ್ಬರಿಂದಾ ಆಗಲಿಕ್ಕಿಲ್ಲಾ; ಇದು ಬಹಳ ಉಪಕಾರವಾಯಿತು" ಎಂಬದಾಗಿ, ಜನರಲ್ ಸಾಹೇಬರು ಬಹಳ ಸಂತೋಷಬಟ್ಟು, ಆ ಬಳಿಕ: "ಇಂಗ್ರೇಜ ಸರಕಾರದ ರಸದು ಯಾವತ್ತನ್ನು ಮಲೆಯಾಳದವರು ತಂದು

ಗಟ್ಟಿದ ಕೆಳಗೆ ಕಲ್ಲುಹಾಳಿ ಬಳಿಯು ಹಾಕಿದ್ದಾರೆ ; ಆ ರಸದನ್ನು ಗಟ್ಟಿದಮೇಲಕ್ಕೆ ಹೆಗ್ಗಳದ ಮೋದಿಖಾನೆಗೆ ಜಲ್ದಾಗಿ ತಂದು ಹಾಕತಕ್ಕ ಬಗ್ಯೆ, ಇನ್ನಾದರೂ ಎತ್ತು ಆಳು ಕುಮುಕು ಮಾಡಿಸಿಕೊಡಬೇಕು" ಎಂಬದಾಗಿ ಹೇಳಿದಲ್ಲಿ, "ನಾಲ್ವತ್ತನಾಲ್ಕು ಸಾವಿರ ಭಟ್ಟಿ ಅಕ್ಕಿಗೆ ಸರಿಯಾಗಿ ಜಮಾ ಮಾಡಬೇಕು ಎಂಬದಾಗಿ, ನಾವು ಯೋಚಿಸಿ ಈಗಲು ರಾತ್ರೆ ಹಗಲಾಗಿ ಸೀಮೆ ರೈತರಿಂದ ಅಕ್ಕಿ ಹೊರಿಸುತ್ತೇವೆ. ಇಂಥಾದ್ದರಲ್ಲಿ ಮಳೆಯಾಳದ ಸೀಮೆ ಯಾವತ್ತು ಜನರು ಕೂಡಿ, ಗಟ್ಟದ ಕೆಳಗೆ ತಂದು ಹಾಕಿ ಇರುವಂಥಾ, ಅಷ್ಟು ತೋರಾ ರಸದು ಯಾವತ್ತನ್ನು ನಾವು ಹ್ಯಾಗೆ ಗಟ್ಟದ ಮೇಲಕ್ಕೆ ಸಾಗಿಸಬೇಕು" ಎಂಬ ದಾಗಿ ಹೇಳಿದಲ್ಲಿ, "ತಾವು ಕುಮುಕು ಮಾಡದಿದ್ದರೆ, ರಸದು ಖರಾಬಾದೀತು. ಹ್ಯಾಗಾದರೂ ಸಾಗಿಸಿಕೊಡಬೇಕು ಎಂತಾ ಹೇಳಿದ್ದರಿಂದ, ಮೋದಿಖಾನೆಗೆ ಜಮಾಯಿಸುವಂಥಾ ಅಕ್ಕಿ ಹೇರಿ ಹಾಕುವ ಬಗ್ಯೆ ಬೇಕಾದ ಜನ, ಎತ್ತು ಸಹಾ ಬಿಟ್ಟು, ಬಾಕಿ ಎತ್ತು, ಆಳು ಯಾವತ್ತು, ಸೀಮೆ ಹೆಣ್ಣು ಗಂಡು ಜನ, ಅರಮನೆ ಪಣ್ಯದ ಜನ ಎತ್ತು ಸಹಾ, ಜಮಾಯಿಸಿ, ಗಟ್ಟದ ಕೆಳಗೆ ಕಲ್ಲುಹಾಳಿ ಬಳಿಯು ಇದ್ದಂಥಾ ರಸದನ್ನು ಹೆಗ್ಗಳಕ್ಕೆ ತಂದುಹಾಕುವಂತೆ ದೊರೆಗಳು ಅಪ್ಪಣೆ ಕೊಟ್ಟು, ಸಾಗಿಸುತ್ತಾ ಇದ್ದರು.

ಆ ಬಳಿಕ : "ದಂಡಿನಲ್ಲಿ ಇರುವಂಥಾ ಸಾಮಾನು ಹೇರುವ ಎತ್ತು, ಗಾಡಿ ಎತ್ತು ಸಹಾ, ಬಹಳ ಲಾಗರಾಗಿ ಇದೆ. ಇದರಿಂದ ಕೆಲಸ ಸಾಗುವ ದಿಲ್ಲಾ. ಈ ಎತ್ತುಗಳನ್ನು ಚರಾಯಿ ಬಗ್ಯೆ ನಿಲ್ಲಿಸಿ, ಇದಕ್ಕೆ ಬದಲು ಎತ್ತು, ರಸದು ಹೇರುವ ಬಗ್ಯೆ, ಗಾಡಿ ಬಗ್ಯೆ ಸಹಾ, ಒಳ್ಳೇ ಎತ್ತುಗಳನ್ನು ಕೊಡಿಸ ಬೇಕು" ಎಂತಾ, ಜನರಲ್ ಸಾಹೇಬರು ಹೇಳಿದರಿಂದಾ, ಮಹಾರಾಜರು ಹೇಳಿದ್ದು :

"ಲಷ್ಕರು ನಮ್ಮ ಸೀಮೆಯಿಂದ ಕೂಚಾಗಿ, ಹೋಗುವದರೊಳಗಾಗಿ ಸಿಕ್ಕಿದಷ್ಟು ಕೊಟ್ಟೇವು" ಎಂಬದಾಗಿ ಒಪ್ಪಿಕೊಂಡು, ಅರಮನೆ ಪಣ್ಯದಲ್ಲು ಇದ್ದಂಥಾ ಒಳ್ಳೆ ಒಳ್ಳೆ ಅನುವಾದಂಥಾ ಎತ್ತುಗಳು, ಸೀಮೆ ರೈತರಲ್ಲಿ ಇದ್ದಂಥಾ ಒಳ್ಳೆ ಒಳ್ಳೆ ಎತ್ತುಗಳ ತಲಾಸು ಮಾಡಿಸಿ, ಕವುದಿ, ಗೋಣಿ, ಬಿಗಿ ಬಾಲಾಸು ಸಹಾ, ತಯಾರು ಮಾಡಿಸಿ, ಆವಾಗ್ಯೆ ಜರೂರು ಸಿಕ್ಕಿದಷ್ಟು ಒಳ್ಳೆ ಅನು ವಾದ ಎತ್ತುಗಳನ್ನು ವೀರರಾಜೇಂದ್ರಪೇಟೆಯಿಂದಾ ಕುಂಪನಿ ಸರಕಾರದ

ಲಷ್ಕರಿಗೆ ಕೊಟ್ಟು ಸಂದದಕ್ಕೆ ವಕೀಲ ಮಾವಿನಿ ಸಾಹೇಬರವರ ಕೈಯು ರಶೀತಿ ತೆಗೆದುಕೊಂಡು, ಲಷ್ಕರಿನಲ್ಲು ಇದ್ದಂಥಾ ಲಾಗರಾದ ಎತ್ತುಗಳನ್ನು ಮಹಾರಾಜರವರು ತಮ್ಮ ವಶಕ್ಕೆ ತೆಗೆದುಕೊಂಡು, ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು.

ಆ ಬಳಿಕ ದಂಡು ಕೂಚಾಗಿ ಹೋಗಿ, ಕರಡಿಗೋಡಮಾಳದಲ್ಲು ಮೊಕ್ಕಾಂ ಆಗಿ ಇದ್ದಲ್ಲಿ, ಮಹಾರಾಜರವರು ದಂಡಿನ ಸಂಗಡಲೇ ಹೋಗಿ ಇದ್ದರು.

ಆವಾಗ್ಯೆ ಮಲೆಯಾಳದ ಕಡೆ ಮಾಪಿಳ್ಳೇರು ಕೂಡಿ ಬಂದು, ಕಲ್ಲುಹಾಳೆ ಬಳಿಯು ಹಾಕಿ ಇದ್ದ ಸರಕಾರದ ರಸದಿನ ಬಳಿಯು ಪಾರಾ ಇದ್ದಂಥಾ ಜನರ ಮೇಲೆ ಗುಂಡು ಹಾಕಿ, ಜಗಳಾ ಮಾಡಿ, ಕೆಲವು ರಸದನ್ನು ಲುಟಾಯಿಸಿದ್ದರಿಂದಾ, ಈ ಸಮಾಚಾರ ಜನರಲ್ ಸಾಹೇಬರು ಕೇಳಿ: " ಈ ಪ್ರಕಾರ ಮಲೆಯಾಳದವರು ಶರಾರತ್ತು ನಡಿಸಿ ಇದ್ದಾರೆ. ತಮ್ಮ ಕಡೆ ಮಂದಿ ಕಳುಹಿಸಿ, ಬಂದುಬಸ್ತು ಮಾಡಿಸಬೇಕು " ಎಂಬದಾಗಿ ಹೇಳಿದರಿಂದಾ ಮಹಾರಾಜರವರು ಮುನ್ನೂರು ಕೊಡಗು ಜನರನ್ನು ಕಲ್ಲುಹಾಳೆ ಬಳಿಗೆ ಕಳುಹಿ, ಅಲ್ಲಿ ಶರಾರತ್ತು ಮಾಡುತ್ತಿದ್ದ ತುಂಟರಿಗೆ ತಂಬಿ ಫವುಚಾಯಿಸಿ, ರಸದು ಯಾವತ್ತನ್ನು ಗಟ್ಟದ ಮೇಲಕ್ಕೆ ಸಾಗಿಸಿ, ಇನ್ನುಮುಂದೆ ತುಂಟರು ಗಟ್ಟದ ಮೇಲಕ್ಕೆ ಬಾರದಂತೆ, ಆ ಜನರನ್ನು ಅಲ್ಲೇ ಠಾಣ್ಯ ಮಡಗಿದರು. ಇದಲ್ಲದೆ: " ದಂಡಿನಲ್ಲು ಕಾಯಿಲೆ ಆಜಾರಿ ಆದಂಥಾ ಜನರನ್ನು ವೀರರಾಜೇಂದ್ರಪೇಟೆಗೆ ಕಳುಹುತ್ತೇವೆ. ಈ ಜನ ಇರುವ ಬಗ್ಯೆ ಮನೆ ಕಟ್ಟಿಸಿಕೊಟ್ಟು, ಈ ಜನಕ್ಕೆ ಬೇಕಾದ ಸಾಮಾನು ಕೊಡಿಸಬೇಕು " ಎಂತಾ ಜನರಲ್ ಸಾಹೇಬರು ಹೇಳಿದರಿಂದಾ, ಅದೇ ಮೇರೆ ವೀರರಾಜೇಂದ್ರಪೇಟೆಯಲ್ಲು ಮನೆ ಕಟ್ಟಿಸಿಕೊಟ್ಟು, ಕಾಯಿಲೆ ಜನಕ್ಕೆ ಬೇಕಾದ ಸಾಮಾನು ಯಾವತ್ತನ್ನು ಕೊಟ್ಟು, ಆರೈಕೆ ಮಾಡಿಸುವಂತೆ, ವೀರರಾಜೇಂದ್ರಪೇಟೆ ಸುಬೇದಾರನನ್ನು ನೇಮಕಮಾಡಿ ಮಡಗಿದರು.

ಆ ಬಳಿಕ: " ಕೋಟೆ ಅರಸುಗಳಿಗೆ, ಕೆಲವು ಮಂದಿ ತೆಗೆದುಕೊಂಡು, ಕೊಡಗಿನ ಸೀಮೆ ವಳನುಗ್ಗಿ, ಶರಾರತ್ತು ಮಾಡು ಎಂಬದಾಗಿ, ಟೀಪು ಸುಲ್ತಾನರು ಹೇಳಿ, ಇದ್ದಾರಂತೆ; ಆದ್ದರಿಂದಾ ಆತನ ಸಕಾಯುಕ್ಕೆ ಕೋಟೆ ಅರಸುಗಳು ಮಂದಿ ತೆಗೆದುಕೊಂಡು, ಘಟ್ಟದ ಮಾರ್ಗವಾಗಿ ಬರುವ ಸುದ್ದಿ

ಇದೆ; ಅಲ್ಲಿ ಕೆಲವು ಮಂದಿ ಇಡಬೇಕು ಎಂತಲೂ, ಕೃಷ್ಣಪ್ಪನಾಯಕನು ಮಂಜರಾಬಾದು ಕಡೆಯಿಂದ ದಂಡು ತೆಗೆದುಕೊಂಡು, ತಮ್ಮ ಸೀಮೆ ವಳ ನುಗ್ಗಿ ಬರುವ ಸಮಾಚಾರ ಇದೆಯಂತಲೂ, ಈ ಪ್ರಕಾರ ನಾಲ್ಕಾ ಕಡೆಯಲ್ಲಿ ಶರಾರತ್ತಾಗಿ, ಒಂದು ಸಮಯದಲ್ಲಿ ವಳನುಗ್ಗಿ ಬಂದರೆ, ಹೇರಳ ರಸ್ತು ಮುಸ್ತೈದೆ ಇರುವಂಥಾದ್ದು ಖಾಲಿ ಆದೀತು. ತಮ್ಮ ಕಡೆ ಜನ ಇಲ್ಲಿ ದಂಡಿನ ಸಂಗಡ ಇರಬೇಕು ಎಂಬದು ಇಲ್ಲಾ, ತಮ್ಮ ಸೀಮೆ ನಾಲ್ಕಾ ಕಡೆ ಸರಹದ್ದಿನಲ್ಲು ಮಂದಿ ಇಟ್ಟು, ಬಂದುಬಸ್ತು ಮಾಡಬೇಕೆಂತಾ" ಜನರಲ್ ಸಾಹೇಬರು ಹೇಳಿದರಿಂದಾ, ಆ ಮಾತನ್ನು ಮಹಾರಾಜರವರು ಕೇಳಿ, ಕೋಟೆ ಅರಸುಗಳು ಬರುವದಕ್ಕೆ ಯೋಚಿಸಿದ ಕುಟ್ಟದ ಮಾರ್ಗದಲ್ಲಿ ಕೆಲವು ಮಂದಿಯನ್ನು ಮಡಗಿದರು; ಯಡವನಾಡು ಮಾರ್ಗದಲ್ಲಿ ಕೆಲವು ಮಂದಿಯನ್ನು ಮಡಗಿದರು; ವೀರರಾಜೇಂದ್ರಪೇಟೆ ಮೋದಿಖಾನೆ ನಿಗಾವಾನಿ ಬಗ್ಯೆ ಮುನ್ನೂರು ಮಂದಿ ಮಡಗಿದರು.

ಈ ಮೇರೆ ಇರುತ್ತಿದ್ದಲ್ಲಿ ಅಷ್ಟು ಹೊತ್ತಿಗೆ ಬಂಗಾಳದ ಲಾರ್ಡ್ ಮಾರ್ನಿಂಗ್‌ಟನ್ ಸಾಹೇಬ ಬಹದ್ದೂರವರು ರಮಜಾನು ತಿಂಗಳು ೨೬ನೇ ಸನ್ ೧೨೧೩ನೇ ಹಿಜರಿ, ಮಾರ್ಚಿ ತಿಂಗಳು ೪ನೇ ಸನ್ ೧೭೯೯ನೇ, ಕಾಳಯುಕ್ತಿ ಸಂವತ್ಸರದ ಮಾರ್ಗಶಿರ ೨೬ನೇ ತಾರೀಕಿನಲ್ಲಿ ಬರೆಸಿ ಕಳುಹಿದ ಕಾಗದದಲ್ಲಿ: "ಇಂಗ್ರೇಜ ಬಹದ್ದೂರ ಸರಕಾರದ ದೃಷ್ಟಿ ತಮ್ಮ ದೋಸ್ತಿ ಮಡಗುವದಕ್ಕೆ ತಹಕೀಕಾಗಿ ನಿಶ್ಚಯವದೆ. ಮೊದಲು ವೇಳ್ಯದಲ್ಲು ಇಂಗ್ರೇಜ ಬಹದ್ದೂರ ಕುಂಪನಿ ಸರಕಾರದಲ್ಲಿ ಅವರ ಕೂಡಿದ ಸರಕಾರದಲ್ಲಿ ಸಹಾ, ಟೀಪುಸುಲ್ತಾನರ ಶ್ರೀರಂಗಪಟ್ಟಣದಲ್ಲಿ ಸಲ್ಲಾ ಆದಂಥಾದ್ದು ಟೀಪುಸುಲ್ತಾನರ ಕಡೆಯಿಂದ ಮುರುದ್ದರಿಂದ ಕುಂಪನಿ ಸರಕಾರದ ಸೀಮೆ, ಉಳಿಕೆ ಸೀಮೆ ಸಹಾ, ನಿಗಾವಾನಿ ಮಾಡುವಂಥಾದ್ದಕ್ಕೆ ಜರೂರು ಇದೆ ಎಂಬದಾಗಿ, ತಮಗೆ ಸುದ್ದಿ ಕೊಟ್ಟು ಇದ್ದೇವಷ್ಟೆ. ಅಂದಿನಾರಭ್ಯ ದೋಸ್ತಿ ಸವಾಲು ಜವಾಬಿನಿಂದಾ ಹಮೇಶ ಸಲ್ಲಾ ಕಾಯಂ ಇರಬೇಕು ಎಂತಾ, ಸತ್ಯವಾಗಿಯೂ ಇಂಗ್ರೇಜ ಸರಕಾರದವರು, ಇದಕ್ಕೆ ಕೂಡಿದ ಸರಕಾರದವರು ಸಹಾ, ಯತ್ನ ಮಾಡಿದೆವು. ಅದು ಯಾವತ್ತು ಅವಗುಣ ಅಲಾಭವಾಗಿ ಕಾಣಿಸಿಕೊಟ್ಟಿತು. ಕಡೆಗೆ ನಮ್ಮ ನಿಗಾವಾನಿ ಉದ್ದಿಶ್ಯ ಲಾಚಾರಿಯಿಂದಾ ಲಡಾಯಿ ಮಾಡುವದಕ್ಕೆ ಮೊಕರರು

ಆಯಿತು. ಟೀಪುಸುಲ್ತಾನರ ಕೆಲಸದ ಮೇಲೆ ಮೂರು ಸರಕಾರದ ಕಡೆಯಿಂದ ಈ ತಂಟೆ ತಪ್ಪಿಸಿದರೆ, ಇದರಿಂದ ಕೂಡಿದ ಯಾವತ್ತು ಸರಕಾರದವರಿಗೂ ಒಳ್ಳೇದು ಇದೆ ಎಂಬದಾಗಿ ಮೊಕರರು ಮಾಡಿದಂಥಾ ಇಸ್ತಿಹಾರನಾಮೆ ನಕಲು ಕೇಪ್ಟನ್ ಮಾವಿನಿ ಸಾಹೇಬರು, ತಮಗೆ ತೋರಿಸುವ ಬಗ್ಗೆ, ತರುತ್ತಾ ಇದ್ದಾರೆ. ಆದರಿಂದ ಎಲ್ಲಾ ವಿವರವು ತಿಳಿಯಬಂದೀತು. ನಮ್ಮ ಸರಕಾರಕ್ಕೆ ಕೂಡಿದಂಥಾ ಎಲ್ಲಾ ಸರಕಾರ ಎಲ್ಲಿ ಪರಿಯಂತರ ಇದೆ; ಅವರು ಎಲ್ಲರು ಬಹಳ ಬಗೆಯಿಂದಾ ನೋಡಿದಾಗ್ಯೂ, ಲಡಾಯಿ ಜೋರ್ತು ಸಂದರ್ಭ ಆಗಲಿಕ್ಕಿಲ್ಲಾ ಎಂಬದರಿಂದಾ ಲಾಚಾರಾಗಿ ಲಡಾಯಿ ಮೊಕರರು ಮಾಡಿದರು. ನಿಮ್ಮ ಲಾಭ ಲುಕ್ಸಾನ ಸಹಾ ಇಂಗ್ರೇಜ ಸರಕಾರದ ಲಾಭ ಲುಕ್ಸಾನಿನ ವಳಗೆ ಕೂಡಿ ಇದೆಯಂಬ ದೃಷ್ಟಿ ಮೇಲೆ, ತಮ್ಮಿಂದ ಆಗುವಷ್ಟು ಸಹಾಯದಿಂದ ಈಗ ಬಂದಿರುವಂಥಾ ಕೆಲಸದಲ್ಲಿ ಕೂಡಿ ಇರುವಂಥಾದ್ದು ತಮಗೆ ಮರಿಯಾದೆ ಇದೆ. ನಾವು ಯಾವ ಪ್ರಕಾರ ಬರೆಯುತ್ತೇವೋ, ಆ ಮೇರೆ ತಯಾರು ಇರುತ್ತೀರಿ ಎಂತಾ ಕೇಳಿ, ನಮ್ಮ ಮನಸ್ಸಿಗೆ ಬಹಳ ಸಂತೋಷವಾಯಿತು. ಈಗ ತಮಗೆ ತಿಳಿಯಬೇಕೆಂಬದಾಗಿ ಬರೆಯುತ್ತಾ ಇದ್ದೇವೆ. ಕೂಡಿದಂಥಾ ಸರಕಾರದ ವಳಗೆ ಈ ಇಸ್ತಿಹಾರನಾಮಾ ಬರದಂಥಾ ವಿವರದಿಂದ ನಮ್ಮ ಕೂಡಿದಂಥ ಸರಕಾರದ ವಳಗೆ ಟೀಪುಸುಲ್ತಾನರಿಗೆ ಲಡಾಯಿ ಮೊಕರರು ಆಯಿತು. ಈ ಇಸ್ತಿಹಾರನಾಮಾ ವಿಚಾರಿಸಿದರೆ ಜಾಹೀರು ಆದೀತು. ಇಷ್ಟು ಆದಾಗ್ಯೂ ಇನ್ನು ಸವಾಲು ಜವಾಬಿನ ಮಾರ್ಗ ನಿಂತು ಇಲ್ಲಾ. ಮನಸ್ಸನ್ನು ಒಳ್ಳೇ ಮಾರ್ಗದಲ್ಲು ಇಟ್ಟು, ಲಡಾಯಿ ಎಂಬ ಕೆಡಿ ನೊಂದಿಸುವಂಥಾ ಯುಕ್ತ್ಯರು ಇನ್ನು ಟೀಪುಸುಲ್ತಾನರ ವಳಗೆ ಬಾಕಿ ಉಂಟು. ತಮಗೆ ಕೇಪ್ಟನ್ ಮಾವಿನಿ ಸಾಹೇಬರು ಹಿಶಾರೆ ಮಾಡಿದ ಮೇರೆ, ತಮ್ಮ ಸರಕಾರದ ಫೌಜಿಗೆ ಬಂದುಬಸ್ತು ಮಾಡಬೇಕು. ಲಡಾಯಿ ವೇಳ್ಯದಲ್ಲು ಆ ಸಾಹೇಬರು ಯಾವ ಮೇರೆ ಹೇಳುತ್ತಾರೋ, ಆ ಮೇರೆ ನಡಂಬಡಬೇಕು. ಬಾಕಿ ಯಾವತ್ತು ವಿವರವು ಆ ಸಾಹೇಬರವರ ಕಡೆಯಿಂದಾ ತಮ್ಮ ವಿಚಾರಕ್ಕೆ ಬಂದಿತು" ಎಂಬದಾಗಿ ಬರೆಸಿ ಕಳುಹಿಸಿ ಇದ್ದರು.

ಈ ಕಾಗದದ ಸಂಗಡ ಬಂದ ಇಸ್ತಿಹಾರನಾಮೆ ವಿವರ: ಬಹುಮಾನವಾದ ಇಂಗ್ರೇಜ ಕುಂಪನಿ ಸಂಗಡಲೂ, ಅವರ ದೋಸ್ತರು ನಿಜಾಮು ಅವರ

ಸಂಗಡಲೂ, ಪೇಶ್ವೆ ಅವರ ಸಂಗಡಲೂ, ಇವರ ಬಗ್ಯೆ ಹಿಂದುಸ್ಥಾನದ ಸೀಮೆಯಲ್ಲು ಇಂಗ್ರೇಜ ರಾಜ್ಯದ ಫೌಜುಗಳಿಗೂ ಸಕಲ ಕಾರ್ಯಕ್ಕೂ ಬಹುಮಾನವಾದ ಇಂಗ್ರೇಜ ಕುಂಪನಿ ಗವರ್ನರ್ ಜನರಲ್ ಸಾಹೇಬರವರ ಸನ್ನಿಧಾನದಿಂದ ಬರದು ತಿಳಿಸುವಂಥಾದ್ದು : ಅದಾಗಿ, ಬಹುಮಾನವಾದ ಇಂಗ್ರೇಜ ಕುಂಪನಿಯು, ನವಾಬ ಆಸಫಜಾ ಪೇಶ್ವೆ ಸಹಾ ವಂದು, ನವಾಬ ಟೀಪು ಸುಲ್ತಾನ ವಂದು, ಇವರು ತಮ್ಮಲ್ಲಿ ಶ್ರೀರಂಗಪಟ್ಟಣದಲ್ಲಿ ಸಮಾಧಾನವಾಗಿಯೂ ದೋಸ್ತಿ ಆಗಿಯೂ ಇರುವ ಬಗ್ಯೆ, ಒಂದು ಕರಾರು ಮಾಡಿ ತೀರಿಸಿದರು. ಆ ದಿವಸ ಪರಿಯಂತರ ಲಡಾಯಿ ಆದರೂ, ದ್ರೋಹವಾದರೂ, ಇದ್ದದ್ದು ತೀರಿಹೋಯಿತು. ಆ ಹೊತ್ತಿನ ಈಚೆಗೆ ಬಂಧುಗಳಾಗಿ ಇರುವ ಮೂರು ಸಂಸ್ಥಾನದವರು, ಆ ಕರಾರಿನಿಂದಾ ಟೀಪುಸುಲ್ತಾನ ಸಹಾ ಮಾಡತಕ್ಕ ಕಾರ್ಯಗಳು ಯಾವತ್ತು ಸಿದ್ಧವಾಗಿ ಇರುವಂಥಾದ್ದು ತಾನೆ ಎಂದು, ಯಾವಾಗಲೂ ಕರಾರು ಪ್ರಕಾರ ಮನಸುಬ ಮಾಡಿ ಇದ್ದರು. ಇದಕ್ಕೆ ಬಂಧುಗಳು ಹಲವು ಸಾಕ್ಷಿಗಳು ಈ ಪ್ರಕಾರ ಎಂಬದಾಗಿ, ಆಗಾಗ್ಯೆ ಕೊಟ್ಟರು. ಮೈಸೂರು ರಾಜ್ಯದ ಸರಹದ್ದಿನ ಬಗ್ಯೆ ಏನಾದರೂ ತಕರಾರುಗಳು ಮುಂತಾದ್ದು ವೈಷಮ್ಯ ಅಲ್ಲದೆ, ನ್ಯಾಯ ಬೇಕಾದ ಪ್ರಕಾರ, ಕರಾರು ಮಾಡಿ ಇಟ್ಟ ಮೇರೆಗೆ ದೋಸ್ತಿ ಆಗಿ ಇದ್ದರು. ಸಮಾಧಾನ ಪ್ರಕಾರ ನಡೆಯುವ ಬಗ್ಯೆ ಬಂಧುಗಳಾಗಿ ಇರುವವರಿಗೆ ಇರುವ ಆಗತ್ಯ ಬಹಳ ದೊಡ್ಡದಾಗಿ ಇರುವುದರಿಂದಾ, ಟೀಪುಸುಲ್ತಾನನು ಸ್ವಲ್ಪ ದಿವಸದಿಂದಾ ದೋಸ್ತಿ ಆಗಿರುವಂಥವರಿಗೆ ಸಖ್ಯವಾಗಿ ವಕೀಲರ ನೇಮಕ ಮಾಡಿ ಕಳುಹಿಸಿದ್ದನ್ನೂ, ಯುದ್ಧಸನ್ನಾಹಕ್ಕೆ ಬೇಕಾದ್ದು ಯಾವತ್ತು ತಯಾರು ಮಾಡುವಂಥಾದ್ದನ್ನೂ, ಇದು ಯಾವತ್ತನ್ನು ಯಾವ ಸಂಗತಿಯಿಂದಾ ನಡಸುತ್ತಾನೆ ಎಂಬದಾಗಿ ಕೇಳುವದಕ್ಕಾಗಿಯೂ, ಲಡಾಯಿಕ್ಕೆ ತಾನೇ ಹೋಗುವದಕ್ಕಾಗಿಯೂ, ನ್ಯಾಯವಾಗಿ ದೊಡ್ಡದಾಗಿ ಇರುವ ಸಂಗತಿಯಿಂದಾದಾಗ್ಯೂ, ದೋಸ್ತಾರರಾದಂಥವರು ಟೀಪುಸುಲ್ತಾನರ ಸಂಗಡ ಏನೂ ಕೇಳದೆಯೂ, ಯುದ್ಧಕ್ಕೆ ಹೋಗದೆಯೂ, ಇಷ್ಟು ದಿನ ಪರಿಯಂತರ ಇರುವಂಥಾದ್ದು ಸಮಾಧಾನ ಪ್ರಕಾರ ಇರಬೇಕಾದ್ದಕ್ಕೆ ದೋಸ್ತುದಾರರಾದಂಥವರ ಅಪೇಕ್ಷೆ ಆಗುತ್ತಾ ಇದೆಯಾಗಿ, ಟೀಪುಸುಲ್ತಾನರ ವಿಶ್ವಾಸ ಮಾಡಿಕೊಂಬದಕ್ಕೂ ಅವರ ಮನಸ್ಸಿನಲ್ಲಿ ಸಭ್ಯವಾಗಿ ಇರುವ ಗುಣಗಳು ಚನ್ನಾಗಿ ಇರುವದಕ್ಕೂ,

ಅವರ ನ್ಯಾಯವಾಗಿ ಇರುವ ಅವಕಾಶಗಳು ಕೊಟ್ಟು ಇರುವದರಿಂದಲೂ, ಸಮಾಧಾನ ಮಾಡಿ, ಇರುವದನ್ನು ಪ್ರತಿಕೂಲ ಮಾಡಿ ಇರುವ ಸಂಶಯಗಳು ಉಪೇಕ್ಷೆಮಾಡಿ ಇರುವದರಿಂದಲೂ, ಬಹುಮಾನವಾದ ಇಂಗ್ರೇಜ ಸಂಸ್ಥಾನದ ಬಗ್ಗೆ ಪ್ರಯತ್ನಗಳು ಯಾವತ್ತನ್ನೂ ನಡಸಿ ಇದ್ದೀತು. ಸಮಾಧಾನ ಮಾಡಿ ಇರುವ ಪ್ರಕಾರ ಮಾಡಬೇಕೆಂಬದಾಗಿ ಇರುವ ಅಗತ್ಯ, ಬೈನಾಡ ತಕರಾರು ಆಗಿ ಇದ್ದ ಬಗ್ಗೆ ಗವರ್ನರ್ ಜನರಲ್ ಸಾಹೇಬರವರು ತೀರಿಸಿ ಇರುವದರಿಂದಲೂ, ಅಮರ ಸುಳ್ಯದ ತಕರಾರು ತೀರಿಸುವ ಬಗ್ಗೆ ನೇಮಕ ಮಾಡಿದ್ದರಿಂದಲೂ, ಈ ಬಗ್ಗೆ ಎಲ್ಲಾ ಪ್ರತ್ಯೇಕವಾಗಿ ಬರದು ಕಳುಹಿಸಿ ಇದ್ದೇವೆ. ಹಿಂದುಸ್ಥಾನಿ ರಾಜ್ಯದಿಂದ ಇಂಗ್ರೇಜ ಸಂಸ್ಥಾನವು ಟೀಪುಸುಲ್ತಾನರ ಸಂಗಡ ಸಕಲವಾದ ಕಾರ್ಯಗಳಲ್ಲಿ ಉಂಟಾದ ಬಗೆಗಳು, ಇಂಗ್ರೇಜ ಸಂಸ್ಥಾನದ ಪರಿಪಾಲನೆ ಮಾಡುವ ಬಹುಮಾನವಾದ ಇಂಗ್ರೇಜ ಕುಂಪನಿ ಹಿಂದುಸ್ಥಾನಿ ರಾಜ್ಯದಲ್ಲಿ ಇರುವ ಅರಸುಗಳ ಸಂಗಡ ಸಮಾಧಾನವಾಗಿಯೂ, ನ್ಯಾಯವಾಗಿಯೂ, ಯಥಾರ್ಥವಾಗಿಯೂ, ವಿಶ್ವಾಸವಾಗಿಯೂ, ನಡಸುತ್ತಾ ಇದ್ದೇವೆ ಎಂಬದಾಗಿಯೂ, ನಿಶ್ಚಯವಾಗಿಯೂ, ನಿಜವಾಗಿಯೂ ಒಂದು ಪ್ರಮಾಣ ಮಾಡಿ ಇಟ್ಟು ಇರುವದರಿಂದ ತಾನೆ ಆಗುತ್ತಾ ಇದೆ. ಶ್ರೀರಂಗಪಟ್ಟಣದಲ್ಲಿ ಸಮಾಧಾನ ಮಾಡಿ ತೀರಿಹೋದಲ್ಲಿ, ಮೇ ದೋಸ್ತಾರರಾದಂಥವರ ವಿಶ್ವಾಸದ ಸಮಾಧಾನವಾಗಿ ಇರುವ ಆಗ್ರಹಕ್ಕೆ ಟೀಪುಸುಲ್ತಾನ ತಕರಾರು ಮಾಡಿದ್ದು ಇಲ್ಲಾ. ಅವರ ನಡತೆಗೆ ಅನ್ಯಾಯಕ್ಕೆ ಏನಾದರೂ ಮಾಡುವದಕ್ಕೆ ಭಾವನೆ ಮಾಡದೆ, ಎಲ್ಲಾ ಸಮಯದಲ್ಲೂ ಅವರ ನ್ಯಾಯವು ಯಥಾರ್ಥವಾಗಿ ಇರುವ ಅವಕಾಶ ಸನ್ಮತವಾಯಿತು. ಸರಿಸಮಾನರಾಗಿ ದೋಸ್ತಾರರಾಗಿಯೂ ಸಂತೋಷವಾಗಿಯೂ ಇರುವ ನಡತೆ ಸಂರಕ್ಷಣ್ಯ ಮಾಡಿ ಗಟ್ಟಿಪಡಿಸುವ ಬಗ್ಗೆ ನಿಮ್ಮ ಆಗ್ರಹ ದೊಡ್ಡದಾಗಿಯೂ ಬಹಳ ಹಲವು ಪ್ರಕಾರದಲ್ಲೂ ತಿಳಿಸಿ ಇದ್ದೇವೆ. ಟೀಪುಸುಲ್ತಾನನು ಈ ಪ್ರಕಾರ ಸಖಿ ಆಗಿ ಇರುವ ಮೇರೆಗೆ ಹೇಳುವ ಸಮಯದಲ್ಲಿ, ಬೈನಾಡು ಸೀಮೆ ನಿಮ್ಮ ಅವಕಾಶಕ್ಕೆ ಸೇರಿದ್ದು ಎಂಬದಾಗಿ, ವಿಚಾರಣೆ ಮಾಡಿದಲ್ಲಿ, ನಿಮಗೆ ಸೇರಿದ್ದು ನಿಜವೇ ಎಂಬದಾಗಿ, ಇಂಗ್ರೇಜ ಸಂಸ್ಥಾನದಿಂದ ಹುಕುಂ ಮಾಡುವ ಸಮಯದಲ್ಲಿ, ಶ್ರೀರಂಗಪಟ್ಟಣದ ಕರಾರುನಾಮೆಯು ದೋಸ್ತಾರರಾದಂಥವರಿಗೆ, ಸಖಿ ಆಗಿ ಇದ್ದಾರೆ

ಎಂಬದಾಗಿ ನಿಶ್ಚಯವಾಗಿ ಹೇಳಿದ್ದು ಉಪೇಕ್ಷೆ ಮಾಡಿ, ಟೀಪುಸುಲ್ತಾನರು
ಫರಾಶೀಸರು ಸಹಾ ಕರಾರು ಮಾಡಿ ಇರುವ ಕಾರ್ಯಗಳು ಕೇಳಿಯೂ ಎಲ್ಲಾ
ದೋಸ್ತಾರರಾದಂಥವರಿಗೆ ಬಹಳ ಆಶ್ಚರ್ಯವಾಗಿಯೂ ಕೋಪವಾಗಿಯೂ
ಬಂತು. ಟೀಪುಸುಲ್ತಾನನು ಒಳ್ಳೇ ಮಾತು ಹೇಳಿದರಲ್ಲಿಯೂ ಕರಾರು
ಮಾಡಿದ್ದಕ್ಕೆ ಬೇಕಾದ ಹಾಗೆ ನಡದು ಇದ್ದೇನೆಂಬದಾಗಿಯೂ ಇಟ್ಟು ಇರುವ
ನಡತೆ ನಿಶ್ಚಯ ಮಾಡಿ ಇರುವಲ್ಲಿಯೂ ಎರಡು ವಕೀಲರ ನೇಮಕ ಮಾಡಿ,
ಫರಾಶೀಸರ ದೀಪಿನಲ್ಲಿ ಹುಕುಂ ಮಾಡಿ ಕಳುಹಿಸಿದರು. ಅವರು ಹಿಂದುಸ್ಥಾನಿ
ರಾಜ್ಯದಲ್ಲಿ ಸಮಾಧಾನವಾಗಿರುವ ಸಮಯದಲ್ಲಿ, ಬಹುಮಾನವಾದ ಇಂಗ್ರೇಜ
ಕುಂಪನಿಯಲ್ಲಿಯೂ ಅವರ ಬಂಧುಗಳು ಪೇಶ್ವೆ ಅವರನ್ನೂ ನಿಜಾಮಲ್ಲಿ
ಯನ್ನೂ ಇವರ ಸಂಗಡ ಅವಕಾಶದಲ್ಲಿ ಹೋಗಿ ಯುದ್ಧಾ ಮಾಡುವುದಕ್ಕೆ,
ಫರಾಶೀಸರು ಟೀಪುಸುಲ್ತಾನರ ಹೆಸರಿಗೆ ಒಂದು ಕರಾರುನಾಮಾ ಬರದು
ಇಟ್ಟು ಇದ್ದಾರೆ. ಈ ವಕೀಲರು ಟೀಪುಸುಲ್ತಾನರ ಹೆಸರಿಗೆ ಲಡಾಯಕ್ಕೆ
ಬೇಕಾದ ಸಹಾಯಗಳ ಫರಾಶೀಸರ ಸಂಗಡ ಕೇಳಲು, ಯುದ್ಧಾ ಮಾಡಬೇಕು
ಎಂಬದಾಗಿ ನಿಶ್ಚಯ ಮಾಡಿದ್ದಕ್ಕೆ, ಫರಾಶೀಸರ ದೀವಿನಿಂದಾ ಯುದ್ಧಾ
ಮಾಡುವದಕ್ಕಾಗಿ ಒಂದು ಕುಮಕು ಮಾಡಿಕೊಂಡು ಇದ್ದೀರಿ. ಈ
ವಕೀಲರು ಒಂದು ಫರಾಶೀಸರ ಜಹಜಿನಲ್ಲಿ ಹತ್ತಿ, ಫರಾಶೀಸರ ದ್ವೀಪದಿಂದ
ಹೊರಟು ಬರುವಾಗ್ಯೆ, ದೋಸ್ತಾರರಾದಂಥಾವರ ಸಂಗಡ ಯುದ್ಧಾ ಮಾಡುವ
ದಕ್ಕೆ ವಕೀಲರ ಕರಕೊಂಡು ಬಂದು, ನಿಮ್ಮ ರಾಜ್ಯದಲ್ಲಿ ಇಳಿಸಿ ಬರುವದಕ್ಕೆ
ಸಮ್ಮತಿಸಿದ ಮೇಲೆ, ಆ ಕುಮುಕು ತಾನೆ ಟೀಪುಸುಲ್ತಾನರ ದಂಡಿನಲ್ಲಿ ಕರೆಸಿ
ಇಟ್ಟುಕೊಂಡು ಇದ್ದಾರೆ. ಈ ಪ್ರಕಾರ ನಿಮ್ಮ ನಡತೆಯಿಂದಾ ನಿಮ್ಮ
ವಕೀಲರ ನಡತೆ ಸುಡುತೆಯೂ ಮಾತೂ ಭದ್ರ ಮಾಡಿಕೊಂಡು ಇದ್ದೀರಿ.
ಬಹುಮಾನವಾದ ಇಂಗ್ರೇಜ ಕುಂಪನಿಗೆ ಸೇರಿದ ಅವಕಾಶಗಳಲ್ಲಿ ಇಟ್ಟು
ಇರುವ ಪ್ರಕಾರ, ಕೂಡಲೇ ಭಾವಿಸಿ ಬಂದು ಯುದ್ಧಾ ಮಾಡಿ ಕುಮುಕು
ಬಂದದ್ದು ಬೇಕಾದಷ್ಟು ಇಲ್ಲದೆ ಇರುವದರಿಂದಾ, ಫರಾಶೀಸರು ತಾವು ಕರಾರು
ನಾಮುದಲ್ಲು ಬರದು ಇರುವ ಯುದ್ಧಕ್ಕೆ ಸಾಧನೆ ಮಾಡಿ ಇದ್ದೀರಷ್ಟೆ. ಫರಾ
ಶೀಸರ ಸಂಗಡ ಕೇಳಿ ಇರುವ ಭಾರಿ ಕುಮುಕು ಬಂದರೆ, ಕುಂಪನಿ ಸೀಮೆಗೆ
ಬಂದು ಯುದ್ಧಾ ಮಾಡುವದರಲ್ಲಿ ತಯಾರಾಗಿ ಇದ್ದೀರಿ. ಮೇಲಾಗಿ

ಮಹಾದೇವನ ಕಟಾಕ್ಷವೂ, ಇಂಗ್ರೇಜ ರಾಜ್ಯದ ಜಯವಾಗಿ ಇರುವ ಬಲವೂ, ಟೇಪುಸುಲ್ತಾನರ ಅಪೇಕ್ಷೆಯೂ, ಮಲೆಯಾಳದ ರಾಜ್ಯದಲ್ಲಿ ಫರಾಶೀಸರು ಬರುತ್ತಾರೆ ಎಂಬದಾಗಿ ವಿಚಾರಿಸಿಕೊಂಡು ಇರುವ ಸಮಯದಲ್ಲಿ, ಇಜಿಪ್ತ ರಾಜ್ಯದಲ್ಲಿ ಫರಾಶೀಸರು ಬರುವದು ನಿಲ್ಲಿಸಿ ಇದ್ದೇವೆ. ಇಂಗ್ರೇಜ ಸಂಸ್ಥಾನವೂ ಪೇಶ್ವೆಯೂ ನಿಜಾಮಲ್ಲಿಯೂ ಅವರವರ ಅವಕಾಶ ಮಾಡಿ ರಕ್ಷಣ್ಯ ಮಾಡುವದಕ್ಕೆ ಬೇಕಾದ ಪ್ರಕಾರ ಅವರವರ ಬಲಗಳು ಕೂಡಿ ನಿಲ್ಲಿಸದೆ ಇರಲಿಲ್ಲಾ. ಟೇಪುಸುಲ್ತಾನನು ಫರಾಶೀಸರು ಸಹಾ, ಕರಾರು ಮಾಡಿ ಇರುವದು ತಿಳುದು ಇರುವದರಿಂದಾ, ಟೇಪುಸುಲ್ತಾನರಿಗೆ ಬೇಕಾದ ಸಹಾಯ ಬರುವದಕ್ಕೆ ಮೊದಲೇ ಅವನ ಅವಕಾಶದಲ್ಲಿ ದೋಸ್ತಿ ಆಗಿ ಇರುವಂಥವರು ಬಂದು, ಲಡಾಯಿ ಮಾಡಿದ್ದುಂಟಾದರೆ, ಆ ಪ್ರಕಾರ ಭದ್ರವಾಗಿ ನಡದುಬರುವ ಬಗ್ಗೆ, ವಿಚಾರಿಸಿ ನೋಡಿದಲ್ಲಿ, ನ್ಯಾಯವಾದ್ದೇ ಸರಿ ಎಂಬದಾಗಿ ತೋರ್ಪಟ್ಟಿತು. ಮೇಲಾಗಿ ಟೇಪುಸುಲ್ತಾನರಿಗೆ ಅಗತ್ಯವಾದಷ್ಟು ಬಹಳ ಕುಮಕು ತೆಗೆದುಕೊಂಡು, ಫರಾಶೀಸರು ಜಹಜು ಹತ್ತಿ ಇಜಿಪ್ತ ರಾಜ್ಯಕ್ಕೆ ಬರುವದಕ್ಕೆ ಇಂಗ್ರೇಜರಿಗೆ ಜಯ ಕೊಡುವ ಜಹಜಿನಿಂದ ಹಿಡಿದ ವರ್ತಮಾನ ಖುಷಿಯಿಂದ ಕೇಳಿದ್ದು ಟೇಪುಸುಲ್ತಾನರ ಸಂಗಡ ಲಡಾಯಿ ಮಾಡಿಸದೆ ಇರುವ ಬಗ್ಗೆ ಸಾಬಕು ಕರಾರು ಮಾಡಿ ಇರುವ ಪ್ರಕಾರಕ್ಕೆ, ಟೇಪುಸುಲ್ತಾನರು ಸಹಾ ದೋಸ್ತಿ ಆಗಿಯೂ ಸಮಾಧಾನವಾಗಿಯೂ ಇಡಿಸುವಂಥಾ ಆಗ್ರಹಕ್ಕೆ ತಗ್ಗಿ ಬರುವದಕ್ಕೆ ಇಲ್ಲಾ. ಟೇಪುಸುಲ್ತಾನರು ಮಾಡತಕ್ಕ ಕಾರ್ಯದ ತನ್ನ ಸೌಖ್ಯಕ್ಕೂ ವಿಶ್ವಾಸಕ್ಕೂ ಬೇಕಾದ ಹಾಗೆ ಯಥಾರ್ಥವಾಗಿ ನಡೆಯತಕ್ಕದ್ದಕ್ಕೆ ಇರುವ ನಮ್ಮ ಸಮ್ಮತಿಗೆ ಟೇಪುಸುಲ್ತಾನರಿಗೆ ತಿಳಿಸುವ ಬಗ್ಗೆ, ಸಮಾಧಾನ ವಾಗಿ ಇರುವ ಬರಹದಿಂದಾ, ತಿಳಿಸುತ್ತಾ ಇದ್ದೇವೆ. ಕಜಿಯಾ ಆಗಿ ಇರುವಂಥಾದ್ದು ವಿಸ್ತಾರ ಮಾಡುವದರಲ್ಲಿ ಖುಲಾಯಿಸುವದಕ್ಕೆ ಸೌಖ್ಯವಾಗಿ ಇರುವಂಥಾದ್ದಕ್ಕೆ ವೈಷಮ್ಯ ಬಾರದೆ ಇರುವಂತೆಯೂ ಬಹಳ ಪ್ರಯತ್ನಗಳ ಮಾಡಿದರು. ಈ ಪ್ರಕಾರವಾಗಿ ಇರುವ ಹೇತುವಿಂದಾ ಗವರ್ನರ್ ಜನರಲ್ ಸಾಹೇಬರವರು ೧೭೯೮ನೇ ನವಂಬರ ತಿಂಗಳು ೮ನೇ ತಾರೀಕು, ಸೇರಿ ಇರುವ ಸ್ನೇಹಿತನ ಬಂಧುತ್ವ ಹೊಸ್ತಾಗಿ ಮಾಡಿಸುವ ಬಗ್ಗೆ, ಪರಸ್ಯವಾಗಿ ಇರುವ ಸಮಾಧಾನ ಮುಂದೆ ಚಲನ ಬಾರದಂತೆಯು ರಕ್ಷಣ್ಯ ಮಾಡುವದಕ್ಕೆ, ಒಂದು

ದಾರಿ ಮಾಡಿ ಇರಿಸುವದಕ್ಕೆ ದೋಸ್ತುದಾರರಾದಂಥವರ ಹೆಸರಿಗೆ ಒಂದು ವಕೀಲು ಟೀಪುಸುಲ್ತಾನರ ಬಳಿಗೆ ನೇಮಿಸಿ ಕಳುಹಿಸುವಾ ಎಂಬದಾಗಿ, ಬರದು ಕಳುಹಿಸಿ ಇದ್ದೀತು. ಅದರ ಮೇಲೆ ಡಿಸಂಬರ ತಿಂಗಳು, ೧೦ನೇ ತಾರೀಕು ಆ ಪ್ರಕಾರ ತಾನೆ ಒಂದು ಬರದು ಕಳುಹಿಸಿ ಇದ್ದೀತು. ದೋಸ್ತಿ ಆಗಿ ಇರುವವರ ಬಗ್ಯೆ ಈ ಪ್ರಕಾರ ಸಮಾಧಾನವಾಗಿಯೂ ಸಖಿ ಆಗಿಯೂ ತೋರಿಸಿ ಕೊಟ್ಟಂಥಾದ್ದು ಟೀಪುಸುಲ್ತಾನರು ಹಲವು ಬಗೆಯಲ್ಲು ಆ ಹೇತು ಆಗಿ ಇರುವ ವಿರೋಧಗಳಿಂದಾ ಸೇರದೆ ಹೋಯಿತು. ಅಮರ ಸುಳ್ಯದ ತಕರಾರು ಬಗ್ಯೆ ಭಾವಿಸಿ ಉಂಟಾದ ವಿಸ್ತಾರ ವಿರೋಧ ಮಾಡಿ, ಹೋದ ಡಿಸಂಬರ ತಿಂಗಳಲ್ಲಿ ಕರೆಕಳುಹಿಸಿಕೊಂಡದರಿಂದಲೂ ಸರಹದ್ದುಗಳಲ್ಲಿ ತಮ್ಮ ಆಳುಗಳನ್ನೂ ಕುಂಪನಿ ಆಳುಗಳನ್ನೂ ಅಲ್ಲಿಗೂ ಇಲ್ಲಿಗೂ ಹೋಗಿ ಬರುವ ಗುಣದೋಷಗಳು ವಿರೋಧ ಮಾಡಿದ್ದರಿಂದಲೂ, ಉಂಟಾಗಿರುವ ಚಲನಾ ನಿಗ್ರಹಾ ಮಾಡಿ, ಸಮಾಧಾನ ಮಾಡಿ ಇರಿಸಬೇಕಾದ್ದಕ್ಕೆ ನಿಶ್ಚಯ ಮಾಡಿದ ದಾರಿ ಟೀಪುಸುಲ್ತಾನರ ಉಪೇಕ್ಷೆ ಮಾಡುವದಕ್ಕೆ ಉಂಟಾದ ಆಗ್ರಹಾ ತೋರಿಸಿಕೊಟ್ಟನು. ೧೭೯೯ನೇ ಜನವರಿ ತಿಂಗಳು ೯ನೇ ತಾರೀಕು ಗವರ್ನರ್ ಜನರಲ್ ಸಾಹೇಬರವರು ಚನ್ನಪಟ್ಟಣಕ್ಕೆ ಬಂದು ಸೇರಿದ ಮೇಲೆ, ಈ ಪ್ರಕಾರ ಟೀಪುಸುಲ್ತಾನರು ನಿಧಾನ ಕೇಡು ಮಾಡುವಂಥಾದ್ದನ್ನೂ, ಅವನ ನಡತೆ ನುಡುತೆಯನ್ನೂ ಅವನು ಮಾಡುವ ಗುಣದೋಷಗಳನ್ನೂ ವಿಚಾರಿಸದೆ, ಟೀಪುಸುಲ್ತಾನರ ಬಳಿಗೆ ಒಂದು ವಕೀಲಗೆ ಕಳುಹಿಸಬೇಕು, ಎಂಬ ಆಗ್ರಹ ನಿಷ್ಕರ್ಷೆಯಿಂದ ಮತ್ತು ಒಂದು ಸರ್ತಿ ಬರದು ಕಳುಹಿಸಿ ಇತ್ತು. ಈ ಕಾಗದ ಟೀಪುಸುಲ್ತಾನರ ಬಳಿಗೆ ಸೇರಿದರೆ, ದರ ಜವಾಬು ಒಂದು ದಿವಸದ ವಳಗಾಗಿ ಬರದು ಕಳುಹಿಸಬೇಕು, ಎಂಬದು ಅಗತ್ಯವಾಗಿ ಅಪೇಕ್ಷಿಸಿಕೊಂಡೆವು. ಆ ಪ್ರಕಾರ ದರ ಜವಾಬು ಬರೆಯುವಂಥಾದ್ದು ಟೀಪುಸುಲ್ತಾನರ ಅವಕಾಶ ಗಳಿಗೂ ಸ್ಥಾನಮಾನಕ್ಕೂ ದುಃಖ ಕೊಡುವದಕ್ಕೆ ಉಂಟಾದ ಸಂಗತಿಗಳು ಅಲ್ಲದೆ, ಹೊಸ್ತಾಗಿಯೂ ವೈಷಮ್ಯವಾಗಿಯೂ ಅಲ್ಲದೆ ಇರುವ ಸಂಗತಿಯಿಂದ ಆಲೋಚನೆ ಮಾಡಿ ಇದ್ದೀರಿ. ಜವಾಬು ಬರೆಯುವದಕ್ಕೆ ಒಂದು ದಿನಕ್ಕೆ ಅಧಿಕ ಬೇಕಾಗಿ ಬರುವದು ಇಲ್ಲವಷ್ಟೆ. ಜನವರಿ ತಿಂಗಳು, ೯ನೇ ತಾರೀಕು, ಟೀಪುಸುಲ್ತಾನರಿಗೆ ಗವರ್ನರ್ ಜನರಲ್ ಸಾಹೇಬರವರು ಬರದು ಕಳುಹಿದ

ಕಾಗದದಲ್ಲಿ ಸಮಾಧಾನವಾಗಿ ಆಲೋಚನೆ ಮಾಡತಕ್ಕ ಬಗೆಗಳು ಒಂದು ಜವಾಬು ಬರುವದಕ್ಕೆ ಗವರ್ನರ್ ಜನರಲ್ ಸಾಹೇಬರವರು ಬಹಳ ಸುಮ್ಮನೆ ಇದ್ದರು. ಆ ಕಾಗದ ಟೀಪುಸುಲ್ತಾನರ ಬಳಿಗೆ ಜನವರಿ ತಿಂಗಳು, ೧೫ನೇ ತಾರೀಕು, ಸೇರಿ ಇದ್ದೀತು. ಆ ಕಾಗದದಲ್ಲಿ ಭಾರಿ ಕಾರ್ಯಗಳಿಗೆ ತಾಮಸ ವಾದರೆ, ಕೂಚಾಗುವಂಥಾ ಫಲ ಅನುಭವಿಸ್ಯಾನು ಎಂಬದಾಗಿ, ಟೀಪು ಸುಲ್ತಾನರಿಗೆ ಹೇಳಿಬಿಟ್ಟು ಆದರೂ, ಟೀಪುಸುಲ್ತಾನ ದರ ಜವಾಬು ಒಂದು ಬರದು ಕಳುಹಿಸದೆ ಇದ್ದನು. ಆದರ ಮಧ್ಯೆ ಯುದ್ಧದ ಹಕೀಕತ್ತು ಆಗಿ ಇರುವ ಸಮಯ ಜಲ್ದು ಆಗುವದರಿಂದಾ, ಬಂಧುಗಳ ಸೌಖ್ಯಕ್ಕೆ ಈ ಚಲನ ವಂದು ತಾಮಸವಿಲ್ಲದೆ ಆಗುಮಾಡಿಸಬೇಕಾಗಿ ಇದೆ. ಈ ಪ್ರಕಾರ ಇರುವಲ್ಲಿ, ಜನವರಿ ತಿಂಗಳು, ೯ನೇ ತಾರೀಕು, ಗವರ್ನರ್ ಜನರಲ್ ಸಾಹೇಬರವರು ಬರದು ಕಳುಹಿಸಿದ ಕಾಗದಕ್ಕೆ ಶ್ರೀರಂಗಪಟ್ಟಣದಿಂದ ದರ ಜವಾಬು ಬರದು ಕಳುಹಿಸುವ ಸಮಯ ಮೀರಿಹೋಗಿ, ಮತ್ತೆ ಎಂಟು ದಿವಸದಮೇಲೆ, ದೋಸ್ತಾರರಾದಂಥವರ ಸೌಖ್ಯಕ್ಕೆ ಟೀಪುಸುಲ್ತಾನರಾದರೂ ಫರಾಶೀಸರಾದರೂ ಒಂದು ನಾಶಮಾಡದೆ ಇರುವದಕ್ಕಾಗಿ, ಅದಕ್ಕೆ ಬೇಕಾದ ಅನುಭವಗಳು ಅಡಗಿಸುವ ಬಗ್ಯೆ ಒಂದು ಅಲ್ಲದೆ, ಬೇಕಾದ ನಡತೆಗಳು ಭಾವಿಸಬೇಕೆಂಬದಾಗಿ, ಫೆಬ್ರವರಿ ತಿಂಗಳು ೩ನೇ ತಾರೀಕು, ಗವರ್ನರ್ ಜನರಲ್ ಸಾಹೇಬರು ಅವರ ದೋಸ್ತುದಾರರಾದಂಥ ವರಿಗೆ ತಿಳಿಸಿದರು. ಇವಕ್ಕೆ ಸಲುವಾಗಿ ಫೆಬ್ರವರಿ ತಿಂಗಳು ೩ನೇ ತಾರೀಕು, ಗವರ್ನರ್ ಜನರಲ್ ಸಾಹೇಬರವರು ಇಂಗ್ರೇಜ ಫೌಜು ಹೊರಡಿಸಬೇಕಾದ್ದಕ್ಕೆ ಹುಕುಂ ಫರಮಾಯಿಸಲು, ಹಿಂದುಸ್ಥಾನ ಸೀಮೆಯಲ್ಲಿ ಇಂಗ್ರೇಜ ಅರಸಿನವರ ಜಹಜುಗಳ ಸೇನಾಪತಿಗೆ: "ಟೀಪುಸುಲ್ತಾನರು ಸ್ವಸ್ಥವಾಗಿ ಇರುವಂಥಾ ದೋಸ್ತಿ ಮಾಡಿಕೊಳ್ಳಬೇಕು ಎಂತಾ ಭಾವಿಸಿದ್ದಕ್ಕೆ ಒಪ್ಪುವದಿಲ್ಲಾ ಎಂಬದಾಗಿ, ಇರುವ ಆಲೋಚನೆ ಮಾಡಬೇಕಾಗಿ ಇದೆ" ಎಂಬದಾಗಿ, ತಿಳಿಸಿ ಇದ್ದೇವೆ. ಆಮೇಲೆ ಫೆಬ್ರವರಿ ತಿಂಗಳು ೧೩ನೇ ತಾರೀಕು, ಟೀಪುಸುಲ್ತಾನರ ಕಡೆಯಿಂದ ಒಂದು ಕಾಗದ ಗವರ್ನರ್ ಜನರಲ್ ಸಾಹೇಬರವರಿಗೆ ಬಂದು ತಲಪಿತು. ಅದರಲ್ಲಿ ಟೀಪುಸುಲ್ತಾನರು ಗವರ್ನರ್ ಜನರಲ್ ಸಾಹೇಬರವರಿಗೆ ತಿಳಿಸಿ ಇರುವದು: "ನಮಗೆ ಶಿಕಾರಿ ಬೇಟಿ ಹೋಗುವದಕ್ಕಾಗಿ ಮನಸ್ಸಾಗಿ ಇದೆ. ಆದ್ದರಿಂದ ಈಗ ಶಿಕಾರಿಗೆ ಹೋಗುತ್ತೇವೆ ಎಂಬದಾಗಿಯೂ, ಮೇಜರ್

ಡಪ್‌ಟಿಂನ್ ಸಾಹೇಬರವರನ್ನ ಮತ್ಯಾರು ಕೂಡದೆ, ನಮ್ಮ ಬಳಿಗೆ ಕಳುಹಿಸಲಿ ಎಂಬದಾಗಿಯೂ ಆಗುತ್ತಾ ಇದೆ."

ಈ ಕಾಗದ ಬಂದದ್ದರಲ್ಲಿ ಇರುವ ಅಭಿಪ್ರಾಯ ಇಂಥಾ ಪ್ರಕಾರ ಎಂಬದಾಗಿ, ದೋಸ್ತಾರರಾದಂಥವರು ವಿಚಾರಿಸದೆ ಇದ್ದರಷ್ಟೆ. ಮೇಲಾಗಿ, ಸುಲ್ತಾನರ ಜವಾಬು ಬರುವದಕ್ಕೆ ಇಷ್ಟು ತಾಮಸವಾದದ್ದು ದೋಸ್ತಾರರಾದಂಥವರು ಫೌಜುಗಳ ಕೂಡಿಸಿಕೊಂಡು, ಪ್ರಯತ್ನ ಮಾಡಿದರೆ, ಆಗುವಂಥಾ ಅನುಭವದ ಗುಣ ಫಲವು ತಾಮಸದಿಂದ ಬಾರದೆ ಇರಿಸುವದಕ್ಕಾಗಿ ತಾಮಿಸ ಬೇಕು ಎಂಬದಾಗಿ ಅಲ್ಲದೆ, ಮತ್ತೊಂದು ಬೇಕಾಗಿ ಅಲ್ಲವಷ್ಟೆ ಎಂಬದಾಗಿ, ಹಿಂದುಸ್ಥಾನಿ ರಾಜ್ಯದಲ್ಲಿ ಎಲ್ಲರಿಗೂ ತಿಳಿಯಲಾದೀತಷ್ಟೆ. ಶ್ರೀರಂಗಪಟ್ಟಣದ ಕರಾರುನಾಮೆ ಟೀಪುಸುಲ್ತಾನನು ಉಪೇಕ್ಷೆ ಮಾಡಿದ್ದನ್ನೂ, ಬಹುಮಾನವಾದ ಕುಂಪನಿ ಸಂಗಡ ಯುದ್ಧಾ ಮಾಡುವದಕ್ಕಾಗಿ ಫರಾಶೀಸರು ಸಹಾ ಕೂಡಿ ಇದ್ದು ಕರಾರು ಮಾಡಿದ್ದನ್ನೂ ನೋಡಿ ತಿಳುದ್ದರಿಂದಾ, ಈ ಅನುಭವದಿಂದ ತಾನೆ ಟೀಪುಸುಲ್ತಾನನ ಸಂಗಡ ಒಂದು ಕರಾರುನಾಮಾ ಮಾಡಿ ಇರಿಸುವಂಥಾ ನಡತೆ ಸಿಕ್ಕೀತು ಎಂಬದಾಗಿ ವಿಶ್ವಾಸ ಮಾಡುವದೇ ಸರಿ. ಟೀಪುಸುಲ್ತಾನನು ಆಲೋಚನೆ ಮಾಡಿ ತಾಮಸ ಮಾಡಿದರಿಂದ ಒಂದು ಅನುಭವ ಸಿಕ್ಕುವದಾದರೂ ದೋಸ್ತಾರರಾದಂಥವರಿಗೆ ಬೇಕಾಗಿ ಇಟ್ಟದ್ದು ಬರಮಾಡಿಸುವದಕ್ಕಾಗಿ ಯೋಚನೆ ಮಾಡಿದ ಪ್ರಕಾರ, ಅವರ ಫೌಜು ಸಮುದ್ರದ ದಾರಿಗಾಗಿಯೂ ಘಾಟಿ ದಾರಿಗಾಗಿಯೂ ನಡೆಯುವಂಥಾದ್ದಕ್ಕೆ ಅಟಕಾವು ಮಾಡುವದಕ್ಕಾದರೂ ಸಮ್ಮತಿಸುವದು ಇಲ್ಲವಷ್ಟೆ. ಟೀಪುಸುಲ್ತಾನನು ಪ್ರಸಿದ್ಧವಾಗಿರುವ ವಿಶ್ವಾಸದ ಆಣೆಭಾಷೆಯ ಮೂಲಕವಾಗಿ ದೋಸ್ತಾರರಿಂದಾ ಬಂಧಿಸಿ ಇರುವ ಸಮಯದಲ್ಲಿಯೂ, ದೋಸ್ತಾರರಾದಂಥವರಿಗೆ ಸ್ನೇಹಿತನಾಗಿ ಇರುವದಕ್ಕಾಗಿ ಆಗ್ರಹವಿದೆ ಎಂಬದಾಗಿ ಹೇಳುವ ಸಮಯದಲ್ಲಿಯೂ, ಕರಾರುನಾಮದಿಂದಾ ತನಗೆ ಜಾಗ್ರತೆ ಮಾಡಿ ಇರುವ ಸೀಮೆಗಳಲ್ಲಿ, ಅವಕಾಶಗಳಲ್ಲಿ, ಯಾರೂ ತರ್ಕ ಮಾಡದೆ ಇರುವ ಸಮಯದಲ್ಲಿಯೂ, ಟೀಪುಸುಲ್ತಾನನು ಆ ಹೇತು ಆಗಿ ಸಮಾಧಾನವಾಗಿಯೂ ಸತ್ಯವಾಗಿಯೂ ದೋಸ್ತಿಯಿಂದಾ ಇದ್ದದ್ದಕ್ಕೆ ಉಪೇಕ್ಷೆ ಮಾಡಿ, ದೋಸ್ತಾರರಾದಂಥವರ ಅವಕಾಶಗಳು ಸಂತೋಷವು ಮಾನವು ರಕ್ಷಣೆ ಮಾಡುವದಕ್ಕೆ ಜೋರಾವರಿ ನಡೆಸಿದರು. ಮನೋರಾಜ್ಯವಾಗಿ ಇರು

ವದಕ್ಕೆ ಪ್ರತ್ಯುಪಕಾರ ಮಾಡುವದಕ್ಕಾಗಿಯೂ, ಕುಮುಕು ಫರಾಶೀಸರ ಸಂಗಡ ಕೇಳಿ, ಆಗಾಗ್ಯೆ ಪಹುಂಚಾಯಿಸ್ಯಾರು ಎಂಬದಾಗಿ ಯೋಚಿಸಿ ಇರುವ ಸಮಯ ದಲ್ಲಿ, ದೋಸ್ತಾರರಾದಂಥವರು ಹೇಳಿದ ಸಮಾಧಾನಕ್ಕೆ ಸಮ್ಮತಿಸದೆ, ಮೂರು ತಿಂಗಳವರೆಗೂ ಉಪೇಕ್ಷೆಮಾಡಿ ಇದ್ದರು. ಜಯವಾಗಲಿ ಪ್ರತ್ಯುಪಕಾರವಾಗಲಿ ಎಂಬ ಅಪೇಕ್ಷೆ ಅನುಭವಿಸಲಿಕ್ಕೆ ಇಲ್ಲಾ ಎಂಬದಾಗಿ ನೋಡಿ, ಈಗ ದಗಾ ಮಾಡ್ಯಾನು, ತಾಮುಸಕ್ಕೆ ಉಂಟಾದ ದಾರಿ ನೋಡುತ್ತಾ ಇದ್ದಾನೆ. ಈ ಪ್ರಕಾರವಾಗಿ ಇರುವ ಕಾಲವೂ ಅಭಿಪ್ರಾಯವೂ ಅಲ್ಲದೆ, ಫರಾಶೀಸರ ಫೌಜು ಕಳಿಸಿದ್ದರಿಂದಾ ಹಿಂದೂ ರಾಜ್ಯದ ಸಮಾಧಾನವಲ್ಲದೆ ಲಡಾಯಿ ಮಾಡ ಬೇಕೆಂಬ ಭಾವನೆಯಿಂದ ಆದಷ್ಟು ವಿಚಾರಿಸಿ, ಮುಂಚೆ ಬಂದು ವಕೀಲನ್ನ ಅವನ ಬಳಿಗೆ ಕಳುಹಿಸುವದಕ್ಕೆ ಸಮ್ಮತಿಸದೆ ಇದ್ದು, ಈಗ ನಿರಸವಾಗಿ ಕೇಡಾಗಿ ಸಮ್ಮತಿಸಿದ್ದರಿಂದ, ಬಂಧುಗಳು ಜಾಗ್ರತೆ ಆಗಿ ಇರುವ ದಾರಿಯಲ್ಲಿ ವಿರೋಧ ಮಾಡುವದಕ್ಕೆ, ಚನ್ನಾಗಿ ಬರುವಂಥಾ ನಷತೆಗೆ ತಾಮುಸಾ ಮಾಡುವ ಪ್ರಯತ್ನ ಗಳ ಮಾಡುತ್ತಾ ಇದ್ದಾನೆ. ಟೀಪುಸುಲ್ತಾನ ಇಲ್ಲಿ ಯುದ್ಧಾ ಮಾಡುವದಕ್ಕೂ ಅಲ್ಲಿ ಮಾಡುವದಕ್ಕೂ ಅವನು ದಗಾ ಮಾಡುವದನ್ನೂ ತಾಮುಸಾ ಮಾಡುವ ದನ್ನೂ ಅಫಲವಾಗಿ ಮಾಡಿಸಬೇಕು ಎಂದು, ದೋಸ್ತಾರರಾದಂಥವರು ತಯಾರು ಮಾಡುತ್ತಾ ಇದ್ದಾರೆ. ಆದ್ದರಿಂದ ಟೀಪುಸುಲ್ತಾನನು ದಗಾ ಮಾಡುವಂಥಾದ್ದು ವಿರೋಧ ಮಾಡುವದಕ್ಕಾಗಿಯೂ, ಅವರ ಅವಕಾಶಗಳು ಕೆಲವು ದಿವಸದಿಂದಾ ಅದಲುಬದಲಾಗಿ ಇರುವದು ಮುಂದೆ ಬಾರದಂತೆಯೂ, ಅದಕ್ಕೆ ಬೇಕಾದ ಪ್ರಕಾರ ಅವರ ಫೌಜುಗಳ ನಿಲ್ಲಿಸುವದಕ್ಕಾಗಿಯೂ ಅವರು ಆಲೋಚನೆ ಮಾಡಿ ನಿಲ್ಲಿಸಿ ಇದ್ದಾರೆ. ಈ ಪ್ರಕಾರ ಆಲೋಚನೆ ಮಾಡಿ ನಿಲ್ಲಿಸಿ ಇದ್ದಾಗ್ಯೂ, ಬಂಧುಗಳಾದಂಥವರು ಟೀಪುಸುಲ್ತಾನನ ಸಂಗಡ ಒಂದು ವೇಳೆ ತಕರಾರು ಉಂಟುಮಾಡುವದಕ್ಕಾಗಿ ಆಗ್ರಹಿಸಿ ಇರುವದರಿಂದಾ, ಇಂಗ್ರೇಜ ಅರಸಿನವರ ದಂಡಿಗೂ, ಬಹುಮಾನವಾದ ಇಂಗ್ರೇಜ ಕುಂಪನಿಯವರ ದಂಡಿಗೂ, ಚೋಳಮಂಡಲ ರಾಜ್ಯದಲ್ಲಿಯೂ ಮಲೆಯಾಳದ ರಾಜ್ಯದಲ್ಲಿಯೂ ಪ್ರಧಾನ ರಾಗಿ ಇರುವ ಲೆಫ್ಟನೆಂಟ್ ಜನರಲ್ ಹಾರಿಸ್ ಸಾಹೇಬರವರ ಬಳಿಗೆ ಟೀಪು ಸುಲ್ತಾನ ವಕೀಲರನ್ನು ಹುಕುಂ ಮಾಡಿ ಕಳುಹಿದರೆ, ಅವರು ಮುರಿದ ಸಮಾ ಧಾನ ಸ್ಥಿರವಾಗಿ ಇರುವಂಥಾದ್ದು ಮಾಡತಕ್ಕ ಬಗ್ಗೆ ಬೇಕಾಗಿ, ತಾತ್ಪರ್ಯ

ವಾಗಿ ಆಲೋಚನೆ ಮಾಡಿದರೆ, ಬಂಧುಗಳಿಗೆ ಅವಶ್ಯವೆಂದು ಕಾಣಿಸುವ ಪ್ರಕಾರದ ಮೇರೆಗೆ ಒಂದು ಕರಾರುನಾಮೆ ಉಂಟುಮಾಡಿ ಇರಿಸುವರು. ೧೭೯೯ನೇ ಫೆಬ್ರವರಿ ತಾರೀಕು ೨೨ರಲ್ಲು ಬರದ್ದು ; ೯೭೪ನೇ ಕುಂಭಮಾಸ ೧೪ನೇ ತೇದಿ.

ಬಹುಮಾನವಾದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬರವರು ಜನವರಿ ತಿಂಗಳು ೯ನೇ ತಾರೀಕು ಧನುಮಾಸ ೨೯ನೇ ತೇದಿಯಲ್ಲು, ಟೀಪುಸುಲ್ತಾನರಿಗೆ ಬರದು ಕಳುಹಿದ ಕಾಗದದ ನಕಲು: ಡಿಸಂಬರ ತಿಂಗಳು ೧೦ನೇ ತಾರೀಕು, ನಾವು ನಿಮಗೆ ಬರೆದು ಕಳುಹಿದ ಕಾಗದದಲ್ಲಿ ಬರದು ಇರುವ ಪ್ರಕಾರ, ಆ ತಿಂಗಳು ೨೫ನೇ ತಾರೀಕು, ಕಲ್ಕತ್ತಿನಿಂದ ಪಯಣವಾಗಿ ಜಹಜು ಹತ್ತಿ, ೩೧ ತಾರೀಕು ಚನ್ನಪಟ್ಟಣಕ್ಕೆ ಬಂದು ಸೇರಿದೆವು. ಕಲ್ಕತ್ತಿನಿಂದ ಹೊರಡುವದಕ್ಕೆ ಮುಂಚೆ ತಮ್ಮ ಕಾಗದ ಜಮಾದಿಸಾನಿ ತಿಂಗಳು ೧೧ನೇ ತಾರೀಕು, ವೃಶ್ಚಿಕ ತಿಂಗಳು ೭ನೇ ತೇದಿ ಬರದದ್ದು ಬಂದು ತಲಪಿತು. ಬಹುಮಾನವಾದ ಇಂಗ್ರೇಜ ಕುಂಪನಿಯು ಅವರ ಬಂಧುಗಳ ಸೀಮೆಗಳಲ್ಲಿ, ಹೋದ ಜುಲಾಯಿ ತಿಂಗಳು ಲಾಗಾಯತು ಯುದ್ಧಕ್ಕೆ ತಯಾರು ಮಾಡುವದಕ್ಕಾಗಿ ಎಲ್ಲಾ ದಿಕ್ಕುಗಳಲ್ಲಿಯೂ ತಯಾರು ಮಾಡುವದು ಯಾತರಿಂದಾ ಎಂದು ಹೋದ ನವಂಬರ ತಿಂಗಳು ೮ ತಾರೀಕು ನಾವು ತಮಗೆ ಬರದು ಕಳುಹಿದರಿಂದ ತಿಳಿಸಿ ಇದ್ದೆವಷ್ಟೆ. ಚನ್ನಪಟ್ಟಣದಲ್ಲಿ ನಾವು ಸೇರಿದ ಕೂಡಲೆ, ರಜಬು ತಿಂಗಳು ೯ನೇ ತಾರೀಕು, ಧನು ೫ನೇ ತೇದಿ, ತಾವು ಬರೆಸಿ ಕಳುಹಿದ ಕಾಗದ ಬಂದು ತಲಪಿತು. ಆ ಕಾಗದ ನವಂಬರ ತಿಂಗಳು ೪ನೇ ತಾರೀಕು ೮ನೇ ತಾರೀಕು ಸಹಾ, ನಾವು ತಮಗೆ ಬರದು ಕಳುಹಿದ ಕಾಗದದ ಜವಾಬು ಆಗುತ್ತಾ ಇದೆ. ಅದರಲ್ಲಿ ಬಹುಮಾನವಾದ ಇಂಗ್ರೇಜ ಸಂಸ್ಥಾನವು, ಬಹುಮಾನವಾದ ಕುಂಪನಿ, ಯಥಾರ್ಥ ನ್ಯಾಯವಾಗಿ ಇರುವಂಥಾದ್ದನ್ನೂ ಸಖ್ಯವಾಗಿ ಇರುವಂಥಾದ್ದನ್ನೂ, ಆಮೇಲೆ ಅಬದ್ಧ ಬಾರದಂತೆ, ಪ್ರಭುಗಳಿಗೆ ಸಖ್ಯ ಕೊಡಬೇಕೆಂಬದಾಗಿಯೂ ಆಗ್ರಹವಿದೆ ಎಂಬದಾಗಿಯೂ ತಾವು ಬರೆಸಿ ಕಳುಹಿಸಿ ಇರುವದರಿಂದಾ ನಮಗೆ ಬಹು ಸಂತೋಷವಾಯಿತು. ತಮ್ಮ ಬುದ್ಧಿಯ ಪ್ರಕಾರ ಇರುವ ಒಬ್ಬ ಅರಸು ಈ ಪ್ರಕಾರವಾಗಿ ಇರುವಂಥಾ ಆಲೋಚನೆಗಳು ಅದರ ಗುಣದೋಷಗಳು ಬೇಕಾದ ಹಾಗೆ

ವಿಚಾರಣೆ ಮಾಡದೆ ಹೇಳುವದಿಲ್ಲಾ ಎಂಬದಾಗಿ, ನಮಗೆ ನಿಶ್ಚಯ ಉಂಟಾಗಿ ಇರುವದರಿಂದ, ಈ ಪ್ರಕಾರ ಈ ಸಮಯದಲ್ಲಿ ನಮಗೆ ಬರದು ಬಂದದರಿಂದ, ನಮಗೆ ಅಗತ್ಯವಾಗಿ ಇರುವ ಸಂತೋಷ ಉಂಟಾಯಿತು. ಆದ್ದರಿಂದ ಇಂಗ್ರೇಜ ಸಂಸ್ಥಾನವೂ ಕುಂಪನಿಯೂ ಈಗ ನಡೆಯಿಸುವ ಕಾರ್ಯ ನ್ಯಾಯವಾಗಿ ಇರುವಂಥಾದ್ದನ್ನು ತಾವು ವಿಶ್ವಾಸ ಮಾಡಿದ್ದೇ ಸರಿ ಎಂಬದಾಗಿಯೂ, ಇಂಗ್ರೇಜ ಸಂಸ್ಥಾನಕ್ಕೆ ತಾವು ಒಂದು ಅನ್ಯಾಯ ತಿಳಿಸುವದಕ್ಕಿಲ್ಲಾ ಎಂಬ ದಾಗಿಯೂ, ಒಪ್ಪಿ ಇರುವದು ಒಂದು ಸಾಕ್ಷಿ ಪ್ರಕಾರ ಆಗಿ ಇರುವದರಿಂದ, ತಮ್ಮ ಆಲೋಚನೆಗಳು ಬರಮ ಬಂದದ್ದು ನಾವು ಬಹಳ ಖುಷಿಯಿಂದ ಒಪ್ಪಿ ಇದ್ದೇವೆ. ನವಂಬರ ತಿಂಗಳು ೮ನೇ ತೇದಿ ನಾವು ತಮಗೆ ಬರದು ಕಳುಹಿದ ಕಾಗದದಲ್ಲಿ, ತಾವು ಫರಾಶೀಸರ ಕೂಡೆ ಸಖ್ಯವಾಗಿ ಇರುವ ಸಂಗತಿಗೆ ನಾವು ವಿಚಾರಣೆ ಮಾಡಿದ್ದರಲ್ಲಿ ನಮಗೆ ಸಂಕಟ ಉಂಟಾಗಿದೆಂದು ಬರದದ್ದಕ್ಕೆ ದರ ಜವಾಬು ತಾವು ಬರೆಸಿ ಕಳುಹಿದ್ದರಲ್ಲಿ, "ಸಮುದ್ರದ ದಾರಿಗಾಗಿಯೂ ಗಟ್ಟದ ದಾರಿಗಾಗಿಯೂ ಅಲ್ಲಿಗೂ ಇಲ್ಲಿಗೂ ವ್ಯಾಪಾರ ನಡಸುವದರಲ್ಲಿ ಸರಕಾರಿ ಒಂದು ಜಹಜು ಇದೆ ಎಂಬದಾಗಿಯೂ, ಅವರ ಬಗ್ಯೆ ಆಳು ಎರಡು ಕಂಬ ಉಳ್ಳಂಥಾ ಜಹಜಿನಲ್ಲಿ ಅಕ್ಕಿ ತುಂಬಿಸಿ, ವ್ಯಾಪಾರಕ್ಕೆ ಹೊರಟುಹೋದರು ಎಂಬದಾಗಿಯೂ, ಆ ಜಹಜು ಮಾರಿಸು ಎಂಬ ಒಂದು ಫರಾಶೀಸರ ದ್ವೀಪಾಂತರದಲ್ಲಿ ಹೋಯಿತು ಎಂಬದಾಗಿಯೂ, ಅಲ್ಲಿಂದ ಬರುವಾಗ್ಯೆ, ಫರಾ ಶೀಸರನ್ನೂ, ಕೆಲವು ಕರೀ ಆಳುಗಳನ್ನೂ ಸಹಾ, ನಾಲ್ವತ್ತು ಆಳಿನಲ್ಲಿ ಹತ್ತು ಹನ್ನೆರಡು ಅಕ್ಕಸಾಲೆ ಬಡಾಯಿ ವಗೈರೆಯವರು, ಮೇಲಾದವರು ಚಾಕರರು ಸಹಾ, ಜಹಜಿನ ಮಜೂರಿ ಕೊಟ್ಟು ತಮ್ಮ ಸೀಮೆಗೆ ಕಾಮಗಾರಿ ಕೆಲಸಾ ಮಾಡುವ ಬಗ್ಯೆ ಬಂದು ಇದ್ದಾರೆ ಎಂಬದಾಗಿಯೂ ಚಾಕ್ರಿ ಮಾಡುವದಕ್ಕೆ ಮನಸ್ಸು ಇದ್ದವರಿಗೆ ಚಾಕ್ರಿ ಕೊಟ್ಟು ಇದ್ದೀರಿ ಎಂಬದಾಗಿಯೂ, ಬಾಕಿ ಮನುಷ್ಯರು ಸರಕಾರದಿಂದಾ ಹೋದರು ಎಂಬದಾಗಿಯೂ, ಫರಾಶೀಸರು ಪರದ್ರೋಹ ಮಾಡುವಂಥವರು ದುಷ್ಟತನ ಮಾಡುವಂಥವರು, ಆದ್ದರಿಂದ, ಎರಡು ಸರಕಾರವು ತಮ್ಮತಮ್ಮಲ್ಲಿ ಮನಸ್ಸಿನಲ್ಲಿ ಒಂದು ಜಗಳಕ್ಕೆ ಆಕರ ಮಾಡುವದಕ್ಕೆ ಫರಾಶೀಸರು ಈ ಬಗೆಯಿಂದ ಒಂದು ವರ್ತಮಾನ ಪ್ರಸಿದ್ಧ ವಾಗಿ ತಿಳಿಯುವ ಹಾಗೆ ಮಾಡಿದರು" ಎಂದು ಬರೆಯಲಾಯಿತು.

ತಾವು ನಮಗೆ ಬರೆಸಿ ಕಳುಹಿಸುವದಕ್ಕೆ ಮೊದಲು, ಈ ವರ್ತಮಾನವು ವಿಚಾರದಿಂದ ನಮಗೆ ತಿಳಿಯದೆ ಹೋಯಿತು. ಆ ಫರಾಶೀಸರು, ತಾವು ಸಹಾ ಒಂದು ದೋಸ್ತಿ ಆದ್ದರಿಂದ, ನಮ್ಮ ಸಂಕಟಗಳ ತಮಗೆ ಬರೆಸಿ ಕಳುಹಿದ್ದು ಈ ಕಾರ್ಯಕ್ಕೆ ಏನೂ ಆಲ್ಲಾ. ಉಂಟಾದ ಕಾರ್ಯಗಳನ್ನು ನಾವು ತಮಗೆ ಬರೆಸಿ ಕಳುಹಿದ್ದು ತಾವು ನಮಗೆ ಬರೆಸಿ ಕಳುಹಿದ್ದು, ಒಂದಕ್ಕೆ ಒಂದು ಸೇರದೆ ಅಜಗಜಾಂತರವಾಗಿ ಇದೆ. ನಾವು ತಮಗೆ ತಿಳಿಸಿ ಇರುವಂಥಾ ಉಂಟಾದ ಲೇವಾದೇವಿಗಳು ಯಾವತ್ತು ತಾವು ಬಹುಮಾನವಾದ ಇಂಗ್ರೇಜ ಕುಂಪನಿಗೂ, ಅವರ ದೋಸ್ತರಿಗೂ ಸಹಾ ಈ ವರೆಗೆ ಮಾಡತಕ್ಕ ಪ್ರಕಾರ ಅಲ್ಲದೆ ಒಂದು ಬಂಧುತ್ವ ತಮಗೂ ಫರಾಶೀಸರಿಗೂ ಇದೆಯೆಂಬದಾಗಿ, ಒಂದೂ ಸಂಶಯ ವಿಲ್ಲದೆ ತಿಳಿಯತಕ್ಕ ಬಗ್ಯೆ ಬೇಕಾದ ಸಾಕ್ಷಿ ಇಲ್ಲದೆ ಇದ್ದರೆ, ನಾವಾದರೂ ನಮ್ಮ ಸ್ನೇಹಿತರಾದರೂ ಜಾಗ್ರತೆ ಮಾಡುವದಕ್ಕೂ ಉಪೇಕ್ಷೆ ಮಾಡುವದಕ್ಕೂ ಸನ್ನಾಹಕ್ಕೆ ಬೇಕಾದ್ದು ತಯಾರು ಮಾಡುವದಕ್ಕೆ ಭಾವಿಸಿ ಇರುವದರಿಂದಾ, ತಮ್ಮ ಆಲೋಚನೆಗಳು ತರಿಸಿಕೊಂಡ ಭಾವನೆ ಮಾಡಿದ್ದು ತಯಾರು ಮಾಡುತ್ತಿದ್ದಿಲ್ಲವಷ್ಟೆ. ನವಂಬರ ತಿಂಗಳು ೮ನೇ ತಾರೀಕು ತಮಗೆ ಬರೆಸಿ ಕಳುಹಿಸಿ ಇರುವದರಲ್ಲಿ ನಮಗೆ ತಿಳಿದು ಇರುವ ಆಲೋಚನೆಗಳು ಅದರಲ್ಲಿ ಬರದು ಇರುವದಕ್ಕಿಂತಾ ವಿವರವಾಗಿ ತಮಗೆ ಬರೆಸಿ ಕಳುಹಿಸಿ ಇದ್ದೀತು. ಬಹುಮಾನವಾದ ಇಂಗ್ರೇಜ ಕುಂಪನಿಯು ಅವರ ಬಂಧುಗಳು, ಅವರ ದೋಸ್ತಿಗೆ ಬಹಳ ಶತ್ರುತ್ವವಾಗಿ ಇರುವ ದಾರಿ ಉಂಟುಮಾಡುವದಕ್ಕೆ, ಹಿಂದು ರಾಜ್ಯದಲ್ಲಿ ಹಲವು ಒಗೆ ಬಲಾಢ್ಯರ ಸಂಗಡ ದೋಸ್ತಿ ಆಗಿ ತಾವು ಪ್ರಯತ್ನ ಮಾಡಿದ್ದು, ಕೆಲವು ದಿವಸ ಆಗುವದಕ್ಕೆ ಮುಂಚೆ ನಮಗೆ ತಿಳಿಯಲಾಯಿತು. ಆದರೂ ಆ ಪ್ರಕಾರವಾಗಿ ಇರುವ ದಾರಿ ಉಂಟು. ಇರುವದಕ್ಕೆ ಬೇಕಾದ್ದು, ಯುದ್ಧಕ್ಕೆ ಬೇಕಾದ್ದು, ಪ್ರಯತ್ನ ಮಾಡುವಂಥಾದ್ದು ಕಾಣಬಂದರೂ, ತಮ್ಮ ದೋಸ್ತಿಯಿಂದ ತಿಳಿದುಬಂದರೂ, ನ್ಯಾಯ ರೀತಿಯಿಂದಾ ಇದ್ದು, ರಕ್ಷಣ್ಯ ಮಾಡಿಕೊಳ್ಳುವ ಬಗ್ಯೆ ಉಂಟಾದ ಆಲೋಚನೆಯಿಂದಲೂ ತಮ್ಮ ಮಾತು ಬರದು ಕಳುಹಿಸಿ ಇರುವ ಪ್ರಕಾರ ಅಲ್ಲದೆ ಇರುವದರಿಂದಲೂ, ತಮ್ಮ ದೋಸ್ತಿಗೆ ಇರುವ ಗುಣಗಳಿಗೆ ಅಲ್ಲದೆ ಇರುವದರಿಂದಲೂ, ಶತ್ರುವಾಗಿ ಇರುವಂಥಾದ್ದು ಉಂಟಾದ್ದು ಉಪೇಕ್ಷೆ ಮಾಡೀರಿ ಎಂಬದನ್ನು ನಾವು ಆಗ್ರಹಿಸಿ ಇದ್ದೆವು.

ಮೇಲಾಗಿ, ಬೈನಾಡ ಸೀಮೆ ತಮ್ಮ ಅಧೀನ ಎಂದು, ತಾವು ಫಿರಿಯಾದಿ ಮಾಡಿದ್ದು ನಾವು ವಿಚಾರಣೆ ಮಾಡಿದ್ದರಲ್ಲಿ, ತಮ್ಮ ಅವಕಾಶಕ್ಕೆ ಯಥಾರ್ಥ ವಾಗಿ ಇರುವ ನ್ಯಾಯಕ್ಕೆ ಕೊಡುವ ಬಗ್ಯೆ, ತಾವು ನಾವು ದೋಸ್ತಾರರಾದ್ದ ರಿಂದಾ ಬಾಯಾಚಾರಕ್ಕೆ ಸಲವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ಧನೆ ಆಗಿ ಇರಬೇಕು, ಎಂಬದಾಗಿ ಇರುವ ಆಗ್ರಹ ನಮಗೆ ಉಂಟೆಂಬದಾಗಿ, ಒಂದೂ ಸಂಶಯವಿಲ್ಲದ ಒಂದು ಸಾಕ್ಷಿ ತೋರಿಸಿ ಕೊಟ್ಟು ಇದ್ದ ಸಂಗಡಲೇ ಫರಾಶೀಸರ ದ್ವೀಪದಿಂದ ಉಂಟಾದ ಪ್ರಸಿದ್ಧವಾಗಿ ಇರುವ ಕಾಗದದ ಯಥಾರ್ಥ ವಾಗಿ ಇರುವ ನಕಲು ನಮಗೆ ಬಂದು ಸೇರಿತು. ಅದರ ನಕಲು ಫಾರ್ಶಿ ಬರಹದಲ್ಲು ಉತಾರಿಸಿ, ಈ ಕಾಗದದ ಸಂಗಡ ಕಳುಹುತ್ತಾ ಇದ್ದೇವೆ. ಈ ಪ್ರಸಿದ್ಧವಾಗಿ ಇರುವ ಕಾಗದವಲ್ಲದೆ, ತಮ್ಮ ಕಡೆ ವಕೀಲರು ಫರಾಶೀಸರ ದ್ವೀಪದಲ್ಲಿ ನಡಿಸಿ ಇದ್ದದ್ದರ ಅಭಿಪ್ರಾಯವು ಯಾವತ್ತೂ ತಾವು ಕೊಟ್ಟು ಇರುವ ಹುಕುಮಿನಲ್ಲಿ ಅವರು ನಡಸಿ ಇರುವಂಥಾದ್ದೂ, ಅವರು ಹಿಂದಕ್ಕೆ ಬಂದಮೇಲೆ ತಮ್ಮ ನಡತೆಗಳ ಅಭಿಪ್ರಾಯವೂ ನಮಗೆ ವಿವರವಾಗಿ ತಿಳಿಯು ಬಂದು ಇದೆ. ನಮ್ಮ ಕಡೆಯಲ್ಲಿರುವ ಸಾಕ್ಷಿಯಿಂದ ಮುಂದೆ ಬರೆಯು ವಂಥಾದ್ದು ಉಂಟಾದ್ದು ಯಾವತ್ತೂ ಆಗುತ್ತಾ ಇದೆ. ತಾವು ಎರಡು ವಕೀಲರ ನೇಮಕ ಮಾಡಿ ಕುಳುಹಿಸಿ ಇದ್ದು, ಅವರು ಫರಾಶೀಸರ ದ್ವೀಪಕ್ಕೆ ಹೋಗ ಬೇಕೆಂದು, ಮಂಗಲೂರಿಂದ ಜಹಜಿನ ಮೇಲೆ ಹತ್ತಿ, ಆ ದಿಕ್ಕಿಗೆ ೧೭೯೯ನೇ ಜನವರಿ ತಿಂಗಳ ಕಡೇಲಿ ಹೋಗಿ ತಲಪಿದರು. ತಮ್ಮ ಕಡೆ ವಕೀಲರು ಹತ್ತಿ ಇರುವ ಜಹಜು ಫರಾಶೀಸರ ದ್ವೀಪದಲ್ಲಿ ನೊರ್ತ್‌ವೆಸ್ಟು ಎಂಬ ತೋರ ಮುಖದಲ್ಲಿ ಬಂದು ಹೋಗುವಾಗ್ಯೆ, ತಮ್ಮ ನಿಶಾನಿ ಜಹಜಿನಲ್ಲಿ ಹಾಕಿ ಇತ್ತು. ವಕೀಲರು ಅಲ್ಲಿ ಇಳಿಯುವಾಗ್ಯೆ, ಸಂತೋಷ ಫಿರಂಗಿ ಹೊಡೆಯಲು, ಮಾನ ಮರಿಯಾದೆಯಿಂದಲೂ ಬಹುಮಾನವಾಗಿಯೂ ಈ ಪ್ರಕಾರವಾಗಿ ಇರುವ ಸಂತೋಷದಿಂದಾ ಎಲ್ಲರಿಗೂ ತಿಳಿಯುವ ಹಾಗೆ ಇಳಿಸಿ, ಫರಾಶೀಸರ ಸಂಸ್ಥಾನ ದಲ್ಲಿ ಕಬೂಲು ಮಾಡಿಕೊಂಡರು. ಈ ಫರಾಶೀಸರ ದ್ವೀಪದಲ್ಲಿ ಇರುವ ಪರಿ ಯಂತರ ಅವರ ಸರಕಾರದವರು ವೆಚ್ಚ ಸಚ್ಚಕ್ಕೆ ಕೊಟ್ಟು ಇರಿಸಿಕೊಂಡು ಇದ್ದರು. ಫರಾಶೀಸರ ದ್ವೀಪದಲ್ಲಿ ತಮ್ಮ ಕಡೆ ವಕೀಲರು ಸೇರುವದಕ್ಕೆ ಮೊದಲು, ಫರಾ ಶೀಸರ ಕಡೆಯಿಂದ ತಮಗೆ ಒಂದು ಸಹಾಯ ಕೊಟ್ಟೇವು ಎಂಬದಾಗಿ, ಒಂದು

ವರ್ತಮಾನ ಕೇಳಲೂ, ಕೊಡಲೂ ಇಲ್ಲಾ. ತಮಗೂ ಕುಂಪನಿಗೂ ಒಂದು ಯುದ್ಧದ ಸಂದರ್ಭ ತೋರುವದಕ್ಕಾಗಿಯೂ ಕಾರಣ ಕಾಣುವದಕ್ಕಾಗಿಯೂ ಇಲ್ಲಾ. ಮೇಲಾಗಿ, ತಮ್ಮ ಕಡೆ ವಕೀಲರು ಅಲ್ಲಿ ಸೇರಿದಮೇಲೆ, ಎರಡು ದಿವಸದ ವಳಗೆ ಈಗ ತಮಗೆ ಕೊಟ್ಟು ಕಳುಹಿಸಿ ಇರುವ ಪ್ರಸಿದ್ಧವಾಗಿ ಇರುವ ಕಾಗದ ನಕಲು ನೊರ್ತ್‍ವೆಸ್ಟು ಎಂಬ ತೋರಮುಖದಲ್ಲಿ ಪ್ರಸಿದ್ಧವಾಗಿ ಇರುವ ದಿಕ್ಕಿನಲ್ಲಿ ಹತ್ತಿಸಿ ತಿಳಿಸಿದರು. ಆ ಕಾಗದದಲ್ಲಿ ಬರದು ಇರುವ ಅಭಿಪ್ರಾಯ ವಾದರೂ ವಚನವಾದರೂ ಯುಕ್ತವಲ್ಲಾ ಎಂಬದಾಗಿ, ತಮ್ಮ ವಕೀಲರು ಪ್ರಸಿದ್ಧವಾಗಿ ಹೇಳಿ ವಿರೋಧ ಮಾಡದೆ, ಅದರಲ್ಲಿ ಬಹುಮಾನವಾದ ಇಂಗ್ರೇಜ ಕುಂಪನಿಗೆ ಹಿಂದು ಸೀಮೆಯಲ್ಲಿ ಇರುವ ಅವಕಾಶಗಳಿಗೆ ಪ್ರತಿಕೂಲವಾಗಿ ತಾವು ಲಡಾಯಿ ಮಾಡುವದಕ್ಕೆ ನಿಶ್ಚೈಸಿದ್ದೀರೆಂದು ಬರದ ಅಭಿಪ್ರಾಯವನ್ನು ಅವರು ಪ್ರಸಿದ್ಧವಾಗಿ ಎಲ್ಲಾ ದಿಕ್ಕಿನಲ್ಲೂ ತಿಳಿಸಿದರು. ಅದಲ್ಲದೆ ಪ್ರಸಿದ್ಧ ಕಾಗದದ ನಕಲು ಅವರ ಮನೆಯಿಂದ ಎಲ್ಲರಿಗೂ ಕೊಟ್ಟರು. ಈ ಪ್ರಕಾರ ವಾಗಿ ಇರುವದರಿಂದ ಹಿಂದೂ ಸೀಮೆಯಲ್ಲಿ ಬಹುಮಾನವಾದ ಇಂಗ್ರೇಜ ಕುಂಪನಿಗೆ ಸೇರಿದ ಅವಕಾಶಗಳಲ್ಲಿ ತಾಮಸ ಮಾಡದೆ, ತಾವು ಜಬರದಸ್ತಿ ಯಿಂದ ಹದ್ದು ಮೀರಿ, ಲಡಾಯಿ ಮಾಡೀರಿ ಎಂಬದಾಗಿ ಇರುವ ವಿಶ್ವಾಸ ಆ ದ್ವೀಪದಲ್ಲಿ ಎಲ್ಲರಿಗೂ ತಿಳಿಸಿ ಇದ್ದರು. ಸದರಹು ಬರದು ಇರುವ ಪ್ರಸಿದ್ಧ ವಾಗಿ ಇರುವ ಕಾಗದದ ಪ್ರಕಾರ ಫರಾಶೀಸರ ಸಂಸ್ಥಾನದವರು ನಡಸುವದಕ್ಕಾಗಿ ಭಾವಿಸಿ ಇರುವಲ್ಲಿ ತಮ್ಮ ವಕೀಲರು ದ್ವೀಪದಲ್ಲಿ ಇದ್ದರು. ತಮ್ಮ ಚಾಕ್ರಿಯಲ್ಲಿ ಆಳುಗಳನ್ನ ಇರಿಸುವ ಬಗ್ಯೆ ತಮ್ಮ ವಕೀಲರು ತಮ್ಮ ಹೆಸರಿಗೆ ಅವರವರಿಗೆ ಈ ಪ್ರಕಾರ ಕೊಡುತ್ತೇವೆ ಎಂಬದಾಗಿ ಹೇಳಿ ನಿಶ್ಚಯಮಾಡಿ ಇದ್ದರು. ಆದ್ದ ರಿಂದ ಪ್ರಸಿದ್ಧವಾಗಿ ಇರುವ ಕಾಗದ ತಿಳಿಸುವ ಬಗ್ಯೆ ಸಹಾಯ ಮಾಡಿ ಕೊಟ್ಟರು. ಕುಂಪನಿಯವರ ಸಂಗಡ ಯುದ್ಧಾ ಮಾಡುವದಕ್ಕೆ ತಮ್ಮ ಹೆಸರಿಗೆ ಮನುಷ್ಯ ರನ್ನ ತಯಾರು ಮಾಡಿಸುವದರಲ್ಲಿ, ಅವರ ಅಧಿಕಾರವು ಎದುರು ಇಲ್ಲದೆ ಇರು ವದರಿಂದ, ಆಳುಗಳು ಸಿಕ್ಕಿದಷ್ಟು ತಯಾರು ಮಾಡಬೇಕೆಂಬದಾಗಿ ಹೇಳಿ ಇಟ್ಟು ಇದ್ದರು. ಈಗ ಪ್ರಸಿದ್ಧವಾಗಿ ಇರುವ ಕಾಗದ ಅಭಿಪ್ರಾಯದ ಮೇರೆಗೆ ತಮ್ಮ ವಕೀಲರು ತಮ್ಮ ಚಾಕ್ರಿಯಲ್ಲು ಇರುವದಕ್ಕೆ ತಮ್ಮ ಹೆಸರಿಗೆ ಫರಾಶೀ ಸರು ಮೇಲಾದವರು ಸಹಾ, ಈ ಪ್ರಕಾರ ನಡೆಯಬೇಕೆಂಬದಾಗಿ, ಕರಾರು

ಮಾಡಿ ಇಟ್ಟರು. ಅದರಲ್ಲಿ ತಾವು ಪ್ರತ್ಯೇಕವಾಗಿ ಬಹುಮಾನವಾದ ಇಂಗ್ರೇಜ ಕುಂಪನಿ ಸರಕಾರದ ಸಂಗಡ ಲಡಾಯಿ ಮಾಡುವದಕ್ಕೆ ನಿಶ್ಚಯ ಮಾಡಿ ಇರುವದರಿಂದ, ಸಹಾಯ ಮಾಡುವದಕ್ಕಾಗಿ ತಮ್ಮ ಹೆಸರಿಗೆ ಮೂಸೆರ ದ್ಯೂಬುಕ್ ಸಾಹೇಬರು ತಮ್ಮ ಚಾಕ್ರೀಲಿರಿಸಿ, ಕರಾರು ಮಾಡಿ ಇಟ್ಟು ಇದ್ದರು. ಈ ಪ್ರಕಾರದಿಂದ ಈ ಪ್ರಸಿದ್ಧವಾಗಿ ಇರುವ ಕಾಗದ ಅವರು ಫರಾಶೀಸರ ದ್ವೀಪಕ್ಕೆ ಬಂದಾಗಲೇ ಉಂಟಾಗಿ, ಅವರ ಆಳುಗಳಿಂದ ಎಲ್ಲರಿಗೂ ತಿಳಿಸಿ, ಅವರಿಂದ ತಾನೆ ಉಂಟಾಯಿತು ಎಂದು ಅವರ ಪ್ರಸಿದ್ಧವಾಗಿ ಇರುವ ಮಾತಿನಿಂದಲೂ ಅವರ ಸಮ್ಮತದಿಂದಲೂ ತೋರುತ್ತದೆ. ಆಮೇಲೆ ಅದರ ಅಭಿಪ್ರಾಯದ ಪ್ರಕಾರವೇ ಅವರೇ ನಡಸಿದರು. ೧೭೯೮ನೇ ಮಾರ್ಚ ತಿಂಗಳು, ೨ನೇ ತಾರೀಕು ತಮ್ಮ ಕಡೆ ವಕೀಲರು ನೋರ್ತವೆಸ್ಟು ಎಂಬ ದಿಕ್ಕಿನಿಂದ ಹೊರಟು, ತಮ್ಮ ಹೆಸರಿಗೆ ಕೂಡಿಸಿ ಇಟ್ಟು ಇರುವ ಆಳುಗಳ ಸಂಗಡ ಲಪ್ರೆನೂಸ ಜಹಜಿನಲ್ಲಿ ಹತ್ತಿ, ಹೊರಟು ಬಂದರು. ಈ ಫರಾಶೀಸ ಜಹಜು ತಮ್ಮ ಕಡೆ ವಕೀಲರ, ತಮ್ಮ ಚಾಕ್ರಿಗೆ ಬಹುಮಾನವಾದ ಇಂಗ್ರೇಜ ಕುಂಪನಿಗೆ ಶತ್ರುವಾಗಿ ಇರುವವರ ಸೀಮೆಯಿಂದಾ ನಿಶ್ಚಯ ಮಾಡಿದ ಆಳುಗಳನ್ನ ೧೭೯೮ನೇ ಎಪ್ರೆಲು ತಿಂಗಳು, ಏಕದೇಶ ೨೬ನೇ ತಾರೀಕು ಮಂಗಲಾಪುರಕ್ಕೆ ಬಂದು, ತಲಪಿಸಿತು. ಈ ಬಗ್ಯೆ ಆಳುಗಳನ್ನ ತಮ್ಮ ರಾಜ್ಯದಲ್ಲಿ ಇಳಿಸುವದಕ್ಕೆ ಸಮ್ಮತಿಸಿ, ಈ ಕೆಲಸದಲ್ಲಿ ತಮ್ಮ ಕಡೆ ವಕೀಲರ ನಡತೆ ತಮಗೆ ಅಸಮ್ಮತವಾಗಿ ತೋರಿಸಿ ಕೊಡದೆ, ಈ ಬಗ್ಯೆ ಫರಾಶೀಸರ ಆಫೀಸರನ್ನೂ, ಮೇಲಾದ ಮುಖ್ಯಸ್ಥರನ್ನೂ ಸಹಾ, ತಾವು ಬಹುಮಾನದಿಂದಲೂ, ತಮಗೆ ಖುಷಿ ಆಗಿ ಇರುವ ಗುರ್ತಿನಿಂದಲೂ ಸಹಾ ಇಳಿಸಿಕೊಂಡಿರಿ. ಬಹುಮಾನವಾದ ಇಂಗ್ರೇಜ ಕುಂಪನಿ ಸಂಗಡ ಲಡಾಯಿ ಮಾಡುವದಕ್ಕೆ ಸಲವಾಗಿ, ಈ ಪ್ರಕಾರ ಕುಮುಕು ಮಾಡಿಸಿಕೊಂಡು, ಫೌಜಿನಲ್ಲಿ ಅಧಿಕವಾಗಿ ಇರುವ ಪಾಲು ಈಗ ತಮ್ಮ ಚಾಕ್ರಿಯಲ್ಲು ಇಟ್ಟು ಇದ್ದೀರಿ. ಸದರಹು ಬರದು ಇರುವ ಅಭಿಪ್ರಾಯಗಳಲ್ಲಿ ಮುಂದೆ ಬರೆಯುವ ಪ್ರಕಾರ ಬಂದೀತು.

ಒಂದನೆ ಕಲಂ : ತಾವು ಫರಾಶೀಸರ ದ್ವೀಪಕ್ಕೆ ಹುಕುಂ ಮಾಡಿ ಕಳುಹಿದ ವಕೀಲರು ಬಹುಮಾನವಾದ ಇಂಗ್ರೇಜ ಕುಂಪನಿಗೂ ತಮಗೂ ಲಡಾಯಿ ಹತ್ತಿಸಿ, ಲಡಾಯಿ ನಡಸಬೇಕಾದ್ದಕ್ಕೆ, ಫರಾಶೀಸರ ದಾರಿ ಇಟ್ಟು, ಕರಾರು

ಮಾಡಿ, ನಿಶ್ಚಯ ಮಾಡಿದರು ಎಂಬದಾಗಿಯೂ, ಆ ಪ್ರಕಾರ ಉಂಟಾದರೆ, ಅವರ ಬಾಯಾಚಾರ ದೋಸ್ತರಾದ, ಪೇಶ್ವೆಯವರಿಗೂ ನಿಜಾಮಲ್ಲಿಗೂ ಸಹಾ, ಲಡಾಯ ಮಡಗಿ ಇದೆ ಎಂಬದಾಗಿಯೂ.

ಎರಡನೇ ಕಲಂ : ಈ ಯುದ್ಧಾ ಮಾಡಿಕೊಂಡು ಇರುವ ಬಗ್ಯೆ, ತಮ್ಮ ಕಡೆ ವಕೀಲರು ಲಡಾಯಕ್ಕೆ ಬೇಕಾದ ಸಹಾಯ ಫರಾಶೀಸರ ಸಂಗಡ ಕೇಳಿ ದರು ಎಂಬದಾಗಿಯೂ, ಕುಂಪನಿಯವರ ಸಂಗಡ ಯುದ್ಧಾ ಮಾಡುವದಕ್ಕೆ ಶುರು ಆಗಿದೆಂಬದಾಗಿಯೂ, ಫರಾಶೀಸರು ಕೊಡಬೇಕಾದ ಸಹಾಯಗಳು ಸಿಕ್ಕುವದಕ್ಕೆ ಮಾತ್ರ ತಾಮಸವಾಗಿ ಇದೆಯೆಂಬದಾಗಿಯೂ, ಈ ಪ್ರಕಾರ ಕುಂಪನಿಯವರ ಸಂಗಡ ಲಡಾಯ ಉಂಟಾದರೆ, ಅವರ ದೋಸ್ತರ ಸಂಗಡ ಅದೇ ಪ್ರಕಾರ ಉಂಟಾದೀತಷ್ಟೆ ಎಂಬದಾಗಿಯೂ.

ಮೂರನೇ ಕಲಂ : ಲಡಾಯಿಗೆ ಸಲವಾಗಿ ತಮ್ಮ ಕಡೆ ವಕೀಲರು ಕುಂಪನಿಯವರ ಕೂಡಲೂ, ಅವರ ದೋಸ್ತದಾರರಾದಂಥಾವರ ಕೂಡಲೂ, ಶತ್ರುರೂಪದಿಂದ ಕರಾರು ಮಾಡಿಕೊಂಡದ್ದು ಸಾಧಿಸುವ ಬಗ್ಯೆ ಪ್ರಸಿದ್ಧವಾದ ಕಾಗದದಲ್ಲಿ ಪ್ರಮಾಣವಾಗಿ ಬರೆಸಿ ಇರುವ ಪ್ರಕಾರ, ಫರಾಶೀಸರ ದ್ವೀಪದಲ್ಲಿ ವಂದು ಬಲ ಸಹಾ ಕೂಡಿಸಿ, ನಿಲ್ಲಿಸಿ ಇದ್ದರು ಎಂಬದಾಗಿಯೂ.

ನಾಲ್ಕನೇ ಕಲಂ : ತಾವು ತಮ್ಮ ಕಡೆ ವಕೀಲರ ನಡತೆ ನುಡುತೆ ಬೇಕಾದ ಹಾಗೆ ವಳ್ಳೇದು ಎಂಬದಾಗಿ ನಿಶ್ಚಯ ಮಾಡಿ, ಬಹುಮಾನವಾದ ಇಂಗ್ರೇಜ ಕುಂಪನಿ ಸಂಗಡಲೂ ಅವರ ದೋಸ್ತರ ಸಂಗಡಲೂ ಯುದ್ಧಾ ಮಾಡುವದಕ್ಕೆ ತಯಾರು ಮಾಡಿದ ಫರಾಶೀಸರ ಕುಮಕು ತಮ್ಮ ಸೀಮೆಯಲ್ಲಿ ಇಳಿಯುವದಕ್ಕೆ ಸಮ್ಮತಿಸಿ ಇದ್ದಿರಿ. ಆಮೇಲೆ ಆ ಬಗ್ಯೆ ಕುಮಕು ತಮ್ಮ ಫೌಜು ಸಂಗಡಲೇ ನಿಲ್ಲಿಸಿ ಇದ್ದಿರಿ ಎಂಬದಾಗಿಯೂ.

ಐದನೇ ಕಲಂ : ಈ ಪ್ರಕಾರ ತಮ್ಮ ನಡತೆಯಿಂದಾ ಫರಾಶೀಸರ ದ್ವೀಪ ದಲ್ಲಿ ಪ್ರಸಿದ್ಧವಾಗಿ ಎಲ್ಲಾವರಿಗೂ ತಿಳಿಸಿದ ಕಾಗದದಲ್ಲಿ ಬರೆಸಿದ ಪ್ರಕಾರ, ನಡಸತಕ್ಕ ಬಗ್ಯೆ ಉಂಟಾದ ಕಾರ್ಯಗಳು ಯಾಪತ್ತು ಮಜಬೂತು ಮಾಡಿ ದಿರಿ ಎಂಬದಾಗಿಯೂ ನಡಸತಕ್ಕ ಕಾರ್ಯಗಳ ನಡಸಿದಿರಿ ಎಂಬದಾಗಿಯೂ, ಪ್ರಸಿದ್ಧವಾಗಿ ಇರುವ ಕಾಗದದಲ್ಲಿ ಬರದ ಪ್ರಕಾರ ಫಲವಾಗುವ ಬಗ್ಯೆ ಆರಂಭ ವಾಗಿ ಇರುವ ನಡತೆ ಶುರು ಆಯಿತೆಂಬದಾಗಿಯೂ, ಅದರಿಂದ ತಮ್ಮ ಬಗೆ

ವಕೀಲರು ನಡೆಯುವ ನಡತೆ ತಮ್ಮ ಹುಕುಂ ಪ್ರಕಾರ ಇಲ್ಲಾ ಎಂಬದಾಗಿ ಇರುವ ಆಲೋಚನೆ ಉಪೇಕ್ಷೆ ಮಾಡಿದಿರಿ ಎಂಬದಾಗಿಯೂ.

ಆರನೇ ಕಲಂ: ಬಹುಮಾನವಾದ ಇಂಗ್ರೇಜ ಕುಂಪನಿಯವರ ಸಂಗಡಲೂ ಅವರ ದೋಸ್ತಾರರ ಸಂಗಡಲೂ ಶತ್ರು ಆಗಿ ಇರುವವರಲ್ಲಿ ಕರಾರು ಮಾಡಿ ಇರುವದನ್ನು ಆ ಪ್ರಕಾರ ಮಾಡತಕ್ಕ ಬಗ್ಯೆ ಬೇಕಾದ ಹಾಗೆ, ತಾವು ಕೆಲವು ದಿವಸಕ್ಕೆ ಮುಂಚೆ ಲಡಾಯಿ ಶುರು ಮಾಡುವದಕ್ಕೆ ತಾವು ತಯಾರು ಮಾಡುತ್ತಾ ಇದ್ದೀರಿ ಎಂಬದಾಗಿಯೂ.

ಏಳನೇ ಕಲಂ: ತಮ್ಮ ಕಡೆ ವಕೀಲರ ಮುಖಾಂತರವಾಗಿ ಫರಾಶೀಸರ ಸಂಗಡ ಅಪೇಕ್ಷಿಸಿಕೊಂಡ ಸಹಾಯಗಳು ಅವರು ಕೊಟ್ಟದ್ದೇ ಉಂಟಾದರೆ, ಬಹುಮಾನವಾದ ಇಂಗ್ರೇಜ ಕುಂಪನಿ ಅವಕಾಶಗಳಲ್ಲಿ ಮಾಡತಕ್ಕ ಬಗ್ಯೆ ಉಂಟಾದ ಬಗೆಗಳು ಕಾಣದೆ, ಹದ್ದು ದಾಟುವ ಬಗ್ಯೆ ಬೇಕಾದ್ದು ಯಾವತ್ತು ತಯಾರು ಆಗಿ ಇದೆ ಎಂಬದಾಗಿಯೂ.

ಎಂಟನೇ ಕಲಂ: ತಾವು ಹಲವು ಬಗೆ ಈ ಪ್ರಕಾರ ನಡತೆಯಿಂದಾ, ತಾವು ಬಹುಮಾನವಾದ ಇಂಗ್ರೇಜ ಕುಂಪನಿಯೂ, ಅವರ ಬಂಧುಗಳು ಸಹಾ ತಮ್ಮಲ್ಲಿ ಸಮಾಧಾನವಾಗಿಯೂ ಸಖ್ಯವಾಗಿಯೂ ಇರಿಸುವ ಬಗ್ಯೆ, ಮಾಡಿ ಇರುವ ಕರಾರು ಉಪೇಕ್ಷೆ ಮಾಡಿ ಇದ್ದೀರಿ ಎಂಬದಾಗಿಯೂ, ನವಂಬರ ತಿಂಗಳು ೮ನೇ ತಾರೀಕು ತನುಗೆ ಬರೆಸಿ ಕಳುಹಿದ ಕಾಗದದಲ್ಲಿ ನಾವು ಫಿರಿ ಯಾದು ತಿಳಿಸಿದ್ದು, ಸದರಹು ಬರದು ಇರುವ ಎಂಟು ಕಲಮಿನಲ್ಲಿ ಬರದು ಇರುವ ಸಂಗತಿಗಳಿಂದಲೇ ಬರದು ತಿಳಿಸುತ್ತಾ ಇದ್ದೇವೆ. ಆ ಬಗೆ ಸಂಗತಿ ಗಳಿಂದ ತಾನೆ ಕೆಲವು ಸಂವತ್ಸರದಿಂದಾ ಒಳಗಾಗಿ ತಮ್ಮ ನಡತೆ ಕುಂಪನಿಗೂ ಅವರ ಬಂಧುಗಳಿಗೂ ಸಂಶಯವಾಗಿ ಬಹಳ ಆಲೋಚನೆ ಮಾಡತಕ್ಕದ್ದು, ಉಪೇಕ್ಷೆ ಮಾಡತಕ್ಕ ಬಗ್ಯೆ ಈಗ ತಯಾರು ಮಾಡಿ ಇರುವದು, ಇರಿಸಬೇಕಾಗಿ ಇದೆ. ಬಹುಮಾನವಾದ ಇಂಗ್ರೇಜ ಕುಂಪನಿಯು, ಅವರು ದೋಸ್ತರು ಸಹಾ ಅನ್ಯಾಯ ಹೇಳಿ ಇರುವದು ; ತಾವು ಆಗಾಗ್ಯೆ ಲಡಾಯಕ್ಕೆ ತಯಾರು ಮಾಡು ವದು ; ಯುದ್ಧಕ್ಕೆ ಶತ್ರು ಸಂಗಡ ಕರಾರು ಮಾಡುವದು ; ಸಮಾಧಾನವಾಗಿ ಇದೆಯೆಂಬದಾಗಿ ಯೋಚನೆ ಮಾಡಿ ಇರುವ ಸಮಯದಲ್ಲಿ, ಅವರವರಿಗೆ ಯುದ್ಧ ಸಮಯದಲ್ಲಿರುವ ಗುಣದೋಷಗಳೂ, ಆಲೋಚನೆಗಳೂ ಆಗುವ

ಖರ್ಚುಗಳೂ ಅನುಭವಿಸಿ ಇವೆ. ಪ್ರತಿಯಾಗಿ ಮಾಡುವದಕ್ಕೆ ಇಷ್ಟು ಸಂಗತಿ ಗಳು ಉಂಟುಮಾಡಿಕೊಟ್ಟಿದ್ದೇ ಉಂಟಾದರೂ, ಸೇರಿ ಇರುವ ರಾಜ್ಯಗಳಲ್ಲಿ ತಮ್ಮತಮ್ಮಲ್ಲಿ ದೋಸ್ತಿ ಆಗಿರುವವರ ಪರಿಚಯದಿಂದಲೂ ನಡತೆಯಿಂದಲೂ ಒಂದು ಸಮಾಧಾನದ ವಡಂಬಡಿಕೆ ತಮ್ಮಿಂದಾ ಮಾಡಿಸಿಕೊಳ್ಳುವ ಬಗ್ಯೆ ಬೇಕಾದ ಆಗ್ರಹಾ ಕುಂಪನಿಗೂ ಅವರ ಬಂಧುಗಳಿಗೂ ಉಂಟು. ಇಷ್ಟು ದಿನ ಪರಿಯಂತರವೂ ಸಂಶಯವಾಗಿ ಇದ್ದ ಹೇತುಗಳು ವಿಸ್ತಾರ ಮಾಡಿ ತೀರದೆ ಇರುವ ಸಮಯದಲ್ಲಿ, ಆ ಬಗೆ ಸಂಶಯಗಳು ಬಿಟ್ಟುಬಿಡುವದಕ್ಕೆ ತೀರದೆ ಇರುವದರಿಂದಾ, ಅದು ಯಾವತ್ತು ಇನ್ನುಮುಂದೆ ನಡೆಯಬಾರದಂತೆ ಇರುವಂಥಾ ದಾಯಿಯಿಂದಾ ನಮ್ಮ ನಿಮ್ಮ ಬಾಯಾಚಾರ ದೋಸ್ತಿಯು ಹೊಸ್ತಾಗಿ ಉಂಟಾಯಿತು ಎಂದು ಸ್ಥಿರವಾಗಿ ಇರಿಸುವ ಬಗ್ಯೆ ನಾವು ತಯಾ ರಾಗಿ ಇದ್ದೇವೆ.

ಸಖಿತ್ವದಿಂದಲೂ ಸಂತೋಷದಿಂದಲೂ ಅಸ್ತಿಭಾರ ಹಾಕುವ ಬಗ್ಯೆ ರಾಜ್ಯದ ಸೌಖ್ಯ ಎಲ್ಲಾ ಜನರ ದೋಸ್ತಿ ಅನುಭವ ವರ್ಧನೆ ಮಾಡಿಸುವದಕ್ಕೆ, ನಮ್ಮ ನಿಮ್ಮ ಸಮಾಧಾನದಲ್ಲಿ ಅಲ್ಲದೆ, ಅಧಿಕವಾಗಿ ಒಂದು ಒಳ್ಳೇ ದಾರಿ ನೇಮಕ ಮಾಡಿ ತಮಗೆ ತೋರುವದಿಲ್ಲಾ ಎಂಬದಾಗಿ, ತಾವು ಬರದು ಇದ್ದೀರಷ್ಟೆ. ಈ ಆಲೋಚನೆಯಲ್ಲಿ ನಾವು ತಮ್ಮ ಸಂಗಡ ಸಮ್ಮತಿಸಿ ಇದ್ದೇವೆ. ದೋಸ್ತುದಾರರ ಸಂಗಡ ತಾವು ಮಾಡತಕ್ಕ ನಡತೆಯಿಂದಾ ತಮ್ಮ ಬುದ್ಧಿ ಹಲವು ದೂರುಗಳಿಂದಾ ಬಿಟ್ಟುಹೋಗದೆ ಇದ್ದರೆ, ಸಖಿತ್ವದಿಂದಲೂ ಸಂತೋಷ ದಿಂದಲೂ ಪಾಯ ಗಟ್ಟಿ ಮಾಡುವ ಬಗ್ಯೆ ರಾಜ್ಯಗಳ ಸೌಖ್ಯ ಎಲ್ಲಾ ಜನರ ದೋಸ್ತಿ ಅನುಭವವರ್ಧನೆ ಮಾಡಿಸುವ ಬಗ್ಯೆ ಈಗ ಹೊಸ್ತಾಗಿ ಆದರೂ, ಅಧಿಕ ಒಳ್ಳೇದಾಗಿ ಆದರೂ, ಒಂದು ದಾರಿ ಮಾಡಿ ಇಡುವದಕ್ಕೆ ಇಲ್ಲವಲ್ಲಾ. ಮೇಲಾಗಿ ದೋಸ್ತಾರ ಶತ್ರುಗಳಿಂದ ಅವರವರು ಮಾಡತಕ್ಕ ಕಾರ್ಯಾದಿ ಗಳು ಉಂಟುಮಾಡಿ ಇಟ್ಟು ಇರುವದರಿಂದಾ, ನಮಗೂ ತಮಗೂ ಹೊಸ್ತಾಗಿ ಒಂದು ದಾರಿ ಮಾಡಿ ಇರಿಸಬೇಕಾಗಿ ಇದೆ. ಆದ್ದರಿಂದ ನಮ್ಮ ನಿಮ್ಮಲ್ಲಿ ಉಂಟಾದ ಶತ್ರುತ್ವಗಳು ಯಾವತ್ತು ದೋಸ್ತಿ ಆಗಿ ತೀರುವಂಥಾದ್ದಕ್ಕೆ ಬಂಧು ಗಳಾಗಿ ಇರುವ ನಾವು ಸ್ನೇಹಿತರಾಗಿ ಬಂದು, ಪರಿಗ್ರಹಿಸಬೇಕೆಂಬದಾಗಿ, ಇನ್ನೂ ನಾವು ಅಪೇಕ್ಷಿಸುತ್ತಾ ಇದ್ದೇವೆ. ತಮ್ಮ ಬಳಿಯಲ್ಲಿ ಮೇಜರ ದೊವ್ಟನ್

ಸಾಹೇಬರವರು ಬರುವದಕ್ಕೆ ತಮ್ಮ ಸನ್ಮತಿ ಉಂಟಾದರೆ, ಆ ಸರದಾರರನ್ನು, ಬಹುಮಾನವಾದ ಇಂಗ್ರೇಜ ಕುಂಪಸಿಯೂ, ಅವರ ಬಂಧುಗಳೂ, ಇವರ ಬಗೆ ಈಗ ಇರುವ ಮನಸ್ತಾಪಗಳ ಉಪೇಕ್ಷೆ ಮಾಡಿ, ಹೊಸ್ತಾಗಿ ಮುಡಗುವ ದಾರಿ ಮಾಡಿಸುವಂಥಾದ್ದು ಹ್ಯಾಗೆ ಎಂದರೆ, ತಮಗೆ ತಿಳಿಸಿ ಇದ್ದೆವಷ್ಟೆ. ಈ ಪ್ರಕಾರ ನಮ್ಮ ತಮ್ಮ ಸಖಿತ್ವವಾಗಿ ಇರುವ ವಿಸ್ತಾರದಲ್ಲಿ ನಡಸುವ ಬಗ್ಯೆ ದೋಸ್ತದಾರರಿಗೆ ಯಾವಾಗಲೂ ಆಗ್ರಹಾ ಉಂಟಾಗಿ ಇರುವದರಿಂದಾ, ಮೇಜರ ದೊವ್ತನ್ ಸಾಹೇಬರವರು ತಮ್ಮ ಬಳಿಗೆ ಬಂದರೆ, ಎಲ್ಲರಿಗೂ ಸ್ಥಿರ ಇರುವ ಅನುಭವಗಳು ತಿಳಿಯುಬಂದೀತು ಎಂಬದು ನಮಗೆ ನಿಶ್ಚಯವಾಗಿ ತೋರಿ ಇರುವದರಿಂದಾ, ಈ ಸರದಾರನು ತಮ್ಮ ಬಳಿಯು ಬರುವದಕ್ಕೆ ತಾವು ಸಮ್ಮತಿಸುವದಕ್ಕಾಗಿ, ಇನ್ನೊಂದು ಸರ್ತಿ ನಾವು ತಮ್ಮ ಸಂಗಡ ಶುದ್ಧತ್ವ ದಿಂದಾ ಕೇಳಿಕೊಳ್ಳುತ್ತೇವೆ. ಈ ಕಾಗದಕ್ಕೆ ದೋಸ್ತಿಯಿಂದ ದರ ಜವಾಬು ತಾವು ಬರೆಸಿ ಕಳುಹಿಸೀರಿ ಎಂಬದಾಗಿ, ನಾವು ಆಲೋಚನೆ ಮಾಡಿ ಇದ್ದೇವೆ. ಈ ಕಾಗದ ತಮ್ಮ ಸನ್ನಿಧಾನದಲ್ಲಿ ಬಂದ ಕೂದಲೇ ದರ ಜವಾಬು ಬರೆಯುವ ದಕ್ಕೆ ಒಂದು ದಿನಕ್ಕೆ ಅಧಿಕ ತಾಮಸ ಮಾಡದೆ, ಬರದು ಕಳುಹಿಸುವ ಹಾಗೆ ಮಾಡಿಸಬೇಕು.

ಭಾರಿ ಕೆಲಸವಾಗಿ ಇರುವಂಥಾ ಕಾರ್ಯದ ತಾಮಸದಿಂದಾ ಗಾಬರಿ ಆಗಿ ಇರತಕ್ಕ ಫಲವು ಲಭ್ಯವಾಗಿ ಬರುವದು.

ಈ ಕಾಗದವನ್ನು ಕರಡಿಗೋಡಲ್ಲಿ ಜನರಲ್ ಸ್ಟೋಯರ್ಟ್ ಸಾಹೇಬ ರವರು ಕೆಪ್ಟನ್ ಮಾವಿನಿ ಸಾಹೇಬರವರು ಸಹಾ, ಮಹಾಜರವರಿಗೆ ಕೊಟ್ಟರು. ಆ ಬಳಿಕ ದೊರೆಗಳು, ಕೆಪ್ಟನ್ ಮಾವಿನಿ ಸಾಹೇಬರು, ಎರಡು ಮೂರು ಜನ ಇಂಗ್ರೇಜ ಸರದಾರರು ಸಹಾ, ಕಾಳಯುಕ್ತಿ ಸಂವತ್ಸರದ ಮಾಘ ಬ. ೩೦ ಮಂಗಳವಾರ ದಿವಸ ಈ ಕೊಡಗಿನ ಸೀಮೆ ವಳಿತವಾದ ಸಿದ್ಧೇಶ್ವರನ ಗದ್ದಿಗೆ ಬಳಿಗೆ ಹೋಗಿ ಇದ್ದರು. ಅಲ್ಲಿಂದಾ ಆ ಸಿದ್ಧೇಶ್ವರನ ಪರ್ವತ ಹತ್ತಿ, ಕುಂತು ಕೊಂಡು, ದುರ್ಬೀನಿನಿಂದಾ ನೋಡುವಾಗ್ಯೆ, ಮೊದಲು ನಾಲ್ಕು ಐದು ಗಳಿಗೆ ಏನೂ ಕಾಣಲಿಲ್ಲಾ. ಆಮೇಲೆ ಟೀಪುಸುಲ್ತಾನರ ತಾಲೂಕು ಪೆರಿಯಾಪಟ್ಟ ಣದ ಬಳಿಯು ಮೊದಲು ಒಂದು ಬಿಳಿ ತಂಬು ಹಾಕಿದ್ದು ಕಂಡಿತು. ಮತ್ತು ದುರ್ಬೀನಿನಿಂದಾ ನೋಡುವಾಗ್ಯೆ, ಎರಡು ಮೂರು ಬಿಳಿ ತಂಬು ಹಾಕಿಸಿದರು.

ಆ ಬಳಿಕ ದೊಡ್ಡದೊಂದು ಹಸರು ತಂಬು ಹಾಕಿಸಿದರು. ಆಮೇಲೆ ಮತ್ತೊಂದು ಕೆಂಪಿನ ತಂಬು ಹಾಕಿಸಿದರು. ಹೀಗೆ ಐನೂರು ಆರುನೂರು ತಂಬು ಸರಿ ಯಂತರ ಹಾಕಿಸಿದರು. ಆಮೇಲೆ ಟೀಪುಸುಲ್ತಾನರ ದಂಡು ಬಂದದ್ದು ಸರಿ ಎಂಬದಾಗಿ, ಮಹಾರಾಜರವರು ಇಂಗ್ರೇಜ ಸರದಾರರು ಸಹಾ ನಿಶ್ಚೈಸಿಕೊಂಡು ಸಿದ್ಧಾಪುರದ ಬಳಿಯು ಇಳುದು ಇದ್ದ ಇಂಗ್ರೇಜ ದಂಡಿಗೆ ಬಂದು, ಪೆರಿಯಾ ಪಟ್ಟಣದ ಬಳಿಯು ಟೀಪುಸುಲ್ತಾನರ ದಂಡು ಬಂದಂಥಾ ವರ್ತಮಾನವನ್ನು ಜನರಲ್ ಸಾಹೇಬರವರಿಗೆ ಹೇಳಿದಲ್ಲಿ, ಇಂಗ್ರೇಜ ದಂಡು ಯಾವತ್ತು ಖಬರ್ ದಾರಾಗಿ ಎಚ್ಚರದಲ್ಲು ಇಟ್ಟು, ಸಿದ್ಧೇಶ್ವರನ ಗದ್ದಿಗೆ ಬಳಿಯುಲ್ಲು ಕರ್ನಲ್ ಮಂತ್ರಿಶೋರು ಸಾಹೇಬರು, ಮೇಜರ ಡಿಸೆನಿ ಸಾಹೇಬರು, ಎರಡು ಪಟಾಲಂ ಮಂದಿ ಸಹಾ, ತಯಾರಾಗಿ ಇತ್ತು. ಇದು ಕಾರಣ "ಇಲ್ಲಿ ಸಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ ಟೀಪುಸುಲ್ತಾನರ ದಂಡು ಒಳನುಗ್ಗಿ ಬರುವದಕ್ಕೆ ಇಲ್ಲಿ ಇಂಗ್ರೇಜ ಲಷ್ಕರು ಅಡ್ಡಿಯಾಗಿದೆ. ಕಿಗ್ಗಟ್ಟನಾಡ ತಾಲೂಕಿನಲ್ಲು ಇರುವ ಬಾಳಿಲೆ ಮಾರ್ಗವಾಗಿ ಟೀಪುಸುಲ್ತಾನರು, ಇವರ ಅಪ್ಪ ನವಾಬ ಹೈದರಲ್ಲೀ ಖಾನ ಬಹದ್ದೂರವರು ಸಹಾ, ನಾಲ್ಕು ಐದಾವರ್ತಿ ಕೊಡಗಿನ ಸೀಮೆ ನುಗ್ಗಿ ಲಡಾಯಕ್ಕೆ ಬಂದ ಮಾರ್ಗವಾದ್ದರಿಂದಾ, ಈಗಲೂ ಟೀಪುಸುಲ್ತಾನರು ದಂಡು ತೆಗೆದುಕೊಂಡು, ಆ ಬಾಳಿಲೆ ಮಾರ್ಗವಾಗಿ ಒಳನುಗ್ಗಿ, ವೀರರಾಜೇಂದ್ರ ಪೇಟೆಗೆ ಬಂದಾರು" ಎಂಬದರಿಂದಾ, ಮಹಾರಾಜರವರು ಮನಸುಬಾ ಮಾಡಿ, ಅಲ್ಲಿ ಬಂದುಬಸ್ತಿನ ಬಗ್ಯೆ ಐದು ಸಾವಿರ ಸುಮಾರು ಕೊಡಗು ಜನವನ್ನು ಮಡಗಿಸಿ, ಆ ಮಾರ್ಗವಾಗಿ ಟೀಪುಸುಲ್ತಾನರು ಬಂದರೆ, ಚನ್ನಾಗಿ ಲಡಾಯ ಮಾಡುವಂತೆ ತಾಕೀದಿ ಮಾಡಿ ಇದ್ದರು. ಮಹಾರಾಜರವರ ಬಳಿಯುಲ್ಲು ನೂರೈವತ್ತು ಕೊಡಗ ಜನಾ ಮಡಗಿಕೊಂಡು, ಇನ್ನು ಕೊಡಗ ಸೀಮೆಯೂ ದುಷ್ಮಾನರ ಸೀಮೆಯೂ ಕೂಡಿದ ಸರಹದ್ದಿನ ಉಕ್ಕಡಗಳ ಮಾರ್ಗಗಳಲ್ಲು ಉಳಿಕೆ ಕೊಡಗು ಜನಾ ಇಟ್ಟು ಬಂದುಬಸ್ತು ಮಾಡಿಸಿ ಇದ್ದರು.

ಹೀಗೆ ಇರುವಾಗ್ಯೆ ಸಿದ್ಧೇಶ್ವರನ ಗದ್ದಿಗೆ ಹತ್ತಿ ನೋಡುವ ಉದ್ದಿಶ್ಯ ಫಾಲ್ಗುಣ ಶು. ೧ರಲ್ಲು ಬುಧವಾರ ದಿವಸ ಬೆಳಿಗ್ಯೆ, ಜನರಲ್ ಹಾಟ್ಲೆ ಸಾಹೇಬರು ಇಂಗ್ರೇಜ ಲಷ್ಕರಿನಿಂದಾ ಹೊರಟು ಹೋಗಿ ಇದ್ದರು. ಇದೇ ಬುಧವಾರ ಬೆಳಿಗ್ಯೆ ಟೀಪುಸುಲ್ತಾನರು ತಮ್ಮ ಸಾರಾ ದಂಡು ತೆಗೆದುಕೊಂಡು,

ತಮ್ಮ ಸರ್ವ ಶಕ್ತಿಯಿಂದಾ ಸಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ ಬಂದಲ್ಲಿ, ಅಲ್ಲಿ ಜನರಲ್ ಹಾಟ್ಲಿ ಸಾಹೇಬರು ಹಾಜರು ಇದ್ದರು.

ಆವಾಗ್ಯೆ ಕರ್ನಲ್ ಮಾಂಟ್ರೆಜೊರು ಸಾಹೇಬರು, ಮೇಜರ ಡಿಜನಿ ಸಾಹೇಬರು ಎರಡು ಪಟಾಲಂ ಇಂಗ್ರೇಜ ಮಂದಿಗೂ ಟೇಪುಸುಲ್ತಾನರ ಮಂದಿಗೂ ಮುಖ ಸಂಧಿಸಿ, ಬಹಳ ಜಗಳವಾದಲ್ಲಿ, ಟೇಪುಸುಲ್ತಾರ ಮಂದಿಗೆ ಬಹಳ ಪೆಟ್ಟಾಗಿ, ತಡೆಯಲಾರದೆ, ಮುಂದೆ ಬರುವದಕ್ಕೆ ಮಾರ್ಗವಿಲ್ಲದೆ, ಟೇಪುಸುಲ್ತಾನರು ಎಡಬಲಕ್ಕೆ ಎರಡು ಕೈಯಾಗಿ, ಇಂಗ್ರೇಜ ಪಟಾಲಮಿನ ಬೆನ್ನಿಗೆ ಬರುವದಕ್ಕೆ, ಕಾಡಲ್ಲಿ ಕಳ್ಳಮಾರ್ಗವಾಗಿ ಆಚೆ ಈಚೇಲಿ ಹೇರಳ ಫೌಜು ವಿಂಗಡಿಸಿ, ಕಳುಹಿಸಿ ಕೊಟ್ಟಲ್ಲಿ, ಈ ಮೇರೆ ಟೇಪುಸುಲ್ತಾನರ ದಂಡು ಎರಡು ಕೈಯಾಗಿ ಬೇಗೆ ಬಂದರು. ಇಂಗ್ರೇಜ ಪಟಾಲಂ ಮಂದಿಯು ಅರೆವಾಸಿ ಇತ್ತಲಾಗಿ ತಿರುಗಿಕೊಂಡು ಬೆನ್ನಿಗೆ ಎರಡು ಕೈಯಾಗಿ ಬಂದ ದಂಡಿಗೂ, ಇದಿರಿಗೆ ಬಂದ ದಂಡಿನ ಸಂಗಡಲೂ, ಆ ದಿವಸ ಬೆಳಗಿನಿಂದಾ ಮಧ್ಯಾಹ್ನ ಪರಿಯಂತರ ಬಹಳ ಲಡಾಯಿ ಮಾಡುತ್ತಾ ಇದ್ದರು.

ಅಷ್ಟು ಹೊತ್ತಿಗೆ ಸುದ್ದಿ ಆಗಿ, ಸಿದ್ಧೇಶ್ವರನ ಗದ್ದಿಗೆ ಬಳಿ ಇರುವ ಪಟಾಲಮಿಗೆ ಕುಮುಕು ಮಾಡುವ ಬಗ್ಯೆ, ಜನರಲ್ ಸ್ಟೋಯರ್ಟ್ ಸಾಹೇಬರವರು, ಮೇಜರ ಫಾರಬಸ್ ಸಾಹೇಬರವರು, ಕರ್ನಲ್ ದಂಡಲಾಪ್ ಸಾಹೇಬರವರು ಸಹಾ, ಎರಡು ಪಟಾಲಂ ಸೋಲ್ಜರು ಸಿಪಾಯಿಗಳ ತೆಗೆದುಕೊಂಡು ಹೋಗುವಾಗ್ಯೆ, ಮಹಾರಾಜರವರು ಈ ಜನರಲ್ ಸಾಹೇಬರವರ ಕೂಡೆ ಆ ದಂಡಿನ ಸಂಗಡ ಹೋದರು.

ಅಷ್ಟು ಹೊತ್ತಿಗೆ ಕಳ್ಳ ಮಾರ್ಗದಲ್ಲಿ ಎರಡು ಕೈಯಾಗಿ ಬಂದು ಬಳಸಿ ಇದ್ದ ಟೇಪುಸುಲ್ತಾನರ ದಂಡು ಸಿದ್ಧೇಶ್ವರನ ಗದ್ದಿಗೆ ಈಚೆಯಲ್ಲಿ ಮಾರ್ಗ ಕಟ್ಟಿ ನಿಂತು ಇದ್ದಲ್ಲಿ, ಜನರಲ್ ಸ್ಟೋಯರ್ಟ್ ಸಾಹೇಬರವರು ಎರಡು ರಿಜಿಮೆಂಟು ಸೋಲ್ಜರು ಶಿಪಾಯಿಗಳಿಗೆ ಲಡಾಯಿ ಮಾಡುವ ಬಗ್ಯೆ ಹುಕುಂ ಕೊಟ್ಟದ್ದರಿಂದಾ, ಈ ಸೋಲ್ಜರು ಸಿಪಾಯಿಗಳಿಗೂ ಟೇಪುಸುಲ್ತಾನರ ಮಂದಿಗೂ ಬಹಳ ಲಡಾಯಿವಾಯಿತು.

ಈ ಲಡಾಯಿ ಆಗುವಾಗ್ಯೆ, ಜನರಲ್ ಸ್ಟೋಯರ್ಟ್ ಸಾಹೇಬರವರು ಆ ರಿಜಿಮಿಂಟಿನಿಂದಾ ಲಡಾಯಿ ಮಾಡಿಸಿದಂಥಾದ್ದು ಈ ಸೋಲ್ಜರು ಸಿಪಾಯಿಗಳ ಹಿಮ್ಮತು ಧೈರ್ಯ ಶಕ್ತಿ ಭುಜಬಲ ಪರಾಕ್ರಮದಿಂದಾ ದುಷ್ಟಾನನ ದಂಡಿಗೆ

ಹೊಡದಂಥಾ ಶೌರ್ಯವನ್ನು ಈ ಮೇರೆ ಎಂಬದಾಗಿ ಹೇಳಿ, ಇದಕ್ಕೆ ಒಂದು ಸಾಕ್ಷಿ ದಾಖಲೆ ತೋರಿಸುವದಕ್ಕೆ ಈ ಭೂಮಿ ಮೇಲೆ ವಂದೂ ಕಾಣುವದಿಲ್ಲಾ. ನಮ್ಮ ಶಾಸ್ತ್ರ ಪುರಾಣದಲ್ಲಿ ಹಿಂದೆ ಅತಿರಥ ಮಹಾರಥರು ಮಾಡಿದಂಥಾ ಜಗಳ ಬಹಳವಾಗಿ ಹೇಳುತ್ತದೆ. ಅದರಲ್ಲೂ ಈ ಜಗಳಕ್ಕೆ ಸರಿಯಾದಂಥಾದ್ದು ಇಲ್ಲಾ. ಈ ಜಗಳ ಈ ಮೇರೆ ಎಂತಾ ಹೇಳುವದಕ್ಕೆ ನಮಗೆ ಶಕ್ಯವಲ್ಲಾ. ಆ ಮೇರೆ ಟೇಪುಸುಲ್ತಾನರ ದಂಡಿಗೆ ಹೊಡದರು.

ಈ ಪ್ರಕಾರ ಸೋಲ್ಜರು ಮಂದಿ ಲಡಾಯಿ ಮಾಡಿದಲ್ಲಿ, ಮೂರು ಮುಕ್ಕಾಲು ಗಳಿಗೆ ವಳಗೆ ಟೇಪುಸುಲ್ತಾನರ ಕಡೆ ಬೆಂಕಿನವಾಬ ಎಂಬ ದೊಡ್ಡ ಸರದಾರನು ಬಿದ್ದುಹೋದಾ. ಮತ್ತು ಅವಲ್ ದುಯಂ ಎರಡು ಬಕ್ಷಿಯವರಿಗೆ ಗುಂಡು ತಾಗಿ, ಕೈಗೆ ಸಿಕ್ಕಿದರು. ಮತ್ತು ಟೇಪುಸುಲ್ತಾನರ ಕಡೆ ಕೆಲವು ಸರದಾರರು ಬಿದ್ದುಹೋದರು. ಅನಂತ ಜನ ಮೃತವಾಗಿ, ಅನಂತ ಜನಕ್ಕೆ ಜಖಮಿ ಆಗಿ, ಉಳಿಕೆ ಟೇಪುಸುಲ್ತಾನರ ಕಡೆ ಫೌಜು ಯಾವತ್ತು ಪೆಟ್ಟು ತಡೆಯಲಾರದೆ, ಓಡಿಹೋದರು. ಟೇಪುಸುಲ್ತಾನರು ಲಡಾಯಿದಿಂದಾ ಮುಖ ತಿರುಗಿಸಿ ಕೊಂಡು, ಬಾಕಿ ಫೌಜು ಸಮೇತ ಪುನಹಾ ತಿರಿಗಿ ಹೋಗಿ, ಅದೇ ಪೆರಿಯಾ ಪಟ್ಟಣದಲ್ಲಿ ಐದು ದಿವಸ ಇಳುಕೊಂಡು ಇದ್ದು, ಫಾಲ್ಗುಣ ಶು. ೬ಯು ಚಂದ್ರವಾರ ದಿವಸ, ಅಲ್ಲಿಂದಾ ದಂಡು ಸಮೇತ ಕೂಚಾಗಿ ಪಟ್ಟಣದ ಕಡೆಗೆ ಹೋದರು.

ಜನರಲ್ ಸ್ಟೋಯರ್ಟ್ ಸಾಹೇಬ್ ಬಹದ್ದೂರವರು, ಜನರಲ್ ಹಾಟ್ಲಿ ಸಾಹೇಬ್ ಬಹದ್ದೂರವರು, ವಕೀಲ ಕೆಪ್ಟನ್ ಮಾವಿನಿ ಸಾಹೇಬರು ಸಹಾ ಕೂಡಿ, ಮಹಾರಾಜರವರ ಸಂಗಡ ಹೇಳಿದ್ದು : “ ಕುಂಪನಿ ಸರಕಾರಕ್ಕೂ ಟೇಪುಸುಲ್ತಾನರಿಗೂ ಇದ್ದಂಥಾ ಸಲ್ಲಾ ಬಿಗಡಾಯಿಸಿತು. ಲಡಾಯಿ ಮೊಕ ರರು ಆಯಿತು. ಆದ್ದರಿಂದಾ ತಾವು ತಮ್ಮ ಮಂದಿಯನ್ನು ಒಂದು ಕಡೆಗೆ ಕಳುಹಿಸಿ, ಟೇಪುಸುಲ್ತಾನರ ಫೌಜಿನ ಸಂಗಡ ಜಗಳಾ ಮಾಡಿಸಬೇಕು ” ಎಂಬದಾಗಿ ಹೇಳಿದರು.

ಅದಕ್ಕೆ ಮಹಾರಾಜರವರು ಜವಾಬು ಹೇಳಿದ್ದು : “ ತಮ್ಮ ದಂಡು ಸಿದ್ಧಾಪುರದ ಮಾರ್ಗ ವಂದನ್ನು ಕಟ್ಟಿ ಇದೆ. ಸಿದ್ಧಾಪುರದಲ್ಲಿ, ಅಮ್ಮತ್ತಿ ಯಲ್ಲಿ, ವೀರರಾಜೇಂದ್ರಪೇಟೆಯಲ್ಲಿ, ಕುಂಪನಿ ಸರಕಾರದ ಲಷ್ಕರಿನ ಸಾಮಾನು

ಸರಂಜಾಮು, ಜೀನಸು ಮುಂತಾಗಿ ಹೇರಳ ರಸದು ಇದೆ. ಇದಲ್ಲದೆ ನಾಲ್ವತ್ತು ಸಾವಿರ ಭಟ್ಟಿ ಅಕ್ಕಿ ನಾವು ಜಮಾಯಿಸಿ ಇರುವಂಥಾದ್ದು ಮೋದಿ ಖಾನೆಯಲ್ಲಿ ಬಿದ್ದು ಇದೆ. ಸೋಲ್ಜರು ಮುಂತಾದ ಸೀಪಾಯಿಗಳು ಕಾಯಿಲೆ ಆಗಿ, ಐನೂರು ಜನ ಪರಿಯಂತರ ಅದೇ ಪೇಟೆಯಲ್ಲಿ ಇದ್ದಾರೆ. ಹೆಗ್ಗಳದ ಮೋದಿಖಾನೆಯಲ್ಲಿ ಇಂಗ್ರೇಜ ಸರಕಾರದ ಹೇರಳ ರಸದು, ಸಾಮಾನು ಇದೆ. ಹೀಗೆ ಇರುವಲ್ಲಿ ಸಿದ್ಧೇಶ್ವರನ ಗದ್ದಿಗೆ ಮಾರ್ಗ ಒಂದು ಬಂದಾಗಿ, ಬಾಕಿ ಕೊಡಗಿನ ಸೀಮೆ ಮಾರ್ಗಗಳು ಯಾವತ್ತು ಬಂದುಬಸ್ತು ಮಾಡದೆ ಇದ್ದರೆ, ಅದರಲ್ಲಿ ಏನಾದರೂ ಟೀಪುಸುಲ್ತಾನರು ಏಕಾಏಕಿ ನುಗ್ಗಿ, ಇಂಗ್ರೇಜ ದಂಡಿಗೆ ಮೋಸಾ ಮಾಡ್ಯಾರು. ಕೊಡಗಿನ ಸೀಮೆಗೂ ರಸದಿಗೂ ಲೂಟಿ ಮಾಡ್ಯಾರು. ಈ ಅಪಕೀರ್ತಿ ನಮ್ಮೇಲೆ ಸಾಬೀತಾದೀತು. ಆದ್ದರಿಂದ ನಮ್ಮ ಸೀಮೆ ಚೌಸುತ್ತು ಸರಹದ್ದಿನ ನಾಲ್ಕಾ ಕಡೆ ಮಾರ್ಗಕ್ಕೂ ಮಂದಿ ಇಟ್ಟು ಬಂದುಬಸ್ತು ಮಾಡಬೇಕು. ನಾವು ಲಷ್ಕರಿನ ಸಂಗಡ ಇದ್ದುಕೊಂಡು, ಕಾಮಾಟಿ ಕೆಲಸಗಳ ಮಾಡಿಸಬೇಕು. ಮೋರ್ಚೆ ಸಾಮಾನು ಮಾಡಿಸಬೇಕು. ರಸದಿನ ಸಾಮಾನು ಎತ್ತುಗಳ ಮೇಲೆ ಹೇರಿ, ತರಿಸಿ ದಂಡಿಗೆ ತಲಪಿಸಬೇಕು. ದುಷ್ಮಾನರ ಲಷ್ಕರಿನ ಬಾತ್ಮೆ ಸಮಾಚಾರ ತರಿಸಿ ಕೊಡಬೇಕು. ಮೋದಿ ಖಾನೆಗಳ ಮನೆಗಳ ಕಟ್ಟಿಸಬೇಕು. ಮಲೆಯಾಳದ ಅರಸುಗಳು ತಂದು, ಗಟ್ಟದ ಕೆಳಗೆ ಕಲ್ಲುಹಾಳೆ ಬಳಿಯು ಹಾಕಿ ಇರುವ ಇಂಗ್ರೇಜ ಸರಕಾರದ ರಸದನ್ನು ಅಲ್ಲಿಂದಾ ತರಿಸಿ, ಹೆಗ್ಗಳದ ಗಟ್ಟದ ಮೇಲೆ ಮೋದಿಖಾನೆಯಲ್ಲಿ ಮಡಗಿಸಬೇಕು. ಬಾಳೆಲೆ ಮಾರ್ಗದಲ್ಲಿ, ಯಡವನಾಡಲ್ಲಿ, ಕುಟ್ಟದ ಮಾರ್ಗ ದಲ್ಲಿ ಸಹಾ ಕೊಡಗ ಜನರನ್ನು ಮಡಗಿ, ಬಂದುಬಸ್ತು ಮಾಡಿಸಿಕೊಂಡು, ತಮ್ಮ ಸಂಗಡ ಇರಬೇಕು. ಈ ಕೆಲಸಗಳು ಯಾವತ್ತೂ ಮಾಡಿಸುವಂಥಾದ್ದೇ ಪ್ರಯಾಸವಿದೆ. ಇದರ ಮೇಲೆ ಕೊಡಗ ಮಂದಿ ತೆಗೆದು ಲಡಾಯಕ್ಕೆ ಕಳುಹ ಬೇಕು ಎಂದರೆ ಯಾವ ಮೇರೆ ಆದೀತು? ಈ ಲಷ್ಕರಿಗೆ ಬರುವಂಥಾ ಸಾಮಾನು ಜಲ್ದಿಯಿಂದಾ ಬರಬೇಕು. ಈ ಬಂದುಬಸ್ತಿನ ಬಗ್ಯೆ, ವಂದಂತ್ರ ನಾಲ್ಕುನಾಡಿಗೆ ಹೋಗಿ ಬರುತ್ತೇವೆ ಯಂತಾ, ದೊರೆಗಳವರು ಜನರಲ್ ಸಾಹೇಬರ ಸಂಗಡ ಕೇಳಿ ನಾಲ್ಕುನಾಡ ಅರಮನೆಗೆ ಬಂದು ಇರುತ್ತಿದ್ದಲ್ಲಿ, ಸಿದ್ಧೇಶ್ವರನ ಗದ್ದಿಗೆ ಬಳಿಯು ಲಡಾಯುವಾದ ಮೂರನೇ ದಿವಸದಲ್ಲಿ, ಆರಕಲ

ಗೋಡಲ್ಲು ಇದ್ದ ಸೂರಾ ಎಂಬ ಬ್ರಾಹ್ಮಣನು ಅರಕಲಗೋಡು, ಕೊಣನೂರು, ಬಸವಾಪಟ್ಟಣ, ಈ ಮೂರು ಗಡಿ ಜನರ ತೆಗೆದುಕೊಂಡು, ಕೊಡಗಿನ ಸೀಮೆ ಸರಹದ್ದಿನ ಒಳನುಗ್ಗಿ ನಂಜರಾಯಿಪಟ್ಟಣದ ತಾಲ್ಲೂಕಿನ ತೊರೆನೂರು, ಹೆಬ್ಬಾಲೆ, ಶಿರಂಗಾಲ್ ಮುಂತಾದ ಗ್ರಾಮಗಳ ರೈತರ ಸರ್ವಸ್ವವನ್ನು ಲೂಟಿ ಮಾಡಿ, ಅಲ್ಲಿ ಇದ್ದ ರೈತರನ್ನು ಕಡುದು, ಕೈಗೆ ಸಿಕ್ಕಿದಂಥಾ ಗೌಡ ರೈತರನ್ನು ಕಾಲು ಕೈ ಕಟ್ಟಿ, ಹೊಳೆಗೆ ಹಾಕಿ, ರೈತರ ಹೆಂಗಸರು ಮಕ್ಕಳ ಹಿಡುಕೊಂಡು, ಆ ಗ್ರಾಮದ ಮನೆಮಾರಿಗೆಲ್ಲಾ ಬೆಂಕಿ ಹಾಕಿ ಸುಟ್ಟುಬಿಟ್ಟು ಹೋದರು.

ಅಷ್ಟರಲ್ಲಿ ಫಾಲ್ಗುಣ ಶು. ೫ ದಿವಸ, ಕೆಪ್ಟನ್ ಮಾವಿನಿ ಸಾಹೇಬರವರು ಮಹಾರಾಜರವರಿಗೆ ಬರಸಿ ಕಳುಹಿದ ಕಾಗದದಲ್ಲಿ, “ತಮ್ಮ ಕಡೆ ಕೊಡಗರು ಸಿದ್ಧೇಶ್ವರನ ಗದ್ದಿಗೆಯಿಂದ ಎರಡು ಬಡಿಯುವಾಗ, ಒಂದು ಸಲ ಸಮಾಚಾರ ಬಂದು ಹೇಳಿದರು. ಐದು ಬಡಿಯುವಾಗ, ಒಂದು ಸಲ ಸಮಾಚಾರ ಬಂದು ಹೇಳಿದರು. ಸಾಯಂಕಾಲಕ್ಕೆ ನಮ್ಮ ಕಡೆ ಬೆರ್ಡ್ ಸಾಹೇಬರು ಬಂದು ಹೇಳಿದ ಸಮಾಚಾರ: ಸಿದ್ಧೇಶ್ವರನ ಗದ್ದಿಗೆ ಮೇಲೆ ಹೋಗಿ, ಚೀನಿ ಕೊಳವೆ ಹಾಕಿ ನೋಡಿದಲ್ಲಿ, ಒಂದು ತಂಬಾದರೂ ಕಾಣುವದಿಲ್ಲಾ. ಟೀಪು ಸುಲ್ತಾನರು ಕೂಚಾಗಿ ಹೋದ್ದೇ ಸರಿ ಎಂಬದಾಗಿ, ಕಾಣುತ್ತಾ ಇದೆ. ಯಾವ ಕಡೆ ಹೋದಾ ಎಂಬ ನಿಶ್ಚಯ ತಿಳಿಯುವದಿಲ್ಲಾ. ಕೂಚಾಗಿ ಹೋದ್ದು ಸರಿ ಎಂಬದಾಗಿ, ಜನರಲ್ ಸಾಹೇಬರಿಗೂ ತಿಳಿದು ಇದೆ. ಚನ್ನೈನ ಕೋಟೆ ಕಡೆಯಿಂದಾ ಬಂದವರು ಕೂಚಾಗಿ ಹೋದ್ದು ಸರಿ ಎಂಬದಾಗಿ, ಹೇಳಿದರು. ನಮ್ಮ ಮನಸ್ಸಿಗೂ ಕೂಚಾಗಿ ಹೋದ್ದು ಸರಿ ಎಂತಾ ಕಾಣುತ್ತಾ ಇದೆ. ವಿಶೇಷವಾಗಿ ಇನ್ನೇನಾದರೂ ಸಮಾಚಾರ ನಾವು ಕೇಳಿದರೆ, ಆ ಕ್ಷಣ ತಮಗೆ ಶ್ರುತಪಡಿಸುವಂತೆ ಬರೆಸಿ ಕಳುಹಿಸುತ್ತೇವೆ. ಇಬ್ಬರು ಜನರಲ್ ಸಾಹೇಬರು ಮಸಲತ್ತು ಮಾಡಿದರು. ಬೆರ್ಡ್ ಸಾಹೇಬರು ಚೀನಿ ಕೊಳವೆ ಹಾಕಿ ನೋಡಿದಲ್ಲಿ ದಂಡೆಲ್ಲಾ ಕೂಚಾಗಿ ಹೋಗಿ ಇದೆ. ದನ ಕರ ಕಾಣಬರುತ್ತಾ ಇದೆ. ಆ ಬಗ್ಯೆ ಹೋಗಿ ದವುಡು ಮಾಡಿದರೆ, ಬಹಳ ಕಿಫಾಯತಿ ಕೊಡಗ ಜನಕ್ಕೂ, ನಮಗೆ ಬೇಕಾದ ಕ್ರಯ ಬಾಪ್ತು ಎತ್ತು, ಆಡು, ಕುರಿ ಮುಂತಾಗಿ ಸಿಕ್ಕೀತು ಎಂತಾ ಜನರಲ್ ಸಾಹೇಬರವರ ಮನಸ್ಸಿನಲ್ಲಿ ಇದೆ. ಈ ಬಗ್ಯೆ ಕೆಲಸಾ ಮಾಡಿದಲ್ಲಿ ಬಹಳ ಕಿಫಾಯತಿ ಕೂಡಿ ಬಂದೀತು ಎಂತಾ, ನಮ್ಮ ಮನಸ್ಸಿಗೆ

ಕಾಣುತ್ತಾ ಇದೆ. ಮಹಾರಾಜರವರ ಅಪ್ಪಣೆ ಬಂದೀತು. ಈ ಕೆಲಸದಿಂದಾ ತಮ್ಮ ಜನಕ್ಕೂ ಬಹಳ ಕಿಫಾಯತಿ ಆದೀತು. ನಮಗೂ ಬಹಳ ಕಿಫಾಯತಿ ಕೂಡಿ ಬಂದೀತು. ಈ ಬಗ್ಯೆ ತಮ್ಮ ಅಪ್ಪಣೆ ಜಲ್ದು ಬರಸಿ ಕಳುಹಿದಲ್ಲಿ, ಆ ಕ್ಷಣ ನಾವು ಮಸಲತ್ತು ಮಾಡಿಯೇವು. ಈ ಹೊತ್ತು ಈ ಕ್ಷಣ ಸಮಾಚಾರ ತರುವ ಬಗ್ಯೆ, ಪೆರಿಯಾಪಟ್ಟಣದ ಕಡೆ ಕೆಲವರ ಸುದ್ದಿ ತರುವ ಬಗ್ಯೆ, ಬಹಳ ಜನಾ ಕಳುಹಿಸಿ ಕೊಡುತ್ತೇವೆ. ನಾಳೆ ಸಾಯಂಕಾಲಕ್ಕೆ ಮನಸುಬ ಮಾಡಿ ಹೋಗದಿದ್ದರೆ, ಎತ್ತು, ದನ, ಕರವೆಲ್ಲಾ ದೂರ ಹೋಗಿಬಿಡುತ್ತದೆ. ಈ ಬಗ್ಯೆ ತಮ್ಮ ಅಪ್ಪಣೆ ಜಲದು ಆದೀತು. ಇಂಗ್ರೇಜ ಸರಕಾರಕ್ಕೆ ಬಹಳ ಕಿಫಾಯತಿ ಕೂಡಿ ಬಂದೀತು. ತಮ್ಮ ಜನಕ್ಕೂ ಬಹಳ ಕಿಫಾಯತಿ ಕೂಡಿ ಬಂದೀತು. ತಮ್ಮ ದೊಡ್ಡ ದುಷ್ಮಾನಗೂ ಬಹಳ ಕಷ್ಟವಾದೀತು. ತಮ್ಮ ಕೆಲಸ ಪತ್ತೆ ಆಗುವಂಥಾದ್ದನ್ನೇ ಮಹಾದೇವನಲ್ಲಿ ಬೇಡಿಕೊಳ್ಳುತ್ತಾ ಇದ್ದೇವೆ" ಎಂಬದಾಗಿ ಬರಸಿ ಇದ್ದದ್ದರಿಂದಾ, ಆ ಕಾಗದ ನೋಡಿಕೊಂಡು, ಮಹಾರಾಜರವರು ಕರಡಿಗೋಡಿಗೆ ಹೋದರು.

ಅಲ್ಲಿ ಇಂಗ್ರೇಜ ಲಷ್ಕರಿನಲ್ಲಿ ಚಾಕ್ರಿ ಮಾಡಿಕೊಂಡು ಇದ್ದ ನಂಜರಾಯಿ ಪಟ್ಟಣದ ರೈತರು ದೊರೆಗಳವರ ಬಳಿಗೆ ಬಂದು, "ಟೀಪುಸುಲ್ತಾನರ ಕಡೆ ಯವರು ಬಂದು, ನಮ್ಮ ಮನೆ, ಬದುಕು, ಬಾಳು, ಸರ್ವಸ್ವವನ್ನು ಲೂಟಿ ಮಾಡಿಕೊಂಡು, ಮನೆಮಾರನ್ನು ಸುಟ್ಟು, ಹೆಂಗಸರು ಮಕ್ಕಳನ್ನು ಹಿಡಿದು ಕೊಂಡು ಹೋದರು" ಎಂಬದಾಗಿ ಫಿರಿಯಾದಿ ಮಾಡಿದರಿಂದಾ, "ಒಳ್ಳೇದು. ಈ ದಂಡಿಗೆಲ್ಲಾ ಖಾವಂದರಾಗಿ, ಜನರಲ್ ಸಾಹೇಬರು ಇದ್ದಾರೆ. ಅವರ ಬಳಿಗೆ ಹೋಗಿ, ನೀವೇ ಹೇಳಿಕೊಳ್ಳಿ" ಎಂಬದಾಗಿ, ಮಹಾರಾಜರು ಅಪ್ಪಣೆ ಕೊಟ್ಟದ್ದರಿಂದಾ, ಈ ರೈತರು ಹೋಗಿ ಕೆಪ್ಟನ್ ಬೆರ್ಡ್ ಸಾಹೇಬರವರ ಸಂಗಡ ಹೇಳಿದಲ್ಲಿ, ಅವರು ಆ ರೈತರನ್ನು ಕರದುಕೊಂಡು, ಜನರಲ್ ಸ್ಟೋಯರ್ಟ್ ಸಾಹೇಬರು ಹಾಟ್ಲೆ ಸಾಹೇಬರವರ ಬಳಿಗೆ ಹೋಗಿ, ಈ ರೈತರ ಪೂರ್ವೋತ್ತರ ಯಾವತ್ತೂ ಹೇಳಿದರು.

ಆ ಬಳಿಕ ಕೆಪ್ಟನ್ ಮಾವಿನಿ ಸಾಹೇಬರವರು ಮಹಾರಾಜರವರ ತಂಬಿಗೆ ಬಂದು, ಈ ರೈತರ ಫಿರಿಯಾದಿ ಏನು ಎಂಬದಾಗಿ ಕೇಳಿದಲ್ಲಿ, ದೊರೆ ಗಳವರು ಮಾವಿನಿ ಸಾಹೇಬರ ಕರದುಕೊಂಡು, ಜನರಲ್ ಹಾಟ್ಲೆ ಸಾಹೇಬ

ರವರ ತಂಬಿಗೆ ಹೋದರು. ಅಲ್ಲಿಗೆ ಜನರಲ್ ಸ್ಟ್ಯೋಯರ್ಟ್ ಸಾಹೇಬರವರು ಬಂದರು. ಈ ಮೂವರು ಸಾಹೇಬರು ಕೂಡಿ, " ಈ ರೈತರ ಪೂರ್ವೋತ್ತರ ವೇನು " ಎಂಬದಾಗಿ, ಮಹಾರಾಜರವರ ಸಂಗಡ ಕೇಳಿದಲ್ಲಿ, " ಟೀಪುಸುಲ್ತಾನರ ಕಡೆ ಜನ ಬಂದು, ಈ ಮೇರೆ ದುಖ್ಖಾ ಕೊಟ್ಟರು " ಎಂಬದಾಗಿ ಹೇಳಿದರು.

ಆವಾಗ್ಯೆ " ಸಿದ್ಧೇಶ್ವರನ ಗದ್ದಿಗೆಯಲ್ಲಿ ನಮಗೂ ಟೀಪುಸುಲ್ತಾನರಿಗೂ ಲಡಾಯಿವಾದಾಗ್ಯೆ, ಸಲ್ಲಾ ಮುರೀತು. ತಾವು ಟೀಪುಸುಲ್ತಾನರ ಜನಕ್ಕೆ ದುಃಖ ಕೊಡಿ ಎಂದರೆ, ಕೇಳಲಿಲ್ಲಾ. ತಮ್ಮ ಕಡೆ ಜನ ಟೀಪುಸುಲ್ತಾನರ ಸೀಮೆಗೆ ನುಗ್ಗಿ ದುಃಖ ಕೊಡದೆ ಇದ್ದರೆ, ಅವರು ಇನ್ನು ಇದೇ ಮೇರೆಗೆ ತಮ್ಮ ಸೀಮೆಗೆ ಬಂದು, ದುಃಖ ಕೊಟ್ಟು, ಹಲಾಕು ಮಾಡ್ಯಾರು. ಇನ್ನು ಮೇಲೆ ಸುಮ್ಮನೆ ಇದ್ದರೆ, ತಮ್ಮ ಮಾನ ಏನಾಯಿತು ? ಅದಕ್ಕೆ ಬದಲಾಗಿ ಮಾಡಬೇಕು " ಎಂಬದಾಗಿ, ಜನರಲ್ ಸಾಹೇಬರವರು ಹೇಳಿದರಿಂದಾ, ಮಹಾರಾಜರವರು ಆ ಮಾತಿಗೆ ಒಪ್ಪಿಕೊಂಡು, ಕೊಡಗ ಜನದಲ್ಲಿ ಸೀಮೆ ಚೌಸುತ್ತಿನ ಸರಹದ್ದಿನ ಪಹರೆ ಚೌಕಿಗೂ ಇಂಗ್ರೇಜ ಬಹಾದ್ದರ ಲಷ್ಕರಿನ ಚೌಕಿಗೂ ಅರೆವಾಸಿ ಮಂದಿ ಇಟ್ಟುಕೊಂಡು, ಉಳಿಕೆ ಅರೆವಾಸಿ ಮಂದಿಯನ್ನು ಎರಡು ತುಕ್ಕಡಿ ಮಾಡಿ, ಒಂದು ತುಕ್ಕಡಿಯನ್ನು ಕರಣೀಕ ಸುಬ್ಬೈಯ ಕಾರೆಕಾರ ಬೋಪು ಸಂಗಡ ಕೂಡಿಸಿ, ಕೊಡೆಯಾಲದ ತಾಲೂಕಿನಲ್ಲಿ ಸಾದ್ರಿ ಬೆಹಾರಿ, ಮೀರ್ ಮಹಮ್ಮದಲ್ಲಿ ಸಹಾ ಫೌಜು ಕಟ್ಟಿಕೊಂಡು ಇದ್ದಾರಲ್ಲಾ ? ಅವರಿಗೆ ತಂಬಿ ಕೊಟ್ಟು, ಅಲ್ಲಿರುವಂಥಾ ಕಿಲ್ಲೆಗಳನ್ನು ತೆಗೆದುಕೊಂಡು, ಆ ಕಡೆ ಸೀಮೆ ಸಾಧಿಸಿಕೊಂಡು, ಅಲ್ಲಿ ಸಿಕ್ಕಿದಂಥಾ ರಸದು ಇಂಗ್ರೇಜ ಲಷ್ಕರಿಗೆ ಸಾಗಿಸುವದು " ಎಂಬದಾಗಿ, ಅಪ್ಪಣೆ ಕೊಟ್ಟು ಕಳುಹಿದರು.

ಅದೇ ವೇರೆ ಮತ್ತೊಂದು ತುಕ್ಕಡಿ ಈಶ್ವರೈಯನ ತಾಬೆಗೆ ಕೊಟ್ಟು, ಹೆಗ್ಗಡದೇವನಕೋಟೆಗೆ ಕಳುಹಿದಲ್ಲಿ, ಅಲ್ಲಿ ಕೆಲವು ಲಡಾಯಿವಾಗಿ, ಈ ಕಡೆ ಮಂದಿಗೆ ಕೆಲವು ಜಾಯಾ ಆಗಿ, ಅಲ್ಲಿ ಕೆಲವು ಲೂಟಿ ಮಾಡಿಕೊಂಡು, ಪುನಶ್ಚ ಕರಡಿಗೋಡಲ್ಲು ಮುಂಬಾಯಿ ದಂಡು ಇಳುದು ಇದ್ದಲ್ಲಿಗೆ ಬಂದರು. ಅವರಿಗೆ ಏನೇನು ಸಿಕ್ಕಿತು ಎಂತಾ ಕೇಳಿದಲ್ಲಿ, " ಟೀಪುಸುಲ್ತಾನರಿಗೂ ಇಂಗ್ರೇಜಿಯವರಿಗೂ ಸಿದ್ಧೇಶ್ವರನ ಗದ್ದಿಗೆ ಬಳಿಯ ಆದ ಲಡಾಯಿದ ಆವಾಜ ಕೇಳಿ, ಆ ಸೀಮೆ ರೈತರು ತಮ್ಮ ಬದುಕು, ಬಾಳು, ದನ, ಕರ ದೂರ ಸಾಗಿಸಿ ಇದ್ದಾರೆ.

ಚಿನ್ನ, ಬೆಳ್ಳಿ ಇದ್ದದ್ದನ್ನು ನೆಲಮರೆ ಮಾಡಿಕೊಂಡು ಇದ್ದಾರೆ. ನಮಗೆ ಏನೂ ಸಿಕ್ಕಲಿಲ್ಲಾ. ಸ್ವಲ್ಪ ಎತ್ತು, ದನ, ಕರ, ಆಡು, ಕುರಿ ಸಿಕ್ಕಿತು" ಎಂತಾ, ಆ ಈಶ್ವರೈಯ್ಯ, ಆ ಜನರು ಸಹಾ ಹೇಳಿ, ತಂದು ತೋರಿಸಿದಲ್ಲಿ, ಮಹಾರಾಜರವರು ಆ ಎತ್ತು, ಆಡು, ಕುರಿ ಇಂಗ್ರೇಜ ಸರಕಾರಕ್ಕೆ ಕೊಡಿಸಿ, ದಂಡಿಗೆ ಬೇಕಾದ ಅಕ್ಕಿ, ರಸದು, ಮುಸ್ತೈದೆ ಮುಂತಾದ್ದು ಕೊಡಿಸಿಕೊಂಡು, ಲಷ್ಕರಿನ ಸಂಗಡ ಇದ್ದರು.

ಆ ಬಳಿಕ ಬಂಗಾಳದ ಲಾರ್ಡ್ ಸಾಹೇಬರು ಬರೆಸಿ ಕಳುಹಿಸಿ ಇದ್ದ ಕಾಗದಕ್ಕೆ ಫಾಲ್ಗುಣ ಬ. ೭ರಲ್ಲು ಮಹಾರಾಜರವರು ಬರೆಸಿ ಕಳುಹಿದ ಜವಾಬಿನ ವಿವರ: "ತಾವು ಬರೆಸಿ ಕಳುಹಿದ ಕಾಗದವು ಮಾರ್ಚ ಮಹಿನಾ ೪ನೇ ತಾರೀಕಿನಲ್ಲು ಬಂದು ಮುಟ್ಟಿತು. ಅದರಲ್ಲಿ ಇಂಗ್ರೇಜ ಬಹಾದ್ದರ ಸರಕಾರಕ್ಕೂ ತಮಗೂ ಅತ್ಯಂತ ಬಾಯಾಚಾರ ದೋಸ್ತಿ ಇರುವದರಿಂದಾ ಕುಂಪನಿ ಸರಕಾರದಲ್ಲಿ ನಮ್ಮ ಶಾಮಿಲರ ಸಂಗಡ ಏನೊಂದು ಮನಸುಬಾ ಮಾಡಿದಾಗ್ಯೂ, ತಮಗೆ ನಾವು ಚೆನ್ನಾಗಿ ಸುದ್ದಿ ಎತ್ತಿಸಿ ಕೊಡುತ್ತೇವೆ. ಇದರ ಮೇಲೆ ಇಂಗ್ರೇಜ ಬಹಾದ್ದರ ಸರಕಾರದಲ್ಲಿ ಏನೊಂದೂ ಮನಸುಬಾ ಮಾಡಿದಂಥಾದ್ದು ಕೆಪ್ಟನ್ ಮಾವಿನಿ ಸಾಹೇಬರು ತಮಗೆ ವಿವರಾನುವಿವರವಾಗಿ ಹೇಳಿ ಮಾಲುಂ ಮಾಡಿ ಇದ್ದಾರು ಎಂಬ ವಿವರಗಳಾಗಿ ಬರೆಸಿ ಇದ್ದಿರಿ. ಅದೇ ಮೇರೆ ಆ ಕೆಪ್ಟನ್ ಸಾಹೇಬರು ನಮಗೆ ತಿಳಿಸಿ ಇದ್ದಾರೆ. ತಮ್ಮ ಕಡೆಯಿಂದಾ ಬಂದ ಕಾಗದ ವಿವರವನ್ನು ಈ ಸಾಹೇಬರು ನಮಗೆ ಚೆನ್ನಾಗಿ ತಿಳಿಸಿದರು. ಕುಂಪನಿ ಸರಕಾರದ ಕಾರ್ಯಕ್ಕೆ ತಾವು ಮೆಹನತ್ತಿನಿಂದಾ ಕುಮಕು ಮಾಡಿ ಇದ್ದೀರಿ ಎಂತಾ, ಬರಸಿ ಇದ್ದಿರಿ. ನಮ್ಮಿಂದಾ ಏನೊಂದು ಕುಮಕು ಕುಂಪನಿ ಕಾರ್ಯದ ಮೇಲೆ ಆಗಿ ಇದೆಯೋ, ಅದು ಯಾವತ್ತು ಆ ಕಪಿತಾನ್ ಸಾಹೇಬರ ಕಾಗದಗಳಿಂದಾ ತಮ್ಮ ಕಿಜಮತ್ತಿಗೆ ಜಾಹೇರಾಗಿ ಇದ್ದೀತು. ಆ ಸಾಹೇಬರು ಇಂಗ್ರೇಜ ಬಹಾದ್ದರ ಸರಕಾರದ ಕಡೆ ವಕೀಲರಾಗಿ ನಮ್ಮ ಬಳಿಯು ಇದ್ದಾರೆ. ಇವರ ನಂಬಿಕೆ ನಮ್ಮ ಮನಸ್ಸಿನಲ್ಲಿ ಚನ್ನಾಗಿ ಇದೆ. ಇದು ಕಾರಣ ನಮ್ಮ ಮನಸ್ಸಿನಲ್ಲಿ ಇರುವ ಅಂತರಂಗ ಯಾವತ್ತು ಈ ಸಾಹೇಬರಿಗೆ ಹೇಳಿ ಇದ್ದೇವೆ. ಇದು ಕಾರಣ ನಮ್ಮಲ್ಲಿ ವಿದ್ಯಮಾನ ಯಾವತ್ತು ಈ ಸಾಹೇಬರು ತಮಗೆ ಬರೆಸಿ ಕಳುಹಿಸಿ ಶ್ರುತಪಡಿಸುವಲ್ಲಿ, ನಾವು

ವಿಶೇಷ ಬರೆಸಿ ಕಳುಹಿ, ತವ.ಗೆ ಶ್ರುತಪಡಿಸತಕ್ಕದ್ದು ಏನು ಇದೆ" ಎಂಬದಾಗಿಯೂ, ಸಿದ್ದೇಶ್ವರನ ಗದ್ದಿಗೆಯಲ್ಲಿ ಟೀಪುಸುಲ್ತಾನರು ಬಂದು, ಇಂಗ್ರೇಜ ಬಹಾದ್ದರ ಲಷ್ಕರಿನ ಸಂಗಡ ಲಡಾಯಿ ಮಾಡಿ, ಮುಖಭಂಗಿತವಾಗಿ ಹೋದ ಯಾವತ್ತು ವಿವರವು ಸಹಾ, ಬರದು ಕಳುಹಿಕೊಟ್ಟರು.

ಹೀಗೆ ಇರುತ್ತಿದ್ದಲ್ಲಿ, ಕಲಿ ಸಂದ ೪೯೦೧ನೇ ಸಿದ್ಧಾರ್ಥಿ ಸಂವತ್ಸರದ ಚೈತ್ರ ಶು. ೧ ದಿವಸ, ರಸದು ಸಾಗಿಸುವ ಬಗ್ಯೆ, ದೊರೆಗಳವರು ನಾಲ್ಕುನಾಡ ಅರಮನೆಗೆ ಬಂದು ಇದ್ದರು. ಜನರಲ್ ಹಾರಿಸ್ ಸಾಹೇಬ ಬಹಾದ್ದರವರು ಬಂಗಾಳದ ದೊಡ್ಡ ಫೌಜು ತೆಗೆದುಕೊಂಡು, ನಿಜಾಮಲ್ಲೀಖಾನರ ಕೆಲವು ಫೌಜು ಸಮೇತವಾಗಿ, ಶ್ರೀರಂಗಪಟ್ಟಣಕ್ಕೆ ಬಂದರು.

ಆ ಬಳಿಕ ಮುಂಬಾಯಿ ಫೌಜನ್ನು ಸಾಗಿಸಿಕೊಂಡು ಹೋಗುವ ಬಗ್ಯೆ, ಮದರಾಸಿನ ಕೆಲವು ದಂಡನ್ನು ತೆಗೆದುಕೊಂಡು, ಜನರಲ್ ಫ್ಲಾಯಿಡ್ ಸಾಹೇಬ ಬಹಾದ್ದರವರು ಪೆರಿಯಾಪಟ್ಟಣಕ್ಕೆ ಬರುವ ವರ್ತಮಾನ ತಿಳುದು, ಜನರಲ್ ಸ್ಟೋಯರ್ಟ್ ಸಾಹೇಬ ಬಹಾದ್ದರವರು, ಜನರಲ್ ಹಾಟ್ಲೆ ಸಾಹೇಬ ಬಹಾದ್ದರವರು ಸಹಾ, ಮುಂಬಾಯಿ ಫೌಜು ಸಮೇತ ಕರಡಿಗೋಡಿಂದ ಕೂಚು ಮಾಡಿ, ಗುಂಡಿಪಟ್ಟಣದ ಕೆರೆ ಬಳಿಯ ಹೋಗಿ ಇಳುಕೊಂಡರು.

ಈ ಸಮಾಚಾರ ಮಹಾರಾಜರವರು ಕೇಳಿ, ನಾಲ್ಕುನಾಡ ಅರಮನೆಯಿಂದಾ ಹೊರಟು ಮುಂಬಾಯಿ ಲಷ್ಕರು ಇಳುದು ಇರುವ ಗುಂಡಿಪಟ್ಟಣದ ಬಳಿಗೆ ಹೋಗಿ, ಜನರಲ್ ಸಾಹೇಬರವರ ಭೇಟಿ ಆದರು. ಅಷ್ಟರಲ್ಲಿ ಜನರಲ್ ಫ್ಲಾಯಿಡ್ ಸಾಹೇಬ ಬಹಾದ್ದರವರು ಫೌಜು ಸಮೇತ ಪೆರಿಯಾಪಟ್ಟಣಕ್ಕೆ ಬಂದು ಇಳುಕೊಂಡರು.

ಆ ಮೂರನೇ ದಿವಸ ರಾಜರು, ಜನರಲ್ ಹಾಟ್ಲೆ ಸಾಹೇಬ ಬಹಾದ್ದರವರು, ಕೆಪ್ಟನ್ ಸ್ಟೋಯರ್ಟ್ ಸಾಹೇಬರು, ವಕೀಲ್ ಕೆಪ್ಟನ್ ಮಾವಿನಿ ಸಾಹೇಬರು ಸಹಾ ಪೆರಿಯಾಪಟ್ಟಣಕ್ಕೆ ಹೋಗಿ, ಆ ಜನರಲ್ ಫ್ಲಾಯಿಡ್ ಸಾಹೇಬ ಬಹಾದ್ದರವರ ಮಿಲಾಕತು ಮಾಡಿದಲ್ಲಿ, ಅವರು ಸಲಾಂ ಫಿರಂಗಿಗಳ ಹಾರಿಸಿ, ಅವರ ಫೌಜು ಯಾವತ್ತನ್ನು ತಯಾರು ಮಾಡಿ ನಿಲ್ಲಿಸಿ, ಮಹಾರಾಜರಿಗೆ ತೋರಿಸಿ, ಬಹಳ ಸಂತೋಷ ಮಾಡಿದರು.

ಅಷ್ಟರಲ್ಲಿ ಟೀಪುಸುಲ್ತಾನರ ಕಡೆ ಕೆಲವು ಕುದುರೆ ಸವಾರರು ಬಂದು, ಉಭಯ ದಂಡಿನ ಮಧ್ಯೆ ಮಾರ್ಗ ಕಟ್ಟಿದ್ದರಿಂದ, ಜನರಲ್ ಫ್ಲಾಯಿಡ್ ಸಾಹೇಬ ಬಹಾದ್ದರವರ ಫೌಜಿಗೂ ಟೀಪುಸುಲ್ತಾರ ಕಡೆ ಕುದುರೆ ಫೌಜಿಗೂ ಸ್ವಲ್ಪ ಜಗಳವು ಆಯಿತು. ಪುನಶ್ಚ ದೊರೆಗಳು ಬರುವಾಗ್ಯೆ, ಜನರಲ್ ಫ್ಲಾಯಿಡ್ ಸಾಹೇಬ ಬಹಾದ್ದರವರು ತಮ್ಮ ನಡುವಿನಲ್ಲಿ ಕಟ್ಟಿ ಇದ್ದ ಕತ್ತಿಯನ್ನು ಬಿಚ್ಚಿ, "ನಮ್ಮ ದೋಸ್ತಿಸಿಶಾನಿ ಆಗಿ ತಮ್ಮ ಬಳಿಯ ಮಡಗಬೇಕು" ಎಂಬದಾಗಿ ಹೇಳಿ, ವೀರರಾಜೇಂದ್ರ ವಡೆಯರವರ ನಡುವಿಗೆ ಕಟ್ಟಿ, ಟೀಪುಸುಲ್ತಾನರ ಕುದುರೆ ಫೌಜು ಮಾರ್ಗ ಕಟ್ಟಿ ಇದ್ದದ್ದರಿಂದ, ಕೆಲವು ಕುದುರೆ ಫೌಜನ್ನು ಕೂಡಿಸಿ ಕಳುಹಿಸಿ ಕೊಟ್ಟಲ್ಲಿ, ದೊರೆಗಳು ಮುಂಬಾಯಿ ದಂಡಿಗೆ ಬಂದು ತಲುಪಿದರು.

ಆವಾಗ್ಯೆ ಜನರಲ್ ಸ್ಟೋಯರ್ಟ್ ಸಾಹೇಬ ಬಹಾದ್ದರವರು ಬಹಳ ಸಂತೋಷಪಟ್ಟು "ತಾವು ಈ ಪ್ರಕಾರ ನಮಗೆ ಹೇಳದೆ, ಸ್ವಲ್ಪ ಮಂದಿ ತೆಗೆದುಕೊಂಡು ಹೋಗಿ ಇದ್ದಿರಿ. ಮಧ್ಯೆ ಮಾರ್ಗಕ್ಕೆ ಟೀಪುಸುಲ್ತಾನರ ಕೆಲವು ಕುದುರೆ ಫೌಜು ಬಂದು ಇತ್ತು. ತಾವು ಅವರ ಕೈಗೆ ಸಿಕ್ಕಿದಿರೋ ಏನೋ ಎಂಬದಾಗಿ, ನಾವು ಬಹಳ ವ್ಯಾಕುಲದಲ್ಲಿ ಇದ್ದೆವು. ತಾವು ಕ್ಷೇಮದಿಂದಾ ಬಂದದ್ದರಿಂದಾ, ನಮಗೆ ಬಲು ಸಂತೋಷವಾಯಿತು. ನಾಳೆ ದಿವಸ ಮುಂಬಾಯಿ ದಂಡು ಕೂಚಾಗುತ್ತದೆ. ಜನರಲ್ ಫ್ಲಾಯಿಡ್ ಸಾಹೇಬರವರು ಚಡಿ ಫೌಜು ತೆಗೆದುಕೊಂಡು ಬಂದು ಇದ್ದಾರೆ. ತಾವು ಕೂಡಿಸಿರುವ ರಸದಿಗೆ ಬೇಕಾದ ಎತ್ತು, ಮೋರ್ಚೆ ಸಾಮಾನು ಸಾಗಿಸುವದಕ್ಕೆ ಬೇಕಾದ ಆಳು ಸಹಾ ತೆಗೆದುಕೊಂಡು ಬರಲಿಲ್ಲಾ. ಈ ಬಗೆ ಮೋರ್ಚೆ ಸಾಮಾನನ್ನು ಪಟ್ಟಣ ಪರಿಯಂತರ ಸಾಗಿಸಿಕೊಡಬೇಕು" ಎಂತಾ ಹೇಳಿದರು.

ಅದಕ್ಕೆ "ಒಳ್ಳೇದು. ಈ ಹೊತ್ತು ರಾತ್ರೆ ಒಳಗೆ ನಮ್ಮ ಕಡೆ ಜನ ಸಿಕ್ಕಿದಷ್ಟು ಕೂಡಿಸಿ, ಈ ಮೋರ್ಚೆ ಸಾಮಾನನ್ನು ಸಾಗಿಸಿ ಕೊಟ್ಟೇವು" ಎಂತಾ ಹೇಳಿ ಒಪ್ಪಿಕೊಂಡು, ಆ ದಿವಸ ಮಹಾರಾಜರ ಬಳಿಯ ಇದ್ದ ಜನರ ಯಾವತ್ತು ಮೋರ್ಚೆ ಸಾಮಾನು ಹೊತ್ತು ತರುವ ಬಗ್ಯೆ ಕಳುಹಿಸಿ, ಸಿದ್ಧೇಶ್ವರನ ಗದ್ದಿಗೆಗೆ ಒಂದು ಗಾವುದದ ಸುಮಾರು ದೂರ ಕರಡಿಗೋಡ ಮಾಳದಲ್ಲಿ ಇದ್ದ ಮೋರ್ಚೆ ಸಾಮಾನು ಯಾವತ್ತನ್ನು ಆ ದಿನ ರಾತಾರಾತ್ರೆಯೇ ಸಿದ್ಧೇಶ್ವರನ ಗದ್ದಿಗೆ

ಬಳಿಗೆ ತರಿಸಿ ಹಾಕಿಸಿ, ಬೆಳಿಗ್ಯೆ ಮುಂಬಾಯಿ ದಂಡು ಕೂಚಾಗುವಾಗ್ಯೆ, ಮೋರ್ಚೆ ಸಾಮಾನು ಎರಡು ಸಾವಿರ ಜನದ ಮೇಲೆ ಹೊರಿಸಿಕೊಂಡು, ನಾವು ನಮ್ಮ ಜನ ಸಹಾ ಲಷ್ಕರಿನ ಸಂಗಡ ಬರುತ್ತೇವೆ ಎಂತಾ, ರಾಜರು ಹೊರಟಲ್ಲಿ ಜನರಲ್ ಸ್ಟೋಯರ್ಟ್ ಸಾಹೇಬರು ಹೇಳಿದ್ದು : " ತಾವು ಕುಂಪನಿ ಕೆಲಸ ಉದ್ದಿಶ್ಯವಾಗಿ ಬಹಳ ಕಷ್ಟ ಮಾಡಿ ಇದ್ದೀರಿ. ಈಗಲು ತಮಗೆ ಈ ಮೇರೆ ಬಹಳ ಮೆಹನತ್ತು ಆಗುತ್ತದೆ. ಈಗ ಮೋರ್ಚೆ ಸಾಮಾನದಿಂದಾ ಏನೂ ಜರೂರು ಇಲ್ಲಾ. ಈ ದಂಡು ಪಟ್ಟಣಕ್ಕೆ ತಲಪಿದ ಬಳಿಕ, ಇನ್ನೂ ಹದಿನೈದು ದಿವಸದ ಒಳಗೆ ತಾವು ಇಂಗ್ರೇಜ ಲಷ್ಕರಿಗೆ ಜಮಾಯಿಸಿ ಇರುವ ರಸದು ಸಾಗಿಸಿಕೊಂಡು ಬರುವ ಬಗ್ಯೆ, ಅರುವತ್ತು ಎಪ್ಪತ್ತು ಸಾವಿರ ಎತ್ತನ್ನು ಸಾಗಿಸಿಕೊಂಡು, ಕೆಲವು ದಂಡು ತಮ್ಮ ಸೀಮೆಗೆ ಬಂದೀತು. ಆವಾಗ್ಯೆ ಈ ಮೋರ್ಚೆ ಸಾಮಾನು ರಸದು ಹೊರುವ ಬಗ್ಯೆ ಬೇಕಾದ ಆಳು ಬರುತ್ತದೆ. ಆವಾಗ್ಯೆ ಒಂದೇ ಸರ್ತಿ ಈ ಮೋರ್ಚೆ ಸಾಮಾನು ರಸದು ಸಹಾ ಸಾಗಿಸಿಕೊಂಡು ಹೋಗುತ್ತದೆ. ಈಗ ಮೋರ್ಚೆ ಸಾಮಾನು ಹಿಂದಕ್ಕೆ ಸಾಗಿಸಿ, ಸಿದ್ಧಾಪುರದಲ್ಲಿ ಜೋಪಾನವಾಗಿ ಮಡಗಿಸಬೇಕು. ತಾವು ಈಗ ಪಟ್ಟಣಕ್ಕೆ ಬಂದರೆ, ಇನ್ನು ಹತ್ತು ಹದಿನೈದು ದಿವಸದಲ್ಲಿ ತಮ್ಮ ಸೀಮೆಯಿಂದ ರಸದು ಸಾಗಿಸಿಕೊಂಡು ಬರುವ ಬಗ್ಯೆ, ಎತ್ತು ಸಾಗಿಸಿಕೊಂಡು, ದಂಡು ಬರುತ್ತದೆ. ಆದ್ದರಿಂದಾ ಇಲ್ಲಿ ಭಾರಿ ಕೆಲಸವಿದೆ. ತಾವು ಹಿಂತಿರುಗಿ ಹೋಗಿ, ದಂಡಿಗೆ ಬೇಕಾದ ರಸದು ಸಾಮಾನು ಜಮಾಯಿಸಬೇಕು" ಎಂತಾ ಹೇಳಿದ್ದರಿಂದಾ, ಮಹಾರಾಜರು ಪೆರಿಯಾಪಟ್ಟಣದ ಸಮಾಪ ಪರಿಯಂತರ ಹೋಗಿ, ಕೇಳಿಕೊಂಡು, ಪುನಶ್ಚ ಬರುವಾಗ್ಯೆ, ದಂಡಿನ ಸಂಗಡ ರಸದು ತೆಗೆದುಕೊಂಡು ತಿರುಗುತ್ತಾ ಇದ್ದಂಥಾ ರಾಜರ ಕಡೆ ಎರಡು ಸಾವಿರ ಎತ್ತುಗಳು, ಅದರ ಕವುದಿ ಗೋಣಿ ಆಕ್ಕಿ ಸಹಾ, ಒಪ್ಪಿಸಿಕೊಟ್ಟು, ಹಿಂದಕ್ಕೆ ಬಂದರು.

ಮುಂಬಾಯಿ ದಂಡು ಪೆರಿಯಾಪಟ್ಟಣದಲ್ಲಿ ಇಳುದು ಇದ್ದ ದಂಡಿಗೆ ಕೂಡಿ, ಉಭಯ ದಂಡು ವಟ್ಟಾಗಿ ಕೂಚಾಗಿ, ಪಟ್ಟಣಕ್ಕೆ ಹೋಯಿತು.

ಅಲ್ಲಿಂದಾ ದೊರೆಗಳು, ಕೆಪ್ಟನ್ ಮಾನಿನಿ ಸಾಹೇಬರು ಸಹಾ, ವೀರ ರಾಜೇಂದ್ರಪೇಟೆಗೆ ಬರುವಾಗ್ಯೆ, ಆ ಮೋರ್ಚೆ ಸಾಮಾನು ಯಾವತ್ತು ಹಿಂದಕ್ಕೆ ಸಿದ್ಧಾಪುರದ ಬಳಿಗೆ ಸಾಗಿಸಿ, ಜೋಪಾನವಾಗಿ ಮಡಗಿಸಿ ಗುಂಡಿಪಟ್ಟಣದಿಂದಾ

ಸಿದ್ಧಾಪುರ ಪರಿಯಂತರ ದಾರಿ ಮಾರ್ಗದಲ್ಲಿ ಇಂಗ್ರೇಜ ಲಷ್ಕರಿನ ಸಾಮಾನು, ಸರಂಜಾಮು ಲಾಗರಾದ ಯತ್ತುಗಳು, ಅಜಾರಿ ಜನರ ಮುಂತಾಗಿ ಬಿಟ್ಟು ಹೋದಂಥಾದ್ದನ್ನು ವೀರರಾಜೇಂದ್ರಪೇಟೆಗೆ ಸಾಗಿಸಿ, ಆ ಅಜಾರಿ ಜನ ಇರುವ ದಕ್ಕೆ ಬೇಕಾದ ಮನೆಮಾರು ದುರುಸ್ತುಮಾಡಿಸಿ, ಅವರಿಗೆ ಬೇಕಾದ ಸಾಮಾನು ಒದಗಿಸಿಕೊಟ್ಟು, ರಸದು ಸಾಮಾನು ತರಿಸಿ ಜಮಾಯಿಸುತ್ತಾ, ವೀರರಾಜೇಂದ್ರ ಪೇಟೆಯಲ್ಲು ಇದ್ದರು.

ಹೀಗಿರುವಲ್ಲಿ, ಟೀಪುಸುಲ್ತಾನರ ತಾಲೂಕಿನವರು ಬಂದು, ದುಃಖ ಕೊಟ್ಟಂಥಾ ಶಿರಂಗಾಲ, ತೊರೆನೂರು, ಹೆಬ್ಬಾಲೆ ಮುಂತಾದ ಗ್ರಾಮಗಳ ರೈತರು ಬಂದು, ನಮ್ಮ ಕುಟುಂಬ ಮಕ್ಕಳ ಆದಿಯಾಗಿ ಸರ್ವಸ್ವವನ್ನು ಲೂಟಿಸಿ ಕೊಂಡು ಹೋದರು; ನಾವು ಕೆಟ್ಟೆವು ಎಂಬದಾಗಿ ಅರಿಕೆ ಮಾಡಿಕೊಂಡದ್ದ ರಿಂದಾ, ಆ ರೈತರ ಸಮಜಾಯಿಸಿ, ಅವರು ಮಾಡಿದ ಮೇರೆ ಅವರಿಗೆ ತಂಬಿ ಪಹುಂಚಾಯಿಸುವಂತೆ ಈಶ್ವರೈಯ್ಯನಿಗೆ ಅಪ್ಪಣೆ ಕೊಟ್ಟು, ಅವನ ತಾಬೆ ಮಾಡಿ ಇದ್ದ ಒಂದು ತುಕ್ಕಡಿ ಜನರನ್ನು ಅರಕಲಗೋಡು, ಕೊಣನೂರು, ಬಸವಾಪಟ್ಟಣದ ಕಡೆಗೆ ಕಳುಹಿಸಿಕೊಟ್ಟು, ಮಹಾರಾಜರು ಏಳೆಂಟು ದಿವಸ ಪರಿಯಂತರ ರಸದು ಸಾಮಾನು ಜಮಾಯಿಸುತ್ತಾ ಇದ್ದಲ್ಲಿ, ಮೋದಿಖಾನೆಗೆ ಬರುವಂಥಾ ರಸದು ನಿಧಾನವಾದ್ದರಿಂದಾ, ಮಡಿಕೇರಿಗೆ ಹೋಗಿ, ಮೋದಿ ಖಾನೆಗೆ ರಸದು ಸಾಗಿಸುತ್ತೇವೆ, ಎಂಬದಾಗಿ ಮಾವಿನಿ ಸಾಹೇಬರ ಸಂಗಡ ಹೇಳಿ, ದೊರೆಗಳು ಮಡಿಕೇರಿಗೆ ಬಂದು ಇರುತ್ತಾ ಇದ್ದರು.

ಅಷ್ಟರಲ್ಲಿ ಕೊಡೆಯಾಲದ ತಾಲೂಕಿಗೆ ಕರಣೀಕ ಸುಬ್ಬೈಯ್ಯ, ಕಾರೆಕಾರ ಬೋಪುನ ಸಂಗಡ ಕಳುಹಿಸಿ ಇದ್ದ ರಾಜರ ಕಡೆ ಮಂದಿ ಸಂಗಡ ಕುಂಬಳೆ ತಾಲೂಕಿನ ಮಾಪಿಳ್ಳೇರು ಜಗಳಾ ಮಾಡಿದಲ್ಲಿ, ಆ ಬಳಿಯ ಸ್ವಲ್ಪ ಸಿಕ್ಕಿದಂಥಾ ದ್ದನ್ನು ಜನರು ಲೂಟಿಮಾಡಿದರು ಎಂಬದಾಗಿ ಮಹಾರಾಜರು ಸಮಾಚಾರ ಕೇಳಿ, ಆ ಸೀಮೆಯನ್ನು ಈ ಮೇರೆ ಲೂಟಿಸಿ ವೈರಾನು ಮಾಡದೆ, ಕೌಲು ನಂಬಿಗೆ ಕೊಟ್ಟು, ನಮ್ಮ ಹಸ್ತಕಿನಲ್ಲಿ ಬಂದುಬಸ್ತು ಮಾಡಿ ಮಡಗುವದು ಎಂಬದಾಗಿ ಅಪ್ಪಣೆ ಕೊಟ್ಟದ್ದರಿಂದಾ, ಅದೇ ಮೇರೆ ಮಂಗಳೂರು ತಾಲೂಕಿನ ಬಾರಕೂರು ಬಗ್ವಾಡಿ ಪರಿಯಂತರ ಸೀಮೆಯನ್ನು ಕೌಲು ಕರಾರು ಮಾಡಿ, ಕೌಲಿಗೆ ಬಂದಂಥಾ ಸೀಮೆಯಲ್ಲಿ ಅಲ್ಲಿ ಅಲ್ಲಿ ಠಾಣ್ಯೆ ಇಟ್ಟು, ಬಂದೂಬಸ್ತು

ಮಾಡುತ್ತಾ ಇದ್ದಲ್ಲಿ, ವೀರಖಂಬದ ಬಳಿಯಲ್ಲಿ ಮಹಾರಾಜರ ಕಡೆ ಕಾರೆಕಾರ ಬೋಪು, ಐನೂರು ಕೊಡಗು ಜನ ಸಹಾ, ಠಾಣ್ಯೆ ಇದ್ದಲ್ಲಿ, ವೀರಖಂಬದಲ್ಲು ಸ್ವಲ್ಪ ಮಂದಿ ಇಟ್ಟು, ಉಳಿಕೆ ಮಂದಿ ಎಲ್ಲಾ ಮುಂದೆ ಸೀಮೆ ಬಂಡುಬಸ್ತಿಗೆ ಹೋಗಿ ಇದೆ, ಈಗ ಮಂದಿ ತೆಗೆದುಕೊಂಡು ಬಂದರೆ ಈ ಜನರ ಹೊಡಿಯ ಬಹುದು ಎಂಬದಾಗಿ, ಆ ಸೀಮೆಯವರು ಅಂತರಂಗದಲ್ಲಿ ಸಾದ್ರಿಬೇಹಾರಿಗೆ ಹೇಳಿ ಕಳುಹಿದ್ದರಿಂದಾ, ಅವನು ಕೆಲವು ಬಾರು ಅಹಷಾವ್ ಜನ ಮಾಪಿಳ್ಳೇರ ಸಹಾ ಕಟ್ಟಿಕೊಂಡು, ವೀರಖಂಬದಲ್ಲು ಠಾಣ್ಯೆ ಇದ್ದಂಥಾ ಮುಂದಿಗೆ ಗೇರಾ ಯಿಸಿದಲ್ಲಿ, "ತಾವು ಇರುವದು ಸ್ವಲ್ಪ ಜನಾ, ಇವನು ಬಹಳ ಜನ ಕಟ್ಟಿ ಕೊಂಡು ಬಂದು ಇದ್ದಾನೆ; ಅವನಾಗಿ ನಮ್ಮ ಮೇಲೆ ಬೀಳುವದಕ್ಕಿಂತಾ, ನಾವೇ ಮುಂದಾಗಿ ಅವನ ಮೇಲೆ ಹೋಗುವಾ" ಎಂತಾ ಮನಸುಬ ಮಾಡಿ ಸಾದ್ರಿಬೇಹಾರಿ ಕಡೆ ಜಮಿಯತ್ತಿನ ಮೇಲೆ ಬಿದ್ದು, ಜಗಳಾ ಮಾಡಿದಲ್ಲಿ, ದೊರೆಗಳ ಕಡೆಯದು ಜಖಮಿ ಆದ್ದು, ಮೃತವಾದ್ದು ಸಹಾ, ಇಪ್ಪತ್ತಮೂರು ಜನಕ್ಕೆ ಅಪಾಯವಾಯಿತು. ಸಾದ್ರಿಬೇಹಾರಿ ಕಡೆಯದು ನಾನೂರು ಜನ ಪರಿಯಂತರ ಜಾಯ ಜಖಮಿ ಆಯಿತು. ಉಳಿಕೆ ಜನ ಸಾದ್ರಿ ಸಹಾ, ಓಡಿಹೋದರು. ಆವಾಗ್ಯೆ ಅವನು ಹತ್ತುವಂಥಾ ಪಾಲ್ಕಿ, ಕುದುರೆ, ಒಬ್ಬ ಸರದಾರ, ಕ್ಷತ್ರಿ ಕೃಷ್ಣರಾಜ ಎಂಬವ ಸಹಾ ಸಿಕ್ಕಿದ್ದರಿಂದಾ, ಆ ಕೃಷ್ಣರಾಜ ಎಂಬವನ ರಾಜರ ಬಳಿಗೆ ಕಳುಹಿಕೊಟ್ಟಲ್ಲಿ, ಅವನನ್ನು ಕೆಪ್ಟನ್ ಮಾವಿನಿ ಸಾಹೇಬರ ಬಳಿಗೆ ಕಳುಹಿದರು. ಈ ಲಡಾಯಿದಲ್ಲಿ ಸಿಕ್ಕಿದಂಥಾದ್ದನ್ನು ಕೊಡಗು ಮಂದಿ ಲೂಟಿ ಮಾಡಿಕೊಂಡರು.

ಇದೇ ಮೇರೆ ಬಂಟ್ವಾಳದಲ್ಲಿ ಕೆಲವು ಮಂದಿ ಠಾಣ್ಯೆ ಇದ್ದಲ್ಲಿ, ಆಸಫ್ ಮಿಾರ್ ಮಹಮ್ಮದಲ್ಲಿ ಎಂಬವನು ಐನೂರು ಜನ ಪರಿಯಂತರ ತೆಗೆದುಕೊಂಡು ಬಂದು, ಆ ಠಾಣ್ಯೆದ ಮಂದಿ ಮೇಲೆ ಬಿದ್ದಲ್ಲಿ, ಬಂಟ್ವಾಳದ ಹೊಳೇ ಈಚೆ ಯಲ್ಲು ಸ್ವಲ್ಪ ಕೊಡಗು ಜನ ಠಾಣ್ಯೆ ಇದ್ದವರು ಸುದ್ದಿ ಕೇಳಿ, ಆ ಬಂಟ್ವಾಳ ದಲ್ಲು ಇದ್ದವರ ಬಳಿಗೆ ಹೋಗಿ, ಕೂಡಿಕೊಂಡು, ಸದರಿ ಆಸಫ್‌ನ ಮಂದಿ ಮೇಲೆ ಜಗಳಾ ಮಾಡಿದಲ್ಲಿ, ಈ ಕಡೆ ಜನಕ್ಕೆ ಜಖಮಿ ಆದ್ದು ಮೃತವಾದ್ದು ಸಹಾ, ಒಂಬತ್ತು ಜನಕ್ಕೆ ಅಪಾಯವಾಯಿತು. ಆ ಕಡೆಯದು ಐವತ್ತು ಜನ ಪರಿಯಂತರ ಜಾಯಾ ಜಖಮಿ ಆಯಿತು. ಆ ಆಸಫನು ಉಳಿಕೆ ಮಂದಿ

ತೆಗೆದುಕೊಂಡು, ಓಡಿಹೋದನು. ಆ ಲಡಾಯಿಯದಲ್ಲಿ ಸಿಕ್ಕಿದಂಥಾದ್ದನ್ನು ಕೊಡಗು ಜನರು ಲೂಟಿ ಮಾಡಿದರು. ಇದಲ್ಲದೆ ಉದ್ಯಾವರ ಎಂಬಲ್ಲಿಯೂ ಇದೇ ಮೇರೆ ಐನೂರು ಜನ ಕೊಡಗರು ಠಾಣ್ಯೆ ಇದ್ದಲ್ಲಿ ಸಾದ್ರಿಬೇಹಾರಿಯು ತಮ್ಮ ಕಡೆ ಕೆಲವು ಬಾರು ಕರ್ನಾಟಕ ಜನ, ಮಿರ್ ಮಹಮ್ಮದಲ್ಲಿ ಕಡೆ ಐನೂರು ಕಂದಾಚಾರದ ಜನ, ಮೂನಾಂಕಡಲನ ಕಡೆ ನಾಯಿಮಾರರು, ಉದ್ಯಾವರದ ಮಾಪಿಳ್ಳೇರು ಸಹಾ, ಮೂರು ಸಾವಿರ ಜನ ಪರಿಯಂತರ ಕಟ್ಟಿಕೊಂಡು ಬಂದು, ಆ ಕೊಡಗು ಮಂದಿ ಮೇಲೆಬಿದ್ದಲ್ಲಿ, ಜಗಳವಾಗಿ ಅವರ ಕಡೆ ಜನಕ್ಕೆ ಪೆಟ್ಟಾದ್ದರಿಂದಾ, ಅವರು ನಿಲ್ಲಲಾರದೆ, ಓಡಿಹೋಗಿ, ಒಂದು ಮಜೀದಿ ಹೊಕ್ಕೊಂಡು, ಆ ಆಶ್ರಯದ ಮೇಲೆ ಜಗಳಾ ಮಾಡಿದರಿಂದಾ, ಕೊಡಗು ಮಂದಿಯು ಮಜೀದಿಗೆ ಬೆಂಕಿ ಹಾಕಿ, ಮೇಲೆಬಿದ್ದು ಜಗಳಾ ಮಾಡಿದಲ್ಲಿ, ಕೊಡಗು ಜನಕ್ಕೆ ಜಖಮಿ ಆದ್ದು ಮೃತವಾದ್ದು ಸಹಾ ಐವತ್ತೊಂದು ಜನಕ್ಕೆ ಅಪಾಯ ಬಂತು. ಅವರ ಕಡೇದು ಏಳುನೂರು ಎಂಟುನೂರು ಪರಿಯಂತರ ಜನಕ್ಕೆ ಜಾಯಾ ಜಖಮಿ ಆಗಿ, ಉಳಿಕೆ ಮಂದಿ, ಸಾದ್ರಿಬೇಹಾರಿ ಸಹಾ, ಓಡಿಹೋದರು. ಅಲ್ಲಿ ಸಿಕ್ಕಿದಂಥಾದ್ದನ್ನು ಕೊಡಗು ಮಂದಿ ಲೂಟಿ ಮಾಡಿದರು. ಇದು ಹೊರ್ತು ಮತ್ತೆಲ್ಲಿಯೂ ಸೀಮೆ ಲೂಟಿಸದೆ, ಆ ಕಡೆ ಮಂಗಳೂರು ತಾಲೂಕು, ಕೋಡೆಯಾಲದ ಆಚೆಗೆ ಬಾರಕೂರು ಬಗ್ವಾಡಿ ಪರಿಯಂತರ, ಈ ಕಡೆ ಹೊಸಂಗಡಿ ಗಟ್ಟಿ ಪರಿಯಂತರ, ತುಳುವ ರಾಜ್ಯದ ಸೀಮೆಯನ್ನು ಕೌಲು ಮಾಡಿ, ಅಲ್ಲಲ್ಲಿ ಠಾಣ್ಯೆ ಇಟ್ಟು, ಬಂದುಬಸ್ತು ಮಾಡಿ ತಮ್ಮ ಹಸ್ತಕಿನಲ್ಲಿ ಇಟ್ಟು ಇದ್ದರು.

ಈ ಪ್ರಕಾರ ಆದ ಲಡಾಯಿದ ಕೈಫಿಯತ್ತಾಗಿ ವಕೀಲ್ ಕಪಿತಾನ್ ಮಾವಿನಿ ಸಾಹೇಬರಿಗೆ ಮಹಾರಾಜರವರು ಬರದು ಕಳುಹಿದಲ್ಲಿ: " ಈ ಮೇರೆ ಪತ್ರೆ ಆದಂಥಾದ್ದ ತಿಳಿದು, ಬಹಳ ಸಂತೋಷವಾಯಿತು. ಸಾದ್ರಿಬೇಹಾರಿಯು ಯೋಚಿಸಿದ್ದಂಥಾದ್ದಕ್ಕೆ ತಕ್ಕ ತಂಬಿ ಪಹುಂಚಾಯಿಸಿದ್ದು ಬಹಳ ಒಳ್ಳೇದಾಯಿತು " ಎಂಬದಾಗಿ ಜವಾಬು ಬರದು ಕಳುಹಿದರು.

ಆ ಬಳಿಕ ಕೊಡಗು ಮಂದಿಯು ಬೆಳ್ಳಾರೆ ಕೋಟೆಗೆ ಎರಡು ಮೂರು ದಿವಸ ಪರಿಯಂತರ ಮುತ್ತಿಗೆ ಹಾಕಿ ಲಡಾಯ ಮಾಡಿ, ಆ ಕೋಟೆಯನ್ನು ಹಲ್ಲಾ ಹತ್ತಿ ತೆಗೆದುಕೊಂಡರು. ಆವಾಗ್ಯೆ ಎರಡು ಕಡೆ ಜನಕ್ಕೂ ಅಪಾಯ

ವಾಯಿತು. ಆ ಕೋಟೆಯಲ್ಲಿ ಸಿಕ್ಕಿದಂಥಾದ್ದನ್ನು ಕೊಡಗು ಜನರು ಲೂಟಿ ಮಾಡಿಕೊಂಡರು. ಮೂಡ ಕೊಡೆಯಾಲದ ಕೋಟೆಯವರು ಇದೇ ಮೇರೆ ಕೊಡಗ ಜನರ ಮೇಲೆ ಸ್ವಲ್ಪ ಜಗಳಾ ಮಾಡಿ, ಕೌಲಿಗೆ ಇಳುದ್ದರಿಂದಾ, ಆ ಕೋಟೆ ಜನಕ್ಕೆ ಲೂಟಿ ಮಾಡದೆ, ದುಃಖ ಕೊಡದೆ ಬಿಟ್ಟು, ಈ ವಿವರವನ್ನು ವಕೀಲ್ ಮಾವಿನಿ ಸಾಹೇಬರವರಿಗೆ ಬರೆಸಿ ಕಳುಹಿದಲ್ಲಿ, ಅವರು ಚೈತ್ರ ಬ. ೧ರಲ್ಲು ಬರೆಸಿ ಕಳುಹಿದ ಕಾಗದದಲ್ಲಿ: " ಬೆಳ್ಳಾರೆ ಕೋಟೆ, ಮೂಡ ಕೊಡೆಯಾಲದ ಕೋಟೆ ಸಮಾಚಾರ ಬರಸಿದ್ದು ಕೇಳಿದಲ್ಲಿ, ಬಲು ಚಾತುರ್ಯ, ಧೈರ್ಯ, ಬಹಾದ್ದರಿತನ ಸಹಾ, ತೋರಪಟ್ಟಿತು. ಬಂಟವಾಳದಲ್ಲಿ ವಿಾರ ಮಹಮ್ಮದಲ್ಲಿ ತಾವ, ವೀರಖಂಬದಲ್ಲಿ ಸಾದ್ರಿಬೇಹಾರಿ ತಾವ ಸಹಾ, ಲಡಾಯು ವಾದ ಪೂರ್ವೋತ್ತರ ಅದೇ ದಿನ ಕಲ್ಲಿಕೋಟೆ ಕಮಿಾಶನ್ ಸಾಹೇಬರವರಿಗೆ ಬರಸಿ ಕಳುಹಿದಲ್ಲಿ ತಾವು ಮಾಡಿದಂಥಾದ್ದು ನಮ್ಮ ಸರಕಾರಕ್ಕೆ ಹಿಮ್ಮತ್ತಾಯಿತು. ಇದರಿಂದಾ ತಮ್ಮ ಧೀರತ್ವದ ಯಾದು ಸಹಾ ಬಹು ತಾರೀಪು ಮಾಡಿ, ಜವಾಬು ಬರಸಿ ಕಳುಹಿಸಿ ಇದ್ದಾರೆ. ಆದ್ದರಿಂದಾ ಈಗ ಬೆಳ್ಳಾರೆ ಕೋಟೆ, ಮೂಡ ಕೊಡೆಯಾಲದ ಕೋಟೆ ಸಮಾಚಾರವನ್ನು ಬರಸಿ ಕಳುಹಿಸಿ ಇದ್ದೇವೆ. ಈ ವಿವರ ಅವರು ಕೇಳುತ್ತಲೇ, ಮತ್ತೂ ಬಹಳ ಸಂತೋಷವಾದರು " ಎಂತಾ ಬರದು ಇದ್ದರು.

ಇತ್ತಲಾಗಿ ಅರಕಲಗೋಡ ಕಡೆಗೆ ಕಳುಹಿಸಿ ಇದ್ದ ಈಶ್ವರೈಯ್ಯನು ಮಂದಿ ತೆಗೆದುಕೊಂಡು ಹೋಗಿ, ಬಸವಾಪಟ್ಟಣದ ಕೋಟೆಗೆ ಮುತ್ತಿದಲ್ಲಿ, ಕೋಟೆಯವರು ಕೊಡಗು ಮಂದಿ ಮೇಲೆ ಜಗಳಾ ಮಾಡಿದಲ್ಲಿ, ಆವಾಗ ಕೊಡಗು ಮಂದಿಯು ಹಲ್ಲಾ ಹತ್ತಿ, ಕೋಟೆ ತೆಗೆದುಕೊಂಡಲ್ಲಿ, ಈ ಕಡೆ ಜನಕ್ಕೆ ಜಖಮಿ ಆದ್ದು, ಮೃತವಾದ್ದು ಸಹಾ, ಇಪ್ಪತ್ತಾಯೇಳು ಜನಕ್ಕೆ ಅಪಾಯುವಾಯಿತು. ಆ ಕಿಲ್ಲೆಯು ಒಳಗೆ ಇದ್ದ ಪ್ಯಾದೆ ಜನಕ್ಕೆಲ್ಲಾ ತಂಬಿ ಪಹುಂಚಾಯಿಸಿ, ಅಲ್ಲಿ ಸಿಕ್ಕಿದ್ದನ್ನು ಲೂಟಿ ಮಾಡಿಕೊಂಡು, ಹೆಂಡರು ಮಕ್ಕಳು ಹೋದಂಥಾ ರೈತರು ನಾಲ್ವತ್ತಮೂರು ಹೆಣ್ಣನ್ನು ಹಿಡುಕೊಂಡು ಬಂದರು, ಆವಾಗ್ಯೆ ಬಸವಾಪಟ್ಟಣದ ಅರುಗ ಸುತ್ತಾ ಸ್ವಲ್ಪ ಸೀಮೆಯನ್ನು ಲೂಟಿ ಮಾಡಿದರು. ಅಷ್ಟರಲ್ಲಿ ಗಡಿ ಸರಹದ್ದಿನ ಸೀಮೆಯವರು ಈಶ್ವರೈಯ್ಯನ ಬಳಿಗೆ ಬಂದು, ಕೌಲು ಮಾಡಿದ್ದರಿಂದಾ, ಕೌಲಿಗೆ ಬಂದಂಥವರಿಗೆ ಕೌಲು ನಂಬಿಗೆ

ಕೊಟ್ಟು, ದಿಲ್ ಭರವಸಾ ಹೇಳಿ, ಬಂದುಬಸ್ತು ಮಾಡಿಕೊಂಡು, ಈಶ್ವರೈಯ್ಯನು ಹೀಗೆ ಇರುತ್ತಿದ್ದಲ್ಲಿ, ಚೈತ್ರ ಬ. ೩೦ಯು, ಶನಿವಾರ ದಿವಸ, ಪಟ್ಟಣದಲ್ಲಿ ಫಿರಂಗಿ ಆವಾಜು ಬಂದಾಯಿತು. ಮತ್ತೆ ಎಂಟು ದಿನ ಪರಿಯಂತರ ಪಟ್ಟಣದ ಸಮಾಚಾರ ಏನೂ ಬರಲಿಲ್ಲವಾದ್ದರಿಂದಾ, ಈ ಪ್ರಕಾರ ಪಟ್ಟಣದಲ್ಲಿ ಫಿರಂಗಿ ಆವಾಜು ನಿಂತಿತು; ಏನಾಯಿತೋ ಎಂಬದಾಗಿ, ಕೊಡಗಿನ ಮಹಾರಾಜರು ಮನಸ್ಸಿನಲ್ಲಿ ವಿಚಾರಿಸಿಕೊಂಡು ಇದ್ದಲ್ಲಿ, ಅಷ್ಟರ ಒಳಗೆ ಪಟ್ಟಣ ಹೋದ ಎಂಟನೇ ದಿನ ವಕೀಲ್ ಕೆಪ್ಟನ್ ಮಾವಿನಿ ಸಾಹೇಬರವರು ವೈಶಾಖ ಶು. ೭ಯು ಶನಿವಾರ ದಿವಸ, ಬರೆಸಿ ಕಳುಹಿದ ಕಾಗದದಲ್ಲಿ : "ಇಂದಿಗೆ ೮ನೇ ದಿನ ಚೈತ್ರ ಬ. ೩೦ಯು, ಶನಿವಾರ ದಿವಸ, ಇಂಗ್ರೇಜ ಬಹಾದ್ದರವರು ಶ್ರೀರಂಗ ಪಟ್ಟಣ ಹಲ್ಲಾ ಮಾಡಿ ತೆಗೆದುಕೊಂಡರು. ಹಲ್ಲಾ ಮಾಡುವ ವೇಳ್ಯಕ್ಕೆ ಟೀಪುಸುಲ್ತಾನರು ತೀರಿಹೋದರು. ಅವರ ಹೆಂಗಸರು ಮಕ್ಕಳು ಎಲ್ಲಾ ನಮ್ಮ ಕೈಗೆ ಸಿಕ್ಕಿದರು. ಈಗ ಜನರಲ್ ಸಾಹೇಬರು ಮುಂಬಾಯಿ ಫೌಜು ಸಹಾ, ಈ ಕಡೆಗೆ ಬರುತ್ತಾ ಇದೆ. ಆದ್ದರಿಂದಾ ಬಹಳ ಕಾರ್ಯ ಇರುತ್ತಾ ಇದೆ. ತಾವು ಶೀಘ್ರ ಬರಬೇಕು. ತಾವು ಬಂದಮೇಲೆ, ಎಲ್ಲಾ ತಿಳಿಯಲಾದೀತು" ಎಂಬದಾಗಿ, ಬರದ ಕಾಗದ ಆದಿತ್ಯವಾರ ದಿನ ಬಂದು ಮುಟ್ಟಿತು. ಆ ಕಾಗದ ಓದಿಸಿ ಕೇಳಿದರಿಂದಾ, ಮಹಾರಾಜರು ಬಹಳ ಸಂತೋಷಮಾಡಿಕೊಂಡು, ಇಂಗ್ರೇಜ ಸರಕಾರಕ್ಕೆ ಫತ್ತೆ ಆದ ಸಂತೋಷದ ಬಗ್ಯೆ ಮಡಿಕೇರಿ ಕೋಟೆಯಲ್ಲು ಇಪ್ಪತ್ತೊಂದು ಫಿರಂಗಿ ಹಾರಿಸಿದರು. ಆ ಮೂರನೇ ಸೋಮವಾರ ದಿವಸ ಮಹಾರಾಜರವರು ವೀರರಾಜೇಂದ್ರಪೇಟೆಗೆ ಹೋದಲ್ಲಿ, ಮಾವಿನಿ ಸಾಹೇಬರು ಹೇಳಿದ ವಿವರ : "ಚೈತ್ರ ಬ. ೩೦ಯು, ಶನಿವಾರ ದಿವಸ, ಇಂಗ್ರೇಜ ಬಹಾದ್ದರರ ಲಷ್ಕರು ಹಲ್ಲಾ ಮಾಡಿ, ಪಟ್ಟಣವನ್ನು ತೆಗೆದುಕೊಂಡರು. ಇನ್ನು ಆ ಸೀಮೆ ಎಲ್ಲಾ ಇಂಗ್ರೇಜ ಸರಕಾರದ್ದಾಯಿತು. ಇನ್ನು ತಾವು ಲಡಾಯಿ ಮೊಖೂಪು ಮಾಡಿ, ತಮ್ಮ ಕೈ ಒಳಗೆ ಬಂದು ಇರುವ ಸೀಮೆ ಎಲ್ಲಾ ಕುಂಪನಿ ಸರಕಾರಕ್ಕೆ ಬಿಟ್ಟು, ತಮ್ಮ ಸೀಮೆಗೆ ಪ್ರಾಕು ಇಂಗ್ರೇಜಿ ಸರಕಾರದ ಇಂಜಿನೇರು ಇಮಿಟ್ ಸಾಹೇಬರು ಬಂದು, ಗಡಿ ಕಲ್ಲು ಹಾಕಿ, ತಮ್ಮ ಸೀಲಲ್ಲು ಬರ ಕೊಂಡು ಹೋದ ಗಡಿ ಬಂದ ಹಾಗೆ, ತಮ್ಮ ಸೀಮೆ ತಾವು ಬಂದುಬಸ್ತು ಮಾಡಿಕೊಳ್ಳಬೇಕು" ಎಂತಾ ಹೇಳಿದರಿಂದಾ, "ನಾವು ಕೌಲು ಮಾಡಿ ಇರು

ವಂಥಾ ಸೀಮೆಯಲ್ಲಿ ಮಡಗಿ ಇರುವ ಠಾಣ್ಯೆ ತೆಗೆದುಬಿಟ್ಟರೆ, ಟೀಪುಸುಲ್ತಾನರ ಕಡೆ ಇದ್ದಂಥಾ ತುಂಟರು ಸೀಮೆಗೆ ದುಃಖ ಕೊಟ್ಟಾರಲ್ಲಾ" ಎಂತಾ ಹೇಳಿದ್ದಕ್ಕೆ, ಮುಂಬಾಯಿ ಲಷ್ಕರು ಬರುತ್ತದೆ. ಆ ಪರಿಯಂತರ ಈಗಿನ ಮೇರೆ ತಮ್ಮ ಹಸ್ತಕಿನಲ್ಲು ಇಟ್ಟು ಇರಬೇಕು. ಜನರಲ್ ಸಾಹೇಬರು ಹೇಳಿದ ಮೇರೆ ಮಾಡಬಹುದು ಎಂಬದಾಗಿ, ಮಾವಿನಿ ಸಾಹೇಬರವರು ಹೇಳಿದ್ದರಿಂದಾ, ಆ ಕ್ಷಣ ಇದೇ ವಿವರವಾಗಿ ಈಶ್ವರೈಯ್ಯನಿಗೆ ಮಹಾರಾಜರು, ಅದೇ ಸೋಮವಾರ ದಿವಸ, ಬರದು ಕಳುಹಿದ ನಿರೂಪ ಅವನು ದುರ್ಗದ ಸೀಮೇ ಪ್ರಾಂತ್ಯದಲ್ಲಿ ಇದ್ದಲ್ಲಿ ಬುಧವಾರ ದಿವಸ ಹೋಗಿ ಮುಟ್ಟಿತು.

ಅದಕ್ಕೆ ಈಶ್ವರೈಯ್ಯನು ಬರಕೊಂಡ ಬಿನ್ನವತ್ತಳೆಯಲ್ಲಿ: "ಬಸವಾ ಪಟ್ಟಣದ ಕೋಟೆ ಹಲ್ಲಾಮಾಡಿ, ನಮ್ಮ ಮಂದಿ ತೆಗೆದುಕೊಳ್ಳುವ ಪರಿಯಂತರ, ಸ್ವಲ್ಪ ಲೂಟಿ ಆದ್ದು ಆಯಿತು. ಆಮೇಲೆ ಎಲ್ಲಿಯೂ ಸೀಮೆ ಲೂಟಿ ಮಾಡದೆ, ಕೌಲು ನಂಬಿಗೆ ಕೊಟ್ಟು ಇಟ್ಟು ಇದ್ದೇನೆ. ಇನ್ನುಮುಂದೂ ಲೂಟಿ ಲಬಾಡು ಮಾಡದೆ, ಅಪ್ಪಣೆ ಪ್ರಕಾರ ನಡಕೊಳ್ಳುತ್ತೇನೆ" ಎಂತಾ ಬಿನ್ನವತ್ತಳೆ ಬರಕೊಂಡು ಇದ್ದಾ.

ಇದೇ ವಿವರವಾಗಿ ಪಟ್ಟಣ ಹೋದ ಹತ್ತನೆ ಸೋಮವಾರ ಬರದ ನಿರೂಪವನ್ನು ಮಂಗಳೂರ ತಾಲೂಕಿಗೆ ಹೋಗಿ ಇದ್ದಂಥಾ ರಾಜರ ಕಡೆ ಮುಂದಿಗೆ ಕಳುಹಿದಲ್ಲಿ, ಆ ನಿರೂಪವು ಎರಡು ದಿವಸಕ್ಕೆ ಹೋಗಿ ಮುಟ್ಟುವಲ್ಲಿಗೆ ಮುಟ್ಟಿತು. ಮೂರು ದಿವಸಕ್ಕೆ ಮುಟ್ಟುವಲ್ಲಿಗೆ ಮುಟ್ಟಿತು. ನಾಲ್ಕು ಐದು ದಿವಸಕ್ಕೆ ಮುಟ್ಟುವಲ್ಲಿಗೆ ಮುಟ್ಟಿತು. ಕೊಡೆಯಾಲದ ಆಚೆ ಬಾರ್ಕೂರು ಬಗ್ವಾಡಿ ಪರಿಯಂತರ ಸೀಮೆ ಸಾಧಿಸಿ, ಠಾಣ್ಯೆ ಇದ್ದ ಜನಕ್ಕೆ ಏಳು ಎಂಟು ದಿವಸಕ್ಕೆ ಮುಟ್ಟುವಂಥಾದ್ದು ಮುಟ್ಟಿತು. ಈ ಮೇರೆ, ಇಲ್ಲಿ ಇದ್ದ ವಕೀಲ ಮಾವಿನಿ ಸಾಹೇಬರವರು ಹೇಳಿದ ಮೇರೆ, ವೀರರಾಜೇಂದ್ರ ಒಡೆಯರವರು ತಮ್ಮ ಕಡೆ ಜನಕ್ಕೆ ನಿರೂಪ ಬರೆಸಿ ಕಳುಹಿಸಿದಂಥಾದ್ದು ಮುಟ್ಟಿದಮೇಲೆ, ಸೀಮೆ ಲೂಟಿ ಲಬಾಡು ಮಾಡದೆ, ಬಂದುಬಸ್ತು ಮಾಡಿಕೊಂಡು ಇದ್ದರು.

ಹೀಗೆ ಇರುವಾಗ್ಯೆ, ಟೀಪುಸುಲ್ತಾನರ ಸಂಗಡ ಲಡಾಯು ಶುರು ಆಗುವಾಗ್ಯೆ: "ಪೇಶ್ವೆಯವರು ತಮ್ಮ ಫೌಜನ್ನು ಟೀಪುಸುಲ್ತಾನರ ಮೇಲೆ ಲಡಾಯಕ್ಕೆ ಕಳುಹುತ್ತೇವೆ. ಈ ಬಗ್ಯೆ ನಮ್ಮ ಬಳಿಯು ಇರುವದೆಲ್ಲಾ ಕುದುರೆ

ಫೌಜೇ ಸರಿ. ಅದುಕಾರಣ ತಮ್ಮ ಕಡೆಯಿಂದಾ ಕೆಲವು ಫೌಜು ಕಳುಹಿಸ ಬೇಕು. ಅವರ ಸಂಗಡ ಕೂಡಿಸಿ ಕಳುಹಿಸುತ್ತೇವೆ " ಎಂಬದಾಗಿ, ಮುಂಬಾಯಿ ಗವರ್ನರ್ ಸಾಹೇಬರವರಿಗೆ ಕಾಗದ ಬರಸಿ ಕಳುಹಿಸಿ ಇದ್ದುದರಿಂದಾ, ಅದೇ ಪ್ರಕಾರ ಗವರ್ನರ್ ಸಾಹೇಬರವರು ಮುಂಬಾಯಿಯಿಂದಾ ಪಾದಶಾಯಿ ರಿಜಿಮಿಟ್ಟು ಒಂದು, ಶಿಪಾಯಿ ಪಟಾಲಂ ಎರಡು ಸಹಾ, ಪೇಶ್ವೆಯವರ ಬಳಿಗೆ ಕಳುಹಿಸಿದಲ್ಲಿ, ಆ ಪೇಶ್ವೆಯವರು " ಫೌಜನ್ನು ಇಂದು ನಾಳೆ ಕಳುಹಿಸುತ್ತೇವೆ " ಎಂಬದಾಗಿ, ಹೋದಂಥಾ ರಿಜಿಮಿಟ್ಟು, ಪಟಾಲಂ ಸಹಾ, ಅಲ್ಲಿಯೆ ನಿಲ್ಲಿಸಿ ಕೊಂಡು, ಕಡೆಗೆ: " ಈಗ ನಮ್ಮ ಒಳಗೆ ಗೃಹಛಿದ್ರ ಕಲಹವಾಗಿ ಇದೆ. ಇದನ್ನು ತೀರಿಸದೆ, ಫೌಜನ್ನು ಕಳುಹುವ ಬಗ್ಯೆ, ಸಂದರ್ಭ ಆಗುವದಿಲ್ಲಾ. ಈಗ ನೀವು ಹೋಗಿ ಎಂತಾ, ಹೇಳಿದ್ದರಿಂದಾ, ಆ ರಿಜಿಮಿಟ್ಟು, ಪಟಾಲಂ ಸರದಾರರು ಸಹಾ, ಶ್ರೀರಂಗಪಟ್ಟಣಕ್ಕೆ ಹೋಗುವ ಬಗ್ಯೆ, ಮುಂಬಾಯಿಗಾಗಿ ಬಂದು, ಕೊಡಗಿನ ಸೀಮೆ ಒಳಗೆ ಬಂದು, ಕರಡಿಗೋಡಲ್ಲು ಇಳಿದು ಇದ್ದರು.

ಅಷ್ಟರಲ್ಲಿ ಜನರಲ್ ಸ್ಟೋಯರ್ಟ್ ಸಾಹೇಬ್ ಬಹಾದ್ದರವರು ಶ್ರೀರಂಗಪಟ್ಟಣವನ್ನು ಜಯಿಸಿ, ಪುನಃ ಬಂದು ಪೆರಿಯಾಪಟ್ಟಣದ ಇಲಾಖೆ ಮುತ್ತೂರಲ್ಲು ಇಳಿದರು. ಆವಾಗ್ಯೆ ವೀರರಾಜೇಂದ್ರ ಒಡೆಯರವರು, ಕೆಪ್ಟನ್ ಮಾವಿನಿ ಸಾಹೇಬರು ಸಹಾ, ಅಲ್ಲಿಗೆ ಹೋಗಿ, ಆ ಜನರಲ್ ಸಾಹೇಬರವರ ಮಿಲಾಖತ್ತು ಮಾಡಿದಲ್ಲಿ, ಅವರು ಮಹಾರಾಜರ ಸಂಗಡ ಹೇಳಿದ ವಿವರ: " ಇಂಗ್ರೇಜ ಕುಂಪನಿ ಸರಕಾರದ ಕೆಲಸಕ್ಕೆ ತಾವು ಬಹಳ ಮೆಹನತ್ತು ಮಾಡಿದಿರಿ. ಆ ನಿಮ್ಮ ಅಪೇಕ್ಷೆ ಮೇರೆ ಸರಕಾರದ ಕೆಲಸವು ಫತ್ತೆ ಆಯಿತು. ಈ ಉಪಕಾರ ನಮ್ಮೇಲೆ ಬಹಳ ಆಯಿತು " ಎಂಬದಾಗಿ ಹೇಳಿದಲ್ಲಿ, " ನಮ್ಮ ದುಷ್ಮಾನರು ದೂರವಾದರು, ನಮ್ಮ ಅಪೇಕ್ಷೆ ಮೇರೆ ಅನಂತ ದೇಶ, ಕೋಶ, ಐಶ್ವರ್ಯ, ಪಟ್ಟಣದ ಕೋಟೆ ಮುಂತಾಗಿ ಇಂಗ್ರೇಜ ಬಹಾದ್ದರ ಸರಕಾರ ತಾಬೆ ಆಯಿತು. ಇದರ ತಾರೀಪು ಹತ್ತು ಪಾಲಲ್ಲಿ ಒಂದು ಪಾಲಾದರೂ ನಮ್ಮಿಂದ ಆಗದು. ನಮ್ಮ ಸೀಮೆ ಸುತ್ತಲು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸೀಮೆ ಆಯಿತು. ಇದರಿಂದ ನಮ್ಮ ಮನಸ್ಸಿಗೆ ಬಹಳ ಸಂತೋಷವಾಯಿತು " ಎಂಬದಾಗಿ ಮಹಾರಾಜರವರು ಹೇಳಿದರು. " ಕರಡಿಗೋಡಲ್ಲು ಇಳಿದು ಇದ್ದ ರಿಜಿಮಿಟ್ಟು, ಪಟಾಲಂ ಸಹಾ, ಬಂದು ನಮ್ಮ ದಂಡಿಗೆ ಕೂಡಿದರೆ, ಈ

ದಂಡು ಆ ದಂಡು ಸಹಾ ಒಟ್ಟಾಗಿ ಗಟ್ಟಾ ಇಳಿಯುವಾಗ್ಯೆ, ಬಹಳ ಪ್ರಯಾಸ ಆದೀತು. ಆದ್ದರಿಂದಾ ಒಂದೊಂದು ಮಜಲು ನೀವು ಮುಂದಾಗಿ ಹೋಗಿ" ಎಂತಾ ಜನರಲ್ ಸಾಹೇಬರು ಆ ರಿಜಿಮಿಟ್ಟು ಪಟಾಲಮಿಗೆ ಸಹಾ ಹುಕುಂ ಕೊಟ್ಟು, ಅದೇ ಮೇರೆ ರವಾನೆ ಮಾಡಿದರು.

ಆ ಬಳಿಕ ಬಂಗಾಳದ ದೊಡ್ಡ ದಂಡನ್ನು ತೆಗೆದುಕೊಂಡು, ಶ್ರೀರಂಗ ಪಟ್ಟಣಕ್ಕೆ ಬಂದು ಇದ್ದ ಜನರಲ್ ಹಾರಿಸ್ ಸಾಹೇಬ್ ಬಹಾದ್ದರವರು ಸನ್ ೧೭೯೯ನೇ ಇಸವಿ, ಮೇ ಮಾಸ, ೨೩ನೇ ತಾರೀಕಿನಲ್ಲು, ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ : " ಶ್ರೀರಂಗಪಟ್ಟಣ ತೆಗೆದುಕೊಂಡದರಿಂದಲೂ, ಟೀಪುಸುಲ್ತಾನರು ಲಡಾಯಿದಲ್ಲಿ ಬಿದ್ದುಹೋದ್ದರಿಂದಲೂ, ಈ ಖುಷಿ ಸಮಾ ಚಾರ ತಮಗೆ ತಿಳಿಯುವ ಬಗ್ಯೆ ಬರಸಿ ಕಳುಹಿಸಿ ಇದ್ದೇವೆ. ಮೊದಲು ಕೆಪ್ಟನ್ ಮಾವಿನಿ ಸಾಹೇಬರವರ ಮುಖಾಂತರದಿಂದಾ ತಿಳಿದು ಇದ್ದೀತು ಈ ಸಂತೋಷದ ವರ್ತಮಾನ ಜನರಲ್ ಸ್ಟೋಯರ್ಟ್ ಸಾಹೇಬರವರು ತಮಗೆ ತಿಳಿಯಪಡಿಸ್ಯಾರು. ತಾವು ಕುಂಪನಿ ಸರಕಾರದ ಕೆಲಸಕ್ಕೆ ಬಹಳ ಮೆಹನತ್ತು ಮಾಡಿ ಇದ್ದೀರಿ. ಇದು ಯಾವಾಗ್ಯೂ ಮರೆಯಲಿಕ್ಕಿಲ್ಲಾ. ತಮ್ಮ ಕೀರ್ತಿ ಈ ದುನಿಯಾ ಮೇಲೆ ಬಹಳ ದೊಡ್ಡದಾಗುವ ಹಾಗೆ, ಜನರಲ್ ಸ್ಟೋಯರ್ಟ್ ಸಾಹೇಬರವರಿಗೆ ತಿಳಿಯಹೇಳಿ ಇದ್ದೇವೆ. ಆ ನಮ್ಮ ಪ್ರೀತಿಯಿಂದಾ ತಮಗೆ ಒಂದು ಒಳ್ಳೇ ವಸ್ತು ಜನರಲ್ ಸ್ಟೋಯರ್ಟ್ ಸಾಹೇಬರವರ ಸಂಗಡ ಕಳು ಹುತ್ತಾ ಇದೆ. ಅದರಿಂದಾ ತಮಗೆ ಪರಾಂಬರಿಕೆ ಆದೀತು. ಟೀಪುಸುಲ್ತಾನರ ಸವಾರಿ ಬಾಬತು ಕುದುರೆ ಒಂದು, ಅಂಬಾರಿ ಒಂದು, ಪಾಲ್ಕಿ ಒಂದು ಸಹಾ, ಈ ಜನರಲ್ ಸಾಹೇಬರವರ ಸಂಗಡ ತಮಗೆ ಕೊಟ್ಟು ಕಳುಹಿಸಿ ಇದೆ. ಇದರ ಮೇಲೆ ತಮಗೆ ಸೀಮೆ ಭೂಮಿ ಯಾವತ್ತು ವಿಸ್ತಾರವಾಗಿ ಆಗತಕ್ಕಂಥಾ ಅಪೇಕ್ಷೆಯಿಂದಾ ಇದ್ದೇವೆ" ಎಂಬದಾಗಿ ಬರಸಿ ಕಳುಹಿಸಿ ಇದ್ದಂಥಾ ಕಾಗದ, ಕುದುರೆ, ಪಾಲ್ಕಿ, ಅಂಬಾರಿ ಸಹಾ, ಜನರಲ್ ಸ್ಟೋಯರ್ಟ್ ಸಾಹೇಬರವರು ವೀರರಾಜೇಂದ್ರ ಒಡೆಯರವರಿಗೆ ಕೊಟ್ಟು, ಅವರ ಕಡೆಯಿಂದಾ ಟೀಪು ಸುಲ್ತಾನರು ಹತ್ತುವಂಥಾ ಕುದುರೆ ಒಂದು, ಜನರಲ್ ಹಾಟ್ಲಿ ಸಾಹೇಬರವರ ಕುದುರೆ ಒಂದು ಸಹಾ, ಮಹಾರಾಜರಿಗೆ ಕೊಟ್ಟು, ಬಹಳ ಖುಷಿ ಮಾಡಿದರು.

ಆ ಬಳಿಕ ಜನರಲ್ ಹಾರಿಸ್ ಸಾಹೇಬ್ ಬಹಾದ್ದರವರಿಗೆ ವೈಶಾಖ ಬ.

ಓರಲ್ಲು ಬರೆಸಿ ಕಳುಹಿಸಿದ ಕಾಗದದ ವಿವರ : " ಇಂಗ್ರೇಜ ಬರಹದಲ್ಲು ತಾವು ಬರಸಿ ಕಳುಹಿದ ಕಾಗದ ಬಂದು ಮುಟ್ಟಿತು. ಮನಸ್ಸಿಗೆ ಬಹಳ ಸಂತೋಷ ವಾಯಿತು. ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಬಹಳ ಸಕಾಯ ಉಪಕಾರ ಮಾಡಿ ಇದ್ದೀರಿ ಎಂತಾ, ಬಹು ತಾರೀಫು ಮಾಡಿ, ಬರಸಿ ಇದ್ದೀರಿ. ಈ ಬಗ್ಯೆ ನಾವೇನೂ ಅಂಥಾ ಸಕಾಯ ಸಂಪತ್ತು ಬಹಳವಾಗಿ ಮಾಡಿದ್ದಾಗಿ ಇಲ್ಲಾ. ನಮ್ಮ ಸೀಮೆಯು ಗಿಡ ಸೀಮೆ, ಬಹು ಚಿಕ್ಕದು. ಇಂಗ್ರೇಜ ಸರಕಾರ ಎಂದರೆ, ಬಹಳ ದೊಡ್ಡ ಸರಕಾರ ಇದೆ. ನಾವೇನೂ ಅಂಥಾ ಸಕಾಯ ಮಾಡಿದ್ದಾಗಿ, ನಮ್ಮ ನಸ್ಸಿಗೆ ಕಾಣುವದಿಲ್ಲಾ. ನಾವು ಸ್ವಲ್ಪ ಮಾಡಿದ್ದಾಗ್ಯೂ ತಾವು ದೊಡ್ಡ ಸರದಾರರಾದ್ದರಿಂದಾ, ಬಹಳ ತಾರೀಫು ಮಾಡಿ ಬರಸಿ ಕಳುಹಿಸಿ ಇದ್ದೀರಿ. ಮನಸ್ಸಿಗೆ ಸಂತೋಷವಾಯಿತು. ಟೀಪುಸುಲ್ತಾನರು ನಮಗೆ ಬಹಳ ದೊಡ್ಡ ದುಷ್ಮಾನರಾಗಿ ಇದ್ದರು. ಹಿಂದೂ ಜಾತಿ ಧರ್ಮವೆಲ್ಲಾ ಕೆಡಿಸಿ, ಧರ್ಮ ನಡೆಯದಂತೆ ಮಾಡಿ ಇದ್ದರು. ಅಂಥಾವರಿಗೆ ತಾವು ನಿಗ್ರಹಿಸಿದ್ದರಿಂದಾ, ಹಿಂದೂ ಜಾತಿಗೆಲ್ಲಾ ಖುಷಿ ಆಯಿತು. ತಮ್ಮ ಸರಕಾರಕ್ಕೆ ಬಹಳ ಪುಣ್ಯಧರ್ಮ ಬಂತು. ತಮಗೆ ಕೀರ್ತಿ ಬಂತು. ಟೀಪುಸುಲ್ತಾನರು ಇಷ್ಟು ಬೇಗ ಈ ಮೇರೆ ಆಗುಪಂಥಾದ್ದು ಮನುಷ್ಯರ ಯೋಚನೆ ಒಳಗೆ ಇತ್ತಿಲ್ಲಾ. ತಮ್ಮ ಭುಜಬಲಪರಾಕ್ರಮದಿಂದಾ ನಿಗ್ರಹಿಸಿ, ಹಿಂದೂ ಜಾತಿ ಧರ್ಮ ಉಳಿಸಿದ ಪುಣ್ಯ ಸೂರ್ಯ-ಚಂದ್ರ ಇರುವ ಪರಿಯಂತರ ತಮ್ಮ ಕೀರ್ತಿ ಶಾಶ್ವತವಾಯಿತು. ಇದನ್ನು ನಾವು ಎಷ್ಟು ಎಂತಾ, ಕಾಗದದಲ್ಲಿ ಬರೆಯ ಬೇಕು ? ಅಂಥಾ ಬಹಾದ್ದರ ಕೆಲಸ ಮಾಡಿ ಇದ್ದೀರಿ. ಮೇಲಾಗಿ ತಾವು ಮೆಹರ್ಬಾನಗಿ ಇಟ್ಟು, ಟೀಪುಸುಲ್ತಾನರ ಖಾಸಾ ಸವಾರಿ ಕುದುರೆ ಒಂದು ಕಳುಹಿದ್ದು ಸರಿಯಷ್ಟೆ. ಆ ಕುದುರೆ ಬಂದು ಮುಟ್ಟಿತು. ಇದು ಬಲು ಹೆಚ್ಚಿನ ಕುದುರೆ. ಜನರಲ್ ಸಾಹೇಬರವರ ಮುಖಾಂತರ ಬಂದು ತಲಪಿತು. ಇದಲ್ಲದೆ ಟೀಪುಸುಲ್ತಾನರ ಖಾಸಾ ಪಾಲ್ಕಿ ಒಂದು, ಅಂಬಾರಿ ಒಂದು ಸಹಾ, ಬಂದು ಮುಟ್ಟಿದ್ದರಿಂದಾ, ಅದ ನೋಡಿ, ನಮ್ಮ ನಸ್ಸಿಗೆ ಬಹಳ ಸಂತೋಷವಾಯಿತು. ಮೇಲಾಗಿ ಇಲ್ಲಿ ನಡದಂಥಾ ಯಾವತ್ತು ವಿವರವು ಕೆಪ್ಟನ್ ಮಾವಿನಿ ಸಾಹೇಬರು ತಮಗೆ ಬರಸಿ ಕಳುಹಿಸಿ ಇರುವಲ್ಲಿ, ಹೆಚ್ಚಾಗಿ ಬರೆಯುತಕ್ಕದ್ದು ಏನು ಇದೆ ? " ಎಂಬದಾಗಿ, ಬರೆಸಿ ಕಳುಹಿಸಿಕೊಟ್ಟರು.

ಆ ಬಳಿಕ ಜನರಲ್ ಸ್ಟೋಯರ್ಟ್ ಸಾಹೇಬರವರು, ಜನರಲ್ ಹಾರ್ಟ್ಲಿ ಸಾಹೇಬರವರು ಸಹಾ, ನಾವು ಕಣ್ಣೂರಿಗೆ ಸಾಗಿಹೋಗುತ್ತೇವೆ; ದಂಡಿನ ಅಜಾರಿ ಜನರ ಸಾಗಿಸಿಕೊಡಬೇಕೆಂಬದಾಗಿ ದೊರೆಗಳ ಸಂಗಡ ಹೇಳಿದರಿಂದಾ ಅದಕ್ಕೆ ಬೇಕಾದ ಜನ ಕೂಡಿಸಿ, ಕಣ್ಣೂರಿಗೆ ಸಾಗಿಸಿ, ರಾಜರು ಆ ಜನರಲ್ ಸಾಹೇಬರವರ ಸಂಗಡ ಕಣ್ಣೂರಿಗೆ ಹೋದಲ್ಲಿ, ಸಲಾಂ ಫಿರಂಗಿಗಳ ಹಾರಿಸಿ, ಬಹಳ ಖುಷಿ ಮಾಡಿದರು.

ಹೀಗೆ ಏಳೆಂಟು ದಿನ ಅಲ್ಲಿ ಇರುತ್ತಿದ್ದಲ್ಲಿ, "ನಮ್ಮ ಹಸ್ತಕಿನಲ್ಲಿ ಬಂದು ಬಸ್ತು ಮಾಡಿ ಇಟ್ಟಿರುವ ಸೀಮೆಯನ್ನು ಯಾರ ಹಸ್ತಕಿಗೆ ಕೊಡಬೇಕು?" ಎಂತಾ, ಮಹಾರಾಜರು ಕೇಳಿದಲ್ಲಿ, "ಮಂಗಳೂರ ತಾಲೂಕಿಗೆ ಕರ್ನಲ್ ವೈಸ್‌ಮೇನ್ ಸಾಹೇಬರು ಬರುತ್ತಾರೆ. ಅವರ ತಾಬೆ ಮಾಡಬೇಕು" ಎಂತಾ ಜನರಲ್ ಸಾಹೇಬರು ಹೇಳಿದರಿಂದಾ, ಅದೇ ಪ್ರಕಾರ: "ಆ ಸಾಹೇಬರು ಬಂದಲ್ಲಿ ನಾವು ಬಂದುಬಸ್ತು ಮಾಡಿ ಇಟ್ಟಿರುವ ಸೀಮೆಯನ್ನು ಅವರ ತಾಬೆ ಮಾಡಿ ಬರುವದು" ಎಂಬದಾಗಿ, ಕರಣೀಕ ಸುಬ್ಬೈಯ್ಯನಿಗೆ ನಿರೂಪ ಬರಸಿ ಕಳುಹಿದರು.

ಜನರಲ್ ಸಾಹೇಬರು: "ನಾವು ವಿಲಾಯಿತಿಗೆ ಹೋಗುತ್ತೇವೆ. ತಾವು ಕುಂಪನಿ ಸರಕಾರದ ಕೆಲಸಕ್ಕೆ ಬಹಳ ಮೆಹನತ್ತು ಒಟ್ಟು, ಪ್ರಾಣ ಪ್ರಯತ್ನ ಮಾಡಿ, ಬಹಳ ಸಕಾಯ ಸಂಪತ್ತು ಮಾಡಿ ಇದ್ದೀರಿ. ನಮ್ಮ ಕಡೆಯಿಂದಾ ಏನು ಆಗಬೇಕು, ಆ ವಿವರ ಹೇಳಿದರೆ, ಮಾಡಿಕೊಟ್ಟೇವು. ಈ ಬಗ್ಗೆ ಅಂದೇಶವಿಲ್ಲದೆ ಹೇಳಬೇಕು" ಎಂಬದಾಗಿ ಬಹಳ ಬಗೆಯಿಂದಾ ಕೇಳಿದಲ್ಲಿ, "ನಾವು ದೋಸ್ತಿಯಿಂದಾ ಕುಂಪನಿ ಸರಕಾರದ ಕೆಲಸದಲ್ಲಿ ಸಕಾಯ ಸಂಪತ್ತು ಮಾಡಿದ್ದಕ್ಕೆ ದೋಸ್ತಿ ನಿಶಾನಿ ಆಗಿ, ಸೂರ್ಯ-ಚಂದ್ರ ಇರುವ ಪರಿಯಂತರ ಸ್ಥಿರವಾಗಿ ಇರುವ ಮೇರೆಗೆ, ಇಂಗ್ರೇಜ ಬಹಾದ್ದರ ಸರಕಾರದಿಂದ ಆ ಸರಕಾರದ ನಿಶಾನಿ, ಲಾರ್ಡ್ ಸಾಹೇಬ್ ಬಹಾದ್ದರವರ ನಿಶಾನಿ ಸಹಾ, ಹಾಕಿದಂಥಾ ಕತ್ತಿ ಒಂದು, ತಮ್ಮ ಭಾವಚಿತ್ರ ಒಂದು, ಈ ಎರಡು ಒಡವೆ ಬೇಕೆಂಬ ಅಪೇಕ್ಷೆ ನಮ್ಮ ಮನಸ್ಸಿನಲ್ಲಿ ಬಹಳ ಇದೆ" ಎಂಬದಾಗಿ, ದೊರೆಗಳು ಹೇಳಿದಲ್ಲಿ, "ಇದನ್ನು ನಾವು ಕಳುಹಿಸಿಕೊಡುತ್ತೇವೆ" ಎಂಬದಾಗಿ ಒಪ್ಪಿಕೊಂಡು, ಜನರಲ್ ಸ್ಟೋಯರ್ಟ್ ಸಾಹೇಬರವರು ಕಣ್ಣನೂರಿಂದಾ ಜಹಜು

ಹತ್ತಿ, ಮದರಾಸಿಗೆ, ಲಾರ್ಡ್ ಮಾರನಿಂಗ್‌ಟನ್ ಸಾಹೇಬ್ ಬಹಾದ್ದರವರ ಬಳಿಗೆ ಹೋದರು. ವೀರರಾಜೇಂದ್ರ ಒಡೆಯರವರು ತಮ್ಮ ರಾಜ್ಯಕ್ಕೆ ಬಂದು ತಮ್ಮ ಸಂಸ್ಥಾನದಲ್ಲಿ ಕ್ಷೇಮದಿಂದಾ ಇರುತ್ತಿದ್ದರು.

ಆಮೇಲೆ ಕೆಲವು ದಿನ ಕಳೆದ ಬಳಿಕ, ಸನ್ ೧೨೧೩ನೇ ಹಿಜರಿ, ಜೀಕಾದ ತಿಂಗಳು, ಒಂಬತ್ತನೆ ತಾರೀಕಿನಲ್ಲು, ಬಂಗಾಳದ ಮಹಾರಾಜಶ್ರೀ ಗವರ್ನರ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬ್ ಬಹಾದ್ದರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: " ತಾವು ನಮ್ಮ ಸರಕಾರಕ್ಕೆ ಒಳ್ಳೇದು ಆಗಬೇಕು ಎಂತಾ, ಶ್ರೇಯಸ್ಸು ಹಾರೈಸುವಂಥಾದ್ದು ಸರಕಾರದ ಕೆಲಸ ನಡೆಯುವ ಬಗ್ಯೆ ಪ್ರಯತ್ನಬಟ್ಟು ಮಾಡುವಂಥಾದ್ದು ಸಹಾ, ಮಲೆವಾರಿ ಕಮಿಶನ್ ಸಾಹೇಬರವರ ಕಾಗದದಿಂದಾ ಆಗಾಗ್ಯೆ ನಮಗೆ ತಿಳಿಯಬರುತ್ತಾ ಇದೆ. ತಮ್ಮ ಒಳ್ಳೇತನ ಯಾವತ್ತು ನಮ್ಮ ಹೃದಯದಲ್ಲು ಚಿತ್ರ ಬರದು ಇದೆ. ಆದ್ದರಿಂದಾ ಒಳ್ಳೇದಾಗಿ ತಮಗೆ ಸಮಾಚಾರ ಕೊಡುತ್ತೇವೆ. ಮೊದಲು ಲಡಾಯಿದಲ್ಲು ತಾವು ಪ್ರಾಣಪ್ರಯತ್ನ ಮಾಡಿ, ಒಳ್ಳೆ ಮನಸ್ಸಿನಿಂದಾ ಸತ್ಯವಾಗಿ ಮಾಡಿದಂಥಾದ್ದು ಸಹಾ ನಮಗೆ ಚನ್ನಾಗಿ ತಿಳಿದು ಇದೆ. ಈಗಲು ಅದೇ ಮೇರೆ ಪ್ರಾಣಪ್ರಯತ್ನ ಮಾಡೀರಿ ಎಂತು, ನಾವು ಅಪೇಕ್ಷೆ ಮಾಡಿ ಇದ್ದೇವೆ. ಇದರಿಂದಾ ಮೊದಲೇ ಈ ವಿವರ ದೋಸ್ತಿ ಕಾಗದದ ಒಳಗೆ, ದೋಸ್ತಿಯಿಂದಾ ಈ ಕೆಲಸ ಮಾಡಬೇಕಾಗುತ್ತಾ ಇದೆ ಎಂಬದಾಗಿ, ಬರದು ಇತ್ತು. ತಾವು ಮಾಡಿದಂಥಾದ್ದು ನಮ್ಮ ಮನಸ್ಸಿನಲ್ಲಿ ಅಪೇಕ್ಷೆ ಇದ್ದದ್ದಕ್ಕೂ ಹೆಚ್ಚಾಗಿ ತಿಳಿಯಬಂತು. ಬಹಳ ನಿರ್ಮಲ ಮನಸ್ಸಿನಿಂದಾ ಪ್ರಾಣಪ್ರಯತ್ನ ಬಟ್ಟು, ಮಾಡಬೇಕೆಂಬ ದೃಷ್ಟಿ ಇಟ್ಟು ಇರುವಂಥಾದ್ದು ಮಾಲುಂ ಆಯಿತು. ಬಹಳ ಬಹುಮಾನವಾದ ಮಾರ್ಗವಿಡಿದು, ಏನೊಂದೂ ಸರಕಾರದ ಕೆಲಸ ಮಾಡುವಲ್ಲಿ, ಸಮಯ ಬಿದ್ದ ಹಾಗೆ, ಹಿಮ್ಮತ್ತಿನಿಂದಾ, ಧೀರತ್ವದಿಂದಾ, ಬುದ್ಧಿಚಾತುರ್ಯದಿಂದಾ, ಸರಕಾರದ ಕೆಲಸದ ಮೇಲೆ ಬಂದ ಕೆಲಸಕ್ಕೆ ನಮ್ಮ ಮನಸ್ಸಿನಲ್ಲಿ ಇದ್ದದ್ದ ಕಿಂತಾ ಹೆಚ್ಚಾಗಿ ಮಾಡಿದಿರಿ. ತಮ್ಮ ಬುದ್ಧಿಯೂ ನಡತೆಯೂ ದೋಸ್ತಿಯಿಂದಾ ನಡೆಯುವಂಥಾದ್ದು ಸಹಾ ನಮಗೆ ಬಹಳ ಪಸಂದು ಇದೆ. ಇನ್ನು ಸರಕಾರದ ಕೆಲಸಕ್ಕೆ ತಾವು ಇದೇ ಮೇರೆ ಪ್ರಯತ್ನ ಮಾಡೀರಿ ಎಂಬದು ನಮ್ಮ ಮನಸ್ಸಿನಲ್ಲಿ ನಿಶ್ಚಯವದೆ. ಇದರ ಮೇಲೆ ನಾವು ಬರೆಯುವಂಥಾದ್ದು ಹೆಚ್ಚು ಇದೆ.

ತಮ್ಮ ಒಳ್ಳೇ ನಡತೆ ನಮ್ಮನಸ್ಸಿಗೆ ವಡಂಬಟ್ಟು, ಸಂತೋಷವಾಗಿ ಇರುವದನ್ನು ಜಾಹೇರು ಆಗುವ ಬಗ್ಗೆ ವರುಷಂಪ್ರತಿಯಲ್ಲು ಕುಂಪನಿ ಸರಕಾರಕ್ಕೆ ತಾವು ಕೊಡುವಂಥಾ ಖಂಡಣಿ ಹಣ ಸರಕಾರದಿಂದಾ ತಮಗೆ ಮಾಫು ಮಾಡಿ ಬರದು ಇದ್ದೇವೆ. ಇನ್ನುಮುಂದೆ ತಾವು ಏನಾದರೂ ಒಂದು ವಡವೆ, ದೋಸ್ತಿ ನಿಶಾನಿ ಉದ್ದಿಶ್ಯ, ವರುಷಂಪ್ರತಿಯಲ್ಲು ಸರಕಾರಕ್ಕೆ ಕೊಡುತ್ತಾ ಇರಬೇಕು. ಕೆಪ್ಟನ್ ಮಾವಿನಿ ಸಾಹೇಬ ಬಹಾದ್ದರವರು, ಸಾಹೇಬ ಮುಷ್ಫಕ್ ಬಿಸಿ ಯಾರ್ ಮೆಹರ್ಬಾನ್ ಅಮಿಾನುಲ್‌ಮುಲ್ಕ ಜನಾಟನ್ ಡಾಂಕಿನ್ ಸಾಹೇಬ ಬಹಾದ್ದರವರು, ಗಜನ್ ಪರಜನ್ ಮುಂಬಾಯಿ ದೊಡ್ಡ ಸಾಹೇಬರು ಸಹಾ, ಯಾವದೊಂದು ಇದರ ವಿವರ ಇದೆಯೋ, ಅದನ್ನು ಹುಕುಂ ಮೇರೆ ಜಾಹೇರು ಮಾಡಿದಲ್ಲಿ ತಿಳಿಯಬಂದೀತು. ಇಂಗ್ರೇಜ ಸರಕಾರದ ಆಶ್ರಯವಿಡಿದು, ಒಳ್ಳೇದು ಹಾರೈಸುವಂಥವರಿಗೆ ಒಳ್ಳೇದು ಮಾಡುವ ಬಗ್ಗೆ, ಸರಕಾರದಿಂದಾ ನಾವು ಕಾಯಂ ಆಗಿ ಇರುವದು ಯಾವತ್ತು ಜನರಿಗೂ ತಿಳುದು ಇದೆ. ಇದರಿಂದಾ ತಮಗೆ ಲಾಜಿಂ ಅದೆ. ಆ ಖಂಡಣೆ ಮಾಫು ಮಾಡಿದಂಥಾದ್ದು ಇಂಗ್ರೇಜ್ ಬಹಾದ್ದರ ಕುಂಪನಿ ಮೆಹರ್ಬಾನಗಿ, ಸಂತೋಷ, ಮನಸ್ಸಿನಲ್ಲಿ ಪ್ರೀತಿ, ನಿಮ್ಮ ತಾರೀಫು, ಒಳ್ಳೇ ನಡತೆ ವಡಂಬಟ್ಟು ಇದೆ ಎಂತಾ ತಿಳಿಯಬೇಕು " ಎಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಬದಲು ದರ ಜವಾಬು ಜ್ಯೇಷ್ಠ ಶು. ೩ರಲ್ಲು ಮಹಾರಾಜರವರು ಬರದ ಕಾಗದದ ವಿವರ: " ತಾವು ಬರೆಸಿ ಕಳುಹಿದ ಕಾಗದದಲ್ಲಿ ಇಂಗ್ರೇಜ ಕುಂಪನಿ ಸರಕಾರಕ್ಕೆ ಬಹಳ ಸಕಾಯ ಸಂಪತ್ತು ಉಪಕಾರ ಮಾಡಿ ಇದ್ದೀರಿ ಯಂತಾ ಬರೆಸಿ ಇದ್ದೀರಿ. ಈ ಬಗ್ಗೆ ನಮ್ಮ ಸೀಮೆಯು ಬಹಳ ಚಿಕ್ಕದು. ಅದರ ಮೇಲೆ ಗಿಡ ಸೀಮೆ. ಇದುಕಾರಣ ಇಂಗ್ರೇಜ ದೊಡ್ಡ ಸರಕಾರಕ್ಕೆ ಬೇಕಾದ ಉಪಕಾರ ಮಾಡಿ, ಶಾಭಾಸು ತೆಗೆದುಕೊಳ್ಳುವಂಥಾದ್ದಕ್ಕೆ ನಮಗೆ ಅಷ್ಟು ತ್ರಾಣವಿಲ್ಲಾ. ಆದಾಗ್ಯೂ ಇಂಗ್ರೇಜ ಸರಕಾರದ ಆಶ್ರಯದಲ್ಲಿ ಇರುವಂಥವರ, ಇಂಗ್ರೇಜ ಸರಕಾರಕ್ಕೆ ದೋಸ್ತುದಾರರಾಗಿ ಇರುವ ನಮ್ಮಂಥವರ ಸಹಾ ಸರ್ವರನ್ನು ರಕ್ಷಣ್ಯ ಮಾಡುವದಕ್ಕೆ, ಹಿಂದುಸ್ಥಾನದಲ್ಲಿ ಯಾವತ್ತಕ್ಕೂ ತಾವು ಬಹಳ ದೊಡ್ಡ ಸಾಹೇಬರು ಇದ್ದೀರಿ. ನಾವು ವಿಚಾರಿಸಿ ನೋಡಿದರೆ, ಇಂಗ್ರೇಜ ಬಹಾದ್ದರ ಸರಕಾರಕ್ಕೆ ಕುಮಕು ಮದತ್ತು ನಾವು

ಬಹಳವಾಗಿ ಮಾಡಿದ್ದಾಗಿ ಕಾಣುವದಿಲ್ಲಾ. ಇದಲ್ಲದೆ ಟೀಪುಸುಲ್ತಾನರು ನಮಗೆ ಪರಮ ಹಗೆ ಆಗಿ ಇದ್ದರು. ಹಿಂದೂ ಜಾತಿ ಧರ್ಮವನ್ನೆಲ್ಲಾ ಕೆಡಿಸಿ, ಧರ್ಮ ನಡೆಯದಂತೆ ಮಾಡಿ ಇದ್ದರು. ಅವರನ್ನು ಇಂಗ್ರೇಜ ಬಹಾದ್ದರ ಸರಕಾರದಿಂದಾ ನಿಗ್ರಹಿಸಿದ್ದರಿಂದಾ, ನಮ್ಮ ಮನಸ್ಸಿನಲ್ಲಿ ಇದ್ದಂಥಾದ್ದು ಲಭಿಸಿತು. ಹಿಂದೂ ಜಾತಿಗೆ ಯಾವತ್ತಕ್ಕೂ ಬಹಳ ಸಂತೋಷವಾಯಿತು. ಇಂಗ್ರೇಜ ಬಹಾದ್ದರ ಸರಕಾರಕ್ಕೆ ಬಹಳ ಪುಣ್ಯ ಧರ್ಮ ಕೀರ್ತಿ ಬಂತು. ಟೀಪುಸುಲ್ತಾನರು ಇಷ್ಟು ಬೇಗ ಈ ಮೇರೆ ಆದಾರು ಎಂಬದು ಮನುಷ್ಯರ ಯೋಚನೆ ಒಳಗೆ ಇತ್ತಿಲ್ಲಾ. ಅವರನ್ನು ತಮ್ಮ ಭುಜಬಲಪರಾಕ್ರಮದಿಂದಾ ನಿಗ್ರಹಿಸಿದ ಕಾರಣ, ಹಿಂದೂ ಜಾತಿ ಧರ್ಮ ಉಳಿಸಿದ ಪುಣ್ಯ ಕೀರ್ತಿ ಸಹಾ ಸೂರ್ಯ ಚಂದ್ರ ಇರುವ ಪರಿಯಂತರ ಶಾಶ್ವತವಾಗಿ ಇದ್ದೀತು. ತಮ್ಮ ಜಮಾಮರ್ದಿ ಹಿಮ್ಮತ್ತಿನ ತಾರೀಫು ಮಾಡಿ ಬರೆಯುವದಕ್ಕೂ, ಹೇಳುವದಕ್ಕೂ ನಮಗೆ ಶಕ್ಯವಲ್ಲಾ. ಮೇಲಾಗಿ ವರುಷ ವರುಷಕ್ಕೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಕೊಟ್ಟು ಬರುವಂಥಾ ನಿಗದಿ ಹಣವನ್ನು ಇಂಗ್ರೇಜ ಸರಕಾರಕ್ಕೆ ಇನ್ನು ಕೊಡ ಕೆಲಸವಿಲ್ಲಾ ಇಂಗ್ರೇಜ ಸರಕಾರದಿಂದಾ ತಮಗೆ ಮಾಫು ಕೊಡಿಸಿ ಇದೆ ಎಂಬದಾಗಿ, ಮೆಹರ್ಬಾನಗಿ ಕಲಮಿನಿಂದಾ ಬರೆಸಿದ್ದು ಸರಿಯಷ್ಟೆ. ಬಹಳ ಸರಫರಾಜಿ ಆಬರು ಉಂಟಾಯಿತು. ಮೇಲಾಗಿ, ಇಂಗ್ರೇಜ ಬಹಾದ್ದರ ಸರಕಾರದ ಲಷ್ಕರು ಶ್ರೀರಂಗಪಟ್ಟಣಕ್ಕೆ ಹೋಗುವ ಬಗ್ಯೆ, ನಮ್ಮ ಸೀಮೆಗೆ ಬಂದು ಇದ್ದಲ್ಲಿ, ಟೀಪುಸುಲ್ತಾನರು ಬಂದು, ಶಿದ್ಧೇಶ್ವರನ ಗದ್ದಿಗೆಯಲ್ಲಿ ಇಂಗ್ರೇಜ ಫೌಜಿನ ಸಂಗಡ ಲಡಾಯಿ ಮಾಡಿ, ಟೀಪುಸುಲ್ತಾನರು ಮುರಿದು, ಪೆರಿಯಾಪಟ್ಟಣಕ್ಕೆ ಹೋಗಿ ಇಳುಕೊಂಡು, ನಮ್ಮ ಸೀಮೆ ವಳಿತವಾದ ತೊರೆನೂರು, ಹೆಬ್ಬಾಲೆ, ಶಿರಂಗಾಲ ಮುಂತಾದ ಗ್ರಾಮಗಳಿಗೆ ತಮ್ಮ ಕಡೆ ಜನಾ ಕಳುಹಿಸಿ, ಆ ಗ್ರಾಮದ ರೈತರ ಮನೆಮಾರಿಗೆಲ್ಲಾ ಬೆಂಕಿ ಹಾಕಿ, ಲೂಟಿ ಮಾಡಿ, ಕುಟುಂಬ ಮಕ್ಕಳನ್ನು ಹಿಡಿದುಕೊಂಡು ಹೋದ್ದರಿಂದಾ, ಇನ್ನಾದರೆ ಸಲ್ಲಾ ಮುರೀತು; ಟೀಪುಸುಲ್ತಾನರು ತಮ್ಮ ಸೀಮೆಗೆ ದುಃಖ ಕೊಟ್ಟ ಮೇರೆಗೆ, ತಾವು ಅವರ ಸೀಮೆಗೆ ದುಃಖಾ ಕೊಡಿ ಎಂತಾ ಜನರಲ್ ಸ್ಟೋಯರ್ಟ್ ಸಾಹೇಬರು ಹಾಟ್ಲೆ ಸಾಹೇಬರು ಸಹಾ ಹೇಳಿದರು. ಅದೇ ಮೇರೆ ಮೂರು ಸಾವಿರ ಕೊಡಗು ಜನ, ಉಳಿಕೆ ಜನದಿಂದಾ

ಸಹಾ ಐದು ಸಾವಿರ ಜನವನ್ನು ಗಟ್ಟಿದ ಕೆಳಗೆ ತುಳುವನಾಡಿಗೆ ಕಳುಹಿದಲ್ಲಿ, ಈ ಜನ ಹೋಗಿ ಸೀಮೆಗೆ ಕೌಲು ಕರಾರು ಕೊಟ್ಟು, ಸಾಧಿಸುತ್ತಿದ್ದಲ್ಲಿ, ಟೀಪುಸುಲ್ತಾನರ ಕಡೆ ಸಾದ್ರಿಬೇಹಾರಿ ಮೀರ ಮಹಮ್ಮದಲ್ಲಿ ಮುಂತಾದವರು ಮಂದಿ ತೆಗೆದುಕೊಂಡು ಬಂದು, ನಮ್ಮ ಜನದ ಮೇಲೆ ಲಡಾಯ ಮಾಡಿದಲ್ಲಿ, ಅವಂದಿರಿಗೆ ತಕ್ಕ ತಂಬಿ ಪಹುಂಚಾಯಿಸಿ, ಮಂಗಳೂರ ತಾಲೂಕಿನ ಕೆಲವು ಸೀಮೆಯನ್ನು ಬಂದುಬಸ್ತು ಮಾಡಿ, ನಮ್ಮ ಹಸ್ತಕಿನಲ್ಲಿ ಇಟ್ಟು ಇದ್ದೇವೆ. ಇದಲ್ಲದೆ ಈ ಕಡೆ ಮಹಾರಾಜನ ದುರ್ಗದ ಸೀಮೆಯಿಂದಾ ಹಿಡಿದು, ಹೆಗ್ಗಡ ದೇವನಕೋಟೆ ಪರಿಯಂತರ ಕೆಲವು ಸೀಮೆಯನ್ನು ತೆಗೆದುಕೊಂಡು, ಕೌಲು ಕರಾರು ಮಾಡಿ, ನಮ್ಮ ಹಸ್ತಕಿನಲ್ಲು ಇಟ್ಟು ಇದ್ದೇವೆ. ಇಷ್ಟು ಸೀಮೆಯನ್ನು ಈಗ ನಾವು ಬಂದುಬಸ್ತು ಮಾಡಿ ಇಟ್ಟು ಇರುವಂಥಾದ್ದು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಖೈರ್‌ಕಾಯಿ ಕೆಲಸವೇ ಹೊರ್ತು ಮತ್ತೊಂದಿಲ್ಲ. ಈ ವಿವರದ ವಿದ್ಯಮಾನ ಯಾವತ್ತೂ ವಕೀಲ್ ಕೆಪ್ಟನ್ ಮಾವಿನಿ ಸಾಹೇಬರ ಕಡೆಯಿಂದಾ ತಮಗೆ ಶ್ರುತವಾಗಿ ಇದ್ದೀತು" ಎಂಬ ಇತ್ಯಾದಿ ವಿವರಗಳಾಗಿ ಬರೆಸಿ ಕಳುಹಿದರು.

ಆ ಬಳಿಕ ಕರ್ನಲ್ ವೈಜಮೆನ್ ಸಾಹೇಬರು, ಜನರಲ್ ಸಾಹೇಬರ ಹುಕುಂ ಪ್ರಕಾರ, ಫೌಜು ತೆಗೆದುಕೊಂಡು, ಮಂಗಳೂರ ತಾಲೂಕಿಗೆ ಬಂದದರಿಂದಾ; ಮಂಗಳೂರ ತಾಲ್ಲೂಕಿನಲ್ಲು ಬಾರಕೂರ, ಬಗ್ವಾಡಿ ಪರಿಯಂತರ ಸೀಮೆಯನ್ನು ಮಹಾರಾಜರವರು ಬಂದುಬಸ್ತು ಮಾಡಿಸಿ, ತಮ್ಮ ತಾಬೆಯಲ್ಲಿ ಮಡಗಿಸಿ ಇರುವಂಥಾದ್ದನ್ನು ರಾಜರ ಅಪ್ಪಣೆ ಪ್ರಕಾರ ಕರಣೀಕ ಸುಬ್ಬೈಯ್ಯನು ಆ ವೈಜಮೆನ್ ಸಾಹೇಬರ ವಶಕ್ಕೆ ಬಿಟ್ಟುಕೊಟ್ಟು, ಆ ಸೀಮೆಯಲ್ಲಿ ಠಾಣ್ಯ ಇದ್ದಂಥಾ ಮಂದಿಯನ್ನು ತೆಗೆದುಕೊಂಡು ಬಂದನು.

ಇತ್ತಲಾಗಿ, ದುರ್ಗದ ಸೀಮೆಯಿಂದಾ ಹಿಡಿದು ಹೆಗ್ಗಡದೇವನಕೋಟೆ ಪರಿಯಂತರ ಬಂದುಬಸ್ತುಮಾಡಿ ಇಟ್ಟು ಇದ್ದಂಥಾ ಗಡಿನಾಡದ ಸೀಮೆಗೆ ಟೀಪುಸುಲ್ತಾನರ ದಿವಸದಲ್ಲಿ ಅಧಿಕಾರಿಗೆ ಮಾಡಿದ್ದಂಥಾ ಆ ಸೀಮೆ ಬ್ರಾಹ್ಮಣರು ಇಂಗ್ರೇಜ ಸರಕಾರದ ನಿಶಾನಿಗಳ ತೆಗೆದುಕೊಂಡು ಬಂದು, "ಈ ಸೀಮೆಯಲ್ಲಿ ನೀವು ಇರುವದಕ್ಕೆ ಕೆಲಸವೇನು? ಇದು ಯಾವತ್ತು ಇಂಗ್ರೇಜ ಸರಕಾರದ ಸೀಮೆ ಆಯಿತು. ನೀವು ಹೋಗಿ" ಎಂಬದಾಗಿ,

ಮಹಾರಾಜರವರ ಮುಂದಿಗೆ ವಂದರೆ ಮಾತುಗಳ ಆಡಿದ್ದರಿಂದಾ, ಈ ವಿವರ ಗಳನ್ನು ಈಶ್ವರೈಯ್ಯನು ದೊರೆಗಳಿಗೆ ಬಿನ್ನವತ್ತಳೆ ಬರಕೊಂಡಲ್ಲಿ, "ಇಂಗ್ರೇಜ ಸರಕಾರದ ನಿಶಾನಿ ಕಂಡ ಬಳಿಕ, ಅವರ ಸಂಗಡ ನೀನು ಮಾತಾಡ ಕೆಲಸವಿಲ್ಲ. ನಿನ್ನ ಕಡೆ ಠಾಣ್ಯದ ಮಂದಿಯನ್ನು ತೆಗೆದುಕೊಂಡು ಬಂದು, ನಮ್ಮ ಸಂಸ್ಥಾನದ ಏಳುಸಾವಿರ ಸೀಮೆ ಗಡಿ ಬಂದ ಹಾಗೆ, ಪ್ರಾಕು ಮೇರೆ ಠಾಣ್ಯ ಇಟ್ಟುಕೊಂಡು ಇರುವದು" ಎಂಬದಾಗಿ, ನಿರೂಪ ಬರೆಸಿ ಕಳುಹಿದರಿಂದಾ, ಅದೇ ಪ್ರಕಾರ ಈಶ್ವರೈಯ್ಯನು ತನ್ನ ಕಡೆ ಮಂದಿಯನ್ನು ಕರಕೊಂಡು ಬಂದು, ಮೊದಲಾರಭ್ಯ ದಿಂದಾ ಕೊಡಗಿನ ಸಂಸ್ಥಾನಕ್ಕೆ ಸೇರಿ ಬಂದಂಥಾ ಏಳುಸಾವಿರ ಸೀಮೆ ಗಡಿ ಸರಹದ್ದು ಬಂದುಬಸ್ತು ಮಾಡಿಕೊಂಡು ಇರುತ್ತಿದ್ದನು.

ಆ ಬಳಿಕ ಮಹಾರಾಜರು ವಕೀಲ ಮಾಪಿನಿ ಸಾಹೇಬರವರಿಗೆ ಹೇಳಿದ ವಿವರ: "ಈ ಲಡಾಯದ ಸಮಯದಲ್ಲಿ ನಮ್ಮಿಂದಾ ಆದಷ್ಟು ಕುಂಪನಿ ಸರಕಾರಕ್ಕೆ ಪ್ರಯತ್ನ ಮಾಡಿ, ಕುಂಪನಿ ಸರಕಾರದ ಜನರಲ್ ಸಾಹೇಬರು, ನೀವು ಸಹಾ, ಹೇಳಿದ ಮೇರೆಗೆ ಟೀಪುಸುಲ್ತಾನರ ಸೀಮೆಯಲ್ಲಿ ನಾವು ಕೆಲವು ಲಡಾಯ ಮಾಡಿ ಪ್ರಯತ್ನಒಟ್ಟು, ಆದಷ್ಟು ಕೆಲವು ಸೀಮೆ ನಮ್ಮ ಹಸ್ತಕಿನಲ್ಲಿ ಮಡಗಿ ಇರುವದನ್ನು ನೀವು ತಿಳುದು ಇದ್ದೀರಿ. ಹೀಗೆ ಇರುವಲ್ಲಿ ಕೊಡೆ ಯಾಲದ ತಾಲೂಕಿನ ಸೀಮೆಗೆ ಕರ್ನಲ್ ವೈಜ್‌ಮೇನ್ ಸಾಹೇಬರು ಬರುತ್ತಾರೆ. ಅವರ ತಾಬೆಗೆ ಆ ಸೀಮೆ ಬಿಡಬೇಕು" ಎಂತಾ ಜನರಲ್ ಸ್ಟೋಯರ್ಟ್ ಸಾಹೇಬರು ಹೇಳಿದರಿಂದಾ, ನಮ್ಮ ಮನಸ್ಸಿಗೂ ಖುಷಿ ಆಯಿತು. ಅದೇ ಮೇರೆ ನಮ್ಮ ಜನರು ಅವರ ತಾಬೆ ಮಾಡಿ ಬಂದರು. ನಾವು ಮಾಡಿದ ಮೆಹನತ್ತು ಸಫಲವಾಯಿತು. ಈ ಕಡೆ ದುರ್ಗ ಮುಂತಾದ ಸೀಮೆಯನ್ನು ಇದೇ ಮೇರೆ ಬಂದುಬಸ್ತು ಮಾಡಿ ಇಟ್ಟು ಇದ್ದೇವಷ್ಟೆ. ಈ ಸೀಮೆ ಬಗ್ಗೆ ಸರಕಾರದ ಒಬ್ಬ ಶಿಪಾಯಿ ಬಂದು ಕೇಳಿದಾಗ್ಯೂ, ನಾವು ಬಿಟ್ಟು ಕೊಡುತ್ತಾ ಇದ್ದೇವು. ಇದ ಬಿಟ್ಟು ಟೀಪುಸುಲ್ತಾನರ ದಿವಸದಲ್ಲಿ ಅಧಿಕಾರಿಕೆ ಮಾಡಿದಂಥಾ ಹಾರುವರು ಇಂಗ್ರೇಜ ಸರಕಾರದ ನಿಶಾನಿ ತಂದು, ನಮ್ಮ ಕಡೆ ಠಾಣ್ಯ ಇದ್ದ ಜನಕ್ಕೆ ವಂದರೆ ಮಾತುಗಳ ಆಡಿದ್ದರಿಂದಾ, ಈ ವಿವರ ನಾವು ತಿಳಿದು, ಆ ಸೀಮೆ ಠಾಣ್ಯ ತೆಗಸಿ, ನಮ್ಮ ಸೀಮೆ ಸರಹದ್ದಿನಲ್ಲಿ ಮಡಗಿಸಿ ಇದ್ದೇವೆ. ಈ ಹಾರುವರ ಜಾತಿಗೂ ನಮಗೂ ಮೊದಲಾರಭ್ಯದಿಂದಾ ಹಗೆತನ

ಇದೆ. ಪೂರ್ಣೈಯ್ಯ ಮುಂತಾದ ಬ್ರಾಹ್ಮಣರು ದೊಡ್ಡ ನವಾಬರ ದಿವಸದಲ್ಲಿ, ಟೀಪುಸುಲ್ತಾನರ ದಿವಸದಲ್ಲಿ ಸಹಾ, ನಾನಾ ಪ್ರಕಾರ ಹೇಳಿ, ನಮಗೆ ನಮ್ಮ ರಾಜ್ಯಕ್ಕೆ ಸಹಾ, ಬಹಳ ದುಃಖಾ ಕೊಟ್ಟು ಬಂದು ಇದ್ದಾರೆ. ಆದ್ದರಿಂದಾ ಬ್ರಾಹ್ಮಣರ ಜಾತಿ ಕಂಡರೆ ನಮಗೆ ಆಗುವದಿಲ್ಲಾ. ಈಗಲಾದರೂ ತಮ್ಮ ಚಾಲು ಬಿಡದೆ, ಮತ್ತೂ ಈ ಮೇರೆ ಸರಕಾರದ ನಿಶಾನಿ ತಂದು, ನಮ್ಮ ಜನದ ಮೇಲೆ ಚಿಕ್ಕ ಪುಟ್ಟ ಮಾತನಾಡಿದರು. ಹೀಗೆ ಬರುತ್ತದೆ ಎಂತಾ ಮೊದಲೇ ತಿಳುದು ಇದ್ದರೆ, ಆ ಸೀಮೆಯಲ್ಲಿ ಇದ್ದ ನಮ್ಮ ಜನರ ಕರೆಸಿಕೊಳ್ಳುತ್ತಿದ್ದೆವು. ಕೊಡೆಯಾಲದ ತಾಲೂಕಿಗೆ ಬಂದ ಮೇರೆ ಸರದಾರರು ಬಂದಾರು ಯಂತಾ, ನಾವು ತಿಳುದು, ಇಷ್ಟು ದಿನ ನಾವು ಬಂದುಬಸ್ತು ಮಾಡಿ ಇದ್ದೆವು. ಈ ವಿವರ ನೀವು ತಿಳುದು ಇರಬೇಕು" ಎಂತಾ ಹೇಳಿದಲ್ಲಿ, ಮಾವಿನಿ ಸಾಹೇಬರವರು: "ಇದಕ್ಕೆ ಚಿಂತೆ ಏನು ಇದೆ? ಈ ಮೇರೆ ನಾವು ತಿಳುದು ಇದ್ದರೆ, ಇದರ ಬಂದುಬಸ್ತು ನಾವು ಮಾಡುತ್ತಾ ಇದ್ದೆವು. ತಾವು ಮೆಹನತ್ತು ಮಾಡಿದ್ದನ್ನು ಇಂಗ್ರೇಜ ಸರದಾರರು ಯಾವತ್ತು ಬಲ್ಲರು" ಎಂಬದಾಗಿ, ದೊರೆಗಳವರಿಗೆ ಬಹಳ ಹೇಳಿ ಸಮದಾಯಿಸಿದರು.

ಹೀಗೆ ಇರುತ್ತಾ ಇದ್ದಲ್ಲಿ, ರಬಿಯುಲ್ ಅವಲ್, ತಾರೀಕು ೬, ಸನ್ ೧೨೧೪ನೇ ಹಿಜರಿಯಲ್ಲು, ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರ ನಿಂಗ್‌ಟನ್ ಸಾಹೇಬ ಬಹಾದ್ದರವರು ಬರೆಸಿ ಕಳುಹಿದ ಕಾಗದದಲ್ಲಿ: "ತಮ್ಮ ಸೀಮೆಗೆ ಹೊಸ ಸರಹದ್ದನ್ನು ನೊಕರರು ಮಾಡಬೇಕು ಎಂತಾ ಭಾವಿಸಿ ಇದ್ದೀರಿ, ಎಂಬದಾಗಿ, ಮೈಸೂರ ಸೀಮೆ ಅಧಿಕಾರಿಕೆ ಮಾಡುವವರ ಕಾಗದ ದಿಂದಾ ಅದರ ವಿವರ ತಿಳಿಯಬಂತು. ಈಗ ಮೈಸೂರ ಸೀಮೆ ಬಂದುಬಸ್ತು ನೊಕರರು ಆಗಿ ಇರುವ ಕೈಫಿಯತು ತಾವು ತಿಳಿಯಲಿಲ್ಲವಾಗಿ ಇದ್ದೀತು. ನಾವು ಮೊದಲಿನ ಅಸಲ್ ವಿವರ ವಿಚಾರಿಸಿ, ಜಮಾಮರ್ದಿಯಿಂದಲೂ ನಮ್ಮ ಸತ್ಯ ದಿಂದಲೂ ಆ ಸೀಮೆಯು ಕದೀಂ ಖಾವಂದರ ಕಚ್ಚಿನ ಒಳಗೆ ಇದ್ದ ಸೀಮೆ ಯನ್ನು ಅವರ ಹವಾಲೆಗೆ ಮಾಡಿದೆವು. ಮುಂದೆ ಆ ನೆರೆಯೆಲ್ಲಾ ಸಮಿಪಾಪದ ಸರಕಾರಗಳಿಗೆ ಸುಖಖಾತ್ರ ಜಮೆ ಹಾಸಲ್ ಆದೀತು. ಅದೇ ಕಾಯಿದೆ ಮೇರೆ ಶುರುಮಾಡಿ ಇದ್ದೇವೆ. ಮೈಸೂರು ಅರಸಿನ ಸೀಮೆಯೂ ಕುಂಪನಿ ಸರಕಾರದ ಸೀಮೆಯೂ ನಿಶ್ಚಯವಾಗಿ ಒಂದು ಹುಕುಮತ್ತಿನ ಒಳಗೆ ಇದೆ. ಇದರ ಒಳಗೆ

ತಾವು ಹೊಸ ಸರಹದ್ದು ಅಪೇಕ್ಷಿಸುವಂಥಾದ್ದು ವಿಹಿತವಲ್ಲಾ. ಇಂಗ್ರೇಜ ಸರಕಾರದ ಸೀಮೆ, ಮೈಸೂರು ಅರಸಿನ ಸೀಮೆ ಜಾಗದಲ್ಲಿ ಇದ್ದು, ನಿಮ್ಮ ಸೀಮೆಗೆ ಸವಿಾಪವಾಗಿ ಇದ್ದರೆ, ತಮ್ಮ ಮನಸ್ಸಿನ ಅಂದೇಶ ಭಾವನೆ ಬೇಆಸಲ್ ಆಗುತ್ತಿತ್ತು. ಈಗಲೂ ಅದೇ ಮೇರೆ ಎಂತಾ, ತಿಳಿದುಕೊಳ್ಳ ಬೇಕು. ಈಗ ತಾವು ಕರಾರು ಮಾಡಿ ಇದ್ದೀರಿ. ಇಂಗ್ರೇಜ ಕುಂಪನಿ ಸರಕಾರದ ಸೀಮೆ ಆ ಜಾಗದಲ್ಲಿ ಆಗಿ ಇದ್ದರೆ, ಈ ಮೇರೆ ಏನಾದರೂ ಯೋಚನೆ ಜರೂರು ಆಗುವದಕ್ಕೆ ಇತ್ತಿಲ್ಲಾ. ಈಗ ಅದೇ ಮೇರೆ ಜರೂರು ಇಲ್ಲವಾಗಿ ಇದೆ. ತಾವು ಕುಂಪನಿ ಸರಕಾರದ ಬಹಾದ್ದರರ ದೋಸ್ತಿ ಮನಸ್ಸು ಪೂರ್ತಿಯಿಂದಾ ಮಡಗುತ್ತೀರಿ. ಇದರಿಂದಾ ಅದು ಜರೂರು ಇಲ್ಲದಾಗಿ ಇದೆ. ಮತ್ಯಾರಾದರೂ ತಮ್ಮ ಸಲುವಳಿಗೆ ತಕರಾರು ಹರಕತ್ತು ಮಾಡಿದರೆ, ಯಾವತ್ತು ಕುಂಪನಿ ಬಹಾದ್ದರವರು ತಮ್ಮ ಕಡೆ ಕೂಡಿಯಾರು. ಇಂಗ್ರೇಜ ಬಹಾದ್ದರ ಸರಕಾರದ ಕಡೆಯಿಂದಾ ಒಬ್ಬ ಸಾಹೇಬರು ಹಮೇಶ ಮೈಸೂರ ಸೀಮೆಯಲ್ಲಿ ಕಾಯಂ ಇರುತ್ತಾರೆ. ಅದುಕಾರಣ ತಮಗೆ ಮೈಸೂರ ಅರಸಿಗಾಗಲಿ, ಅವರ ಕಡೆ ಅಧಿಕಾರಿಕೆ ಮಾಡುವವರಿಗಾಗಲೀ, ಏನಾದರೂ ಕೆಲಸ ಬಿದ್ದರೆ, ಆ ಸಾಹೇಬರ ಕಡೆಯಿಂದಾ ಜವಾಬು ಸವಾಲು ಮಾಡುತ್ತಾ ಇರಬೇಕು" ಎಂಬದಾಗಿ ಬರದು ಇದ್ದರು.

ಇದಕ್ಕೆ ಜವಾಬು ಸನ್ ೧೨೧೪ನೇ ಜಮಾದಿಲ್ ಅವಲ್, ೧ನೇ ತಾರೀಕು, ಸಿದ್ಧಾರ್ಥಿ ಸಂವತ್ಸರದಲ್ಲು ವೀರರಾಜೇಂದ್ರ ಒಡೆಯರವರು ಬರೆಸಿ ಕಳುಹಿದ ಕಾಗದದಲ್ಲಿ: "ತಮ್ಮ ಇನಾಯತನಾಮಾ ಬಹಳ ಒಳ್ಳೇ ಹೊತ್ತಿನಲ್ಲಿ ಬಂದು ಮುಟ್ಟಿತು. ನಮಗೆ ಬಹಳ ಬಹುಮಾನ ಆಬ್ರು ಉಂಟಾಯಿತು. ಅದರ ಹಕೀಕತು ಮೈಸೂರ ಸೀಮೆ ಅಧಿಕಾರಿಕೆ ಮಾಡುವವರ ಕಾಗದದಿಂದಾ, ತಾವು ಹೊಸ ಸರಹದ್ದು ಮಾಡಬೇಕೆಂಬದಾಗಿ, ಭಾವಿಸಿ ಇದ್ದೀರಿ, ಎಂತಾ ತಿಳಿಯುಬಂತು. ಆ ಸೀಮೆ ಬಂದುಬಸ್ತುಮಾಡಿ ಇರುವದು ತಮಗೆ ತಿಳಿಯುಲಿಲ್ಲವಾಗಿ ಇದ್ದೀತು. ಜವಾಮರ್ದಿಯಿಂದಲೂ ನಮ್ಮ ಸತ್ಯದಿಂದಲೂ ವಾಜಬಿ ವಿಚಾರದಿಂದಲೂ ನಮ್ಮ ಸರಕಾರದ ದಸ್ತೂರಿಯಿಂದಾ ಆ ಸೀಮೆಯು ಕದೀಂ ಖಾವಂದರ ಹವಾಲೆ ಮಾಡಿ ಇದ್ದೇವೆ. ಮೈಸೂರ ಅರಸಿನ ಸೀಮೆಯೂ, ಕುಂಪನಿ ಸರಕಾರದ ಸೀಮೆಯೂ ಒಂದು ಹುಕುಂ ಮಡಗುತ್ತಾ ಇದೆ. ಹೀಗೆ ಇರುವಲ್ಲಿ, ಹೊಸ ಸರಹದ್ದಿನ ಮೇಲೆ ಮನಸು ಮಡಗುವದು

ಆಸಲ್ ಮಾತಲ್ಲಾ. ಮೈಸೂರ ಅರಸಿನ ಸೀಮೆ ಜಾಗಾದಲ್ಲಿ ಇಂಗ್ರೇಜ ಬಹಾದ್ದೂರ ಕುಂಪನಿ ಸರಕಾರದ ಸೀಮೆ ಆಗಿ ಇದ್ದರೆ, ತಮ್ಮ ಯೋಚನೆಗೆ ಬೇಆಸಲ್ ಆಗುತ್ತಿತ್ತಷ್ಟೆ. ಈಗಲೂ ಆ ಮೇರೆ ಎಂತಾ ತಿಳುಕೊಳ್ಳಬೇಕು, ಎಂಬದಾಗಿ ಬರಸಿದ ಬಗ್ಯೆ, ಮೈಸೂರ ಸೀಮೆ ಅಲ್ಲಿ ಕದೀಂ ಖಾವಂದರಿಗೆ ಕೊಟ್ಟಂಥಾದ್ದು ನಾವು ತಿಳುದು ಇತ್ತಿಲ್ಲಾ. ಟೀಪುಸುಲ್ತಾನರು ತೀರಿಹೋದ ಮೇಲೆ, ಇಂಗ್ರೇಜ ಸರಕಾರದ ಕಮಿಶನ್ ಸರದಾರರು ಆ ಸೀಮೆ ಬಂದು ಬಸ್ತಿನ ಬಗ್ಯೆ ನಿಂತು, ಟೀಪುಸುಲ್ತಾನರ ದಿವಸದಲ್ಲಿ ಅಧಿಕಾರಿಕೆ ಮಾಡಿದಂಥ ವರು ನಿಮ್ಮಕುಹರಾಮತನದಿಂದಾ ಹಣಕಾಸು ತಿಂದು, ರೈತರಿಗೂ ದುಃಖ ಕೊಟ್ಟು, ಟೀಪುಸುಲ್ತಾನರ ಒಡವೆ ತಿಂದಂಥವರು ಎಂಬದು ಇಂಗ್ರೇಜ ಸರಕಾರಕ್ಕೂ ಜಾಹೇರು ಇದೆ. ಅವರಿಗೆ ದೂರಮಾಡಿ, ಬದಲು ಅಮಲು ದಾರರ ನಿಮ್ಮಕುಹಲಾಲಾಗಿ ಇರುವಂಥವರ ನೋಡಿ, ನಿಲ್ಲಿಸ್ಯಾರು ಎಂಬದಾಗಿ ನಾವು ತಿಳುದು ಇದ್ದೆವು. ತಮ್ಮ ದೊಡ್ಡ ಸರಕಾರಕ್ಕೂ ಟೀಪುಸುಲ್ತಾನರಿಗೂ ಲಡಾಯಿ ಆಗುವ ಸಮಯದಲ್ಲಿ, ನಾವು ಲಡಾಯಿ ಮಾಡಿ, ಕೆಲವು ಸೀಮೆ ಯನ್ನು ಕಟ್ಟಿಕೊಂಡು ಇದ್ದೆವು. ಅವರ ಸೀಮೆ ತಮ್ಮ ಸರಕಾರದ ಕರ್ಜಿನ ಒಳಗೆ ಬಂದೀತು. ಅಲ್ಬತ್ ಆ ಸೀಮೆ ಮೇಲೆ ಕುಂಪನಿ ಸರಕಾರದಿಂದಾ ಅಮಲುದಾರರು ಮೊಕರರು ಆದಾರು; ಆವಾಗ್ಯೆ ನಾವು ಕಟ್ಟಿಕೊಂಡು ಇರು ವಂಥಾ ಸೀಮೆಯನ್ನು ನಮ್ಮ ಹವಾಲೆಗೆ ಬಿಟ್ಟು, ಅದರ ಹಣ ಮೊಕರರು ಮಾಡಿ, ನಮ್ಮಿಂದಾ ತೆಗೆದುಕೊಂಡಾರು. ನಾವೂನೂ ರೈತರಿಗೆ ಆರಾಮಿನಿಂದಾ ಮಡಗಿ, ಸೀಮೆ ಆಬಾದು ಮಾಡಿ, ವರುಷ ವರುಷಕ್ಕೂ ಹಣಾ ಹೆಚ್ಚಾಗಿ ವಸೂಲು ಮಾಡಿ, ನಮಗೆ ಮೊಕರರು ಮಾಡಿ ಇರುವದಕ್ಕಿಂತಲೂ ಹೆಚ್ಚಾಗಿ ಸರಕಾರಕ್ಕೆ ಸಂದಾಯಿತ ಮಾಡಿ, ಸರಕಾರದ ಕಿದ್ಮತ್ತು ಮಾಡಬೇಕು, ಎಂಬ ದಾಗಿ ನಮ್ಮನಸ್ಸಿನಲ್ಲು ಅಪೇಕ್ಷೆ ಇತ್ತು. ಈಗ ಮೈಸೂರ ಸೀಮೆಯನ್ನು ಜಮಾಮರ್ದಿಯಿಂದಲೂ ಸತ್ಯದಿಂದಲೂ ತಮ್ಮ ಸರಕಾರದ ದಸ್ತೂರಿಯಿಂದಾ ಅಲ್ಲಿ ಕದೀಂ ಖಾವಂದರಿಗೆ ಕೊಟ್ಟು ಇದ್ದೀರಿ ಎಂತಾ, ನಾವು ಕೇಳಿದೆವು. ಅದರಿಂದ ನಮ್ಮ ಆಪೇಕ್ಷೆ ಬಿಟ್ಟೆವು. ಆ ಅರಸಿನಿಂದಾ ಮೊದಲಾರಭ್ಯ ಈವರೆಗೆ ಏನಾದರೂ ಸರಕಾರದ ಕೆಲಸ ಆಗಲಿಲ್ಲ. ಒಂದು ಮಗು, ತಾಯಿ ತಂದೆ ಇಲ್ಲದೆ, ಹೈದರಲ್ಲೀಖಾನರ ದಿವಸದಲ್ಲೂ, ಅದರ ಈಚೆಗೆ ಅವರ ಮಗ ಟೀಪು

ಸುಲ್ತಾನರ ದಿವಸದಲ್ಲೂ, ಕ್ಯೆದಿನಲ್ಲಿ ಸೇರಿ ಇತ್ತು. ಅಂಥವರಿಗೆ ಆರ್ಯೆಕೆ ಮಾಡಿ, ಅವರಿಗೆ ರುಣ ಇರುವಂಥಾದ್ದು ಎಂತಾ ತಿಳಿದು, ಅವರ ಸೀಮೆ ಅವರಿಗೆ ಕೊಡಿಸಿದಿರಿ. ಈ ದೋಸ್ತಾರರು ಪ್ರಾಣಪ್ರಯತ್ನದಿಂದಾ ಕುಂಪನಿ ಸರಕಾರದ ಮಕ್ಕಳೋಪಾದಿ ಕಿದ್ಮತ್ತು ಮಾಡುವಂಥವರಿದ್ದೇವೆ. ನಮಗೆ ಸಲುವಂಥಾದ್ದು ನಮಗೆ ಸಿಕ್ಕಿದರೆ, ವಳ್ಳೇದು ಇದೆ. ಅದು ಏನು ಎಂದರೆ: ಪೆರಿಯಾಪಟ್ಟಣದ ಸೀಮೆ ಕೊಡಗಿನ ಸೀಮೆ ಸರಹದ್ದಿನ ಒಳಗೆ ದಾಖಲು ಇದೆ. ಈ ಮಾತಿಗೆ ಸಾಕ್ಷಿ ಆಗಿ, ಸರಹದ್ದಿನ ಗುರ್ತಿನ ಕಲ್ಲು ತಾಲೂಕಿನ ಗ್ರಾಮುಗಳ ಸುತ್ತಾ ನೆಡಿಸಿ ಇದೆ. ಈ ಬಗ್ಯೆ ಪೆರಿಯಾಪಟ್ಟಣದ ಸಮಿಾಪ ಉದ್ದೂರು ಕೊಡಗರಹಳ್ಳಿ ಎಂಬ ಗ್ರಾಮವಿದೆ. ಅಲ್ಲಿ ನಿಲ್ಲಿಸಿ ಇರುವ ಕಲ್ಲು ಇವರಿಗೂ ಕಾಣುತ್ತಾ ಇದೆ. ನಮ್ಮ ಸಗ್ಗಾವತ್ತಿನ ಅರಸುಗಳು ಪೆರಿಯಾಪಟ್ಟಣದ ಒಳಗೆ ಇರುತ್ತಾ ಇದ್ದರು. ಅವರಿಗೆ ಮ್ಯೆಸೂರ ಅರಸುಗಳು ದಗಾಮಾಡಿ ಹೊಡದು, ಆ ಸೀಮೆ ಆಕ್ರಮಿಸಿ ಕೊಂಡರು. ಈ ವಿವರ ಅಲ್ಲಿ ಇರುವಂಥಾ ಯಾವತ್ತೂ ಜನರು ಬಲ್ಲರು. ಇದು ಕಾರಣ ಆ ಆರಭ್ಯ ನವಾಬ ಹ್ಯೆದರಲ್ಲೀಖಾನರ ದಿವಸ ಪರಿಯಂತರ ಮ್ಯೆಸೂರ ಅರಸುಗಳಿಗೂ ನಮ್ಮ ಹಿರಿಯುಪರಿಗೂ ಲಡಾಯುವಾಗುತ್ತಲೆ ಇತ್ತು. ಆಮೇಲೆ ಹ್ಯೆದರಲ್ಲೀಖಾನರು ಬಹಳ ಪ್ರಬಲಿಸಿದರು. ಪೆರಿಯಾಪಟ್ಟಣದ ಸೀಮೆಯು ಅವರ ಕರ್ಜಿನ ಒಳಗೆ ಸೇರಿ ಇತ್ತು. ಈಗ ತಮ್ಮ ಸರಕಾರದ ದೊಡ್ಡ ಹಿಮ್ಮತ್ತಿನಿಂದಲೂ ಅಸಲ್ ಮಾತು ವಿಚಾರಿಸುವದರಿಂದಲೂ, ಮ್ಯೆಸೂರ ಸೀಮೆಯನ್ನು ಅದಕ್ಕೆ ಕದೀಂ ಖಾವಂದರಾದವರಿಗೆ ವರುಷಂಪ್ರತಿ ಯಲ್ಲು ಹಣಾ ಕೊಡುವ ಹಾಗೆ, ಮೊಕರರು ಮಾಡಿಕೊಟ್ಟು ಇದ್ದೀರಿ. ಅಥಾಪಿ ಅದೇ ಮೇರೆ ಪೆರಿಯಾಪಟ್ಟಣದ ಸೀಮೆಯನ್ನು ದೋಸ್ತಾರರಿಗೆ ಸರಫರಾಜು ಮಾಡಿ, ಆಬರು ಉಂಟುಮಾಡುವ ದೃಷ್ಟಿ ಇಟ್ಟು, ನಮಗೆ ಕೊಟ್ಟರೆ, ಆ ಸೀಮೆ ಆಬಾದು ಮಾಡಿ, ರೈತರಿಗೆ ಖುಷಿಮಾಡಿ, ವ್ಯವಸಾಯ ಹೆಚ್ಚಾಗಿ ಮಾಡಿಸಿ, ಹಣ ಮೊಕರರು ಮಾಡಿ ಇರುವದಕ್ಕಿಂತಲೂ ವರ್ಷ ವರ್ಷಕ್ಕೂ ಹೆಚ್ಚಾಗಿ ಸಂದಾಯ ಮಾಡಿ, ತಮ್ಮ ಸರಕಾರದ ಮೆಹರ್ಬಾನಗಿ ಉಂಟುಮಾಡಿಕೊಂಡೇವು; ಶಿವ ಸಾಕ್ಷಿಯು. ಇದೇ ಅಪೇಕ್ಷೆ ನಮ್ಮಮನಸ್ಸಿನಲ್ಲು ಇದ್ದದ್ದನ್ನು ತಿಳಿಸಿ ಇದ್ದೇವೆ. ಮೊದಲು ಯುಟಾಪು ಸಾಹೇಬರು, ಸರಕಾರದ ವಕೀಲ್ ಕೆಪ್ಟನ್ ಮಾವಿನಿ ಸಾಹೇಬರು ಸಹಾ, ಇಲ್ಲಿ ಇದ್ದಲ್ಲಿ, ಇದೇ

ಅಪೇಕ್ಷೆಯನ್ನು ಅವರಿಗೂ ತಿಳಿಸಿ ಇದ್ದೇವೆ. ನಮ್ಮ ಇರಾದೆ ಸರಕಾರದ ಕಿದ್ಮತ್ತು ಮಾಡಬೇಕು ಎಂಬುದೇ ಹೊರ್ತು, ಮತ್ತೊಂದಲ್ಲಾ. ಸೀಮೆ ಏನಾದರೂ ಜಹಗೀರಿ ಇನಾಮಾಗಿ ಬೇಕೆಂಬ ಅಪೇಕ್ಷೆಯೂ ಇಲ್ಲಾ. ನಮ್ಮ ಕರ್ಜಿನ ಒಳಗೆ ಇನ್ನೊಂದು ಸೀಮೆ ತರಬೇಕೆಂಬದೂ ಇಲ್ಲಾ. ಹಣಕಾಸು ಜಮಾಯಿಸಬೇಕೆಂಬ ಅಪೇಕ್ಷೆಯೂ ಇಲ್ಲಾ. ಇದಕ್ಕೆ ಮುಂದೆ ಬರೆಯುವ ಮತಲಬು ಸಾಕ್ಷಿ ಇದೆ. ಮೊದಲು ಸರ್ ಜನರಲ್ ರಾಬರ್ಟ್ ಆಬರ್‌ಕ್ರಂಬಿ ಸಾಹೇಬ್ ಬಹಾದ್ದರವರು ಲಷ್ಕರಿನ ಸಂಗಡ ಟೀಪುಸುಲ್ತಾನರ ಕಡೆಗೆ ಬರುವ ಸಮಯದಲ್ಲಿ, ಈ ದೋಸ್ತಾರರಿಗೆ ತಲಚೇರಿಗೆ ಕರೆಸಿ, ಇಂಗ್ರೇಜ ಸರಕಾರದ ಜಯಪ್ರದ ಮಾಡುವ ಲಷ್ಕರಿಗೆ ತಮ್ಮ ಸೀಮೆಗಾಗಿ ಮಾರ್ಗ ಕೊಟ್ಟು, ಕುಮುಕು ಮಾಡಿಯಂತಾ, ಹುಕುಂ ಕೊಟ್ಟರು. ಆ ಮಾತಿಗೆ ನಾವು ಕಬೂಲು ಮಾಡಿ, ಉಭಯಕಡೆಯಿಂದಲೂ ಕರಾರುನಾಮಾ ಬರದ್ದಾಯಿತು. ಆಮೇಲೆ ಜನರಲ್ ಸಾಹೇಬರು ಲಷ್ಕರು ತೆಗೆದುಕೊಂಡು ಬಂದರು. ಇಂಗ್ರೇಜ ಸರಕಾರದ ಕಾರ್ಯ ಯಾವ ಮೇರೆ ಮಾಡಬೇಕೋ, ಆ ಮೇರೆ ಈ ದೋಸ್ತಾರರಿಂದಾ ಆಗಲಿಲ್ಲಾ. ಆದಾಗ್ಯೂ ಆ ಸಾಹೇಬರು ಬಹಳ ಮೆಹರ್ಬಾನಗಿ ಮಾಡಿ, ನಮ್ಮನ್ನು ತಮ್ಮ ಸರಕಾರ ಖೈರಕಾರರು ಎಂತಾ ತಿಳಿದು, ಪ್ರೀತಿಯಿಂದಾ ತಮ್ಮ ಮನಸ್ಸಿನಲ್ಲಿ ಏನು ಅಪೇಕ್ಷೆ ಇದೆಯೋ, ಅದನ್ನು ಜಾಹೇರು ಮಾಡಿ. ನಾವು ನಮ್ಮ ಸರಕಾರದಲ್ಲಿ ಅರಿಕೆ ಮಾಡಿ, ತಮ್ಮ ಅಪೇಕ್ಷೆ ಹಾಸಲ್ ಮಾಡಿಯೇವು ಎಂತಾ ಹೇಳಿದರು. ಅದಕ್ಕೆ ನಾವು ಜವಾಬು ಹೇಳಿದ್ದು : ನಮ್ಮ ಅಪೇಕ್ಷೆ ಏನು ಎಂದರೆ : ನಮ್ಮಿಂದಾ ಆಗುವಷ್ಟು ಸರಕಾರದ ಕೆಲಸದ ಒಳಗೆ ಹಾಜರು ಇದ್ದೇವು. ಇಂಗ್ರೇಜ ಬಹಾದ್ದರ ಸರಕಾರದ ಸರದಾರರು ದೋಸ್ತಿಯಿಂದಾ ನಮಗೆ ಅಣ್ಣತಮ್ಮಂದಿರ ಹಾಗೆ ಇರಬೇಕು. ಸೀಮೆ ಭೂಮಿ ಇಂಗ್ರೇಜ ಸರಕಾರದ ಹುಕುಮತ್ತಿನ ಒಳಗೆ ಬರಬೇಕು. ಸರಕಾರದ ದುಷ್ಮಾನರು ಮುಖಭಂಗಿತವಾಗಿ ಹೋಗಬೇಕು. ಇದೀಗ ನಮ್ಮ ಅಪೇಕ್ಷೆ ಎಂತಾ, ಜವಾಬು ಹೇಳಿದೆವು. ಆವಾಗ ಜನರಲ್ ಸಾಹೇಬರು ಲಷ್ಕರು ತೆಗೆದುಕೊಂಡು, ಪೆರಿಯಾಪಟ್ಟಣಕ್ಕೆ ಹೋಗಿ, ಕೆಲವು ಕಾರಣದಿಂದಾ ತಿರುಗಿದರು. ಆ ಬಳಿಕ ಒಂದು ವರ್ಷದ ಮೇಲೆ ಮತ್ತೂ ದಂಡು ಸಮೇತ ಈ ಕಡೆಗೆ ಬಂದರು. ಆವಾಗ್ಯೆ ನಮ್ಮಿಂದಾ ಆದಷ್ಟು ಸಕಾಯ

ಮಾಡಿದೆವು. ಆವಾಗಲೂ ಬಹಳ ಮೆಹರ್ಬಾನಗಿ ಮಾಡಿ, ತಮ್ಮ ಅಪೇಕ್ಷೆ ಏನು ? ಹೇಳಿ ! ಎಂತಾ ಕೇಳಿದರು. ಸದರಿ ಮೇಲೆ ಬರದ ಜವಾಬನ್ನೇ ಹೇಳಿದೆವು. ಈಗ ಜನರಲ್ ಸ್ಟೋಯರ್ಟ್ ಸಾಹೇಬರವರು ಹಾಟ್ಲೆ ಸಾಹೇಬರವರು ಮುಂಬಾಯಿ ಲಷ್ಕರು ಸಮೇತ ಬಂದು, ಕುಂಪನಿ ಸರಕಾರದ ಕಿದ್ಮತ್ತು ಮಾಡುವ ಬಗ್ಯೆ, ತಮ್ಮ ಇನಾಯತನಾಮಾ ಕೊಟ್ಟಲ್ಲಿ, ನಮ್ಮಿಂದಾ ಆಗುವಷ್ಟು ಸರಕಾರದ ಕಿದ್ಮತ್ತು ಮಾಡಿ ಇದ್ದೇವೆ. ಆ ಇಬ್ಬರು ಸಾಹೇಬರು ಪಟ್ಟಣಕ್ಕೆ ಹೋಗುವಾಗ್ಯೆ, ಬಹಳ ಪ್ರೀತಿಯಿಂದಾ ಮೆಹರ್ಬಾನಗಿ ಮಾಡಿ, ತಮ್ಮನಸ್ಸಿನಲ್ಲಿ ಏನು ಅಪೇಕ್ಷೆ ಇದೆಯೋ, ಅದನ್ನು ಹೇಳಿದರೆ, ನಾವು ನಮ್ಮ ಸರಕಾರಕ್ಕೆ ಅರಿಕೆ ಮಾಡಿ, ತಮ್ಮ ಅಪೇಕ್ಷೆ ಮೇರೆ ಇರುವ ಕೆಲಸ ಆಗುಮಾಡಿಸಿಕೊಟ್ಟೇವು, ಎಂಬದಾಗಿ ಹೇಳಿದರು. ಆಮೇಲೆ ಜಯಪ್ರದ ಮಾಡಿಕೊಂಡು ಬಂದ ಮೇಲೂ ಅದೇ ಮೇರೆ ಕೇಳಿದರು. ನಮಗೆ ಏನಾದರೂ ಹಣಕಾಸಿನ ಮೇಲೆ ಆಪೇಕ್ಷೆ ಇಲ್ಲಾ. ನಮ್ಮ ದೊಡ್ಡ ದುಷ್ಮಾನರು ನಾಶವಾಗಿ ಹೋದರು. ಈಗ ತಮ್ಮ ದೊಡ್ಡ ಸರಕಾರದಿಂದಾ ಒಂದು ನಿಶಾನಿ ಇನಾಯತ ಆದರೆ, ನಮಗೆ ಬಹುಮಾನ ಉಂಟಾದೀತು, ನಮ್ಮಿಂದಾ ಆಗತಕ್ಕ ಸರಕಾರದ ಕಿದ್ಮತ್ತು ತೆಗೆದುಕೊಳ್ಳಬೇಕು ಎಂತಾ ಹೇಳಿದೆವು. ತಮ್ಮ ಇನಾಯತನಾಮಾ ಬಹಳ ಆಬ್ರುಯಿಂದಾ ಸರಫರಾಜು ಆಗಿ ಇತ್ತು. ಅವರ ಜವಾಬು ಇಂಗ್ರೇಜ ಸರಕಾರದ ಕಿದ್ಮತ್ತು ಮಾಡಬೇಕೆಂಬುದೇ ಹೊರ್ತು, ಮತ್ತೊಂದು ನಾವು ಬರೆಯಲಿಲ್ಲಾ. ಹಣಕಾಸು, ಸೀಮೆ ಬೇಕೆಂಬ ಮನಸು ಇಡಲಿಲ್ಲಾ. ಅಥಾಪಿ ಹಣಕಾಸು, ಸೀಮೆ ಭೂಮಿ, ಆಗಬೇಕೆಂಬ ಅಪೇಕ್ಷೆ ಇದ್ದರೆ, ಮೊದಲು ಸರ್ ಜನರಲ್ ರಾಬರ್ಟ್ ಆಬಕ್ರಂಬಿ ಸಾಹೇಬ ಬಹಾದ್ದರವರ ಸಂಗಡ ಹೇಳುತ್ತಿದ್ದೆವು. ಈಗ ತಮ್ಮ ಹುಕುಂ ಪ್ರಕಾರ ಜನರಲ್ ಸ್ಟೋಯರ್ಟ್ ಸಾಹೇಬರವರು ಬಂದು ಇದ್ದರು. ಅವರಿಗೆ ಜಾಹೇರು ಮಾಡುತ್ತಾ ಇದ್ದೆವು. ತಾವು ಯಾವತ್ತೂ ಹಿಂದೂಸ್ಥಾನದ ಸೀಮೆಗೆ ಕಾಪಾಡು ವಂಥಾ ದೊಡ್ಡ ಸಾಹೇಬರು ಇದ್ದೀರಿ. ಅಥಾಪಿ ಅಂಥಾದ್ದೇನಾದರೂ ಅಪೇಕ್ಷೆ ಇದ್ದರೆ, ತಮಗೆ ಶ್ರುತಪಡಿಸುತ್ತಾ ಇದ್ದೆವು. ನಾವು ನಮ್ಮ ಪುತ್ರಪೌತ್ರ ಪಾರಂಪರ್ಯವಾಗಿ ದೊಡ್ಡ ಸರಕಾರದ ದಯ ಸಂಪಾದಿಸಿಕೊಳ್ಳಬೇಕು ಎಂತಾ, ಇದೀಗ ನಮ್ಮ ಅಪೇಕ್ಷೆ ಹೊರ್ತು, ಅಂಥಾದ್ದೇನಾದರೂ ಹಣಕಾಸು, ಸೀಮೆ

ಭೂಮಿ ಮೇಲೆ ಅಪೇಕ್ಷೆ ಮನಸಿನಲ್ಲಿ ಮಡಗಲಿಲ್ಲಾ. ಈ ಜಾಹೇರು ಮಾಡಿರುವಂಥಾದ್ದು ಅಲ್ಬತ್ ತಮಗೆ ನಿಶ್ಚಯ ಆದೀತು. ಮೇಲಾಗಿ, ಪೂರ್ಣೈಯ್ಯ ಎಂಬವನು ಬ್ರಾಹ್ಮಣನಿದ್ದಾನೆ. ನಮ್ಮ ಜಾತಿಗೂ ಅವನ ಜಾತಿಗೂ ಕೂಡಿ ಬರುವದಿಲ್ಲಾ. ನವಾಬ ಹೈದರಲ್ಲೀಖಾನ್ ಬಹಾದ್ದರವರು ಅವರ ಮಗ ಟೀಪುಸುಲ್ತಾನರ ದಿವಸದಲ್ಲಿ ಸಹಾ, ನಮ್ಮ ಮೇಲೆ ಕ್ಷುದ್ರೋಪದ್ರ ಹೇಳಿ, ನಮಗೂ ನಮ್ಮ ರಾಜ್ಯಕ್ಕ್ಯಾ ಬಹಳ ಖರಾಬು ಮಾಡಿಸಿದ್ದಾನೆ. ಈಗಲೂ ಅವನೇ ಮೈಸೂರ ಸೀಮೆ ಹುಕಮತ್ತಿನ ಒಳಗೆ ಮೊಕರರು ಆಗಿ ಇದ್ದಾನೆ. ಇದು ಕಾರಣ ಮತ್ತೂ ಕ್ಷುದ್ರಗಳ ಹೇಳಿ, ನಮಗೆ ಸರಕಾರದಿಂದಾ ಏನು ಮಾತಿನ ವಾಸಿ ಉಂಟುಮಾಡುತ್ತಾನೋ, ಎಂಬ ಅಂದೇಶ ನಮ್ಮ ಮನಸ್ಸಿನಲ್ಲಿ ಇದೆ. ಮಹಾದೇವ ಬಲ್ಲಾ. ಆದಾಗ್ಯೂ ಯಾವಾಗ ಈ ಎರಡು ಕಡೆ ಮಾತು ವಾಜಿಬಿಯಿಂದಾ ತಾವು ವಿಚಾರಿಸಿದರೆ, ನಮ್ಮ ಮೇಲೆ ಚಾಡಿ ಹೇಳಿದವನ ಮೇಲೆ ಯತಾರಾಜಿ ಹಾಸಲಾದೀತು, ನಮ್ಮೇಲೆ ಮತ್ತೂ ಮೆಹರ್ಬಾನಗಿ ಉಂಟಾದೀತು ಎಂಬದು ನಿಶ್ಚಯವಾದೆ ಎಂಬ ವಿವರವಾಗಿ ಬರೆಸಿ ಕಳುಹಿದರು.

ಆ ಬಳಿಕ ಭಾದ್ರಪದ ಮಾಸದಲ್ಲು ವಕೀಲ ಕೆಪ್ಟನ್ ಮಾವಿನಿ ಸಾಹೇಬರವರು ಬರಸಿ ಕಳುಹಿಸಿದ ಕಾಗದದಲ್ಲಿ: "ತಮ್ಮ ಸೀಮೆಯಲ್ಲಿ ಲಷ್ಕರಿನ ಸಮಯದಲ್ಲಿ ಜರಾಯಿ ಬಗ್ಗೆ ಕೂಡಿಸಿ ಇರುವ ಕಂಪನಿ ಸರಕಾರದ ಎತ್ತುಗಳಲ್ಲಿ ಮೃತವಾದದ್ದು ಹೋಗಲಾಗಿ, ಬಾಕಿ ಎತ್ತುಗಳನ್ನು ಬಂಟವಾಳಕ್ಕೆ ಸಾಗಿಸುವ ಬಗ್ಯೆ, ಒಬ್ಬ ಟೋಪಿವಾಲಾ, ಬೇಗಾರಿ ಜನರ ಸಹಾ, ಕಳುಹಿಸಿ ಇದ್ದೇವೆ. ಇವರ ತಾಬೆ ಮಾಡಿ ಕಳುಹಬೇಕು, ಎಂತಾ ಜನರಲ್ ಸಾಹೇಬರು ಹೇಳಿದ್ದಾರೆ" ಎಂತಾ ಬರದು ಕಳುಹಿದರಿಂದಾ, ಆ ಜನರು ಬಂದದರಿಂದ ಆ ಬಗೆ ಎತ್ತುಗಳ ಯಾವತ್ತನ್ನು ಅವರ ತಾಬೆ ಮಾಡಿ ಬಂಟವಾಳಕ್ಕೆ ಕಳುಹಿಸಿಕೊಟ್ಟರು.

ಆ ಬಳಿಕ ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬ್ ಬಹಾದ್ದರವರು ರಬ್ಯುಲ್ ಅವಲ್ ೨೭ನೇ ತಾರೀಕಿನಲ್ಲು ಬರಸಿ ಕಳುಹಿದ ಕಾಗದದಲ್ಲಿ: "ಈಗ ತಮ್ಮ ದರಬಾರದಲ್ಲು ಇರುವ ಸಾಹೇಬರು ಅಲ್ಲಿ ಇರುವದಕ್ಕೆ ಜರೂರು ಇಲ್ಲಾ. ಇದಕಾರಣ ತಮ್ಮ ಅಪ್ಪಣೆ ತೆಗೆದು

ಕೊಂಡು, ಕುಂಪನಿ ಸರಕಾರದ ಸರಹದ್ದಿಗೆ ಬರುವ ಹಾಗೆ, ಕೆಪ್ಟನ್ ಮಾವಿನಿ ಸಾಹೇಬರಿಗೆ ಹಿಷಾರೆ ಮಾಡಿ ಇದ್ದೇವೆ. ಕರ್ನಲ್ ಕ್ಲೊಸ್ ಸಾಹೇಬ್ ಬಹಾದ್ದರವರು, ಮೈಸೂರ ದರ್ಬಾರಿನ ಜಾನ್ಸಿನ್ ಈಗ ಮದರಾಸಿನ ಒಳಗೆ ಇದ್ದಾರೆ. ನಮ್ಮ ಹುಕುಂ ಮೇರೆ ಸದ್ಯ ಶ್ರೀರಂಗಪಟ್ಟಣಕ್ಕೆ ಬರುತ್ತಾರೆ. ತಮಗೆ ಮೊದಲಾರಭ್ಯ ಶ್ರೀರಂಗಪಟ್ಟಣದ ಷಹರು ನೋಡಬೇಕೆಂಬ ಅಪೇಕ್ಷೆ ಇದೆ ಎಂತಾ, ಕೇಳಿದೆವು. ಇದರಿಂದಾ ದೋಸ್ತಿಯಿಂದಾ ಬರೆಯುತ್ತೇವೆ. ಕೆಪ್ಟನ್ ಮಾವಿನಿ ಸಾಹೇಬರು ತಿರುಗಿದ ಮೇಲೆ, ಶ್ರೀರಂಗಪಟ್ಟಣದ ಷಹರು ನೋಡುವ ಬಗ್ಗೆ ತಮಗೆ ಖುಷಿ ಇದ್ದರೆ, ಜವಾಬು ಸವಾಲು ತಮ್ಮ ಸರಕಾರದ್ದು ತೀರಿಸುವ ಬಗ್ಗೆ, ತಾವು ಶ್ರೀರಂಗಪಟ್ಟಣಕ್ಕೆ ರವಾನೆ ಆಗಬೇಕು. ಈ ಮಾತು ತೀರಿಸುವ ಹಾಗೆ, ನಾವು ಆ ಕರ್ನಲ್ ಸಾಹೇಬರಿಗೆ ಹುಕುಂ ಕೊಟ್ಟು ಇದ್ದೇವೆ. ಹೆಚ್ಚಾಗಿ ಕೇಳಿ ಏನಾದರೂ ಮನಸ್ಸಿಗೆ ಅಂದೇಶವಿದ್ದರೆ, ಅದನ್ನು ತೆಗೆದುಬಿಡಬೇಕು. ಯಾವದೊಂದೂ ಕೆಲಸ ತೀರಿಸಬೇಕಾವರೂ, ಆ ಕರ್ನಲ್ ಸಾಹೇಬರ ಕಂಡು, ಮೊಕ್ತಾ ತೀರಿಸಬೇಕು " ಎಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬು ಜಮಾದಿಸಾನಿ ೨ನೇ ತಾರೀಕಿನಲ್ಲು ಬರಸಿ ಕಳುಹಿದ ಕಾಗದದಲ್ಲಿ: " ತಮ್ಮ ಇನಾಯತನಾಮಾ ಬಂದದರಿಂದಾ ಬಹಳ ಸಂತೋಷ ವಾಯಿತು. ಅದರಲ್ಲಿ ಈಗ ಸರಕಾರದ ವಕೀಲರು ತಮ್ಮ ಹತ್ತಿರ ಇರುವದಕ್ಕೆ ಜರೂರು ಇಲ್ಲಾ. ಇದಕಾರಣ ತಮ್ಮ ಹುಕುಂ ತೆಗೆದುಕೊಂಡು, ಕುಂಪನಿ ಸರಕಾರದ ಸೀಮೆಗೆ ಬರುವ ಹಾಗೆ ಕೆಪ್ಟನ್ ಮಾವಿನಿ ಸಾಹೇಬರಿಗೆ ಬರೆಸಿ ಕಳುಹಿಸಿ ಇದ್ದೇವೆ, ಎಂಬದಾಗಿ ಬರೆಸಿ ಇದ್ದೀರಿ. ನಮಗೂ ಟೀಪುಸುಲ್ತಾನ ರಿಗೂ ಸರಹದ್ದಿನ ತಕರಾರು ಬಂದು ಇದ್ದದ್ದರಿಂದಾ, ಮಲೆವಾರಿ ಕಮಿಷನ್ ಸಾಹೇಬರು ಆ ತಕರಾರು ತೀರಿಸುವದಕ್ಕೆ ಕೆಪ್ಟನ್ ಮಾವಿನಿ ಸಾಹೇಬರನ್ನು ಕಳುಹಿಸಿ ಇದ್ದರು. ಈಗ ಒಂದು ಅರೆ ವರ್ಷವಾಯಿತು. ಆ ಸಾಹೇಬರು ನಮ್ಮ ಸೀಮೆ ಕೈಫಿಯತ್ತು ಯಾವತ್ತು ದರಿಯಾಪ್ತು ಮಾಡಿ, ಸರಹದ್ದಿನ ಹಕೀಕತ್ತು ನಮ್ಮ ಸಂಗಡ ಕೇಳಿದರು. ನಮ್ಮ ದಿವಸದಲ್ಲಿ ಆದ ಕೈಫಿಯತ್ತು ವಿದ್ಯಮಾನ ಯಾವತ್ತು ಅವರಿಗೆ ತಿಳಿಸಿದೆವು. ಪ್ರಾಕು ವಿದ್ಯಮಾನ ಬರದದ್ದು ನಮ್ಮ ಬಳಿಯು ಇದ್ದದ್ದನ್ನು ಅವರ ಮುಂದೆ ಓದಿ ಹೇಳಿ ತಿಳಿಸಿದ್ದೇವೆ. ನೂರ

ಅರವತ್ತು ವರ್ಷದ ಒಳಗಣ ಕೈಫಿಯತ್ತು ಇದರಲ್ಲಿ ಸರಕಾರದ ಕೆಲಸಕ್ಕೆ ಬರುವಂಥಾದ್ದ ನೋಡಿ, ಬರಕೊಂಡು, ರವಾನೆ ಆದರು. ಮತ್ತೆ ಆರು ತಿಂಗಳ ಮೇಲೆ ಯುಟಾಪು ಸಾಹೇಬರು ಈ ಕೆಪ್ಟನ್ ಮಾವಿನಿ ಸಾಹೇಬರಿಗೂ ಮಲೆ ವಾರಿ ಕವಿಶಾನ್ ಸಾಹೇಬರು ಕಳುಹಿದರು. ಆ ಇಬ್ಬರು ಸಾಹೇಬರು ಬಂದು, ನಮಗೂ ಟೀಪುಸುಲ್ತಾನರಿಗೂ ತಕರಾರು ಬಿದ್ದು ಇದ್ದದ್ದನ್ನು ದರಿಯಾಪ್ತು ಮಾಡಿ, ಕೆಲವು ನಮ್ಮ ಸೀಮೆಯನ್ನು ತಿರುಗಿ ನೋಡಿ, ಮೂರು ತಿಂಗಳು ಇಲ್ಲಿ ಇದ್ದು, ಇಲ್ಲಿ ಹಾಲುಹಕೀಕತ್ತು ನೋಡಿಯೂ ಕೇಳಿಯೂ ಇದ್ದಾರೆ. ಅಷ್ಟರಲ್ಲಿ ಇಂಗ್ರೇಜ ಕುಂಪನಿ ಸರಕಾರಕ್ಕೂ ಟೀಪುಸುಲ್ತಾನರ ಸರಕಾರಕ್ಕೂ ಸಲ್ಲಾ ಮುರುದ ವಿವರದ ಇನಾಯತನಾಮಾ ನಮ್ಮ ಹೆಸರಿಗೆ ಬಂದು ತಲಪಿತು. ಆ ಬಳಿಕ ಕರಾರುನಾಮಾ ಬರದುಕೊಟ್ಟೆವು. ಆ ಕರಾರುನಾಮೆ ಆ ಇಬ್ಬರು ಸಾಹೇಬರು ತೆಗೆದುಕೊಂಡು ಹೋದರು. ಆಮೇಲೆ ಒಂದು ತಿಂಗಳು ದಿವಸದಲ್ಲಿ ತಮ್ಮ ಎರಡನೆ ಇನಾಯತನಾಮಾ ತಂದುಕೊಟ್ಟರು. ಅದರಲ್ಲಿ 'ಕೆಪ್ಟನ್ ಮಾವಿನಿ ಸಾಹೇಬರಿಗೆ ಸರಕಾರದ ವಕೀಲತನ ಮೊಕರರಾಗಿ ರವಾನೆ ಮಾಡಿ ಇದ್ದೇವೆ. ತಮ್ಮ ಬಳಿಯಲ್ಲಿ ಇದ್ದಾರು. ಸರಕಾರದ ಕೆಲಸಕ್ಕೆ ಆ ವಕೀಲರು ಯಾವ ಮೇರೆ ಹೇಳುತ್ತಾರೋ, ಅದನ್ನು ತಾವು ಒಡಂಬಡಬೇಕು' ಎಂಬ ದಾಗಿ ಬರೆಸಿ ಇದ್ದಿರಿ. ತಮ್ಮ ಹುಕುಂ ಪ್ರಕಾರ ಕೆಪ್ಟನ್ ಮಾವಿನಿ ಸಾಹೇಬರು ಇಲ್ಲಿ ಇದ್ದು, ನಮ್ಮ ಸಂಗಡ ಸರಕಾರದ ಕೆಲಸ ತೆಗೆದುಕೊಂಡರು. ನಾವು ಮಾಡಿದಂಥಾ ಸರಕಾರದ ಕೆಲಸ ನಮ್ಮಿಂದಾ ತೀರುವಂಥಾದ್ದಲ್ಲಾ. ಅದೆಲ್ಲಾ ಆ ಕೆಪ್ಟನ್ ಸಾಹೇಬರ ಜಾಣತನದಿಂದಲೂ ಹುನ್ನರಿನಿಂದಲೂ ಆಗಿ ಇದೆ. ಬಹಳ ಬಗೆಯಿಂದಾ ನಮಗೆ ತರ್ಬಿಯತ್ತು ಮಾಡಿದರು. ನಮ್ಮಿಂದಾ ಒಂದು ಪಾಲು ಕೆಲಸ ಆಗುವದಿದ್ದರೆ ಅವರ ಬುದ್ಧಿ ಹುನ್ನರಿನಿಂದಾ ಹತ್ತು ಪಾಲು ಕೆಲಸ ಮಾಡಿದೆವು. ಅದರಿಂದಾ ಸರಕಾರದ ಮೆಹರ್ಬಾನಗಿ ಇನಾ ಯತ ಉಂಟಾಯಿತು. ಇದುಕಾರಣ ಆ ಕೆಪ್ಟನ್ ಸಾಹೇಬರಿಗೂ ನಮಗೂ ಮನಸು ಒಂದಾಗಿ, ದೋಸ್ತಿ ಆಯಿತು. ಈಗ ಅವರು ತಮ್ಮ ಹುಕುಂ ಪ್ರಕಾರ ಹೊರಟು ರವಾನೆ ಆಗುತ್ತಾ ಇದ್ದಾರೆ. ಆದ್ದರಿಂದ ನಮ್ಮ ಮನಸ್ಸಿಗೆ ಬಹಳ ದಿಲ್ಗೀರು ಆಗುತ್ತಾ ಇದೆ. ಇದಲ್ಲದೆ ಕರ್ನಲ್ ಕ್ಲೊಸ್ ಸಾಹೇಬ ರವರು ಮೈಸೂರ ಸೀಮೆ ವಕೀಲತನ ಮೊಕರರು ಆಗಿ ಬರುತ್ತಾ ಇದ್ದಾರೆ

ಎಂಬದಾಗಿಯೂ, ಅವರು ತಲಪಿದಮೇಲೆ ಅವರ ಮುಲಾಕತ್ತು ಮಾಡಿಕೊಂಡು ಶ್ರೀರಂಗಪಟ್ಟಣದ ಷಹರು ನೋಡಬೇಕೆಂಬದಾಗಿ, ತಮಗೆ ಅಪೇಕ್ಷೆ ಇದೆ ಎಂತಾ ಕೇಳಿದೆವು ಎಂಬದಾಗಿಯೂ, ತಮ್ಮ ಕೆಲಸದ ಬಂದುಬಸ್ತು ಏನು ಇದ್ದಾಗ್ಯೂ, ಆದೀತು ಎಂಬದಾಗಿಯೂ ಸಹಾ, ಸರಫರಾಜಿ ಕಲಮಿನಿಂದಾ ಬರದು ಇದ್ದೀರಿ. ಈ ಬಗ್ಯೆ ನಮ್ಮ ಕೆಲಸ ಬಂದುಬಸ್ತು ಮಾಡಿಕೊಳ್ಳುವದಕ್ಕೆ ಪಟ್ಟಣಕ್ಕೆ ಹೋಗಬೇಕೆಂತಾ, ನಮ್ಮ ಮನಸ್ಸಿನಲ್ಲು ಇರಲಿಲ್ಲಾ. ಮದರಾಸಿನ ಲಷ್ಕರು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಇರುವಾಗ್ಯೆ, ಕೆಪ್ಟನ್ ಮಾವಿನಿ ಸಾಹೇಬರ ಸಂಗಡ ಆ ದಂಡಿಗೆ ಹೋಗಿ, ಯಾವತ್ತೂ ಲಷ್ಕರಿನ ಸರದಾರರ ಮುಲಾಕತ್ತು ಮಾಡಬೇಕೆಂತಲೂ, ಆ ಕೆಪ್ಟನ್ ಸಾಹೇಬರು ಎಲ್ಲಾ ಸರದಾರರಿಗೂ ತಿಳಿಸ್ಯಾರು, ಆ ಎಲ್ಲಾ ಸರದಾರರ ಸಂಗಡಲೂ ದೋಸ್ತಿ ಉಂಟಾದೀತು ಎಂಬದಾಗಿ, ನಮ್ಮ ಮನಸ್ಸಿನಲ್ಲಿ ಅಪೇಕ್ಷಿಸಿ ಇದ್ದೆವು. ಈಗ ತಮ್ಮ ಹುಕುಂ ಪ್ರಕಾರ ಕೆಪ್ಟನ್ ಮಾವಿನಿ ಸಾಹೇಬರು ಹೊರಟುಹೋಗುತ್ತಾ ಇದ್ದಾರೆ. ಮದರಾಸಿನ ಲಷ್ಕರು ಪಟ್ಟಣದಲ್ಲು ಇಲ್ಲಾ. ಪಟ್ಟಣಕ್ಕೆ ಹೋಗಿ ಬಂದುಬಸ್ತು ಮಾಡಿಕೊಳ್ಳುವ ಬಗ್ಯೆ, ನಮಗೆ ಅಂಥಾ ಜರೂರು ಕೆಲಸವು ಕಾಣುವದಿಲ್ಲಾ. ಇದಲ್ಲದೆ ತಮ್ಮ ಸೀಮೆಗೆ ಹೊಸ ಸರಹದ್ದು ಮಾಡಿದ್ದೀರಿ ಎಂಬದಾಗಿ ಕೇಳಿದ್ದರಿಂದಾ, ಈ ಮಾತಿಗೆ ನಮ್ಮ ಮನಸ್ಸಿನಲ್ಲಿ ಸ್ವಲ್ಪ ಅಂದೇಶವಾಯಿತು ಎಂತಲೂ, ಮುಂದೆ ಏನೊಂದು ಕೆಲಸವಿದ್ದಾಗ್ಯೂ, ಆ ಕರ್ನಲ್ ಸಾಹೇಬರ ಮುಖಾಂತರ ತೀರಿಸಿಕೊಳ್ಳುವದೆಂಬದಾಗಿಯೂ, ಬರಸಿರುವದು ಸರಿಯಷ್ಟೆ. ಈ ವಿವರ ಕೇಳಿದಾಕ್ಷಣ ಬಹಳ ಫಿಕೀರು ಹಾಸಲಾಯಿತು. ನಮ್ಮ ಮನಸ್ಸಿನಲ್ಲಿ ಹಮೇಷ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕೆಲಸದ ಒಳಗೆ ಹಾಜರು ಇದ್ದು ಮೆಹರ್ಬಾನಗಿ ಉಂಟುಮಾಡಿಕೊಳ್ಳಬೇಕು ಎಂತಾ ಅಪೇಕ್ಷೆ ಇತ್ತು. ಸರಕಾರದ ಸರದಾರರು ದೋಸ್ತಿಯಿಂದಾ ನಮಗೆ ಅಣ್ಣತಮ್ಮಂದಿರ ಹಾಗೆ ಇರಬೇಕು. ನಾವು ನಮ್ಮ ಪುತ್ರಪೌತ್ರ ಪಾರಂಪರ್ಯವಾಗಿ ಕುಂಪನಿ ಸರಕಾರದ ಆಶ್ರಯದಲ್ಲಿ ಇದ್ದು, ಆಬ್ರು ಬಹುಮಾನ ಉಂಟುಮಾಡಿಕೊಳ್ಳಬೇಕೆಂಬ ಯೋಚನೆ ಹೊರ್ತು, ಸೀಮೆ ಭೂಮಿ, ಹಣಕಾಸು ಸಂಪಾದಿಸಬೇಕೆಂಬದು ಇತ್ತಿಲ್ಲಾ. ಈ ಭೂಮಿ ಮೇಲೆ ಇರುವ ಪರಿಯಂತರ ಸರಕಾರದ ದೋಸ್ತಿ ಒಳಗೆ ಇರಬೇಕು ಎಂಬದಾಗಿ ಮಹಾದೇವನಿಗೆ ಹಮೇಷ ಬೇಡಿಕೊಳ್ಳುತ್ತಾ

ಇದ್ದೇವೆ. ಈ ಮೇರೆ ಇಷ್ಟು ಸತ್ಯದಿಂದಾ ಸರಕಾರಕ್ಕೆ ಶ್ರೇಯಸ್ಸು ಹಾರೈಸಿ ನಡೆಯುತ್ತೇವೆ. ಇವರ ಮೇಲು ಏನಾದರೂ ಬಂದರೆ, ಅದೃಷ್ಟವೇ ಸರಿ, ಮಾಡತಕ್ಕದ್ದೇನದೆ? ಅಂಥಾ ಕೆಲಸ ನಮ್ಮಿಂದಾ ಬರಲಿಕ್ಕಿಲ್ಲಾ. ನಮ್ಮ ಸೀಮೆ ಸರಹದ್ದನ್ನು ಇಂಜನೇರು ಇಮಿಾಟ್ ಸಾಹೇಬರು, ಕುಂಪನಿ ಹುಕುಂ ಮೇರೆ ಬಂದು, ಸರಹದ್ದು ಯಾವತ್ತು ನೋಡಿ, ಸರಹದ್ದಿನಲ್ಲು ಗುರ್ತುಕಲ್ಲು ನೆಟ್ಟು, ಅದನ್ನು ತಮಶೀಲಲ್ಲು ಬರಕೊಂಡು, ಹೋಗಿ ಇದ್ದಾರೆ. ಆ ಸರಹದ್ದಿನ ಹೊರಗೆ ನಮ್ಮ ಜನರಿಗೆ ಒಂದೇ ಹೆಜ್ಜೆ ಮಡಗುವದಕ್ಕೆ ಬಿಡುವದಿಲ್ಲಾ. ಇನ್ನುಮುಂದೂ ಅಂಥಾ ಕೆಲಸ ನಮ್ಮಿಂದಾ ಬರಲಿಕ್ಕಿಲ್ಲಾ. ನಮ್ಮ ಸರಹದ್ದಿನ ಸಮಿಾಪದ ತಾಲ್ಲೂಕಿನಲ್ಲಿ ಅಮಲು ಮಾಡುವಂಥಾ ಕೆಲವರು ನವಾಬ ಹೈದರಲ್ಲೀಖಾನರ ದಿವಸದಲ್ಲಿಯೂ, ಟೀಪುಸುಲ್ತಾನರ ದಿವಸದಲ್ಲಿಯೂ, ನಾನಾ ಪ್ರಕಾರ ಕ್ಷುದ್ರೋಪದ್ರಗಳ ಹೇಳಿ, ತಂಟೆ ತಕರಾರು ಮಾಡುತ್ತಾ ಇದ್ದರು. ಈಗಲೂ ಆ ಜನರು ಪಟ್ಟಣದ ಕಮಿಾಷನ್ ಸಾಹೇಬರ ಮುಂದೆ ಇಲ್ಲಸಲ್ಲದ್ದ ನಡಸುತ್ತಿದ್ದಾರು. ಯಾವ ತರದಲ್ಲಿ ಆದರೂ ಈ ದೋಸ್ತಾರರ ಮೇಲೆ ಸರಕಾರದ ಮೆಹರ್ಬಾನಗಿ ಕಡಮೆ ಮಾಡಬೇಕು ಎಂತಾ, ಅವರ ಮನಸ್ಸಿನಲ್ಲಿ ಯೋಚನೆ ಮಾಡಿಕೊಂಡು ಇದ್ದಾರೆ. ನಾವು ನಮ್ಮ ಸತ್ಯದಿಂದಾ ಸರಕಾರ ನಂಬಿ ದೋಸ್ತಿ ಇಟ್ಟು ಇರುವಂಥಾದ್ದು ಆ ಕಮಿಾಶನ್ ಸಾಹೇಬರು ತಿಳುವಂಥಾವರಲ್ಲಾ. ಆ ತಂಟೆ ಮಾಡುವ ಜನರು ಹೇಳಿದ್ದರಿಂದಾ, ತಮಗೆ ಜಾಹೇರು ಮಾಡಿ ಇದ್ದಾರು. ಈ ದೋಸ್ತುದಾರರ ಮೇಲೆ ಮೆಹರ್ಬಾನಗಿ ಕಡಮೆ ಆಗುವದಕ್ಕೆ ಕಾರಣ ಇದೇ ಸರಿ. ಇದು ಹೊರ್ತು ನಮ್ಮಿಂದಾ ಏನಾದರೂ ತಕ್ಷೀರು ಆಗಲಿಲ್ಲಾ. ಲಡಾಯಿ ಸುರು ಆದಾರಭ್ಯದಿಂದಾ ತೀರುವ ಪರಿಯಂತರ ನಾವು ಪ್ರಾಣಪ್ರಯತ್ನದಿಂದಾ ಸರಕಾರಕ್ಕೆ ಸಹಾಯ ಮಾಡಿ ಇರುವಂಥಾದ್ದು ಸರ್ ಜನರಲ್ ರಾಬರ್ಟ್ ಅಬರ್‍ಕ್ರಂಬಿ ಸಾಹೇಬರವರೂ, ಅವರ ಸಂಗಡ ಇದ್ದ ಸರದಾರರೂ ಮುಂತಾಗಿ ತಿಳುದು ಇದ್ದಾರೆ. ಈಗಿನ ದಿವಸದಲ್ಲಿ ಲಡಾಯಿ ಪ್ರಾರಂಭ ಆಗುವಾಗ್ಯೆ, ಜನರಲ್ ಸ್ಟೋಯರ್ಟ್ ಸಾಹೇಬರವರು, ಜನರಲ್ ಹಾಟ್ಲೆ ಸಾಹೇಬರವರು ಸಹಾ, ಮುಂಬಾಯಿ ಲಷ್ಕರಿನ ಸಂಗಡ ಬಂದು, ನಮ್ಮಿಂದಾ ಅಲ್ಪಸ್ವಲ್ಪ ಕುಂಪನಿ ಸರಕಾರದ ಕೆಲಸ ತೆಗೆದುಕೊಂಡು ಇದ್ದಾರೆ. ನಮ್ಮ ಹಕೀಕತ್ತು ಆ ಸಾಹೇಬರಿಗೂ ಜಾಹೇರು ಇದೆ. ಇದಲ್ಲದೆ

ಮಿಸ್ಟರ್ ಯುಟಾವು ಸಾಹೇಬರು, ಸರಕಾರದ ವಕೀಲ್ ಕೆಪ್ಟನ್ ಮಾವಿನಿ ಸಾಹೇಬರು ಸಹಾ, ಇಲ್ಲಿಗೆ ಬಂದು ಇದ್ದರು. ಅವರು ಅಲ್ಪಸ್ವಲ್ಪ ಸರಕಾರದ ಕೆಲಸ ನಮ್ಮಿಂದಾ ತೆಗೆದುಕೊಂಡು ಇದ್ದಾರೆ. ಅವರಿಗೂ ನಮ್ಮ ಹಾಲು ಹಕೀಕತ್ತು ತಿಳುದು ಇದೆ. ಈ ಸಾಹೇಬರಲ್ಲಿ ಯಾರಾದರೂ ಒಬ್ಬರ ಸಂಗಡ ದರಿಯಾಪ್ತು ಮಾಡಿಸಿದರೆ, ನಾವು ಪ್ರಾಣಪ್ರಯತ್ನಬಟ್ಟು, ಸರಕಾರಕ್ಕೆ ಸಹಾಯ ಮಾಡಿದಂಥಾದ್ದು ತಮಗೆ ಜಾಹೇರಾದೀತು. ಯಾವ ಮೇರೆ ಅರೈಕೆ ಮಾಡಿಸುತ್ತೀರೋ, ಆ ಮೇರೆ ಈ ದೋಸ್ತುದಾರರು ಸಂಘರಾಜಿ ಆದೇವು. ಆ ಕೀರ್ತಿಯು ತಮ್ಮದು ಇದೆ" ಎಂಬದಾಗಿ ಬರೆಸಿ ಕಳುಹಿಸಿಕೊಟ್ಟರು.

ಆ ಬಳಿಕ ಆಶ್ವೀಜ ಶು. ೧೪ರಲ್ಲು ಮಲೆವಾರಿ ಕಮಿಷನ್ ಸ್ಪೆನ್ಸರ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: "ಹಿಂದುಸ್ಥಾನದಲ್ಲು ಇರುವ ಇಂಗ್ರೇಜ ವಂಶದವರಿಗೆ ಸಹಾಯವಾಗಿ ತಾವು ನಡದ್ದಕ್ಕೆ, ತಮಗೆ ಸಂತೋಷ ಆಗುವ ಮೇರೆಗೆ, ಪ್ರತ್ಯುಪಕಾರವಾಗಿ ಸಂವತ್ಸರಕ್ಕೆ ತಾವು ಬಹುಮಾನವಾದ ಕುಂಪನಿಗೆ ಕೊಡುವಂಥಾ ಹಣಾ ಬಿಡಿಸಿಕೊಟ್ಟು, ತಮ್ಮ ಸ್ನೇಹ ಇರುವದಕ್ಕೆ ಅಡೆಯಾಳವಾಗಿ ಸಂವತ್ಸರದಲ್ಲಿ ಕೆಲವು ತೆಗೆದುಕೊಳ್ಳುವದು ಎಂಬದಾಗಿ ಬಹುಮಾನಪಟ್ಟ ಗವರ್ನರ್ ಕೌನ್ಸಿಲ್ ಸಾಹೇಬರವರು ಬರಸಿ ಕಳುಹಿಸಿ ಇರುವದು ಸರಿಯಷ್ಟೆ. ತಮ್ಮ ಬಳಿಯು ಇದ್ದ ಕೆಪ್ಟನ್ ಮಾವಿನಿ ಸಾಹೇಬರು ಆ ಸ್ಥಾನ ಬಿಟ್ಟು ಬರುವದಕ್ಕೆ ಮುಂಚೆ ತಮಗೆ ಸನ್ಮತವಾದ ಮೇರೆಗೆ ಸಂವತ್ಸರ ದಲ್ಲಿ ಕೊಡುವದು ನಿಶ್ಚಯ ಮಾಡುವದಕ್ಕೆ ಮಾವಿನಿ ಸಾಹೇಬರು ತಮ್ಮನ್ನ ಕಂಡು, ಮಾತನಾಡಿ, ನಿಶ್ಚಯ ಮಾಡಿಕೊಂಡಾರು" ಎಂಬದಾಗಿ, ಬರೆಸಿ ಕಳುಹಿಸಿ ಇದ್ದದ್ದರಿಂದಾ, ಈ ಬಗ್ಯೆ ಕೆಪ್ಟನ್ ಮಾವಿನಿ ಸಾಹೇಬರು ಬರದು ಕೊಟ್ಟ ಕರಾರುನಾಮೆ ವಿವರ: "ರೈಟ್ ಅನರಬಲ್ ಗವರ್ನರ್ ಜನರಲ್ ಸಾಹೇಬರು ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರಿಗೆ ಎಪ್ರಿಲ್ ತಿಂಗಳು ತಾರೀಕು ೩೦, ವರ್ಷ ೧೭೯೯ರಲ್ಲು ಒಂದು ಕಾಗದ ಬರದು ಇದ್ದರು. ಅದರಲ್ಲಿ ವರ್ಷವರ್ಷಕ್ಕೂ ದೊರೆಗಳವರು ಆನರಬಲ್ ಕುಂಪನಿಗೆ ಕೊಡುತ್ತಿದ್ದ ಖಂಡಣಿ ಹಣ ಮಾಫು ಕೊಡಬೇಕು. ಈ ಉದ್ದಿಶ್ಯ ದೊರೆಗ ಳವರು ಸುಮ್ಮನೆ ಸರಕಾರಕ್ಕೆ ವರ್ಷವರ್ಷಕ್ಕೆ ಒಂದು ನಿಶಾನಿ ಕೊಡಬೇಕು ಎಂತಾ ಬರದು ಇದ್ದರು. ಇದರಿಂದಾ ನಾವು ಮಲೆಯಾಳ ರಾಜ್ಯದಲ್ಲಿ ಇರುವ

ಸ್ಪೆನ್ಸರ್ ಸಾಹೇಬರವರು, ಮುಂಬಾಯಿ ಸರಕಾರದ ಅಪ್ಪಣೆಯಿಂದಲೂ ರೈಟ್ ಆನರಬಲ್ ಲಾರ್ಡ್ ಮಾರ್ನಿಂಗ್ಟನ್ ಸಾಹೇಬರವರ ಅಪ್ಪಣೆಯಿಂದಲೂ ನಾವು ಬರದುಕೊಟ್ಟದ್ದು ಒಂದು ನಿಶಾನಿ ಕೊಡಬೇಕು ಎಂತಾ ಮೇಲೆ ಬರದು ಇದೆಯಷ್ಟೆ. ಅದಕ್ಕೆ ಒಂದು ಆನೆ ಹಾಲೇರಿ ವೀರರಾಜೇಂದ್ರ ವಡೆಯರವರು ಮೆಹರ್ಬಾನಗಿ ಮಾಡಿ, ದೋಸ್ತಿಯಿಂದಾ ಕುಂಪನಿ ಸರಕಾರಕ್ಕೆ ಕೊಡ ಬೇಕೆಂಬದಾಗಿ, ನಮ್ಮ ಕೈಯಿಂದಾ ಬರದ ಕಾಗದ ಸರಕಾರದ ಮೊಹರ ಮಾಡಿ, ವೀರರಾಜೇಂದ್ರಪೇಟೆಯಲ್ಲಿ ಅಕ್ಟೋಬರ ತಿಂಗಳು ತಾರೀಕು ೧೬, ವರ್ಷ ೧೭೯೯ರಲ್ಲು ಬರದುಕೊಟ್ಟದ್ದು. ಇದೇ ಕರಾರು ಪ್ರಕಾರ ವರ್ಷಂಪ್ರತಿ ಯಲ್ಲು ಒಂದೊಂದು ಆನೆಯನ್ನು ಇಂಗ್ರೇಜ ಕುಂಪನಿ ಸರಕಾರಕ್ಕೆ ನಮ್ಮ ಅರಮನೆಯಿಂದಾ ಕೊಟ್ಟು ಬರುತ್ತೇವೆ ಎಂಬದಾಗಿ, ವೀರರಾಜೇಂದ್ರ ಒಡೆಯ ರವರು ಇಂಗ್ರೇಜ ಸರಕಾರಕ್ಕೆ ಕರಾರುನಾಮೆ ಬರೆಸಿ, ತಮ್ಮ ದಸ್ಕತು ಮೊಹರ ಮಾಡಿ, ಸದರಿ ಮಾವಿನಿ ಸಾಹೇಬರವರ ಕೈಯ ಕೊಟ್ಟರು.

ಆ ಬಳಿಕ ಮಾವಿನಿ ಸಾಹೇಬರು ಬರದುಕೊಟ್ಟ ಭಾಷಾಪತ್ರಿಕೆ ವಿವರ: "ಕೊಡಗಿನ ಸಂಸ್ಥಾನದ ಹಾಲೇರಿ ವೀರರಾಜೇಂದ್ರ ಒಡೆಯರವರಿಗೆ ವಕೀಲ್ ಕೆಪ್ಟನ್ ಮಾವಿನಿ ಸಾಹೇಬರು ಬರಕೊಟ್ಟ ಭಾಷಾಪತ್ರಿಕೆ: ಲಡಾಯಿ ಶುರು ಆಗುವಾಗ್ಯೆ ಲಡಾಯಿದ ಕೈಫಿಯತ್ತು ತಮಾಮು ಬರೆಯುವ ಬಗ್ಯೆ ನಾವು ವಕೀಲರಾಗಿ ದೊರೆಗಳ ಬಳಿಯು ಇದ್ದೆವು. ಈಗ ಗವರ್ನರ್ ಜನರಲ್ ಸಾಹೇಬರ ಅಪ್ಪಣೆ ಪ್ರಕಾರ, ನಾವು ದೊರೆಗಳ ಅಪ್ಪಣೆ ತೆಗೆದುಕೊಂಡು, ಕೊಡಗಿನ ರಾಜ್ಯದಿಂದಾ ಹೋಗುವಾಗ್ಯೆ, ಗವರ್ನರ್ ಸಾಹೇಬರ ಹುಕುಂ ಮೇರೆ ಬರಕೊಟ್ಟದ್ದು :

ಒಂದನೇ ಕಲಂ : ನಾವು ಈ ಲಡಾಯಿದ ಸಮಯದಲ್ಲಿ ದೊರೆಗಳ ಬಳಿಗೆ ಬಂದೆವಲ್ಲಾ. ಅಂದಿನಾರಭ್ಯ ನಾವು ದೊರೆಗಳ ಮನಸು ನೋಡಿದೆವು. ಕುಂಪನಿ ಲಷ್ಕರಿನ ಕೆಲಸ ಎಷ್ಟು ಮೆಹನತ್ತಿನದು ಬಂದಾಗ್ಯು, ತಾವು ತಮ್ಮ ಸೀಮೆ ಜನರ ಕೈಯಿಂದಾ ಸಹಾ, ದೊರೆಗಳು ಬಹಳ ಮೋಹ ಇಟ್ಟು ಕುಂಪನಿ ಕೆಲಸ ಬಹಳ ಮಾಡಿದರು.

ಎರಡನೇ ಕಲಂ : ದೊರೆಗಳು ಮೋದಿಖಾನೆಯಲ್ಲಿ ಅಕ್ಕಿ ಮುಂತಾಗಿ ಜಮಾಯಿಸಿ, ಮುಂಬಾಯಿ ಲಷ್ಕರಿನ ಕೆಲಸ ಯಾವತ್ತೂ ಬಂದುಬಸ್ತು ಮಾಡಿ

ಕೊಟ್ವು, ಇನ್ನು ನೀವು ಶ್ರೀರಂಗಪಟ್ಟಣಕ್ಕೆ ಲಡಾಯಕ್ಕೆ ಹೋಗಿ ಎಂತಾ ಹೇಳಿಕಳುಹಿಸಿದರು. ದೊರೆಗಳವರು ಈ ಪ್ರಕಾರ ಅಕ್ಕಿ ಮುಂತಾಗಿ ಬೇಕಾದ ಸಾಮಾನು ಜಮಾಯಿಸಿಕೊಟ್ಟು, ಬಂದುಬಸ್ತು ಮಾಡದಿದ್ದರೆ, ಇಷ್ಟು ಸಾಮಾನು ನಮ್ಮ ಲಷ್ಕರಿಗೆ ಸಿಕ್ಕುತ್ತಾ ಇತ್ತಿಲ್ಲಾ. ದೊರೆಗಳವರು ಇಷ್ಟು ಮೆಹರ್ಬಾನಗಿ ಮಾಡಿ ನಡಸದಿದ್ದರೆ, ಈ ಲಷ್ಕರು ಏನು ಆಗುತ್ತಿತ್ತೊ ತಿಳಿಯುಲಿಲ್ಲಾ.

ಮೂರನೇ ಕಲಂ : ದೊರೆಗಳವರು ತಮ್ಮ ಕಡೆ ಬಹಳ ಸಾವಿರ ಜನರನ್ನು ಲಷ್ಕರಿನ ಕೆಲಸಕ್ಕೆ ಕೊಟ್ಟರು. ಆ ಜನರು, ಬೇಗಾರಿ ಜನದ ಪ್ರಕಾರ, ದಂಡಿನ ಚಾಕ್ರಿ ಮಾಡಿದರು. ಆದಾಗ್ಯೂ ಅವಂದಿರ ಮಜೂರಿ ಒಂದು ಕಾಸಾದರೂ ತೆಗೆದುಕೊಳ್ಳಲಿಲ್ಲಾ. ಮೋರ್ಚೆ ಸಾಮಾನು ಪಟ್ಟಣಕ್ಕೆ ಸಾಗಬೇಕಲ್ಲಾ ಎಂದು ಸ್ವಲ್ಪ ಮಾತ್ರ ದೊರೆಗಳಿಗೆ ಹೇಳಿದರಿಂದಾ, ಆ ಕ್ಷಣ ಎರಡು ಸಾವಿರ ಜನವನ್ನು ಮೋರ್ಚೆ ಸಾಮಾನು ಹೊರುವ ಬಗ್ಯೆ ತಯಾರು ಮಾಡಿದರು. ಆ ಬಳಿಕ ಮೋರ್ಚೆ ಸಾಮಾನದಿಂದಾ ಈಗ ಜರೂರು ಇಲ್ಲಾ ಎಂತ ಹೇಳಿದೆವು.

ನಾಲ್ಕನೇ ಕಲಂ : ಮೇಲೆ ಬರದ ದಂಡಿನ ಕೆಲಸಕ್ಕೆ ಕುಂಪನಿ ಸರಕಾರಕ್ಕೆ ದೊರೆಗಳವರು ಮೂರುಸಾವಿರ ಎತ್ತನ್ನು, ಕೆಲಸಕ್ಕೆ ಆಗುವಂಥಾದ್ದನ್ನೆ ತಯಾರು ಮಾಡಿಕೊಟ್ಟರು. ಶ್ರೀರಂಗಪಟ್ಟಣಕ್ಕೆ ಬಂದ ದೊಡ್ಡ ಲಷ್ಕರಿಗೆ ಕೆಲಸ ಬಿದ್ದರೆ ಆದೀತೆಂಬದಾಗಿ, ನಾಲ್ವತ್ತುಸಾವಿರ ಭಟ್ಟಿ ಅಕ್ಕಿಯನ್ನು ಹೇರಿಸಿ ವೀರ ರಾಜೇಂದ್ರಪೇಟೆಯಲ್ಲಿ ದೊರೆಗಳ ಅಪ್ಪಣೆ ಪ್ರಕಾರ ನಮ್ಮ ವಶಕ್ಕೆ ಸಂತು. ಮತ್ತು ಆನೆ ಐದು, ಕುರಿ ಮೂರು ಸಾವಿರ, ಸರಕಾರಕ್ಕೆ ಸಂತು.

ಐದನೇ ಕಲಂ : ಮೇಲೆ ಬರದ ಪ್ರಕಾರ ದೊರೆಗಳವರು ಕುಂಪನಿ ಸರಕಾರಕ್ಕೆ ದಂಡಿನ ಕೆಲಸ ಉದ್ದಿಶ್ಯ ಕೊಟ್ಟಂಥಾದ್ದು, ಮಾಡಿದ ಮೆಹನತ್ತಿಗೆ ಸಹಾ, ಒಂದು ಕಾಸು ತೆಗೆದುಕೊಳ್ಳಲಿಲ್ಲಾ.

ಆರನೇ ಕಲಂ : ದೊರೆಗಳವರು ಮುಂಬಾಯಿ ಲಷ್ಕರಿಗೆ ಬೇಕಾದ ಮದತ್ತು ಮಾಡಿ, ಬಹಳ ಕೆಲಸ ಬಂದುಬಸ್ತು ಮಾಡಿಕೊಟ್ಟದ್ದರಿಂದಾ, ದಂಡಿನಲ್ಲಿ ಇದ್ದ ಯಾವತ್ತೂ ಸರದಾರರು ಮುಂತಾಗಿ ದೊರೆಗಳವರ ಮೇಲೆ ಬಹಳ ಖುಷಿ ಆದರು. ಈ ಮೇರೆ ನಾವು ವೀರರಾಜೇಂದ್ರಪೇಟೆಯಲ್ಲು ಬರಕೊಟ್ಟ ಕಾಗದಕ್ಕೆ ಆನರಬಲ್ ಕುಂಪನಿ ಸರಕಾರದ ಮೊಹರ ಹಾಕಿ, ನಮ್ಮ ಕೈ ಸ್ಯೆ

ಬರದುಕೊಟ್ಟು ಇದ್ದೇವೆ. ಅಕ್ಟೋಬರ ತಿಂಗಳು ತಾರೀಕು ೧೨, ವರ್ಷ ೧೭೭೯ರಲ್ಲು ಈ ಮೇರೆ ಕೊಡಗಿನ ದೊರೆಗಳವರ ಬಳಿಯು ಇದ್ದ ವಕೀಲ್ ದಿನಸ್ ಮಾವಿನಿ ಸಾಹೇಬರು ಬರದುಕೊಟ್ಟು, ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬ್ ಬಹಾದ್ದರವರ ಹುಕುಂ ಪ್ರಕಾರ ಮಾವಿನಿ ಸಾಹೇಬರು ಕಲಿ ಸಂದ ೪೯೦೧ನೇ ಸಿದ್ಧಾರ್ಥಿ ಸಂವತ್ಸರದ ಕಾರ್ತಿಕ ಮಾಸದಲ್ಲು, ಕೊಡಗಿನ ಮಹಾರಾಜರವರ ಸಂಗಡ ರುಕ್ಸತು ತೆಗೆದು ಕೊಂಡು ತಲಚೇರಿಗೆ ಹೋದರು.

ಆ ಬಳಿಕ ಕೆಲವು ದಿವಸದಮೇಲೆ, ಇದೇ ಸಿದ್ಧಾರ್ಥಿ ಸಂವತ್ಸರದಲ್ಲಿ, ಕೋಟೆ ಪೈಚಿ ಅರಸುಗಳ ಕಡೆ ಕಾರೆಕಾರ ಕೈದರಿಕೊಂಗು ಎಂಬವನು ತುಂಟ ನಾಗಿ ಕಾಡು ಸೇರಿಕೊಂಡು, ಬಹಳ ಜನರ ಪ್ರಾಣಹಿಂಸೆ ಮಾಡುತ್ತಾ ಇದ್ದದ್ದ ರಿಂದಾ, ಇಂಗ್ರೇಜ ಬಹಾದ್ದರ ಸರಕಾರದ ಸಿಪಾಯಿಗಳು ಹುಡುಕಿದಾಗ್ಯೂ, ಕೈಗೆ ಸಿಕ್ಕದೆ, ಅದೇ ಮೇರೆ ಕಾಡಲ್ಲಿ ತಿರುಗಿಕೊಂಡು ಇದ್ದಲ್ಲಿ, ಈ ವರ್ತಮಾನ ವೀರರಾಜೇಂದ್ರ ಒಡೆಯರವರು ಕೇಳಿ, ಕೈದರಿಕೊಂಗು ಈ ಮೇರೆ ತುಂಟನಾಗಿ ತಿರುಗುತ್ತಾನೆ. ಅವನು ನಮ್ಮ ಸೀಮೆ ಸರಹದ್ದಿನ ಒಳಗೆ ಬಂದದ್ದುಂಟಾದರೆ ಹಿಡಿದು ಕಳುಹಿಸಿ ಕೊಡುವುದು ಎಂಬದಾಗಿ, ಗಡಿ ಸರಹದ್ದಿನ ಪಹರೆಯವರಿಗೆ ಹುಕುಂ ಕೊಟ್ಟಿದ್ದರಿಂದಾ, ಅದೇ ಮೇರೆ ಆ ಪಹರೆಯವರು ಹುಡುಕುತ್ತಾ ಇದ್ದಲ್ಲಿ, ಒಂದು ದಿವಸ ಆ ತುಂಟನು ಸರಹದ್ದಿನ ಒಳಗೆ ಬಂದಲ್ಲಿ, ಅವನನ್ನು ಹಿಡಿದು, ರಾಜರ ಬಳಿಗೆ ಕಳುಹಿದ್ದರಿಂದಾ, ಅವನ ಕಾಲಿಗೆ ಬೇಡಿ ಹಾಕಿಸಿ, ಪಹರಾದಲ್ಲು ಮಡಗಿಸಿ, ಈ ವಿವರವನ್ನು ಕೆಪ್ಟನ್ ಮಾವಿನಿ ಸಾಹೇಬರಿಗೆ ರಾಜರು ಕಾಗದ ಬರಸಿ ಕಳುಹಿದಲ್ಲಿ, ಅವರು ಮಲೆವಾರಿ ಕಮಿಶನ್ ಸ್ಪೆನ್ಸರ್ ಸಾಹೇಬರವರಿಗೆ ಈ ವಿವರ ಯಾವತ್ತು ಜಾಹೇರ ಮಾಡಿದಲ್ಲಿ: "ಆ ತುಂಟ ನನ್ನು ಸಾಗಿಸಿಕೊಂಡು ಬರುವ ಬಗ್ಗೆ, ವಿಲ್ಕೀಸನ್ ಸಾಹೇಬರ ಕಡೆ ಶಿಪಾಯಿ ಗಳು ಬಂದಾರು. ಅವರ ತಾಬೆಗೆ ಆ ತುಂಟನ ಕೊಡಬೇಕು" ಎಂತಾ ಆ ಕಮಿಶನ್ ಸಾಹೇಬರು ಮಹಾರಾಜರಿಗೆ ಬರೆಸಿ ಕಳುಹಿಸಿ ಇದ್ದರು. ಅದೇ ಮೇರೆ ಅವನನ್ನು ಸಾಗಿಸಿಕೊಂಡು ಹೋಗುವ ಬಗ್ಯೆ ಆ ಶಿಪಾಯಿಗಳು ಬಂದದ ರಿಂದಾ, ಕೈದರಿಕೊಂಗನನ್ನು ಆ ಶಿಪಾಯಿಗಳ ವಶಕ್ಕೆ ಕೊಟ್ಟು ಕಳುಹಿದಲ್ಲಿ, "ಈ ಕುಳ ತಲಪಿತು" ಎಂಬದಾಗಿ ಪುಷ್ಯ ಶು. ೧೦ರಲ್ಲು ಆ ವಿಲ್ಕೀಸನ್

ಸಾಹೇಬರು ಬರೆದು ಕಳುಹಿಸಿಕೊಟ್ಟರು.

ಮಲೆವಾರಿ ಕಮಿಶನರಲ್ಲಿ ಪ್ರಧಾನರಾವ ಸ್ಪೆನ್ಸರ್ ಸಾಹೇಬರವರು ಬರದುಕೊಟ್ಟ ರಶೀತಿ ವಿವರ: "ಕೊಡಗಿನ ಸಂಸ್ಥಾನದ ಹಾಲೇರಿ ವೀರ ರಾಜೇಂದ್ರ ಒಡೆಯರವರಿಗೆ ಮಲೆಯಾಳದ ರಾಜ್ಯದ ಹಲವು ಕೆಲಸ ನಡಸುವ ದಕ್ಕಾಗಿಯೂ, ಸುಪರ್‌ವೈಜರ್ ಸ್ಥಾನ ಪರಿಪಾಲನೆ ಮಾಡುವದಕ್ಕಾಗಿಯೂ, ಬಂದಿರುವಂಥಾ ಕಮಿಶನರ ಒಳಗೆ ಪ್ರಧಾನರಾದ ಸ್ಪೆನ್ಸರ್ ಸಾಹೇಬರವರು ಬರದುಕೊಟ್ಟ ರಶೀತಿ. ಆದಾಗಿ, ಇಂಗ್ರೇಜ ಸರಕಾರದ ಲಷ್ಕರು ತೆಗದುಕೊಂಡು ಜನರಲ್‌ಸ್ಟೋಯರ್ಟ್ ಸಾಹೇಬರವರು ಟೀಪುಸುಲ್ತಾನರ ಸಂಗಡ ಲಡಾಯಕ್ಕೆ ಹೋಗುವಾಗ್ಯೆ, ತಾವು ಜಮಾಯಿಸಿಕೊಟ್ಟ ಅಕ್ಕಿಯಲ್ಲಿ ಕೆಪ್ಟನ್ ಮಾವಿನಿ ಸಾಹೇಬರ ಮುಖಾಂತರ ಕುಂಪನಿ ಸರಕಾರಕ್ಕೆ ಸಂದ ಅಕ್ಕಿ ಪಕ್ಕಾ ಸೇರು ಅರುವತ್ತಕ್ಕೆ ಭಟ್ಟಿ ಒಂದರಲ್ಲು, ಭಟ್ಟಿ ೪೦೭ ಸೇರು ೨೦ಕ್ಕೆ, ಮಾವಿನಿ ಸಾಹೇ ಬರು ಬರಕೊಟ್ಟ ರಶೀತಿ ನಾಲ್ಕು; ಇದಲ್ಲದೆ ಮಾವಿನಿ ಸಾಹೇಬರ ಕಡೆ ಹೆನ್ರಿ ಮುಖಾಂತರ ಕುಂಪನಿ ಸರಕಾರಕ್ಕೆ ಸಂದ ಅಕ್ಕಿ ಮೇಲೆ ಬರದ ಭಟ್ಟಿಯಲ್ಲು, ಭಟ್ಟಿ ನಾಲ್ವತ್ತ ಎರಡು ಸಾವಿರದ ಎಂಟುನೂರ ತೊಂಭತ್ತು ಭಟ್ಟಿಯೂ ಸೇರು ಐದಕ್ಕೆ ಹೆನ್ರಿ ಬರಕೊಟ್ಟ ರಶೀತಿ ಒಂದು; ಉಭಯ ರಶೀತಿ ಐದನ್ನು ಕಳು ಹಿಸಿ ಕೊಟ್ಟದ್ದರಿಂದಾ, ಆ ರಶೀತಿಯನ್ನು ಕುಂಪನಿ ಸರಕಾರದಲ್ಲು ನಾವು ಮಡಗಿಕೊಂಡು, ಅದರ ಬದಲಿಗೆ ಕುಂಪನಿ ಸರಕಾರದ ಮೊಹರುಮಾಡಿ ಬರ ಕೊಟ್ಟ ರಶೀತಿ ಒಂದಕ್ಕೆ ಮೇಲೆ ಬರದ ನಾಲ್ವತ್ತಮೂರು ಸಾವಿರದ ಇನ್ನೂರ ತೊಂಭತ್ತಏಳು ಭಟ್ಟಿಯೂ ಸೇರು ಇಪ್ಪತ್ತ್ಯೈದು ಸಂತು ಎಂಬದಾಗಿ, ರೌದ್ರಿ ಸಂವತ್ಸರದ ಜ್ಯೇಷ್ಠ ಶುದ್ಧ ೪ರಲ್ಲಿ, ಚಂದ್ರವಾರ ಬರೆಸಿ ಕಳುಹಿಸಿಕೊಟ್ಟರು.

ಇದಲ್ಲದೆ ಪಿಂಗಳ ಸಂವತ್ಸರದಲ್ಲಿ ಕೊಡಗಿನ ಸಂಸ್ಥಾನದಿಂದಾ ಸಿದ್ಧಲಿಂಗ ದೇವರು ಎಂಬವರು ಬಾಂದವಾಡಿಗೆ ಹೋಗಿ ಇದ್ದಲ್ಲಿ, ಸ್ವಾದೆ ಸಂಸ್ಥಾನದ ಸವಾಯಿ ಬಸವಲಿಂಗ ರಾಜರು ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರ ಕ್ಷೇಮ ಕುಶಲವನ್ನು ಕೇಳಿದರಿಂದಾ, ಯಾವತ್ತು ಸುಖಸಂತೋ ಷಾದಿಕ್ಷೇಮಸಮಾಚಾರವನ್ನು ಸವಿಸ್ತಾರವಾಗಿ ಹೇಳಿದಲ್ಲಿ, ಬಹಳ ಸಂತೋಷ ಪಟ್ಟುಕೊಂಡು, ಕೊಡಗಿನ ರಾಜರವರಿಗೂ ನಮಗೂ ಬಂಧುತ್ವ ಉಂಟು ಮಾಡಿಕೊಡಬೇಕು, ಎಂಬದಾಗಿ ಹೇಳಿಕೊಂಡಲ್ಲಿ, ಆ ವಿವರಕ್ಕೆ ಆ ಸಿದ್ಧಲಿಂಗ

ದೇವರು ಕೊಡಗಿನ ಮಹಾರಾಜರ ಹೆಸರಿಗೆ ಒಂದು ಕಾಗದವನ್ನು ಬರೆಸಿ ಕಳುಹಿಸಿ ಇದ್ದರು. ಅದರಲ್ಲಿ ಸ್ವಾದೆ ದೊರೆಗಳವರು ಹೇಳಿದಂಥಾ ವಿದ್ಯಮಾನ ಯಾವತ್ತು ಬರದರೆ, ಮಧ್ಯೆ ಟೀಪುಸುಲ್ತಾನರ ಸೀಮೆ ಆದ್ದರಿಂದಾ, ಕಾಗದ ದುಷ್ಟಾನರ ಕೈಗೆ ಸಿಕ್ಕೀತು ಎಂಬದರಿಂದಾ, ಸಂಸ್ಕೃತವಾಗಿ ಸಂಕ್ಷೇಪದಲ್ಲಿ ಅವರು ಬರದು ಇದ್ದಂಥಾ ವಿವರ: "ನಾವು ಅಲ್ಲಿಗೆ ಹೋದಲ್ಲಿ ಅವರು ನಮಗೆ ಹೇಳಿಕೊಂಡ ಪ್ರಸಂಗ: ನಮ್ಮನ್ನು ಅಲ್ಲಿಗೆ ಬರುವ ಹಾಗೆ ಯತ್ನ ಮಾಡುವದು. ಮಾನಪಾನ ನಡಸುವದು. ಬಂಧುತ್ವ ಅಗತ್ಯ ಸಂಪಾದಿಸುವದು. ತಮ್ಮ ಮಿತ್ರರೊಡನೆ ನಮಗೆ ಮಿತ್ರತ್ವ ಸಂಪಾದಿಸಿಕೊಡುವದು. ಈ ನಾಲ್ಕು ಮಾತು ಹೇಳಿ ಇದ್ದಾರೆ" ಎಂಬದಾಗಿ ಬರದು, ಉಳಿಕೆ ಮಾತು ಯಾವತ್ತು ಬಾಯಿಮಾತಿನಲ್ಲು ಹೇಳಿ, ತಮ್ಮ ಕಡೆ ಕಂಟ್ಲಿ ಬಸವಲಿಂಗೈಯ ಸಹಾ ಎರಡು ಜನ ಮರಿಗಳ ಕಳುಹಿಸಿ ಇದ್ದರು. ಸ್ವಾದೆ ಅರಸುಗಳವರು ಬರದ ಕಾಗದದಲ್ಲಿ: "ಸಿದ್ಧಲಿಂಗದೇವರು ಬಂದು ಇದ್ದರು. ಅವರು ಹೇಳಿದ ಅಭಿಪ್ರಾಯ ಯಾವತ್ತು ಕೇಳಿ ನಮ್ಮ ಮನಸ್ಸಿಗೆ ಬಹಳ ಸಂತೋಷವಾಯಿತು. ನಮ್ಮ ಮನಸ್ಸಿನಲ್ಲಿ ಇರುವ ವಿವರ ಯಾವತ್ತು ಅವರಿಗೆ ಹೇಳಿಕೊಂಡು ಇದ್ದೇವೆ. ಅವರ ಕಡೆಯಿಂದಾ ಸವಿಸ್ತಾರವಾಗಿ ತಮಗೆ ತಿಳಿಯಬಂದೀತು. ನಾವು ತಮ್ಮ ಬಂಧುಗಳಾಗುವಂಥಾ ದೃಷ್ಟಿ ಮಡಗಿ, ಅರ್ರೈಕೆಮಾಡುವ ಭಾರ ತಮಗೆ ಕೂಡಿ ಇದೆ" ಎಂತಾ ಬರದು ಕಳುಹಿಸಿ ಇದ್ದರು.

ಇವರ ತಂಗಿಯವರಾದ ಚೆನ್ನಮ್ಮಾಜಿಯವರು ಕೊಡಗಿನ ಮಹಾರಾಜರಿಗೆ ಬರದ ಕಾಗದದಲ್ಲಿ: "ತಮಗೆ ಕುಮಾರ್ತಿ ಉಂಟು ಎಂತಾ ಕೇಳಿ ಇದ್ದೇನೆ. ಆ ಕುಮಾರತಿಯರನ್ನು ನಮ್ಮ ಅಣ್ಣಾಜಿಯವರಾದ ಬಸವಲಿಂಗರಾಜರವರಿಗೆ ವಿವಾಹ ಮಾಡಿಕೊಟ್ಟು, ಬಂಧುತ್ವ ಬಳುಸುವಂಥಾ ಪ್ರೀತಿ ಮಡಗಿ, ನಾವು ಅಲ್ಲಿಗೆ ಬರುವಂತೆ ಅನುಕೂಲಾ ಮಾಡಿ, ತಮ್ಮ ಮಿತ್ರರ ಸಂಗಡ ಮಿತ್ರತ್ವವನ್ನು ಸಂಪಾದಿಸಿಕೊಟ್ಟು, ಇವರನ್ನ ಅರೈಕೆ ಮಾಡಬೇಕು" ಎಂಬದಾಗಿ ಬರದು ಕಳುಹಿಸಿ ಇದ್ದರು.

ಈ ಕಾಗದದ ಅಭಿಪ್ರಾಯಗಳು, ಆ ಸಿದ್ಧಲಿಂಗದೇವರ ಕಡೆ ಮರಿಗಳು ಹೇಳಿದ ಬಾಯಿಮಾತು ಸಹಾ ರಾಜರವರು ಕೇಳಿ, ಇದಕ್ಕೆ ಬದಲಾಗಿ ಸ್ವಾದೆ ದೊರೆಗಳವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: "ನೀವು ಬರೆಸಿ ಕಳುಹಿದ

ಕಾಗದದ ವಿವರ : ಸಿದ್ಧಲಿಂಗದೇವರು ಬರದಂಥಾ ಅಭಿಪ್ರಾಯ ಮುಂತಾಗಿ ತಿಳಿಯಬಂತು. ಈ ಬಗ್ಗೆ ಈಗ ಹೋಗಿಬರುವಂಥಾ ಮಾರ್ಗದಲ್ಲು ದುಷ್ಮಾನ ನಾದ ಟೀಪುಸುಲ್ತಾನರ ಸೀಮೆ ಆಗಿ ಇದೆ. ಇದಲ್ಲದೆ ತಾವು ಪರಾಯ ತಾಲೂಕು ಪೋರ್ಚುಗೀಸ್ ಆಶ್ರಯದಲ್ಲಿ ಇದ್ದೀರಿ. ನಾವು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ದೋಸ್ತಾರರಾಗಿ, ನಮ್ಮ ಸುಖದುಃಖ ಆ ಸರ ಕಾರಕ್ಕೆ ಕೂಡಿ ಇರುವ ಕಾರಣ, ನೀವು ಬರದ ನಿಮ್ಮ ಮನಸ್ಸಿನ ಅಭಿಪ್ರಾಯ ವನ್ನು ಆ ದೊಡ್ಡ ಸರಕಾರಕ್ಕೆ ನಾವು ತಿಳಿಸಿಯೇವು. ತಾವು ಜಾಹೇರು ಮಾಡುವದು. ಕಂಕಣ ಪ್ರಾಪ್ತಿ ಇದ್ದರೆ ಮಹಾದೇವನ ಅಪ್ಪಣೆಯಿಂದಾ ಆದೀತು ” ಎಂಬದಾಗಿ, ಅವಾಗ್ಯೆ ಜವಾಬು ಬರೆಸಿ ಕಳುಹಿಸಿಕೊಟ್ಟರು.

ಆ ಬಳಿಕ ಕಾಳಯುಕ್ತಿ ಸಂವತ್ಸರದಲ್ಲಿ, ಟೀಪುಸುಲ್ತಾನರ ಮೇಲೆ ಲಡಾಯಕ್ಕೆ ಹೋಗುವ ಬಗ್ಯೆ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಲಷ್ಕರು ಈ ಕೊಡಗಿನ ಸೀಮೆಗೆ ಬಂದು ಇದ್ದಲ್ಲಿ, ಸ್ವಾದೆ ರಾಜರು ಬರೆಸಿ ಕಳುಹಿದ ಕಾಗದದ ವಿವರ : “ ನಮ್ಮ ಮನೋಗತ ಅಭಿಪ್ರಾಯ ಮೊದಲೇ ಬರೆಸಿ ತಿಳೀಪಡಿಸಿದ್ದೇವೆ. ತಾವು ನಾವು ಪ್ರಾಕಾರಭ್ಯದಿಂದಾ ಸ್ವಕೀಯರಾಗಿ ಇರುವಂಥಾ ವಿಷಯದಲ್ಲಿ, ವಿಶೇಷವಾಗಿ ಬರೆಸಿ ತಿಳೀಪಡಿಸತಕ್ಕದ್ದು ಏನು ಇದೆ ? ನಮ್ಮ ಸಂಸ್ಥಾನದ ಹಿರಿಯವರ ಮೇಲೆ ದೃಷ್ಟಿ ಮಡಗಿ, ನಮ್ಮ ಕೈವಿಡಿದು, ಕೀರ್ತಿ ತಂದುಕೊಳ್ಳಬೇಕು. ನಮ್ಮ ಹಾಲುಹಕೀಕತ್ತನ್ನು ಜನರಲ್ ಸಾಹೇಬರವರಿಗೂ ಮುಂಬಾಯಿ ಗೌರ್ನರ್ ಸಾಹೇಬರಿಗೂ ಕಾಗದ ಬರೆಸಿ ಕಳುಹಿಸಿ ಇದ್ದೇವೆ. ಇದನ್ನು ಅವರಿಗೆ ತಲುಪಿಸಬೇಕು ” ಎಂಬ ವಿವರವಾಗಿ ಸಹಾ ಬರೆಸಿ ಕಳುಹಿಸಿ ಇದ್ದರು. ಈ ಕಾಗದವು ಲಷ್ಕರಿನ ಸಂಗಡ ಮಹಾರಾಜರು ಕರಡಿಗೋಡ ಮಾಳದಲ್ಲು ಇದ್ದಾಗ್ಯೆ, ಬಂದು ತಲಪಿತ್ತು.

ಅವಾಗ್ಯೆ ಆ ದಂಡಿಗೆ ಖಾವಂದರಾಗಿ ಇದ್ದ ಜನರಲ್ ಸ್ಟೋಯರ್ಟ್ ಸಾಹೇಬರಿಗೆ ಜನರಲ್ ಹಾಟ್ಲೆ ಸಾಹೇಬರಿಗೆ ಸಹಾ, ಸ್ವಾದೆ ರಾಜರು ಬರದ ಕಾಗದ ಮುಂಬಾಯಿ ಗವರ್ನರ್ ಸಾಹೇಬರಿಗೆ ಬರದ ಕಾಗದ ಸಹಾ ಕೊಟ್ಟು, ತಮಗೆ ಬರದ ಅಭಿಪ್ರಾಯವನ್ನು ಜನರಲ್ ಸಾಹೇಬರಿಗೆ ತಿಳಿಸಿದಲ್ಲಿ, ಅವರು ಹೇಳಿದ್ದು :

“ ಈ ವಿವಾಹದ ಶುಭಕಾರ್ಯ ಆಗುವಂಥಾದ್ದು ಇದೆ. ಇದರ ಮೇಲೆ

ಅವರಿಗೂ ತಮಗೂ ಪ್ರಾಕಾರಭ್ಯ ದೋಸ್ತಿ ಸಗ್ಗಾವತು ಉಂಟು. ಆದ್ದರಿಂದ ಶ್ರೀರಂಗಪಟ್ಟಣದ ಕಿಲ್ಲೆ ತೆಗೆದುಕೊಂಡಮೇಲೆ, ಈ ಶುಭಕಾರ್ಯ ಆಗಬೇಕು. ಇದು ಬಹಳ ಸಂತೋಷವಿದೆ" ಎಂಬದಾಗಿ ಹೇಳಿದರು.

ಆಗ ಕೊಡಗಿನ ರಾಜರು ಸ್ವಾದೆ ದೊರೆಗಳಿಗೆ ಬರದ ಕಾಗದದ ವಿವರ: "ನೀವು ಬರದ ಕಾಗದದ ವಿವರ ತಿಳಿಯಬಂತು. ಇಂಗ್ರೇಜ ಸರಕಾರಕ್ಕೆ ನೀವು ಬರದ ಕಾಗದವನ್ನು ಜನರಲ್ ಸಾಹೇಬರಿಗೆ ಕೊಟ್ಟು, ನಿಮ್ಮ ಮನೋ ಅಭಿಪ್ರಾಯ ಯಾವತ್ತೂ ತಿಳಿಯಪಡಿಸಿದಲ್ಲಿ, ಅವರು ಬಹಳ ಸಂತೋಷವಾಗಿ ಇದ್ದಾರೆ. ದುಷ್ಮಾನನು ದೂರವಾಗಿ ಹೋದ ಬಳಿಕ, ನಿಮ್ಮ ಮನಸ್ಸಿನ ಅಪೇಕ್ಷೆ ಇದ್ದ ಮೇರೆ, ನಾವು ಸಂತೋಷವಾಗಿ ಇದ್ದೇವೆ. ಶಿವನ ದಯದಿಂದಾ ಆದೀತು" ಎಂಬದಾಗಿ ಬರೆಸಿ ಉಡುಗರೆ ಮುಂತಾಗಿ ಕೊಟ್ಟು ಕಳುಹಿಸಿ ಕೊಟ್ಟರು.

ಆ ಬಳಿಕ: "ಟೀಪುಸುಲ್ತಾನರನ್ನು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದಿಂದಾ ನಿಗ್ರಹಿಸಿ, ಯಾವತ್ತೂ ಸೀಮೆಯು ಕುಂಪನಿ ಬಹಾದ್ದರ ಸರಕಾರದ ತಾಬೆ ಆಗಿ, ಏಕರಾಜ್ಯವಾದ್ದರಿಂದಾ, ನಮ್ಮನ್ನು ಅಲ್ಲಿಗೆ ಬರಮಾಡಿ ಕೊಂಡು, ವಿವಾಹಪ್ರಸ್ತ ಮಾಡಿಕೊಡಬೇಕು" ಎಂಬದಾಗಿ, ಸ್ವಾದೆ ಅರಸುಗಳ ಹೆಸರ ಕಾಗದ ಒಂದು, ಇವರ ತಂಗಿಯರಾದ ಚೆನ್ನಮ್ಮಾಜಿಯವರ ಹೆಸರ ಕಾಗದ ಒಂದು, ವಿವಾಹಪ್ರಸ್ತ ಆಗುವಂಥಾದ್ದಕ್ಕೆ ದಸ್ತೂರಿ ಮೇರೆ ವೀಳ್ಯ ಪ್ರಸ್ತಕ್ಕೆ ಬೇಕಾದ ಸಾಮಾನು, ಕಿಲ್ಲತ್ತು ಮುಂತಾಗಿ ಕಳುಹಿಸಿಕೊಟ್ಟು, ರಾಜ ನೀತಿ ಪ್ರಕಾರ ವೀಳ್ಯಪ್ರಸ್ತವನ್ನು ಮಾಡಿದರಿಂದಾ, ಕಲಿ ಸಂದ ೪೯೦೩ನೇ ದುರ್ಮತಿ ಸಂವತ್ಸರದ ಚೈತ್ರ ಶು. ೨ರಲ್ಲು ಬಂಗಾಳದ ಲಾರ್ಡ್ ಮಾರನಿಂಗ್ ಟನ್ ಸಾಹೇಬರವರಿಗೆ ವೀರರಾಜೇಂದ್ರ ಒಡೆಯರವರು ಬರೆಸಿ ಕಳುಹಿದ ಕಾಗದದಲ್ಲಿ: "ತಾವು ಸರದಾರರಿಗೆ ಸರದಾರರಾಗಿ ಇದ್ದೀರಿ. ಸಣ್ಣವರಿಗೆ ದೊಡ್ಡವರಿಗೆ ಯಾವತ್ತರಿಗೂ ಪರವರಸಿ ಮಾಡುವ ಬಗ್ಯೆ, ತಮ್ಮನ್ನು ಮಹಾ ದೇವನು ಹೈದಾ ಮಾಡಿ ಇದ್ದಾನೆ. ಆದ್ದರಿಂದಾ ಹಾಲುಹಕೀಕತ್ತು ಶ್ರುತ ಗೊಳಿಸುತ್ತಾ ಇದ್ದೇವೆ. ಮೊದಲು ಇಂಗ್ರೇಜ ಲಷ್ಕರಿನ ಸರದಾರರು ಶ್ರೀರಂಗ ಪಟ್ಟಣದ ಕಿಲ್ಲೆ ತೆಗೆದುಕೊಳ್ಳುವ ಬಗ್ಯೆ ಬಂದು ಸಿದ್ಧಾಪುರದ ಮೊಕ್ಕಾಮಿನಲ್ಲಿ ಕೂಡಿ ಇದ್ದರು. ಆ ಸಮಯದಲ್ಲಿ ಸ್ವಾದೆ ಸೀಮೆ ಅರಸುಗಳು ನಮ್ಮ ಮಗಳನ್ನು

ಅವರಿಗೆ ವಿವಾಹ ಮಾಡಿಕೊಡಬೇಕೆಂಬ ಅಭಿಪ್ರಾಯವಾಗಿ, ಕಾಗದಗಳ ಲಾರ್ಡ್ ಸಾಹೇಬರವರ ಕಿದ್ಮತ್ತಿಗೂ ಮುಂಬಾಯಿ ಗವರ್ನರ್ ಸಾಹೇಬರವರಿಗೂ, ಜನರಲ್ ಸ್ಟ್ವೇಯರ್ಟ್ ಸಾಹೇಬರವರಿಗೂ, ಮಲಿವಾರಿ ಕಮಿಶನ್ ಸಾಹೇಬರವರಿಗೂ, ಈ ದೋಸ್ತುದಾರರ ಹೆಸರಿಗೆ ಸಹಾ ಬರೆಸಿ ಕಳುಹಿಸಿದ್ದರು. ಸ್ನೇಹಮಾರ್ಗದಿಂದಾ ಜನರಲ್ ಸ್ಟ್ವೇಯರ್ಟ್ ಸಾಹೇಬ ಬಹದ್ದೂರವರು ಈ ಮಾತಾಗಿ, ಈ ವಿವಾಹದ ಶುಭಕಾರ್ಯ ಆಗುವಂಥಾದ್ದು ಇದೆ. ಇದರ ಮೇಲೆ ತಮಗೂ ಅವರಿಗೂ ಪ್ರಾಕಾರಭ್ಯದಿಂದಾ ದೋಸ್ತಿ ಸಗ್ಗಾವತು ಉಂಟು. ಆದ್ದರಿಂದಾ ಶ್ರೀರಂಗಪಟ್ಟಣದ ಕಿಲ್ಲೆ ತೆಗೆದುಕೊಂಡಮೇಲೆ, ಕುಂಪನಿ ಸರಕಾರದ ಎಲ್ಲಾ ದೋಸ್ತಾರರಿಗೂ ಸುಖ ಉಂಟಾಗುತ್ತದೆ. ಆಮೇಲೆ ಈ ವಿವಾಹದ ಶುಭಕಾರ್ಯ ನಿಶ್ಚಯಮಾಡಬೇಕೆಂಬದಾಗಿ ಫ್ರಮಾಯಿಸ್ತರು. ನಾವು ಕಬೂಲಾಗಿ ಕಿಲ್ಲತ್ತು ಉಡುಗರೆ ವಸ್ತು ಸುದಾ, ವೀಳ್ಯಪ್ರಸ್ತವು ಚನ್ನಾಗಿ, ದಸ್ತೂರಿ ಪ್ರಕಾರ, ಮಾಡಿ ಇದ್ದೇವೆ. ಈ ಕೈಫಿಯತ್ತು ಸಾಹೇಬರ ಸನ್ನಿಧಾನಕ್ಕೂ ಜಾಹೇರು ಮಾಡಬೇಕು ಎಂಬದಾಗಿ, ವಕೀಲ್ ಕೆಪ್ಟನ್ ಮಾವಿನಿ ಸಾಹೇಬರ ಸಂಗಡ ಹೇಳಿ ಇದ್ದೆವು. ಆ ಸಾಹೇಬರ ಮುಖವಚನದಿಂದಾ ಅಲ್ಬತ್ ತಮ್ಮ ಸನ್ನಿಧಾನಕ್ಕೆ ಜಾಹೇರು ಆಗಿ ಇದ್ದೀತು. ಈ ಒಳ್ಳೆ ಕಾಲದಲ್ಲಿ ತಾವು ಸರಫರಾಜಿ ಮಾಡಿ, ಶ್ರೀರಂಗಪಟ್ಟಣದ ಅರಸಿಗೆ ವಿವಾಹ ಮಾಡಿಸಿದ್ದು, ಆ ಖುಷಿ ವರ್ತಮಾನ ಈ ಯಾವತ್ತು ದುನಿಯಾದ ಜನರು ಕೇಳಿ ಇದ್ದಾರೆ. ಆ ಶುಭವರ್ತಮಾನ ಈ ದೋಸ್ತಾರರ ಕಿವಿಗೂ ಕೇಳಬಂತು. ಇದರಿಂದಾ ನಮ್ಮ ನಸ್ಸಿನ ಅಂತರಂಗದಲ್ಲಿ ಇದ್ದ ಮಾತು ಹೊರಗೆ ಬಂತು. ಈ ದೋಸ್ತಾರರು ಮೊದಲಿಂದಾ ಬಹುಮಾನವಾದ ಇಂಗ್ರೇಜ ಕುಂಪನಿ ಸರಕಾರದ ದೋಸ್ತಿ ಮಡಗಿ ಇದ್ದೇವೆ. ನಮ್ಮ ಸುಖದುಃಖ ಏನು ಇದ್ದಾಗ್ಯೂ, ತಮ್ಮ ಹೊರ್ತು ತೀರದು. ಸ್ವಾದೆ ಅರಸುಗಳಿಗೆ ನಿಶ್ಚಯ ಮಾಡಿ ಇರುವ ಈ ದೋಸ್ತಾರರ ಮಗುವಿಗೆ ಮಹಾದೇವನ ಕಟಾಕ್ಷದಿಂದಾ ದಿನದಿನಕ್ಕೆ ಪ್ರಾಯ ಹೆಚ್ಚಿ ಬರುತ್ತಾ ಇದೆ. ಇದಲ್ಲದೆ ವೀಳ್ಯಪ್ರಸ್ತ ಆದಮೇಲೆ, ಆ ಮದುವೆ ಮಾಡುವಂಥಾದ್ದು ಜರೂರು ಇದೆ. ಅದರ ಒಳಗೆ ಆಪ್ತರಾದವರ ಕಡೆಯಿಂದಾ ಏನಾದರೂ ತಾಮಸ ವಿಘ್ನ ಬಂದರೆ, ಆಮೇಲೆ ಈ ಭೂಮಿ ಮೇಲೆ ಇರುವ ಪರಿಯಂತರ ಮತ್ತೊಬ್ಬರಿಗೂ ಕಾಡುವದಕ್ಕೆ ಆಗದು. ಅದು ನಮ್ಮ ಜಾತಿ

ಒಳಗೆ ಬಹಳ ಹೀನಾಯುವದೆ. ಇದಲ್ಲದೆ ಸ್ವಾದೆ ಅರಸುಗಳು ಪರಾಯಿ ಪೋರ್ಚುಗೀಸ್ ತಾಲೂಕು ಗೋವೆ ಒಳಗೆ ಇರುತ್ತಾರೆ. ಪರಾಯಿ ತಾಲೂಕಿಗೆ ಕಾಗದಪತ್ರ ಬರೆಸಿ ಕಳುಹಿಸುವಂಥಾದ್ದು ದೋಸ್ತಾರರ ದಸ್ತೂರಿ ಇಲ್ಲಾ. ಅದುಕಾರಣ ತಮ್ಮ ಬಹುಮಾನವಾದ ಸನ್ನಿಧಿಗೆ ಜಾಹೀರು ಮಾಡುತ್ತಾ ಇದ್ದೇವೆ. ಆ ಸ್ವಾದೆ ಅರಸುಗಳಿಗೆ ಮೂರು ತಿಂಗಳಿಗೆ ವಾಯಿದೆ ಮಾಡಿ, ಈ ಕಡೆಗೆ ಕಳುಹಿಸಿಕೊಡುವ ಹಾಗೆ, ಗೋವೆ ಪೋರ್ಚುಗೀಸ್ ಖಾವಂದ ಗವರ್ನರ್‌ರವರ ಹೆಸರಿಗೆ ಒಂದು ತಾಕೀತಿ ಆದರೆ ಆ ಅರಸುಗಳು ಇಲ್ಲಿಗೆ ಬಂದು ತಲಪ್ಯಾರು. ದೋಸ್ತುದಾರರು ತಮ್ಮ ದವಲತ್ತಿನ ಬರ್ಕತ್ತಿನಿಂದಾ ಅವರ ಮದುವೆಪ್ರಸ್ತ ಆಗುಮಾಡಿ, ನಮ್ಮ ಮಗಳನ್ನು ಸ್ವಾದೆ ಅರಸುಗಳ ಸಂಗಡ ಕೂಡಿ, ಮೂರು ತಿಂಗಳಿನ ಗಡುಬಿದ ಒಳಗೆ ಪುನಹಾ ಗೋವೆಗೆ ರವಾನೆ ಮಾಡಬಹುದು. ತಮ್ಮ ಕಿದ್ಮತ್ತಿಗೆ ಈ ಧರ್ಮಕೀರ್ತಿ ಉಂಟಾದೀತು. ಇದಲ್ಲದೆ ವಿವಾಹ ಆದಮೇಲೆ, ಆ ಮಕ್ಕಳ ಕರ್ಚಿನ ಬಗ್ಯೆ ವಿಚಾರಿಸಿಕೊಳ್ಳುವಂಥಾದ್ದು ಜರೂರು ಇದೆ. ಈ ಬಗ್ಯೆ ಈ ದೋಸ್ತಾರರದು ನಗದು ಒಂದು ಲಕ್ಷ ರೂಪಾಯಿ ಮುಂಬಾಯಿ ಸರಕಾರದಲ್ಲು ಉಂಟು. ಅದರ ಬಡ್ಡಿ ವರ್ಷ ವರ್ಷಕ್ಕೂ ಆರು ಸಾವಿರ ರೂಪಾಯಿ ನಮಗೆ ಸಲುವಂಥಾದ್ದು ಉಂಟು. ಮೆಹರ್ಬಾನಗಿ ದೃಷ್ಟಿಯಿಂದಾ, ಆರೈಕೆ ಮಾಡಿ ನಡಸುವ ಬಗ್ಯೆ, ಆ ಬಡ್ಡಿ ಬಗೆ ಆರು ಸಾವಿರ ರೂಪಾಯಿ ಆ ಮಕ್ಕಳಿಗೆ ತಲಪಿಸುವಂತೆ ಮಾಡಿಸಬೇಕು. ಯಾವ ಬಗ್ಯೆ ಎಂದರೆ: ಮುಂಬಾಯಿಗೂ ಗೋವೆಗೂ ಸಮೀಪವಿದೆ; ಇದರಿಂದಾ ತಮ್ಮ ಬಹುಮಾನವಾದ ಸರಕಾರಕ್ಕೆ ಕೀರ್ತಿ, ನಮಗೆ ಖುಷಿ ಹಾಸಲಾದೀತು. ಈ ವಿವಾಹ ಆದ್ದರಿಂದಾ ಸದಾಕಾಲ ಸೂರ್ಯನ ಪ್ರಕಾಶದೋಪಾದಿ ತಮ್ಮ ದವಲತ್ತು ಅಭಿವೃದ್ಧಿ ಆಗಬೇಕೆಂಬದಾಗಿ, ಉಭಯ ಕಡೆಯುವರು ಮಹಾದೇವನಿಗೆ ಬೇಡಿಕೊಂಡೇವು. ಇದರ ಮುಂದೆ ತಮ್ಮ ಹುಕುಂ ಆದ ಹಾಗೆ" ಎಂಬದಾಗಿ ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬಾಗಿ ಬಂಗಾಳದ ಲಾರ್ಡ್ ಸಾಹೇಬರವರು ಬರೆಸಿ ಕಳುಹಿದ ಕಾಗದದ ವಿವರ: "ಸಂತೋಷದ ಕಾಗದದಲ್ಲಿ ತಮ್ಮ ಕುಮಾರತಿಯುನ್ನು ಸ್ವಾದೆ ಅರಸುಗಳಿಗೆ ವಿವಾಹ ಮಾಡಿ ಕೊಡುವ ಬಗ್ಯೆ ನಿಶ್ಚೈಸಿ, ವೀಳ್ಯಪ್ರಸ್ತ ಮಾಡಿ, ಜಲ್ದಿ ವಿವಾಹ ಮಾಡಬೇಕೆಂಬ ಅಪೇಕ್ಷೆ ಇಟ್ಟು, ಸ್ವಾದೆ ಅರಸುಗಳನ್ನು ಮದುವೆ ಆಗುವ ಬಗ್ಯೆ ತಮ್ಮ ಬಳಿಗೆ

ರವಾನೆ ಮಾಡುವ ಹಾಗೆ, ಗೋವೆ ಪೋರ್ಚುಗೀಸ್ ಗವರ್ನರ್ ಸಾಹೇಬರ ಹೆಸರಿಗೆ ನಮ್ಮ ಸರಕಾರದ ಕಾಗದ ಆಗಬೇಕೆಂತಲೂ, ಇದಲ್ಲದೆ ಮುಂಬಾಯಿ ಯಲ್ಲಿ ಇರುವ ತಮ್ಮ ಲಕ್ಷ ರೂಪಾಯಿಗೆ ಬಡ್ಡಿ ಆರು ಸಾವಿರ ರೂಪಾಯಿ ವರುಷಂಪ್ರತಿಯಲ್ಲಿ ತಮ್ಮ ಅಳಿಯನಿಗೂ ಮಗುವಿಗೂ ಕರ್ಚಿನ ಬಗ್ಯೆ ತಲಪುತ್ತಾ ಇರಬೇಕು ಎಂಬದಾಗಿ, ಮತ್ತು ಕೆಲವು ಅಪೇಕ್ಷೆಯಿಂದಾ ದೋಸ್ತಿ ಮೊಹಬತ್ತಿನಿಂದಾ ಬರದು ಇದ್ದ ಕಾಗದ ಬಂದು ತಲಪಿ, ಬರದ ವಿವರ ಖುಷಿ ಯಿಂದಾ ತಿಳಿಯುಬಂತು. ಸ್ನೇಹಮಾರ್ಗದಿಂದಾ ತಮ್ಮ ದೋಸ್ತಿ ನಾವು ಮಡಗುತ್ತೇವೆ. ತಮ್ಮ ಕಾರ್ಯ ನಡಸುವ ಬಗ್ಯೆ ಯಾವಾಗಲೂ ನಮ್ಮ ಮನಸ್ಸಿ ನಲ್ಲಿ ಖುಷಿ ಇದೆ. ಈಗ ಮನಸ್ಸಿಗೆ ಬಹಳ ಸಂತೋಷದಿಂದಾ ತಮ್ಮ ಇರಾದೆ ಪ್ರಕಾರ ಆ ಮಗುವನ್ನು ವಿವಾಹಮಾಡಿಕೊಡುವ ಬಗ್ಯೆ ಸ್ವಾದೆ ಅರಸುಗಳವರ ಆ ಕಡೆ ರವಾನೆಮಾಡುವ ಹಾಗೆ, ಗೋವೆ ಪೋರ್ಚಗಿಸ್‌ವಾಲಾ ಖದರ್ ಸಮುವಲ್ ಮರ್ತಬತ್ ಗವರ್ನರ್ ಸಾಹೇಬರಿಗೆ ಬರೆಸಿ ಇದ್ದೇವೆ. ಮತ್ತು ಬಡ್ಡಿ ಹಣವಿನ ಬಗ್ಯೆ ಮುಂಬಾಯಿ ಗವರ್ನರ್ ಅಮಿನುಲ್‌ಮುಲ್ಕ್ ಮುಮ್ತಾ ಜುದ್ವಲಾ ಜನಾಟನ್ ಡಾಂಕಿನ್ ಸಾಹೇಬ ಗಜನ್ ಫರಜನ್ ಬಹದ್ದೂರವರಿಗೆ ಬರದು ಇದ್ದೇವೆ. ತಮ್ಮ ಕಡೆ ಯಾರಾದರೂ ಒಬ್ಬನಿಗೆ ತಮ್ಮ ಹೆಸರಿನ ವಕಾಲತ್ತಿನ ಕಾಗದ ಸಹಾ ಮುಂಬಾಯಿಗೆ ಕಳುಹಿಸಿ, ಮೊಕರರು ಮಾಡಿ, ಆ ಬಡ್ಡಿ ಬಗ್ಯೆ ಹಣ ವರ್ಷಂಪ್ರತಿಯಲ್ಲಿ ಅವರಿಗೆ ಕೊಡಿಸಬೇಕು. ವಿವಾಹ ಪ್ರಸ್ತ ಆದಮೇಲೆ, ಆ ವರ್ತಮಾನ ತಿಳಿಸಿದರೆ, ನಮ್ಮ ಮನಸ್ಸಿಗೆ ಬಹಳ ಖುಷಿ ಆದೀತು" ಎಂಬದಾಗಿ ಬರೆಸಿ ಇದ್ದರು.

ಆ ಬಳಿಕ: "ಸ್ವಾದೆ ರಾಜರನ್ನು ವಿವಾಹಪ್ರಸ್ತಕ್ಕೆ ಕಳುಹಿಸಿಕೊಡ ಬೇಕು. ಅವರು ಬಹಳ ತಮ್ಮ ಸರಕಾರದ ಆಶ್ರಯದಲ್ಲಿ ರಕ್ಷಣ್ಯ ಆಗುತ್ತಾರೆ. ಆದ್ದರಿಂದಾ ಸಂತೋಷದ ವರ್ತಮಾನ ತಮಗೆ ತಿಳಿಸಿ ಇದ್ದೇವೆ" ಎಂಬ ವಿವರವಾಗಿ, ಗೋವೆ ಗವರ್ನರ್ ಸಾಹೇಬರಿಗೆ ಕಾಗದ ಒಂದು, ಇಂಗ್ರೇಜ ಸರದಾರರು ಕರ್ನಲ್ ಸರ್ ವಿಲಿಯಂ ಕ್ಲಾರ್ಕ್ ಸಾಹೇಬರಿಗೆ ಕಾಗದ ಒಂದು ಸಹಾ, ವೀರರಾಜೇಂದ ಒಡೆಯರವರು ಬರದು, ಸ್ವಾದೆ ದೊರೆಗಳನ್ನು ಕರ ತರುವ ಬಗ್ಗೆ, ರಾಜನೀತಿ ಪ್ರಕಾರ, ಬಹುಮಾನವಾಗಿ ತಮ್ಮ ಕಡೆ ಮನುಷ್ಯರ ಗೋವೆಗೆ ಕಳುಹಿಸಿಕೊಟ್ಟಲ್ಲಿ, ಸದರಿ ಸಾಹೇಬರು ಬಹಳ ಸಂತೋಷವಾಗಿ

ಮಹಾರಾಜರವರ ಕಡೆ ಜನಕ್ಕೆ ಮರಿಯಾದೆ ಆಗಿ ಖುಷಿ ಮಾಡಿ, ಸ್ವಾದೆ ರಾಜರವರನ್ನು ಬಹಳ ಖುಷಿಯಿಂದಾ, ಬಹುಮಾನ ಮಾರ್ಗದಿಂದಾ, ಕೊಡಗಿನ ಸಂಸ್ಥಾನಕ್ಕೆ ರವಾನೆ ಮಾಡಿ, ಕೊಡಗಿನ ರಾಜರಿಗೆ ಬದಲು ಜವಾಬನ್ನು ಬರೆಸಿ ಕಳುಹಿಸಿಕೊಟ್ಟರು.

ಸ್ವಾದೆ ಬಸವಲಿಂಗ ರಾಜರು ಬರುವಾಗ್ಯೆ, ಕೊಡಗಿನ ದೊರೆಗಳು ಇಂಗ್ರೇಜ ಸರಕಾರಕ್ಕೆ ಬರದು ಇದ್ದ ಮೇರೆ, ಕುಂಪನಿ ಸರಕಾರದ ಹುಕುಂ ಪ್ರಕಾರ, ಆಯಾ ತಾಲೂಕಿನ ಸೀಮೆ ಮಾರ್ಗದಲ್ಲಿ ಅಮಿಲ್ದಾರರು ಪಡಿ ಬಿಡಾರ ಮುಂತಾಗಿ ಮಾಡಿಸಿ, ಬೇಕಾದ ಸಾಮಾನು ಕೊಟ್ಟು ಕಳುಹಿಸಿದರು. ಈ ಸೋದೆ ಅರಸುಗಳು ಕಲಿ ಸಂದ ೪೯೦೩ನೇ ದುರ್ಮತಿ ಸಂವತ್ಸರದ ಪುಷ್ಯ ಶು. ೫ರಲ್ಲು ನಾಲ್ಕುನಾಡ ಅರಮನೆಗೆ ಬಂದಲ್ಲಿ, ವೀರರಾಜೇಂದ್ರ ಒಡೆಯರವರು ಬಹಳ ಖುಷಿಯಿಂದಾ ಅವರ ಮುಲಾಕತ್ತು ಆಗಿ, ಬೇರೆ ಬಿಡಾರಗಳ ಶೃಂಗಾರ ಮಾಡಿಸಿ, ಅಲ್ಲಿ ಇಳಿಸಿ, ಇದೇ ಪುಷ್ಯ ಶು. ೧೫ ದಿವಸಕ್ಕೆ ವಿವಾಹ ಲಗ್ನವನ್ನು ನಿಶ್ಚೈಸಿ, ಸಕಲ ಸೋಪಸ್ಕರವನ್ನು ಕೂಡಿಸಿ, ಬರುವಂಥಾ ಸರದಾರರಿಗೆ, ಮೇಲಾದ ಜನಕ್ಕೆ ಸಹಾ, ಪ್ರತ್ಯೇಕ ಬೀಡಾರಗಳನ್ನು ಮಾಡಿಸಿ, ಈ ವಿವಾಹ ಪ್ರಸ್ತದ ಬಗ್ಯೆ ಸರದಾರರ ಕಳುಹಬೇಕೆಂಬದಾಗಿ, ಜನರಲ್ ವೆಲ್ಲೆಸ್ಲಿ ಸಾಹೇಬರಿಗೂ, ಮಲೆವಾರಿ ಕಮಿಶನ್ ಸಾಹೇಬರಿಗೂ ಬರದು ಕಳುಹಿದಲ್ಲಿ, ಅದೇ ಮೇರೆ ಶ್ರೀರಂಗಪಟ್ಟಣದಿಂದಾ ಕೆಪ್ಟನ್ ತಾಮುಸ್ ಮಾರಿಟ್ ಸಾಹೇಬರ, ಮಲೆವಾರಿಯಿಂದಾ ಕೆಪ್ಟನ್ ಡೇವಿಡ್ ಪೌಲಸ್ ಸಾಹೇಬರ, ಕೆಪ್ಟನ್ ಆಸ್ಬ್ರಾನ್ ಸಾಹೇಬರ ಸಹಾ, ಈ ಮೂರು ಜನ ಸರದಾರರನ್ನು ಕಳುಹಿದರು.

ಅವರು ಬಂದಲ್ಲಿ ಮಾನ ಮರಿಯಾದೆಯಿಂದಾ ಮುಲಾಕತ್ತು ಆಗಿ, ಸಲಾಂ ಫಿರಂಗಿಗಳ ಹಾರಿಸಿ, ಅವರನ್ನು ಬಿಡಾರದಲ್ಲು ಇಳಿಸಿ, ಉಪಚಾರಗಳ ಮಾಡುತ್ತಾ, ಬಂದಂಥಾ ಸರ್ವೇ ಜನಕ್ಕೂ ಸಂತೈಸಿ, ವಿವಾಹಕ್ಕೆ ಇಂಗ್ರೇಜ ಸರದಾರರನ್ನು ಬರಮಾಡಿ, ಸಮಸ್ತರನ್ನು ಕರಸಿ, ಸಭೆ ನೆರಸಿ, ರಾಜನೀತಿ ಪ್ರಕಾರ ಕಲ್ಯಾಣ ಆಗುವಾಗ್ಯೆ, ವೀರರಾಜೇಂದ್ರ ಒಡೆಯರವರು : " ತಮ್ಮ ಕುಮಾರತಿ ಆದ ರಾಜಮ್ಮಾಜಿಯವರನ್ನು ನಿಮಗೆ ವಿವಾಹ ಮಾಡಿಕೊಡುತ್ತೇವೆ. ಇವರ ಗರ್ಭದಲ್ಲಿ ಜನಿಸಿದಂಥಾ ಕುಮಾರರಿಗೆ ನಿಮ್ಮ ದವಲತ್ತಿಗೆ ಬಾಧ್ಯರ ಮಾಡಿ ಮಡಗಬೇಕು " ಎಂತಾ, ಸ್ವಾದೆ ಸಂಸ್ಥಾನದ ಬಸವ

ಲಿಂಗರಾಜರಿಗೆ ಹೇಳಿದಲ್ಲಿ, ಅವರು ಪಡಂಬಟ್ಟು, "ಈ ನಮ್ಮ ರಾಣಿ ಆಗುವಂಥಾ ತಮ್ಮ ಕುಮಾರತೀರ ಗರ್ಭದಲ್ಲಿ ಮಹಾದೇವನ ಕಟಾಕ್ಷದಿಂದಾ ಕುಮಾರರು ಜನಿಸಿದರೆ, ನಮ್ಮ ದವಲತ್ತಿಗೆ ಬಾಧ್ಯರಾದಾರು" ಎಂಬದಾಗಿ ಹೇಳಿದ್ದರಿಂದಾ, ಕೊಡಗಿನ ಮಹಾರಾಜರು ಮಹಾಸಂತೋಷ, ವಿಭವ, ಉತ್ಸಾಹದಿಂದಾ ಸಮಸ್ತ ಜನರ ಮುಂತಿಟ್ಟು, ಇಂಗ್ರೇಜ ಸರಕಾರದ ಸರದಾರ ಸಾಹೇಬರ ಶಾಯಿದಿಯಿಂದಾ ವೀರರಾಜೇಂದ್ರ ಒಡೆಯರವರು ತಮ್ಮ ಕುಮಾರತಿ ರಾಜಮ್ಮಾಜಿಯವರನ್ನು ಕಲಿ ಸಂದ ೪೯೦೩ನೇ ದುರ್ಮತಿ ಸಂವತ್ಸರದ ಪುಷ್ಯ, ಶು. ೧೫ರಲ್ಲು ಚಂದ್ರವಾರ, ಶುಭಮುಹೂರ್ತದಲ್ಲಿ ರಾತ್ರೆ ಘಳಿಗೆ ಹತ್ತೊಂಬತ್ತಕ್ಕೆ ವೃಶ್ಚಿಕ ಲಗ್ನದಲ್ಲಿ ಬಹಳ ವೇದೋಕ್ತಿಯಿಂದಾ ಬಸವಲಿಂಗ ರಾಜರಿಗೆ ಧಾರೆಯನೆರೆದು ವಿವಾಹ ಮಾಡಿಕೊಟ್ಟರು.

ಈ ಕಲ್ಯಾಣ ಮಹೋತ್ಸವ ಒಂಬತ್ತು ದಿವಸ ಪರಿಯಂತರ ಬಹಳ ಸಂಭ್ರಮದಿಂದಾ ಶಾಸ್ತ್ರ ಪ್ರಕಾರ ಮಾಡಿ, ಮಹಾಸಂತೋಷದಲ್ಲಿ ಇರುತ್ತಾ ಇರಲಾಗಿ, ಈ ಮಹೋತ್ಸವವಾದ ಸಮ್ಮಂಧ ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರನಿಂಗ್‌ಟನ್ ಸಾಹೇಬ್ ಬಹದ್ದೂರವರಿಗೆ ದುರ್ಮತಿ ಸಂವತ್ಸರ ಮಾಘ ಶು. ೧೩ರಲ್ಲು ಕೊಡಗಿನ ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ, ತಮ್ಮ ಹುಕುಂ ಪ್ರಕಾರ ಸ್ವಾದೆ ಅರಸುಗಳು ಇಲ್ಲಿಗೆ ಬಂದಮೇಲೆ, ಪುಷ್ಯ ಶು. ೧೫ ದಿವಸ ಅವರಿಗೆ, ನಮ್ಮ ಮಗಳನ್ನು ಮದುವೆಪ್ರಸ್ತ ಶುರುಮಾಡಿ, ತಮ್ಮ ಆಶ್ರೈಕೆಯಿಂದಾ ನಾವು ಸೀಮೆ ಭೂಮಿ, ಬೊಕ್ಕಸ ಭಂಡಾರದಿಂದಾ ಸುಖದಲ್ಲಿ ಇರುವ ಕಾರಣ, ಈ ಮದುವೆಪ್ರಸ್ತವನ್ನು ಮೊದಲಿನ ಅರಸುಗಳು ಮಾಡುವದಕ್ಕಿಂತಲೂ ಅತಿಶಯವಾಗಿ ಶ್ರೀರಂಗಪಟ್ಟಣದಲ್ಲು ಇರುವ ಕೆಪ್ಟನ್ ಮಾರಿಟ್ ಸಾಹೇಬರು, ಕಣ್ಣೂರಲ್ಲು ಇರುವ ಕೆಪ್ಟನ್ ದೇವಿಡ್ ಪೌಲಸ್ ಸಾಹೇಬರು, ಕೆಪ್ಟನ್ ಆಸ್ಟ್ರಾನ್ ಸಾಹೇಬರು, ನಾವು ಸಹಾ ಕೂಡಿ ಬಹಳ ಖುಷಿಯಿಂದಾ ಈ ಪುಷ್ಯ ಬ. ೯ ದಿವಸ ಈ ಮದುವೆಪ್ರಸ್ತ ಆಖೈರು ಮಾಡಿಕೊಟ್ಟು ಇದ್ದೇವೆ. ಈ ಮಗುವಿಗೂ, ಅವರ ಪತಿಗಳಿಗೂ ಮಾನಬಹುಮಾನದಿಂದಾ ಕಾಪಾಡುವಂಥಾದ್ದು ತಮ್ಮ ದವಲತ್ತಿನ ಪದರಿಗೆ ಕೂಡಿ ಇದೆ. ಕೊಡಗಿನ ಸೀಮೆಯಿಂದಾ ಗೋವೆ ಸೀಮೆಗೆ ಎಷ್ಟು ದೂರ ಇದ್ದೀತು ಎಂಬದು ತಮ್ಮ ಮನಸ್ಸಿಗೆ ತಿಳಿದು ಇದ್ದೀತು. ಇದಲ್ಲದೆ ಸ್ವಾದೆ ಅರಸುಗಳು ಇರುವಂಥಾದ್ದು

ಪರಾಯಿ ಪೋರ್ಚುಗೀಸರ ಸೀಮೆ; ಎರಡನೇದು: ಗೋವೆಗೂ ಇಲ್ಲಿಗೂ ಬಹಳ ದೂರ. ಮೂರನೇದು: ಸ್ವಾದೆ ಅರಸುಗಳು ಸಕಲ ವಿಷಯದಲ್ಲು ಲಾಚಾರಾಗಿ ಇದ್ದಾರೆ. ಈ ಮೂರು ವಿವರವನ್ನು ನಾವು ಮೊದಲೇ ತಿಳಿದು ಇದ್ದೆವು. ಆದಾಗ್ಯೂ ಇದನ್ನು ನಾವು ಮನಸ್ಸಿನಲ್ಲಿ ತರಲಿಲ್ಲಾ. ಯಾತರಿಂದಾ ಎಂದರೆ: ಗೋವೆ ಸೀಮೆ ಸರದಾರರು ಯಾವತ್ತೂ ಮನೋಭಾವದಿಂದಾ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಹುಕುಂ ಪ್ರಕಾರ ನಡದುಕೊಳ್ಳುತ್ತಾರೆ. ಆದ್ದರಿಂದ ಗೋವೆ ರಾಜ್ಯಕ್ಕೂ ಇಂಗ್ರೇಜ ಕುಂಪನಿ ಸರಕಾರದ ರಾಜ್ಯಕ್ಕೂ ಭೇದವಿಲ್ಲದೆ, ಏಕೀಕರವಾಗಿ ಇದೆ. ಇದರಿಂದಾ ತಮ್ಮ ಹುಕುಂ ಪ್ರಕಾರ ಈ ವಿವಾಹವನ್ನು ಮಾಡಿಕೊಟ್ಟು ಇದ್ದೇವೆ. ಈ ಸ್ವಾದೆ ಅರಸುಗಳ ಗುಜರಾನದ ಕಷ್ಟ ತಮಗೆ ತಿಳುದು ಇರುವಲ್ಲಿ, ನಾವು ತಿಳೀಪಡಿಸಬೇಕೆಂಬುದು ಏನು ಇದೆ. ಈವರಿಗೆ ನಮ್ಮ ಮೇಲೆ ಕೃಪಾದೃಷ್ಟಿ ಇಟ್ಟು ನಡಸಿದಂಥಾದ್ದು ಯಾವತ್ತು ಅವರ ಮೇಲೆ ಮಡಗಿ, ಅವರಿಗೂ ತಮ್ಮ ಸಂಕಾಂದ ಕಿರಿ ಮಕ್ಕಳ ಒಳಗೆ ಕಂಡು, ಜಗತ್ತ್ಯದಲ್ಲಿ ಮಾನಾಭಿವೃದ್ಧಿ ಪಡಿಸುವಂಥಾ ಕವಾಟವನ್ನು ಈ ಲಾಚಾರಿ ಆಗಿ ಇರುವಂಥಾ ಇವರ ಮುಖದ ಮೇಲೆ ಪ್ರಕಟಿಸಿ, ಪರಿಪಾಲನೆ ಮಾಡಬೇಕು. ಈ ಮದುವೆ ಸಮ್ಮಂಧ ಕಿಲ್ಲತ್ತನ್ನು ಕಳುಹಿಸಿ ಇದ್ದೇವೆ. ಇವನ್ನು ಮೆಹರ್ಬಾನಗಿಯಿಂದಾ ಕಬೂಲ ಮಾಡಬೇಕು" ಎಂಬದಾಗಿ ಬರಸಿ ಕಳುಹಿಸಿದರು.

ಆ ಬಳಿಕ ಸ್ವಾದೆ ದೊರೆಗಳವರು ಮೂರು ತಿಂಗಳು ಇದ್ದು ಈಗ ಗೋವೆಗೆ ಹೋಗಿ, ಮಳೆಗಾಲ ದಾಟದ ಮೇಲೆ ಬರುತ್ತೇವೆ, ಎಂಬದಾಗಿ ಮಹಾರಾಜರವರ ಸಂಗಡ ಹೇಳಿಕೊಂಡು, ಕಲಿ ಸಂದ ೪೯೦೪ನೇ ದುಂದುಭಿ ಸಂವತ್ಸರದ ವೈಶಾಖ ಶು. ೭ರಲ್ಲು, ಗುರುವಾರ ದಿವಸ, ಪಯಣವಾಗಿ ಗೋವೆ ತಾಲೂಕಿನ ಬಾಂದವಾಡಿಗೆ ಹೋದರು.

ಆ ಬಳಿಕ ವೈಶಾಖದಲ್ಲು ಬಂಗಾಳದ ಲಾರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ ಬಹದ್ದೂರವರಿಗೆ ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ: "ಸ್ವಾದೆ ದೊರೆಗಳು ಮಳೆಗಾಲ ಕಳುದುಕೊಂಡು ಬರುತ್ತೇನೆಂಬದಾಗಿ ಹೇಳಿಕೊಂಡು ಹೋಗಿ ಇದ್ದಾರೆ. ನಮ್ಮ ಅಪೇಕ್ಷೆ ಏನು ಎಂದರೆ: ಈ ಮಕ್ಕಳು ಇಲ್ಲಿಗೆ ಬರುತ್ತಾ ಹೋಗುತ್ತಾ ಇದ್ದರೆ, ಅವರ ಮನಸ್ಸಿಗೂ ಖುಷಿ ಆಗಿ ಇರುತ್ತಾ

ಅವರನ್ನು ನಮ್ಮ ಕಣ್ಣಿಂದಾ ನೋಡಿದರೆ, ನಮಗೂ ಖುಷಿ ಆಗುತ್ತಾ ಇದೆ. ಈ ದುನಿಯಾ ಮೇಲೆ ಇದು ಬಹಳ ದೊಡ್ಡದು ಇದೆ. ಆದ್ದರಿಂದಾ ವರುಷಕ್ಕೆ ಎಂಟು ತಿಂಗಳು ಮಳೆಗಾಲ ಮೊಕರರು ಇದೆ. ಆ ಬಳಿಕ ನಾಲ್ಕು ತಿಂಗಳು ಬೇಸಿಗೆ ದಿವಸದಲ್ಲಿ ಸ್ವಾದೆ ಅರಸುಗಳಿಗೂ, ನಮ್ಮ ಕುಮಾರತಿಗೂ ಸಹಾ ಆಬ್ರುಯಿಂದಾ, ಏನಾದರೂ ಸಂಶಯದಿಂದಾ ತಾಮಸ ಮಾಡದೆ, ಇಲ್ಲಿಗೆ ಕಳುಹಿಸುತ್ತಾ ಇರುವ ಹಾಗೆ, ತಮ್ಮ ಹಜೂರಿಂದಾ ಗೋವೆ ಪೋರ್ಚುಗೀಸ್ ಗವರ್ನರ್ ಸಾಹೇಬರ ಹೆಸರಿಗೆ ಒಂದು ತಾಕೀತಿ ಇನಾಯತ ಮಾಡಿಸಬೇಕು. ಆ ಮಕ್ಕಳು ಇಲ್ಲಿಗೆ ಬಂದಮೇಲೆ ನಾವು ನೋಡಿ, ಸಂತೋಷ ಮಾಡಿಕೊಂಡು ಬೇಸಿಗೆ ನಾಲ್ಕು ತಿಂಗಳು ಇರಿಸಿಕೊಂಡು, ಮಳೆಗಾಲ ಶುರು ಆಗುವ ಸಮಯ ದಲ್ಲಿ ಪುನಹಾ ಗೋವೆಗೆ ಕಳುಹಿಸಿಕೊಟ್ಟೇವು. ಈ ಬಗ್ಯೆ ಗೋವೆಯಿಂದಾ ಇಲ್ಲಿಗೆ ಬರುವ ದರಿಯಾ ಮಾರ್ಗದಲ್ಲಿ ಆಗಲಿ, ಕರೆ ಮಾರ್ಗದಲ್ಲಿ ಆಗಲಿ, ವರ್ಷವರ್ಷಕ್ಕೂ ಒಂದಂತ್ರ ಸ್ವಾದೆ ಅರಸುಗಳು ಗೋವೆ ಸೀಮೆಯಿಂದಾ ಕೊಡಗಿನ ಸೀಮೆಗೆ ಬರುವಾಗ್ಯೆ, ಹೋಗುವಾಗ್ಯೆ, ಇಳುದು ಇಳುದಲ್ಲಿ, ಮಜೂರಿ ಆಳುಗಳು ಅವರಿಗೆ ಬೇಕಾದ ಜೀನಸು ಸಹಾ, ವಾಜಬಿ ಮೇರೆ ಉಂಟಾದ ಮಜೂರಿ ಜೀನಸಿನ ಕ್ರಯ ಸಹಾ ತೆಗೆದುಕೊಂಡು, ಅವರಿಗೆ ಕೊಡಿಸ ಬೇಕೆಂಬದಾಗಿಯೂ, ಈ ಮಕ್ಕಳ ನಿಗಾವಾನಿ ಕುಮಕಿನ ಬಗ್ಯೆ, ಅವರ ಮನೆಗೆ ತಲಪುವ ಪರಿಯಂತರ ಅವರ ಸಂಗಡ ಇರುವ ಬಗ್ಯೆ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಆರು ಜನ ಶಿಪಾಯಿಗಳು, ಒಬ್ಬ ನಾಯಕನ ಸಹಾ, ತಾಲೂಕು ತಾಲೂಕಿನಲ್ಲಿ ಬದಲಿ ಆಗಿ, ಮಕ್ಕಳ ಸಂಗಡ ಕೂಡಿಸಿ ಕೊಡುವ ಹಾಗೆ ಸಹಾ, ಗೋವೆಯಿಂದಾ ಇಲ್ಲಿಗೆ ಬರುವ ದರಿಯಾ ಮಾರ್ಗ ಕರೆ ಮಾರ್ಗ ದಲ್ಲಿ ಸಹಾ, ಇಂಗ್ರೇಜ ಸರಕಾರದ ಇಲಾಖೆ ಸೀಮೆ ಅಮಲುದಾರ ಕಾರ್ಖೂನ ರಿಗೆ ಸಹಾ ಒಂದು ತಾಕೀತಿ ಇನಾಯತ ಮಾಡಿಸಬೇಕು. ಈ ಎರಡು ತಾಕೀತಿ ಸದರಿ ಬರದ ಮೇರೆ ಮೆಹರ್ಬಾನಗಿ ಮಾಡಿಸಬೇಕು. ನಾವು ಆ ಮಕ್ಕಳು ಸಹಾ, ಈ ದುನಿಯಾಮೇಲೆ ಇರುವ ಪರಿಯಂತರ ಈ ಬಂದುಬಸ್ತು ನಡದು, ಆ ಮಕ್ಕಳು ವರ್ಷಂಪ್ರತಿ ವಂದಂತ್ರ ಗೋವೆಯಿಂದಾ ಇಲ್ಲಿಗೆ ಬರುವದು ಕಾಯಂ ಇರ ಬೇಕು. ಈ ಉಪಕಾರ ಎಂಪೆಂದಿಗೂ ಮರೆಯಲಿಕ್ಕೆ ಇಲ್ಲಾ" ಎಂಬದಾಗಿ ಬರೆಸಿ ಕಳುಹಿದರು.

ಆ ಬಳಿಕ ದುಂದುಭಿ ಸಂವತ್ಸರದ ಶ್ರಾವಣ ಶು. ೬ರಲ್ಲು ಬಂಗಾಳದ ಗವರ್ನರ್ ಜನರಲ್ ಲಾರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: "ದೋಸ್ತಿಯಿಂದಾ ಕಳುಹಿದ ಕಾಗದ ಎರಡು, ಆದರಲ್ಲಿ ಒಂದು ಕಾಗದದಲ್ಲಿ ತಮ್ಮ ಕುಮಾರತಿಯರನ್ನು ಪುಷ್ಯ ಶು. ೧೫ ದಿವಸ ಮದುವೆ ಪ್ರಾರಂಭವಾಗಿ, ಈ ಬ. ೯ ವರೆಗೆ ಪ್ರಸ್ತವು ಬಹಳ ಚನ್ನಾಗಿ ಆಯಿತು. ಈ ಮಧ್ಯೆ ನಮ್ಮ ಸರಕಾರದ ಕಡೆಯಿಂದಾ ಮದುವೆಪ್ರಸ್ತದಲ್ಲು ಮೆಹರ್ಬಾನಗಿ ಮಾಡಿಸಿದ್ದು ತಮ್ಮನಸ್ಸಿನಲ್ಲು ಇಟ್ಟು ಶ್ರೇಯಸ್ಸು ಹಾರೈಸುತ್ತೇವೆ" ಎಂಬದಾಗಿಯೂ, ಎರಡನೇ ಕಾಗದದಲ್ಲಿ: ಸ್ವಾದೆ ರಾಜರನ್ನು ಅವರ ಮನೆಗೆ ಕಳುಹಿಸುವ ಬಗ್ಯೂ, ಪುನಶ್ಚ ಅವರು ಕೊಡಗಿನ ಸೀಮೆಗೆ ಬರುವ ಬಗ್ಯೂ, ನಮ್ಮ ಅಪ್ಪಣೆಕಾಗದಕ್ಕೆ ಅಪೇಕ್ಷಿಸಿ ಇದ್ದೀರಿ. ಇದೇ ಕಾಗದದಲ್ಲಿ ಉಳಿಕೆ ವಿವರ ದೋಸ್ತಿಯಿಂದಾ ಬರದು ಇದ್ದೀರಿ. ಅದು ತಲಪಿತು. ಅದರ ವಿವರ ಯಾವತ್ತು ಸಂತೋಷದಿಂದಾ ತಿಳಿಯಬಂತು. ಆ ಮದುವೆ ಆದ ಒಳ್ಳೇ ಶುಭ ಸುದ್ದಿ ಕೇಳಿದಲ್ಲಿ, ಬಹಳ ಸಂತೋಷವಾಯಿತು. ಮಹಾದೇವನು ಈ ಸಂತೋಷವನ್ನು ತಮಗೆ ಶಾಶ್ವತವಾಗಿ ದಯವಿಡಲಿ. ತಾವು ನಿಶ್ಚಯವಾಗಿ ತಿಳಿಯಬೇಕು, ಏನು ಎಂದರೆ, ನಾವು ಸದಾ ತಮಗೆ ಸುಖ, ಕ್ಷೇಮ, ಆರೋಗ್ಯವು ಆಗಬೇಕೆಂಬುದು ಹಾರೈಸುತ್ತಾ ಇದ್ದೇವೆ. ಮೊದಲಿಗಿಂತಲೂ ಇಂಗ್ರೇಜ ಬಹಾದ್ದರ ಸರಕಾರಕ್ಕೆ ಒಳ್ಳೇದು ಮಾಡಿಸಿದಂಥಾದ್ದು ಈ ಕಾಗದದಲ್ಲು ಬರದು ಇತ್ತು. ಈ ಮಾತು ಯಾವತ್ತು ತಾವು ಮಾಡಿದ್ದು ನಿಜವೇ ಸರಿ; ನಾವು ನಿಶ್ಚಯವಾಗಿ ತಿಳಿದು ಇದ್ದೇವೆ. ಈ ಮಾತಿಗೆ ನಾವು ಬಹಳ ರಜಾವಂದಿಯಿಂದಾ ಖುಷಿ ಇದ್ದೇವೆ. ನಾವು ಬಹಳ ಸಂತೋಷದಿಂದಾ ಈ ಮಾತು ತಿಳಿದು ಇದ್ದೇವೆ; ಅದು ಏನಂದರೆ: ಟೀಪುಸುಲ್ತಾನರ ಸಂಗಡ ಲಡಾಯಿ ಶುರು ಆಗುವ ಮೊದಲಾರಭ್ಯದಿಂದಾ, ತಾವು ನಮ್ಮ ಸರಕಾರಕ್ಕೆ ದವಲತ್ತು ಆಗಬೇಕೆಂತಲೂ, ಒಳ್ಳೇದು ಆಗಬೇಕೆಂತಲೂ, ನಮ್ಮ ಸರಕಾರಕ್ಕೆ ದೋಸ್ತಿಯಿಂದಾ ಏನೊಂದು ಮಾಡಿದ್ದೀರೋ ಅದರಿಂದ ನಮ್ಮ ಸರಕಾರಕ್ಕೆ ಲಾಭ ಬಂತು; ತಮಗೆ ಕೀರ್ತಿ ಆಯಿತು. ತಮ್ಮ ಕುಮಾರತಿಯವರ ಮದುವೆಯನ್ನು ಬಹಳ ಸಂತೋಷದಿಂದಾ ಮಾಡಿದ್ದು, ಅದರ ವಿವರ ಯಾವತ್ತು ನಾವು ಕೇಳಿ, ಬಹಳ ಸಂತೋಷವಾಯಿತು. ಮೈಸೂರ ಅರಸುಗಳ ದರ್ಬಾರದಲ್ಲಿ

ಹುಕುಮತ್ತು ನಡಸುವಂಥಾ ಸರದಾರರಿಗೆ ಈ ಶುಭಮದುವೆ ಆದ ಉಡುಗರೆ ಯನ್ನು ನಮ್ಮ ಕಡೆಯಿಂದಾ ಕಳುಹಿಸಿಕೊಡಿ ಎಂತಾ, ಅಪ್ಪಣೆ ಕೊಟ್ಟು ಇದ್ದೇವೆ. ಸ್ವಾದೆ ರಾಜರಿಗೆ ಒಳ್ಳೇದು ಆಗುವದು, ಅವರ ತಾರೀಫು ನಮ್ಮ ಹೃದಯದಲ್ಲು ಚಿತ್ರ ಬರದ ಹಾಗೆ ಇದೆ. ಯಾವ ತರದಲ್ಲು ದಯ ಮತ್ತು ದಯಗಳು ಆಗುವಂಥಾದ್ದು ಇದೆಯೋ, ಅದನ್ನು ತಮ್ಮ ಸ್ನೇಹನಂಟ ತನದ ಮೇಲಣ ದೃಷ್ಟಿ ಇಟ್ಟು, ಅವರ ಮೇಲೆ ಮಾಡುವದಕ್ಕೆ, ನಮಗೆ ಬಹಳ ಖುಷಿ ಇದೆ. ಅದು ಆದೀತು. ಎರಡನೇ ಕಾಗದದಲ್ಲು ಸ್ವಾದೆ ರಾಜರೂ ತಮ್ಮ ಕುಮಾರತಿಯರೂ ಸಹಾ ವರ್ಷಂಪ್ರತಿಯಲ್ಲು ಗೋವೆ ಸೀಮೆಯಿಂದಾ ಕೊಡಗಿನ ಸೀಮೆಗೆ ಬರುವದಕ್ಕೆ ಗೋವೆ ಸರದಾರರಿಗೆ ಮತ್ತು ಇಂಗ್ರೇಜ ಸರದಾರರಿಗೆ ಅಪ್ಪಣೆ ಆದರೆ, ನಮಗೆ ಬಹಳ ಖುಷಿ ಇತ್ತು ಎಂತಾ, ಬರಸಿ ಇದ್ದೀರಿ. ಈ ಮಾತಿಗೆ ನಮಗೂ ಬಹಳ ಖುಷಿ ಇದೆ. ಈ ಮಾತಿನ ಉದ್ದಿಶ್ಯ ಜಲ್ದಿಯಿಂದಾ ಗೋವೆ ಸರದಾರರಿಗೆ ಬರೆದೇವು. ಇದಲ್ಲದೆ ರಾಜರು ಆತಂಕ ವಿಲ್ಲದೆ ಸುಖದಿಂದಾ ಬಂದು ತಲಪುವ ಬಗ್ಯೆ, ಮಾರ್ಗದಲ್ಲು ಸರಂಜಾಮು ಯಾವತ್ತು ತಯಾರಾಗಿ ಇರುವ ಪ್ರಕಾರ, ಕನ್ನಡ ಸೀಮೆಯಲ್ಲಿ ಇರುವ ಇಂಗ್ರೇಜ ಸರದಾರರಿಗೆ ಅಪ್ಪಣೆ ಕೊಟ್ಟೇವು. ವರ್ಷಂಪ್ರತಿಯಲ್ಲು ಸ್ವಾದೆ ರಾಜರು ಕೊಡಗಿನ ಸೀಮೆಗೆ ರವಾನೆ ಆಗುವ ಹೊತ್ತಿನಲ್ಲಿ, ಒಂದು ಪಹರೆ ತೈನಾತಿ ಆಗಿ ಕಳುಹಿಸುವ ಬಗ್ಯೆ, ಮೈಸೂರ ಸೀಮೆ ತೈನಾತಿ ಇರುವ ಸರದಾರ ರಿಗೆ ಹಿಶಾರೆ ಮಾಡಿಯೇವು. ಇಂಗ್ರೇಜ ಸರಕಾರದ ದುಷ್ಮಾನರು ದೂರವಾಗಿ ಹೋದರು. ಯಾವತ್ತು ಸೀಮೆಯಲ್ಲಿ ಇಂಗ್ರೇಜ ಸರಕಾರದ ಹುಕುಮತ್ತು ದವಲತ್ತು ಬಹಳ ಬಹುಮಾನದಿಂದಾ ಕಾಯಂ ಆಯಿತು. ಸರಕಾರಕ್ಕೆ ದವಲತ್ತು ಹಾರೈಸುವಂಥಾ ಎಲ್ಲಾ ದೋಸ್ತುದಾರರು ನಮ್ಮ ಕರಕರೆ ಹೊತ್ತಿ ನಲ್ಲು ನಮ್ಮ ಸಂಗಡ ಬಹಳ ಜಮಾಮರ್ದಿ, ಬಹಳ ಸ್ನೇಹದಿಂದಾ ಕೂಡಿದಂಥಾ ವರ ಮೇಲೆ ನಾವು ಬಹಳ ದೋಸ್ತಿ ಮೆಹರ್ಬಾನಗಿ ಮಡಗುತ್ತೇವೆ. ತಾವು ನಮಗೆ ಬಹಳ ಅತ್ಯಂತ ದೊಡ್ಡ ದೋಸ್ತರು. ಇದರಿಂದಾ ಒಂದು ಕತ್ತಿಯನ್ನು ಮೈಸೂರ ತಾಲೂಕಿನ ಸೀಮೆಯಲ್ಲು ಇರುವ ಜಾನಸನ್ ಸಾಹೇಬರ ಮಾರಿಪತ್ತಿ ನಿಂದ ರವಾನೆ ಮಾಡಿಯೇವು. ಅದನ್ನು ಬಹಳ ದೋಸ್ತಿಯಿಂದ ಸನ್ಮತವಿಟ್ಟು, ತಮ್ಮ ನಡುವಿನಲ್ಲಿ ಕಟ್ಟಬೇಕು" ಎಂಬದಾಗಿ ಬರೆಸಿ ಕಳುಹಿಸಿ ಇದ್ದರು.

ಅದಕ್ಕೆ ಜವಾಬಾಗಿ ವೀರರಾಜೇಂದ್ರ ವಡೆಯರವರು ಬರೆಸಿ ಕಳುಹಿದ ಕಾಗದದಲ್ಲಿ : " ನಾವು ಬರೆಸಿ ಕಳುಹಿದ ದೋಸ್ತಿಕಾಗದ ಎರಡರ ವರ ಜವಾಬು ಸೋದೆ ದೊರೆಗಳವರ ಕಾರ್ಯದ ದುರಸ್ತಿನ ಬಗ್ಗೆಯೂ, ವರ್ಷಂಪ್ರತಿಯಲ್ಲು ಒಂದು ಸಲ ಸೋದೆ ಸೀಮೆಯಿಂದ ಕೊಡಗಿನ ಸೀಮೆಗೆ ಬರತಕ್ಕ ಬಂದೂ ಬಸ್ತಿನ ಬಗ್ಗೆಯೂ, ಬಹುಮಾನದಿಂದಾ ಬರದು ಇತ್ತು; ಒಳ್ಳೆ ಹೊತ್ತಿನಲ್ಲಿ ಬಂದು ಮುಟ್ಟಿತು. ಅದರ ವಿವರಾ ನೋಡಿ ಯಾವದೊಂದು ಅಭಿಪ್ರಾಯವು ನಮ್ಮ ಮನಸ್ಸಿನಲ್ಲಿ ಇತ್ತೋ, ಅದೇ ಲಭಿಸಿತು. ಸೋದೆ ದೊರೆಗಳ ಪಸಂದು ಮಾಡು ವಂಥಾ ಅವರ ನಡತೆ, ಅವರ ಒಳ್ಳೆತನ ಯಾವತ್ತು ನಮ್ಮ ಹೃದಯದಲ್ಲಿ ಚಿತ್ರ ಬರೆದ ಹಾಗೆ ಇದೆ. ಯಾವದೊಂದು ತರದಲ್ಲು ಅವರ ಆರೈಕೆ ಮಾಡುವಂಥಾ ದಯಗಳು ಯಾವ ಪ್ರಕಾರ ಬೇಕೋ ಆ ಪ್ರಕಾರ ಮಾಡಿಸಲಾದೀತು ಎಂತ ಬಹಳ ಮೆಹರ್ಬಾನಿಯಿಂದ ಬರೆಸಿದ್ದೀರಿ. ಈ ಅಪೇಕ್ಷೆವಂತರಿಗೆ ಸರ್ವಪ್ರಕಾರ ದಲ್ಲಿ ಆರೈಕೆ ಮಾಡುವಂಥಾ ಭಾರ ತಮ್ಮ ದೌಲತ್ತಿನ ಪದರಿಗೆ ಕೂಡಿ ಇದೆ. ಈ ಜಗತ್ತಿನ ಒಳಗೆ ನಮ್ಮ ಹಾಗೆ ಪೂರೈಸುವಂಥವರ ಫಿರಿಯಾದಿ ತೀರಿಸುವಂಥವರು ತಮ್ಮ ಹೊರತು ಮತ್ತೆ ಯಾರು ಇದ್ದಾರೆ? ತಮ್ಮ ಉಮೇದು ತಮ್ಮಿಂದಲೇ ಆದೀತು, ಇದರ ವಿವರ ಹೀಗೆ ಇದೆ. ಈ ನಂಟತನ ಆಗುವದಕ್ಕೆ ಮೊದಲು ಸೋದೆ ರಾಜರು ನಮ್ಮ ಕುಮಾರಿಯನ್ನು ಕೇಳಿದರು. ಅದಕ್ಕೆ ನಮ್ಮನ್ನು ಆರೈಕೆ ಮಾಡುವ ಭಾರ ಇಂಗ್ಲೀಷ್ ಕುಂಪನಿ ಸರಕಾರದ ಪದರಿಗೆ ಕೂಡಿ ಇದೆ. ಹೀಗೆ ಇರುವಲ್ಲಿ ಬಂಗಾಳದ ದೊಡ್ಡ ಲಾರ್ಡ್ ಸಾಹೇಬರವರ ಹುಕುಂ ಆದ ಹೊರತು ಈ ಕೆಲಸ ಆಗಲಿಕ್ಕಿಲ್ಲ, ಎಂಬದಾಗಿ ಜವಾಬು ಹೇಳಿದೆವು. ಇದರ ಮೇಲೆ ಈ ವಿವರ ನಮ್ಮ ಕಾಗದದಿಂದಲೂ ಸೋದೆ ದೊರೆಗಳವರ ಕಾಗದ ದಿಂದಲೂ ಕಿದಮತ್ತಿಗೆ ಜಾಹೋರಾಗಿ ಇದ್ದಿತು. ದೊಡ್ಡ ದುಷ್ಮಾನ ಟೀಪುಸುಲ್ತಾ ನರು ತೀರಿಹೋದ ಮೇಲೆ ಅವರ ಸೀಮೆ ಯಾವತ್ತು ಇಂಗ್ಲೀಷ್ ಕುಂಪನಿ ಸರಕಾರದ ಹುಕುಮಿನ ಒಳಗೆ ಬಂದು ಖಾಯಂ ಆಯಿತು. ಮಹಾದೇವನು ಪೈದಾ ಮಾಡುವಂಥಾ ಯಾವತ್ತೂ ಜನರಿಗೂ ಕ್ಷೇಮಲಾಭ ಹಾಸಲಾಯಿತು. ಈ ಶ್ರೇಯಸ್ಸು ಜಯ ಹಾರೈಸುವಂಥಾ ದೋಸ್ತುದಾರರಿಗೆ ಮನಸ್ಸಿನಲ್ಲಿ ಇರಾದೆ ಇದ್ದ ಮೇರೆಗೆ ಖಾತರಿ ಜಮಾ ಆಯಿತು. ಈ ಮಗುವಿನ ಮದುವೆಪ್ರಸ್ತ ಶುರು ಆಗುವದಕ್ಕೆ ಮೊದಲೇ ಈ ವಿವರ ಕಿದಮತ್ತಿಗೆ ಜಾಹೋರಮಾಡಿ

ಇಷ್ಟೆವು. ಈ ದೋಸ್ತಾರರ ಮನಸ್ಸಿನಲ್ಲು ಇದ್ದ ಮೇರೆ, ಸರ್ವಪ್ರಕಾರದಲ್ಲು ಅರೈಕೆ ಮಾಡಿ, ಸೋದೆ ದೊರೆಗಳನ್ನು ಅಬ್ರು ಹುಮತ್ತಿನಿಂದಾ ಕೊಡಗಿಗೆ ರವಾನೆ ಮಾಡಿಸಿ, ವಿವಾಹಪ್ರಸ್ತ ಶುರು ಮಾಡುವಹಾಗೆ ಹುಕುಂ ಬಂದು ಇತ್ತು. ತಮ್ಮ ಹುಕುಂ ಪ್ರಕಾರ ಗೋವೆ ಸೀಮೆ ದೂರ ಎಂಬ ದೃಷ್ಟಿ ಇಡದೆ ಇಂಗ್ರೇಜ ಬಹದ್ದೂರರ ಕುಂಪನಿ ಆಶ್ರಯ ಪರವರಶಿಯಿಂದ ದೂರವಾಗಲಿ, ಸವಿಾಪ ವಾಗಲಿ, ಯಾವತ್ತು ಸೀಮೆಯು ಕುಂಪನಿ ಇಂಗ್ರೇಜ ಬಹದ್ದೂರರ ಹುಕುಮಿನ ಒಳಗೆ ಇದೆ. ಆ ಕುಂಪನಿ ನಮಗೆ ಆಶ್ರಯಸುಖ ಕೊಡುವಂತ ಜಾಗ ಎಂತ ತಿಳಿದು, ಭಗವಸದಿಂದ ಆ ವಿವಾಹಪ್ರಸ್ತವ ಬಹಳ ಚೆನ್ನಾಗಿ ಮಾಡಿ ಸೋದೆ ರಾಜರನ್ನು ಅವರ ಸೀಮೆಗೆ ರವಾನೆಮಾಡಿ ಇದ್ದೇವೆ. ಈಗ ತಮ್ಮ ಮೆಹರ್ಬಾ ನಗಿಯಿಂದ ಸೋದೆ ದೊರೆಗಳವರು ವರ್ಷವರ್ಷಕ್ಕೂ ಒಂದಾವರ್ತಿ ಕೊಡಗಿಗೆ ಬಂದು ಹೋಗುವಲ್ಲಿ ಮಾರ್ಗದಲ್ಲು ನಿಗಾವಾನಿ ಬೇಕಾದ ಸಹಾಯ ಮುಂತಾಗಿ ಮೊಕರರು ಮಾಡಿ ಈ ದೊಸ್ತಾರರಿಗೆ ಕರಕರೆ ಯೋಚನೆ ಸಹ ಹೊರೇಚ್ಚುಮಾಡಿ ಇದ್ದೀರಿ. ಆ ಪರವರಶಿಯು ತಾರೀಫು ಯಾವ ಜಿಹ್ವೆಯಿಂದ ಮಾಡಬೇಕು, ನೂರು ಪಾಲಲ್ಲಿ ಒಂದು ಪಾಲಾದರೂ ಆಗಲಿಕ್ಕಿಲ್ಲ. ಹೀಗೆ ಇರುವಲ್ಲಿ ನಮಗೂ ನಮ್ಮ ಹೊಂದಿದವರಿಗೂ ಸರ್ವ ಬಗೆಯಲ್ಲೂ ಕಾಪಾಡುವಂಥಾ ಭಾರ ತಮ್ಮ ದೌಲತ್ತಿನ ಪದರಿಗೆ ಕೂಡಿ ಇದೆ. ಹೀಗೆ ಇರುವದರಿಂದಾ ನಮ್ಮ ಮಕ್ಕಳಿ ಗಾಗಲೀ ಸೋದೆ ರಾಜರಿಗಾಗಲೀ ಅವರ ವಬ್ಬರನ್ನು ಅರೈಕೆ ಮಾಡುವ ಭಾರ ನಮ್ಮೇಲೆ ಇಲ್ಲಾ. ಆ ಭಾರ ತಮ್ಮ ಸರಕಾರದ ಪದರಿಗೆ ಕೂಡಿ ಇದೆ. ಇದಲ್ಲದೆ ತುರುಪಿನ ಸರದಾರರು ಜನರಲ್ ಫ್ಲಾಯಿಡ್ ಸಾಹೇಬ್ ಬಹದ್ದೂರವರು ತುರುಪಿನ ಫೌಜಿನ ಸಂಗಡ ಪಿರಿಯಾಪಟ್ಟಣಕ್ಕೆ ಬಂದು ಇದ್ದರು. ಅವರನ್ನು ಕಂಡು, ಅವರ ಸಂಗಡ ಒಂದು ಕತ್ತಿ ಕೇಳಿದೆವು. ಅವರು ಸಂತೋಷವಾಗಿ ತಮ್ಮ ನಡುವಿನಿಂದ ಕತ್ತಿ ಬಿಚ್ಚಿ ಈ ದೋಸ್ತಾರರ ನಡುವಿಗೆ ಅವರ ಕೈಯಿಂದ ಕಟ್ಟಿದರು. ಇದಲ್ಲದೆ ಶ್ರೀರಂಗಪಟ್ಟಣದ ದೊಡ್ಡ ಜಯವಾದ ಬಳಿಕ, ಜನರಲ್ ಹಾರಿಸ್ ಸಾಹೇಬ್ ಬಹದ್ದೂರವರು ಜನರಲ್ ಸ್ಟೋಯರ್ಟ್ ಸಾಹೇಬರ ಮಾರೀಪತ್ತಿನಿಂದ ಇನಾಮುಗಳ ಕಳುಹಿದರು. ಆ ಜನರಲ್ ಸಾಹೇಬರು ಆ ಇನಾಮನ್ನು ಮತ್ತೂ ಅವರ ಕಡೆಯಿಂದ ಸಹ ಕೊಟ್ಟರು. ಆ ಬಳಿಕ ನಿಮ್ಮ ನಸ್ಸಿನಲ್ಲಿ ಏನು ಅಂತರಂಗ ಇದೆಯಂತಾ ಕೇಳಿದರು. ಅದಕ್ಕೆ ಜವಾಬು: "ನಮ್ಮಮನಸ್ಸಿನಲ್ಲು ಇದ್ದಂಥ ಅಪೇಕ್ಷೆಯೆಲ್ಲಾ ಟೀಪುಸುಲ್ತಾನರು ಸತ್ತ ಬಳಿಕ ಹಾಸಲಾಯಿತು. ಮತ್ತೆ ಒಂದು ಅಭಿಲಾಷೆ ಬಾಕಿ ಇದೆ. ಅದು ಏನೆಂದರೆ:

ಬಂಗಾಳದ ಲಾರ್ಡ್ ಸಾಹೇಬ್ ಬಹದ್ದೂರವರು ಬಹಳ ಜಯವಂತರು, ಅದೃಷ್ಟವಂತರು, ಜಗತ್ತಿನ ವಳಗೆ ಅವರು ಬಹಳ ಬಹದ್ದೂರರು ಇದ್ದಾರೆ. ನಂಬಿದಂಥವರ ಆರೈಕೆ ಮಾಡುವಂಥವರಿದ್ದಾರೆ. ಅದುಕಾರಣ ಅವರ ಬಳಿಯಿಂದಾ ಖಾಸಾಕತ್ತಿ ಒಂದು ತೆಗೆದುಕೊಂಡು ನಮಗೆ ತಮ್ಮ ಕೈಯಿಂದ ಇನಾಯತ ಮಾಡಬೇಕು. ಆ ವಡವೆಯನ್ನು ನಮ್ಮ ಪ್ರಾಣಸಂರಕ್ಷಣೆಯ ಮಾಡುವಂಥಾ ತಾವಜಿನ ಹಾಗೆ ತಿಳಿದು ನಮ್ಮ ನಡುವಿನಲ್ಲಿ ಕಟ್ಟಿಯೇವು" ಎಂತ ಹೇಳಿದೆವು. ಆ ಕತ್ತಿಯನ್ನು ಮೈಸೂರು ಸೀಮೆ ಸರದಾರರು ವೈಬ್ ಸಾಹೇಬರ ಮಾರೀಪತ್ತಿನಿಂದ ಕಳುಹುತ್ತೀರಿ. ಅದು ಬಹಳ ಬಹುಮಾನದ್ದು ಎಂತ ನಮ್ಮ ಅಂತರಂಗಶುದ್ಧವಾಗಿ ತಿಳಿದೆವು. ಆ ಕತ್ತಿಯು ಪುತ್ರಪೌತ್ರ ಪಾರಂಪರ್ಯವಾಗಿ ಬಹಳ ಬಹುಮಾನದಿಂದ ನಡುವಿನಲ್ಲು ಇದ್ದೀತು. ಇದಲ್ಲದೆ ನಮ್ಮ ಕುಮಾರತಿಯವರ ವಿವಾಹಪ್ರಸ್ತ ಆದ್ದಕ್ಕೆ ಬಹಳ ಬಹುಮಾನದಿಂದ ಕಿಲ್ಲತ್ತು ಜೋಡಿ ಒಂದನ್ನು ಮೈಸೂರು ದಊಬಾರದ ಜಾನ್‌ಸನ್ ಸಾಹೇಬರ ಮಾರೀಪತ್ತಿನಿಂದ ಕಳುಹಿದಂಥಾದ್ದು ಬಂದು ತಲಪಿತು. ಅದು ನಮ್ಮ ಸರ್ವಾಂಗಕ್ಕೂ ಅಳವಟ್ಟದರಿಂದ ಬಹಳ ಅಬರು ಆಯಿತು. ಜಾಹೀರಾಗ ಬೇಕೆಂಬದಾಗಿ ಸನ್ ೧೨೧೭ನೇ ಹಿಜರಿ ಜಮಾದಿಸಾನಿ ೧೨ನೇ ತಾರೀಕಿನಲ್ಲು ಬರಸಿ ಕಳುಹಿದರು.

ಆ ಬಳಿಕ ಕೆಲವು ದಿವಸ ಕಳೆದಮೇಲೆ ಬಂಗಾಳದ ಮಹಾರಾಜಶ್ರೀ ಲಾರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹದ್ದೂರವರು, ಜಮಾದಿಲ್ ಅವಲ್, ತಾರೀಕು ೨೮ನೇ, ೧೨೧೭ನೇ ಹಿಜರಿಯಲ್ಲಿ ಬರೆಸಿಕಳುಹಿದ ಕಾಗದ ದಲ್ಲಿ: "ಇಂಗ್ರೇಜ ಬಹದ್ದರ ಸರಕಾರಕ್ಕೂ ಫರಾಶೀಸರ ಸರಕಾರಕ್ಕೂ ಉಳಿಕೆ ಸರಕಾರಕ್ಕೂ ತಮ್ಮೊಳಗೆ ಲಡಾಯಿ ಇದ್ದಂಥದ್ದು ಸಲ್ಲಾ ಆಗುವದಕ್ಕೆ ಕರಾರುನಾಮೆ ದೋಸ್ತಿಯಿಂದಾ ಸಾಬೂತು ಆಗುವ ಬಗ್ಯೆ ಜವಾಬು ಸವಾಲಿನ ಮಾರ್ಗ ಹುಟ್ಟಿದಂಥಾ ಇದರ ವಿವರ ತಮಗೆ ಮೊದಲೇ ತಿಳಿಯ ಪಟ್ಟು ಇದ್ದೀತು. ಈಗ ಬಹಳ ದೋಸ್ತಿಖುಷಿಯಿಂದ ತಮಗೆ ತಿಳಿಯ ಬೇಕೆಂಬದಾಗಿ, ಬರೆಯುತ್ತಾ ಇದ್ದೇವೆ. ಈ ಸಂತೋಷಗಳ ದಿವಸದ ಮಧ್ಯ ಉಭಯ ಸರಕಾರಕ್ಕೂ ಇದ್ದಂಥಾ ವಿರುದ್ಧಕ್ಕೆ ವಿಲಾಯತಿಯಲ್ಲಿ ಸಲ್ಲಾ ನಾಮಾ ಮೊಕರರು ಆದಂಥಾದ್ದು ಸಂತೋಷದ ವರ್ತಮಾನ ಕೇಳಿ, ಚಿಕ್ಕವರು

ದೊಡ್ಡವರು ಯಾವತ್ತು ಜನರ ಮಡಲು ಸಂತೋಷದ ಮುತ್ತಿನಿಂದ ತುಂಬಿ ಹೋಯಿತು. ಉಭಯ ಸರಕಾರಕ್ಕೂ ಬಹಳ ದಿವಸದಿಂದ ಲಡಾಯಿ ಕಜ್ಜಿಯು ಎಂಬ ಕಿಡಿ ಬಿದ್ದು, ಉರಿಯುತ್ತಿದ್ದಂಥಾದ್ದು ಶಿವನ ಕಟಾಕ್ಷದಿಂದ ನಂದಿ ಹೋಯಿತು. ಈ ಭಾರಿ ಲಡಾಯಿ ಆಖೈರು ಆಗುವ ಹೊತ್ತಿಗೆ ಲಡಾಯಿದ ಮೈದಾನದಲ್ಲಿ ಧೈರ್ಯದಿಂದಾ, ಭುಜಬಲಪರಾಕ್ರಮದಿಂದ, ಪ್ರಾಣ ವೆಚ್ಚ ಮಾಡುವಂತಹ ಇಂಗ್ರೇಜ ಬಹದ್ದೂರ ಸರಕಾರದ ಕೀರ್ತಿ ಆಕಾಶ ಪರಿಯಂತರ ತಲಪಿತು. ಆ ಸಲ್ಲಾ ಆದ ಲಾಭ ಮಹಾದೇವ ಹುಟ್ಟಿಸಿ ಇರುವ ಸರ್ವ ಜನರಿಗೂ ಅದೃಷ್ಟ ಕೂಡಿಬಂತು. ಈ ಮಾತಿನ ಸಂತೋಷ ತಮಗೂ ನಮ್ಮ ಸರಕಾರಕ್ಕೆ ಕೂಡಿ ಕ್ಷೇಮಲಾಭ ಪೂರೈಸುವಂಥಾ ಯಾವತ್ತರಿಗೂ ಆದೀತು. ದೋಸ್ತಿಯಿಂದ ಇದೇ ಮೇರೆ ಇನ್ನೊಂದು ವಿವರ ಬರೆಯುತ್ತೇವೆ. ಈ ಸೀಮೆ ಯಿಂದ ಇಂಗ್ರೇಜ ಫೌಜು ಮಿಸರಿನ ಸೀಮೆಗೆ ಹೋಗಿ ಮುಸಲ್ಮಾನರ ಫೌಜಿಗೆ ಕುಮುಕು ಮಾಡಿ, ಮಿಸರಿನ ಸೀಮೆಯನ್ನು ಫರಾಶೀಸರ ಕೈಯಿಂದ ಬಿಡಿಸಿದ ಕಾರಣ, ಅಲ್ಲಾ ಹಜರತ್ ಕದರೆ ಕುದರತ್ತು ಕುರಶಿದರಾಯತ್ ದಾರಾದಿ ರಾಯತ್ ಸುಲ್ತಾನೆ ರೂಂಕಲದಲ್ಲಾ ಹೊಮುಲ್‌ಕುಹೂ ಇವರು ಅರ್ಧಚಂದ್ರ ನೋಪಾದಿ ಚಿನ್ನದ ಹೂವು ಹೊಳೆಯುವಂತಹ ವಜ್ರ ಕೆತ್ತಿದಂಥಾದ್ದು ಹೊಸ ನೂತನವಾಗಿ ಮಾಡಿಸಿ, ಅವರು ಮಡಗುತ್ತಾರೆ. ಅಂಥಾದ್ದು ನಮ್ಮ ಉದ್ದಿಶ್ಯ ಮೆಹರ್ಬಾನಗಿಯಿಂದಾ ದಯಪಿಟ್ಟು ಕಳುಹಿಸಿ ಇದ್ದಾರೆ. ಆ ಬಾದಶಾಹರವರ ಸರಕಾರ ಯಾವತ್ತೂ ಮುಸಲ್ಮಾನರದು ಇದೆ. ನಮ್ಮ ಇಂಗ್ರೇಜ ಸರಕಾರಕ್ಕೂ ಅವರಿಗೂ ಭೇದವಿಲ್ಲದೆ ಏಕೀಕರವಾಗಿ ದೋಸ್ತಿ ಅದ್ದರಿಂದ ಬಹಳ ಸಂತೋಷ ಬಹುಮಾನ ನಮಗೆ ಉಂಟಾಯಿತು. ಈ ಬಹಳ ಖುಷಿ ತಮ್ಮನಸ್ಸಿಗೂ ಹಾಸಲಾದೀತು" ಎಂಬದಾಗಿ ಬರೆಸಿ ಕಳುಹಿಸಿದ್ದರು.

ಅದಕ್ಕೆ ದರ ಜವಾಬಾಗಿ, ರಜಬ್ ೧೨ನೇ ಸನ್ ೧೨೧೭ನೇ ಹಿಜರಿಯಲ್ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಬಹುಮಾನವಾದ ಹಕೀಕತ್ತಿನ ಕಾಗದ ಪೂರ್ಣ ಪ್ರೀತಿ ತುಂಬಿದಂಥಾದ್ದು, ಈ ಜಗತ್ತಿನ ಜನರು ಆರೈಕೆ ಆಗುವಂಥಾದ್ದಕ್ಕೆ ಆಧಾರವಾಗಿ ಇರುವಂಥಾದ್ದು, ಸ್ನೇಹಿತರಾದಂಥವರ ಅದೃಷ್ಟ ಹೆಚ್ಚುಮಾಡುವಂಥಾದ್ದು, ವೀರರಾದಂಥವರಿಗೆ ಭುಜಬಲಪರಾಕ್ರಮ ಕೊಡುವಂಥಾದ್ದು, ಪ್ರಾಣವೆಚ್ಚಮಾಡುವಂಥವರ ಜೀವರಕ್ಷಣೆಯು ಮಾಡುವಂಥಾದ್ದು,

ಸತ್ಯವಂತರಿಗೆ ಮಾನ ಹೆಚ್ಚುಮಾಡುವಂಥಾದ್ದು. ಇಂತಪ್ಪ ಕಾಗದದ ಮೊದಲ ಕಲಮಿನಲ್ಲಿ ಇಂಗ್ರೇಜ ಸರಕಾರಕ್ಕೂ ಫರಾಶೀಸರ ಸರಕಾರಕ್ಕೂ ದೋಸ್ತಿ ಯಿಂದಾ ಖುಷಿಯಿಂದಾ ಸಲ್ಲಾ ಕರಾರುನಾಮೆ ಮೊಕರರು ಆದಂಥಾ ವಿವರ ಬರೆದಿತ್ತು. ಕಡೇ ಕಲಮಿನಲ್ಲಿ ಮಿಸರಿನ ಸೀಮೆಯನ್ನು ಫರಾಶೀಸರ ಕೈಯಿಂದಾ ಬಿಡಿಸಿದಂಥಾದ್ದಕ್ಕೆ ಅಲ್ಲಾ ಹಜರತ್ ಸುಲ್ತಾನೆ ರೂಂಕಲದಲ್ಲಾ ಹೋಮಲು ಕುಹೂ ಇವರು ಒಂದು ಹೂವನ್ನು ಅರ್ಧಚಂದ್ರನೋಪಾದಿ ಚಿನ್ನದಲ್ಲು ಮಾಡಿಸಿ, ಅದಕ್ಕೆ ವಜ್ರ ಕೆತ್ತಿಸಿ, ಹೊಳೆಯುವಂಥಾದ್ದು ಒಂದು ನವ ತಯಾರು ಮಾಡಿಸಿ, ತಮ್ಮ ಬಳಿಯ ಮಡಗಿದ್ದರು. ಅದೇ ಮೇರೆ ಮತ್ತೊಂದು ತಯಾರು ಮಾಡಿಸಿ, ತಾವು ಸಮಸ್ತ ಜನರಿಗೆ ದೊಡ್ಡ ಸರದಾರರಾದ್ದರಿಂದಾ, ತಮಗೆ ಮೆಹರ್ಬಾನಗಿಯಿಂದಾ ಇನಾಯತ ಆಗಿ ಇದೆ. ಈ ಮಾತಿನಿಂದ ನಮ್ಮಂಥಾ ಅಪೇಕ್ಷೆವಂತರಿಗೆ ಬಹಳ ಖುಷಿ ಆಗಬೇಕೆಂತ, ಬರೆಸಿದಂಥಾ ತಮ್ಮ ಕಾಗದವು, ಸೂರ್ಯ ಉದಿಸಿಬರುವವೋಪಾದಿ ತಲೆ ಎತ್ತಿ ಬಂದು ನಮ್ಮಂಥವ ರಿಗೆ ಇದ್ದ ಕರಕರೆ ಚಿಂತೆ ಎಂಬ, ಮಹಾ ಅಂಧಕಾರವಾಗಿ ಇದ್ದಂಥಾ ಕತ್ತಲೆ ಯನ್ನು ತೆಗೆದು, ಬೆಳಕು ಮಾಡಿತು. ಹ್ಯಾಗೆ ಅಂದರೆ: ಆ ಇನಾಯತ ನಾಮಾ ಬಹಳ ಶುಭಸಂತೋಷದ ಹೊತ್ತಿನಲ್ಲಿ ಬಂದಕಾರಣ, ಹೂವಿನ ಮೊಗ್ಗು ಅರಳಿದೋಪಾದಿ ನಮ್ಮಮನಸ್ಸು ಉಬ್ಬಿ, ಬಹುಮಾನದ ಮುತ್ತಿನಿಂದ ನಮ್ಮ ಮಡಲು ತುಂಬಿಹೋಯಿತು. ದೋಸ್ತಾರರ ಮಾನ ಕೀರ್ತಿಯುಂಬಂಥಾದ್ದು ಆಕಾಶದಷ್ಟು ದೂರ ತಲಪಿತು. ಬಹಳ ದಿವಸದಿಂದಾ ಉಭಯಸ್ತರಿಗೂ ಲಡಾಯ ಎಂಬ ಉರಿ ಉರಿಯುತ್ತಿದ್ದಂಥಾದ್ದು ಶಿವನ ಅಪ್ಪಣೆಯಿಂದಾ ನಂದಿ ಹೋಯಿತು. ಸರ್ವೇ ಜನರಿಗೂ ಸುಖ ಉಂಟಾಯಿತು. ಈ ಖುಷಿ ಸಂತೋಷದ ವಿವರ ನಮ್ಮಮನಸ್ಸು ಬಲ್ಲದು. ಅದನ್ನು ಬರೆಯುವದಕ್ಕೂ ಹೇಳುವದಕ್ಕೂ ತೀರತಕ್ಕದ್ದಲ್ಲ. ಆದ್ದರಿಂದಾ ಬರೆಯುವಂಥಾದ್ದು ಕಡಮೆ ಮಾಡಿದೆವು. ಶಿವ ಮಹಾದೇವನು ಈ ಭೂಮಿ ಮೇಲೆ ಯಾವತ್ತೂ ಜನರ ಹುಟ್ಟಿಸಿ, ಸುಖ ಕೊಡುತ್ತಿದ್ದಾನೆ. ತಾವು ಯಾವದಕ್ಕೂ ದೊಡ್ಡ ಸರದಾರರು ಇದ್ದೀರಿ. ತಮ್ಮ ಹುಕುಂ ಈ ಯಾವತ್ತೂ ಭೂಮಿ ಮೇಲೆ ನಡಿಯಬೇಕು; ಸ್ವಲ್ಪ ಬಾಕಿ ನಿಲ್ಲಿಸ ಬಾರದು. ಇನ್ನೂ ದಿನೇ ದಿನೇ ಹೊಸತಾಗಿ ಸೀಮೆ ಜೈಸಿ ಕಟ್ಟಬೇಕು. ಅದರ ಸಂತೋಷದ ಮುತ್ತಿನಿಂದಾ ತಮ್ಮ ದೌಲತ್ತಿನ ಪದರನ್ನು ಮಹಾದೇವನು

ತುಂಬಿಸಬೇಕು. ಇನ್ನು ಇಂಗ್ರೇಜ ಬಹದ್ದೂರ ಸರದಾರರ ಧೀರತ್ವ ಎಂಬ ಕತ್ತಿಗೆ, ಕೀರ್ತಿಯೆಂಬ ಜಾಂಡೆಗೆ ಈ ಭೂಮಿ ಚತುಸ್ಸಾಗರ ಮಧ್ಯದಲ್ಲಿ ಸೂರ್ಯನೋಪಾದಿ ಏಳಿಸಿ, ತಮ್ಮ ಸರಕಾರಕ್ಕೆ ದುಷ್ಟ್ರಾನರಾದಂಥವರ ನಿಗ್ರಹಿಸಿ ಅವರ ಶಿರವನ್ನು ಸರಕಾರದ ಜಾಂಡೆಗೆ ನಿವಾಳಿಸಿ ಹಾಕಬೇಕು. ಈ ಮೇರೆ ದಯೆವಿಡಬೇಕೆಂತ ನಾವು ನಮ್ಮ ಎರಡು ಕೈಯೆತ್ತಿ ಬೇಡಿಕೊಳ್ಳುತ್ತೇವೆ. ನಾವು ಯಾವ ಮೇರೆ ಬೇಡಿಕೊಳ್ಳುತ್ತೇವೋ, ನಮ್ಮ ನಸ್ಸಿನಲ್ಲಿ ಯಾವ ಮೇರೆ ಅಪೇಕ್ಷೆ ಇದೆಯೋ, ಆ ಪ್ರಕಾರ ಮಹದೇವ ಈ ವರೆಗೆ ಇಂಗ್ರೇಜ ಸರಕಾರಕ್ಕೆ ಜಯಕೊಟ್ಟಿದ್ದಾನೆ. ಇನ್ನು ಮುಂದು ಇಂಗ್ರೇಜ ಸರಕಾರದಲ್ಲಿ ಸರದಾರರು ಎಷ್ಟು ಇದ್ದಾರೋ, ಅವರಿಗೆಲ್ಲಾ ಮಹಾದೇವನು ಕಟಾಕ್ಷವಿಟ್ಟು ದುಷ್ಟ್ರಾನರ ಜಯಿಸಿ, ಜಯವಂತರಾಗುವಂತೆ ಮಾಡಬೇಕು" ಎಂಬದಾಗಿ ಬರೆಸಿ ಕಳುಹಿ ಸಂತೋಷ ದಿಂದಾ ಇರುತ್ತಿದ್ದಲ್ಲಿ, ಕೆಲವು ದಿವಸದ ಮೇಲೆ ಕೋಟೆ ಅರಸುಗಳ ಕಡೆ ಕಾರೆ ಕಾರ ಕುನ್ನಯ ನಂಬಿಯಾರು ಎಂಬವನು ತುಂಟನಾಗಿ, ಕೆಲವು ಜನರ ಪ್ರಾಣ ಹಿಂಸೆ ಮಾಡಿ, ಕಾಡು ಸೇರಿಕೊಂಡು ಇದ್ದುದರಿಂದಾ, ಕುಂಪನಿ ಸರಕಾರದ ಕಡೆ ಶಿಪಾಯಿಗಳು ಹುಡುಕಿದಾಗ್ಯೂ ಸಿಕ್ಕದೆ, ಅದೇ ಮೇರೆ ಕಾಡಲ್ಲಿ ತಿರುಗಿ ಕೊಂಡು ಇರುತ್ತಿದ್ದುದರಿಂದಾ, ಈ ಸಮಾಚಾರ ವೀರರಾಜೇಂದ್ರ ವಡೆಯರು ಕೇಳಿ, ತಮ್ಮ ಸೀಮೆ ಸರಹದ್ದಿನ ಪಹರೆಯವರಿಗೆ: "ಕುನ್ನಯ ನಂಬಿಯಾರು ಎಂಬವನು ಕುಂಪನಿ ಸರಕಾರಕ್ಕೆ ತುಂಟನಾಗಿ, ಕಾಡು ಸೇರಿಕೊಂಡು ಇದ್ದಾನೆ. ಅವನು ನಮ್ಮ ಅರಮನೆ ಸೀಮೆ ಸರಹದ್ದಿನ ಒಳಗೆ ಬಂದುದ್ದಾದರೆ, ಹಿಡಿದು ಕಳುಹಿಸುವುದು" ಎಂಬದಾಗಿ ಅಪ್ಪಣೆ ಕೊಟ್ಟು ಇದ್ದಲ್ಲಿ, ಆ ಪಹರೆಯವರು ಅದೇ ಮೇರೆ ತಲಾಸುಮಾಡುತ್ತಾ ಇದ್ದಲ್ಲಿ, ಒಂದು ದಿವಸ ಆ ಕುನ್ನಯ ನಂಬಿ ಯಾರನು ಕೊಡಗಿನ ಸೀಮೆ ಸರಹದ್ದಿನ ಕಾಡ ವಳಗೆ ಬಂದದ್ದರಿಂದಾ, ಆ ಪಹರೆಯವರು ಅವನನ್ನು ಹಿಡಿದು ದೊರೆಗಳ ಬಳಿಗೆ ಕಳುಹಿದರಿಂದಾ, ರಾಜರವರು ಅವನ ಕಾಲಿಗೆ ಬೇಡಿ ಹಾಕಿಸಿ, ಬಂದೀಖಾನೆಯಲ್ಲು ಮಡಗಿಸಿ, "ಕುನ್ನಯ ನಂಬಿಯಾರು ಎಂಬವನು ಸಿಕ್ಕಿದರಿಂದಾ ಬಂದೀಖಾನೆಯಲ್ಲು ಮಡಗಿಸಿದ್ದೇವೆ. ಅವನನ್ನು ಸಾಗಿಸಿಕೊಂಡು ಹೋಗುವ ಬಗ್ಯೆ, ಶಿಪಾಯಿಗಳ ಕಳುಹಬೇಕೆಂಬದಾಗಿ" ಕರ್ನಲ್ ಬೋಲ್ ಸಾಹೇಬರಿಗೆ ಬರೆಸಿ ಕಳುಹಿದ್ದಲ್ಲಿ ಆ ಕರ್ನಲ್ ಸಾಹೇಬರು ಬರೆಸಿ ಕಳುಹಿದ ಕಾಗದದಲ್ಲಿ: "ಕುನ್ನಯ ನಂಬಿ

ಯಾರ್‍ನ ಸಾಗಿಸಿಕೊಂಡು ಬರುವ ಬಗ್ಯೆ, ನಮ್ಮ ಕಡೆ ಶಿಪಾಯಿಗಳ ಕಳುಹಿಸಿದ್ದೇವೆ. ಇವರ ತಾಬೆ ಮಾಡಿ ಕಳುಹಬೇಕು" ಎಂತಾ ಬರೆದು ಇದ್ದುದರಿಂದಾ, ಅದೇ ಮೇರೆ ಆ ಕುನ್ನಯು ನಂಬಿಯಾರನನ್ನು ಅವರ ಕಡೆ ಶಿಪಾಯಿಗಳ ವಶಕ್ಕೆ ಕೊಟ್ಟು ಕಳುಹಿಸಿದರು.

ಆ ಕೆಲವು ದಿವಸದ ಮೇಲೆ, ಆ ಕುನ್ನಯು ನಂಬಿಯಾರನ ಸಂಗಡ ಇರುತ್ತಿದ್ದ ಕಾರೆಕಾರ ಕೇಳು ನಂಬಿಯಾರು ಎಂಬವನು ಕೊಡಗಿನ ಸರಹದ್ದಿನ ಒಳಗೆ ಬಂದಲ್ಲಿ, ಸರಹದ್ದಿನ ಉಕ್ಕಡದ ಪಹರೆದವರು ಅವನನ್ನು ಹಿಡಿದು ಮಹಾರಾಜರ ಬಳಿಗೆ ಕಳುಹಿದರಿಂದಾ, ಅವನ ಕಾಲಿಗೆ ಬೇಡಿ ಹಾಕಿಸಿ, ಪಾರಾದಲ್ಲು ಮಡಗಿಸಿ ಈ ವಿವರ ಕರ್ನಲ್ ಬೋಲ್ ಸಾಹೇಬರಿಗೆ ಬರಸಿ ಕಳುಹಿದಲ್ಲಿ, "ಆ ಕೇಳು ನಂಬಿಯಾರನನ್ನು ಸಾಗಿಸಿಕೊಂಡು ಬರುವ ಬಗ್ಯೆ ಶಿಪಾಯಿಗಳ ಕಳುಹಿಸಿದ್ದೇವೆ. ಅವನನ್ನು ಈ ಶಿಪಾಯಿಗಳ ತಾಬೆಗೆ ಕೊಟ್ಟು ಕಳುಹಿಸಬೇಕು" ಎಂತಾ ಆ ಕರ್ನಲ್ ಸಾಹೇಬರು ಬರಸಿ ಕಳುಹಿದರಿಂದಾ, ರಾಜರು ಆ ಕೇಳು ನಂಬಿಯಾರನನ್ನು ಆ ಶಿಪಾಯಿಗಳ ಸಂಗಡ ಕೂಡಿಸಿಕೊಟ್ಟು, ಆ ಕರ್ನಲ್ ಬೋಲ್ ಸಾಹೇಬರ ಬಳಿಗೆ ಕಳುಹಿಸಿಕೊಟ್ಟರು.

ಆ ಬಳಿಕ ಕಲಿ ಸಂದ ೪೯೦೫ನೇ ರುಧಿರೋದ್ಗಾರಿ ಸಂವತ್ಸರದಲ್ಲು, ಕೋಟೆ ಅರಸರುಗಳ ತಮ್ಮ ಕೋಮನ ಮಗ ರಾಮವರ್ಮ ಎಂಬವನು ಕೊಡಗಿನ ಸೀಮೆಗೆ ಬಂದು ತನ್ನ ವೇಷ ಬದಲುಮಾಡಿಕೊಂಡು ತಿರುಗುತ್ತಾ ಇದ್ದುದರಿಂದ ಇವನನ್ನು ಪತ್ತೆಹತ್ತಿಸಿ, ಹಿಡತರಿಸಿ, ಪಹರೆಯಲ್ಲು ಮಡಗಿಸಿ ಈ ವಿವರ ರಿಕಾಟುಸಾಹೇಬರವರಿಗೆ ಬರೆದುಕಳುಹಿದಲ್ಲಿ, "ಅವನನ್ನು ಇಲ್ಲಿಗೆ ಕರೆಸಿಕೊಳ್ಳುವ ಬಗ್ಯೆ ಈಗ ಮಲೆಯಾಳದಲ್ಲಿ ಶರಾರತ್ತಿನಿಂದಾ ಮಾರ್ಗ ಇಕ್ಕಟ್ಟಾಗಿ ಇದೆ. ಆದದ್ದರಿಂದ ಶ್ರೀರಂಗಪಟ್ಟಣದಿಂದಾ ಕರ್ನಲ್ ಕ್ಲೋಸ್ ಸಾಹೇಬರು ಜನರ ಕಳುಹಿಸಿಯಾರು. ಅವರ ಸಂಗಡ ಕೂಡಿ, ಅಲ್ಲಿಗೆ ಕಳುಹಿಕೊಡಬೇಕು" ಎಂಬದಾಗಿ, ಜವಾಬು ಬರೆದು ಕಳುಹಿದರಿಂದಾ, ಅದೇ ಮೇರೆ ಆ ಕ್ಲೋಸ್ ಸಾಹೇಬರ ಕಡೆಯಿಂದಾ ಒಬ್ಬ ಸರದಾರ, ಒಂದು ಕುಂಪನಿ ಶಿಪಾಯಿಗಳು ಸಹ ಪೆರಿಯಾಪಟ್ಟಣಕ್ಕೆ ಬಂದದ್ದರಿಂದಾ, ಸದರಿ ರಾಮವರ್ಮನನ್ನು ವಾಲೆಕಾರರ ಪಹರೆ ಕೂಡಿಸಿ, ಪೆರಿಯಾಪಟ್ಟಣಕ್ಕೆ ಸಾಗಿಸಿ, ಆ ಜನರ ತಾಬೆ ಮಾಡಿ ಕಳುಹಿಸಿಕೊಟ್ಟರು.

ಆ ಬಳಿಕ ಕಲಿ ಸಂದ ೪೯೦೬ನೇ ರಕ್ತಾಕ್ಷಿ ಸಂವತ್ಸರದ ಜ್ಯೇಷ್ಠ ಶುದ್ಧ ೧೦ರಲ್ಲು, ವಕೀಲ್ ಕೆಪ್ಟನ್ ಮಾವಿನಿ ಸಾಹೇಬರು, ಬಂಗಾಳ ಲಾರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹಾದ್ದರರ ಹುಕುಂ ಪ್ರಕಾರ ಮಡಿಕೇರಿಗೆ ಬಂದಲ್ಲಿ, ವೀರರಾಜೇಂದ್ರ ವಡೆಯರವರು ಇದಿರುಗೊಂಡು, ಬಹಳ ಮಾನ ಮರ್ಯಾದೆ ಮಾಡಿ, ಕರೆದುಕೊಂಡು ಬಂದರು. ಆ ಮಾವಿನಿ ಸಾಹೇಬರು ಮಹಾರಾಜರ ಮಿಲಾಕತ್ತು ಆದ ಬಳಿಕ, ಬಂಗಾಳದ ಲಾರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹದ್ದೂರವರು ಸನ್ ೧೮೦೪ನೇ ಇಸ್ವಿ ಮೇ ಮಾಸ ೨೩ನೇ ತಾರೀಕಿನಲ್ಲು, ವೀರರಾಜೇಂದ್ರ ವಡೆಯರವರಿಗೆ ಬರೆದು ಇದ್ದ ಕಾಗದ ವನ್ನು ಕೊಟ್ಟರು.

ಆ ಕಾಗದದಲ್ಲಿ ತಾವು ನೇಕನಿಯತ್ತಿನಿಂದ ಬಹಳ ದಿವಸದಾರಭ್ಯ ಹಮೇಷ ದೋಸ್ತಿಯಿಂದಾ ನಮ್ಮ ಸರಕಾರಕ್ಕೆ ಖೈರುಕಾಯಿ ಮಾಡಿರುವಂಥಾದ್ದು ನಾವು ದರಿಯಾಪ್ತುಮಾಡಿ ಅದರ ವಡಂಬಡಿಕೆ ಸಂತೋಷದ ಮರ್ತಬೇ ದೋಸ್ತಿ ಕಲಮಿನಿಂದಾ ಬಹಳ ಸಲಾ ಬರದು ಇದ್ದೇವೆ. ಇದಲ್ಲದೆ, ತಾವು ತಮ್ಮ ಸೀಮೆ ಹೆಚ್ಚುಮಾಡಬೇಕು ಎಂಬ ಅಪೇಕ್ಷೆ ಮಡಗಿ ಇರುವಂಥಾದ್ದು ನಮಗೆ ತಿಳುವಳಿಕೆ ಇಲ್ಲದೆ ಇರಲಿಲ್ಲಾ. ಆದಾಗ್ಯೂ ತಾವು ಅಪೇಕ್ಷೆ ಮಾಡುವುದಕ್ಕೆ ಮೊದಲು ಕೆಲವು ಕೆಲಸಗಳ ದರಿಯಾಪ್ತು ಮಾಡಿ, ಬಂದುಬಸ್ತು ಮಾಡಿದಲ್ಲಿ ಆ ಕೆಲಸದಿಂದಾ ವಳ್ಳಿತಾಗಿ ಬಂದುಬಸ್ತು ಆಗುತ್ತದೆ ಎಂತಾ, ವಿಹಿತವಾಗಿ ನಾವು ತಿಳಿದು ಇದ್ದೆವು. ಇದು ಮೊಕರರು ಮಾಡುವ ಬಗ್ಯೆ ತಾಮುಸವಾಯಿತು. ಈಗ ತಮ್ಮ ಖಾಸಾ ದೋಸ್ತಿ ಖೈರುಕಾಯಿ ನಮ್ಮನಸ್ಸಿನಲ್ಲಿ ಚಿತ್ರ ಬರೆದ ಹಾಗೆ ಇರುವದರ ಮೇಲೆ ದೃಷ್ಟಿಮಾಡಿ, ತಮ್ಮ ದೋಸ್ತಿಯಿಂದಾ ನಮ್ಮನಸ್ಸಿನ ಸಂತೋಷ ವಡಂಬಡಿಕೆ ಮರ್ತಬೆ ಎಲ್ಲಾ ಜನರಿಗೂ ತಿಳಿಯುವ ಹಾಗೆ ಮಾಡುತ್ತಾ ಇದ್ದೇವೆ. ಈ ಬಗ್ಯೆ ತಹಾಮತ್ತು ವಾ ಅವಾಲಿ ಮರ್ತಬತ್ ಉಬ್ಬೆಹತ್ ಮಾಲಿ ಮಂಜಿಲತ್ತ ಕೆಪ್ಟನ್ ಮಾವಿನಿ ಸಾಹೇಬರು ಮೊದಲು ವಕಾಲತ್ತಿನ ಹುದ್ದೆ ಮೇಲೆ ತಮ್ಮ ಬಳಿ ಇದ್ದರು. ಅವರಿಗೆ ಹಿಷಾರಿ ಮಾಡಿ ಇದ್ದೇವೆ. ಹೆಚ್ಚಿಸುವ ಸೀಮೆ ಭಾವ ಆ ಕಡೇದು ಆಗುಮಾಡುವ ಬಗ್ಯೆ ನೇಮುಕವಾಗಿ, ತಮ್ಮ ಮುಂದೆ ಬಂದು, ಹಾಜರು ಆಗುತ್ತಾ ಇದ್ದಾರೆ. ಆ ನಕ್ಷೆಯ ವಿವರ ಈ ಕಪಿತಾನ್ ಸಾಹೇಬರವರ ಮುಖವಚನದಿಂದಲೂ ಈ ದೋಸ್ತಿಕಾಗದದಿಂದಲೂ, ವಿವರವಾಗಿ ತಮಗೆ

ತಿಳೀಬಂದೀತು. ಮೇಲಾಗಿ, ವಂದು ಶಮ್‌ಶೇರು ಮೊಹಬ್ರ್ಬಾನಗಿ ಮಾರ್ಗ ದಿಂದಾ ತಮ್ಮ ಉದ್ದಿಶ್ಯ ಕೆಲವು ದಿವಸದಲ್ಲಿ ಕಳುಹಬೇಕು ಎಂತಾ, ನಮ್ಮ ಅಪೇಕ್ಷೆ ಇದೆ. ಕಪಿತಾನ್ ಸಾಹೇಬರು ತಮಗೆ ತಲುಪಿಸಿಯಾರು. ಅದನ್ನು ನಮ್ಮ ಮೆಹರ್ಬಾನಗಿ ದೋಸ್ತಿನಿಶಾನಿ ಎಂತಾ ತಿಳಿದು, ಕಬೂಲುಮಾಡಿ, ನಮ್ಮನಸ್ಸಿಗೆ ಸಂತೋಷ ಹೆಚ್ಚುಮಾಡುವಂತಾದ್ದು ತಮಗೆ ಯುಕ್ತವದೆ" ಎಂಬದಾಗಿ ಬರೆಸಿ ಇದ್ದರು.

ಆ ಬಳಿಕ ಮಾವಿನಿ ಸಾಹೇಬರು ಹೇಳಿದ ವಿವರ: "ತಾವು ಇಂಗ್ರೇಜ ಬಹದ್ದೂರ ಕುಂಪನಿ ಸರಕಾರದ ಕೆಲಸಕ್ಕೆ ಸಹಾಯವಾಗಿ ದೋಸ್ತಿಯಿಂದಾ ನಡದು ಬಂದಂಥಾದ್ದಕ್ಕೆ, ಸರ್ವರು ತಿಳಿಯುವ ಬಗ್ಯೆ ದೋಸ್ತಿನಿಶಾನಿ ಉದ್ದಿಶ್ಯ ತಮಗೆ ಕೆಲು ಸೀಮೆ ಹೆಚ್ಚುಮಾಡುವಂತೆ, ನಮ್ಮ ಸರಕಾರದ ಹುಕುಂ ಪ್ರಕಾರ ಎಂದು ಇದ್ದೇವೆ. ಈ ಬಗ್ಯೆ ಮಂಗಳೂರು ತಾಲೋಕಿನ ಕಲೆಕ್ಟರ್ ಜಾನ್ ರೆವಿನ್‌ಶಾ ಸಾಹೇಬರ ಬಳಿಗೆ ತಮ್ಮ ಕಡೆಯಿಂದಾ ಒಬ್ಬ ವಕೀಲಗೆ ಕಳುಹಿಸಿ, ತಮಗೆ ಇಂಗ್ರೇಜ ಸರಕಾರದಿಂದಾ ಬಿಟ್ಟುಕೊಡುವಂತಹ ಸೀಮೆ ಲೆಕ್ಕಹೊಕ್ಕವನ್ನು ಬರೆಸಿ, ಆ ಸೀಮೆಯನ್ನು ನಮ್ಮ ಸಂಸ್ಥಾನಕ್ಕೆ ಸೇರಿಸಿ ಕೊಳ್ಳಬೇಕು" ಎಂಬದಾಗಿ ಹೇಳಿದರಿಂದಾ, ಮಹಾರಾಜರು ವಕಾಲತ್ತುನಾಮೆ ಬರೆದ ವಿವರ: "ಬಂಗಾಳದ ಅಷರಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹಾದ್ದರವರು ಕೊಡೆಯಾಲ ತಾಲೋಕಿನ ಕೆಲವು ಸೀಮೆಯನ್ನು ತಮ್ಮ ಮೆಹರ್ಬಾನಗಿಯಿಂದಾ ನಮ್ಮ ಸರಕಾರಕ್ಕೆ ಕೊಟ್ಟು ಇದ್ದಾರೆ. ಅದರ ಬಂದುಬಸ್ತಿನ ಬಗ್ಯೆ ಕಪಿತಾನ್ ಮಾವಿನಿ ಸಾಹೇಬರು ಆ ಲಾರ್ಡ್ ಸಾಹೇಬರ ಕಡೆಯಿಂದಾ ವಕೀಲರಾಗಿ ಬಂದು ಇದ್ದಾರೆ. ಆ ಕಪಿತಾನ್ ಸಾಹೇಬರ ಹಿಷಾರೆ ಪ್ರಕಾರ, ನಮ್ಮ ಕದೀಂ ಇತಬಾರಿ ಕರಣೀಕ ಸುಬ್ಬೈಯ್ಯನನ್ನು ಈ ಕೆಲಸದ ಬಗ್ಯೆ ಮೊಕರರು ಮಾಡಿ, ಕಪಿತಾನ್ ಸಾಹೇಬರ ಮುಖಾಂತರ ಕೊಡೆಯಾಲ ಸೀಮೆ ತಾಲೂಕುದಾರ ಸಾಹೇಬರ ಬಳಿಗೆ ಕಳುಹಿಸಿದ್ದೇವೆ. ಆ ಮಹಾರಾಜಶ್ರೀ ಬಂಗಾಳದ ಲಾರ್ಡ್ ಸಾಹೇಬರವರ ಹುಕುಂ ಪ್ರಕಾರ ಎಷ್ಟು ಸೀಮೆ ನಮಗೆ ಕೊಡುವುದು ಇದೆಯೋ, ಈ ಸೀಮೆಯನ್ನು ಈ ಕರಣೀಕ ಸುಬ್ಬೈಯ್ಯನ ಹವಾಲೆಮಾಡಬೇಕು" ಎಂಬದಾಗಿ, ವಕಾಲತ್ತುನಾಮಾ ಬರದು, ಕರಣೀಕ ಸುಬ್ಬೈಯ್ಯನ ಕೈಲಿಕೊಟ್ಟು, ಮಂಗಳೂರು ಕಲೆಕ್ಟರ್ ಜಾನ್‌ರೆವಿನ್‌ಶಾ

ಸಾಹೇಬರವರ ಬಳಿಗೆ ಕಳುಹಿದಲ್ಲಿ, ಅವರು ಬಂಗಾಳದ ಲಾರ್ಡ್ ಸಾಹೇಬರವರ ಹುಕುಂ ಪ್ರಕಾರ, ದೊರೆಗಳಿಗೆ ಕೊಡುವ ಸೀಮೆ ಲೆಖ್ಖ ಹೊಕ್ಕವನ್ನು ಕರಣೀಕ ಸುಬ್ಬೈಯ್ಯನವರಿಗೆ ಬರಸಿಕೊಟ್ಟು, ಆ ಸೀಮೆ ಮುಖ್ಯಸ್ಥರು, ಗೌಡಗಳು, ರೈತರು ಮುಂತಾದ ಸಮಸ್ತ ಜನರಿಗೆ ರೆವಿನ್‌ಶಾ ಸಾಹೇಬರು ಬರಸಿ ಕಳುಹಿದ ಇಸ್ತಿಹಾರುನಾಮೆಯಲ್ಲಿ : "ಕುಂಪನಿ ಸರಕಾರದ ಫೌಜು ಶ್ರೀರಂಗಪಟ್ಟಣ ತೆಗೆದುಕೊಳ್ಳುವ ಬಗ್ಯೆ ಬಂದ ವೇಳೆಯುದಲ್ಲು, ಮಹಾರಾಜಶ್ರೀ ಕೊಡಗಿನ ದೊರೆಗಳು, ವೀರರಾಜೇಂದ್ರ ವಡೆಯರವರು, ಸರಕಾರದ ಫೌಜಿಗೆ ರಸದು ವಗೈರೆ ಸಾಮಾನು ಪೌಂಚಾಯಿಸಿ ಕುಂಪನಿ ಕೆಲಸಕ್ಕಾಗಿ ಮೆಹನತ್ತು ಮಾಡಿದರಿಂದಾ ಈ ಬಗ್ಯೆ ಬಂಗಾಳದ ಹಜರತ್ ಗೌವರ್ನರ್ ಜನರಲ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹದ್ದೂರವರು ಮೆಹರ್ಬಾನಗಿ ಆಗಿ ಇರುವಂಥದನ್ನು ಸರ್ವರು ತಿಳಿಯುವ ಬಗ್ಯೆ ಕುಂಪನಿ ಸರಕಾರದ ಇಲಾಖೆ ಸೀಮೆಯಿಂದಾ ಕೆಲವು ಸೀಮೆ ಯನ್ನು, ಸದರಿ ದೊರೆಗಳ ಪುತ್ರಪೌತ್ರಪಾರಂಪರ್ಯವಾಗಿ ನಡದುಬರುವಂತೆ, ವಿಂಗಡಿಸಿ ಕೊಡಿಸುವದನ್ನು ನಿಶ್ಚೈಸಿದ ಮೇರೆಗೆ, ಮದರಾಸಿನ ಗವರ್ನರ್ ಸಾಹೇಬ್ ಬಹದ್ದೂರವರು ಕುಮಾರಧಾರೆನದಿಗೆ ದಕ್ಷಿಣ ದಿಕ್ಕಿನಲ್ಲು ಇರುವಂಥಾ ಕೆಲವು ಮಾಗಣೆಗಳ ಬೇರೀಜು ವಿಂಗಡಿಸಿ, ಕೊಡಗಿನ ತಾಲೂಕಿಗೆ ಸೇರಿಸಿ ಕೊಡುವಂತೆ ಹುಕುಂ ಬರದು ಕಳುಹಿಸಿದ ಮೇರೆಗೆ, ಕಚೇರಿ ತಾಲೂಕಿನಿಂದಾ ವಿಂಗಡಿಸಿರುವ ಮಾಗಣೆಗಳ ವಿವರ : ಬೆಳ್ಳಾರೆ ಮಾಗಣೆ ಒಂದಕ್ಕೆ ದರೋಬಸ್ತು ಗ್ರಾಮ ಮೂವತ್ತೇಳು ; ನರಿಮೊಗರು ಮಾಗಣೆ ಒಂದಕ್ಕೆ ಗ್ರಾಮ ಒಂದು ; ಅಡೂರು ಮಾಗಣೆ ಒಂದಕ್ಕೆ ದರೋಬಸ್ತು ಗ್ರಾಮ ಐದು ; ಪುತ್ತೂರು ಮಾಗಣೆ ಪೈಕಿ ಪಡುವನೂರ ಗ್ರಾಮದಲ್ಲು ಸೇರಿದ ಕಕ್ಕೆಮಜಲು ದೊರಕೊಂಡೆ ವರ್ಗ ಶಿವಾಯಿ, ಮೇಲಾದ ದರೋಬಸ್ತು ಮಾಗಣೆ ಒಂದಕ್ಕೆ ಗ್ರಾಮ ಮೂವತ್ತೈದು ; ಕಡ್ಯದ ಮಾಗಣೆ ಪೈಕಿ ಯಡಮಂಗಲ ಗ್ರಾಮ ಒಂದು, ಬಳಪದಗ್ರಾಮ ಒಂದು, ಉಭಯಂ ಗ್ರಾಮ ಎರಡು ; ಅಮರಕಾಸಪಾಡಿ ಪೈಕಿ ಕೆನೆ ಗ್ರಾಮ ಒಂದು, ದೊಳುಪಾಡಿ ಗ್ರಾಮ ಒಂದು, ಕಲ್ಲುಘಟಿ ಗ್ರಾಮ ಒಂದು, ಕಾಸಬಾಡಿ ಗ್ರಾಮ ಒಂದು, ಆಲಙ್ಕೆಗ್ರಾಮದಲ್ಲು ಕೆವಳ ತಿಮ್ಮಯ್ಯನ ವರ್ಗ ಹೊರ್ತು, ಮೇಲಾದ ಗ್ರಾಮ ದರೋಬಸ್ತು ಒಂದು, ಅಂತು ಗ್ರಾಮ ಐದು ; ಬಂಡಾಡಿ ಮಾಗಣೆ ಪೈಕಿ ಪುಳುಕುಕ್ಕು ಗ್ರಾಮ ಒಂದು, ಶಿಶಿಲದ ಮಾಗಣೆ ಅರಿಗುಡಿ ಗ್ರಾಮ ಒಂದು ;

ಪಂಜ್ಯದ ಮಾಗಣೆ ಪೈಕಿ ಗ್ರಾಮ ಹತ್ತಕ್ಕೆ, ಹೊಂಬೆತಾಡಿ ಗ್ರಾಮ ಒಂದು, ಕತ್ತನಿಬೆಗದಲ್ಲು ಗ್ರಾಮ ಒಂದು, ಮೂಡನೂರು ಗ್ರಾಮ ಒಂದು, ಯನಕ್ಕಲ್ಲು ಗ್ರಾಮ ಒಂದು, ಕಲ್ಲುಮಡಕ ಗ್ರಾಮ ಒಂದು, ಪಡುವನೂರು ಗ್ರಾಮ ಒಂದು, ಯಣಮೂರು ಗ್ರಾಮ ಒಂದು, ಕೂತಕುಂಜಿ ಗ್ರಾಮ ಒಂದು, ಐವತ್ತೊಕ್ಕಲು ಗ್ರಾಮ ಒಂದು, ಕಾಂತೋಡಿ ಗ್ರಾಮ ಒಂದು, ಅಂತು ಗ್ರಾಮ ಹತ್ತು; ಸಾವಿರಾಳವಟ್ಟದ ಮಾಗಣೆ ಗ್ರಾಮ ಆರಕ್ಕೆ ವಿವರ: ಕುಂಬಡಜೆ ಗ್ರಾಮ ಒಂದು, ಪೆರಡಾಲ ಗ್ರಾಮ ಒಂದು, ಬೇಳೂರು ಗ್ರಾಮ ಒಂದು, ಪಡರೆ ಗ್ರಾಮ ಒಂದು, ಉಪರಂಗಳ ಗ್ರಾಮ ಒಂದು, ಬೇಳದ ಗ್ರಾಮ ಒಂದು ಅಂತು ಗ್ರಾಮ ಆರು; ಬಾರೆಬೆಲಿಯೂರ ಪೈಕಿ ಗ್ರಾಮ ಆರಕ್ಕೆ ವಿವರ: ಬೆಲಿಯೂರು ಗ್ರಾಮ ಒಂದು, ಊರಮಲೆ ಗ್ರಾಮ ಒಂದು, ಕಾಡಪಾಡಿ ಗ್ರಾಮ ಒಂದು, ಪೆರ್ನೆ ಗ್ರಾಮ ಒಂದು, ಬೆಳ್ಳಿಪಾಡಿ ಗ್ರಾಮ ಒಂದು, ನೆಕ್ಕಲಾಡಿ ಗ್ರಾಮ ಒಂದು, ಅಂತು ಗ್ರಾಮ ಆರು. ಸುಬ್ರಹ್ಮಣ್ಯದ ಪೈಕಿ ಗ್ರಾಮಗಳು, ಕೊಳತ್ತಿಕೆ ಗ್ರಾಮ ಒಂದು, ಮಜರೆಗಳು ಒಂಬತ್ತಕ್ಕೆ: ಅಡಿಕಾರ ಒಂದು, ಪಂಜ್ಯದೇವರ ಹಳ್ಳಿ ಒಂದು, ಆಲಡಕಮರತೂರು ಒಂದು, ಮೂಡನೂರು ಒಂದು, ಸುಬ್ರಹ್ಮಣ್ಯದೇವರಹಳ್ಳಿ ಒಂದು, ಕಾಯಂಬಾಡಿ ಒಂದು, ಬಳಿಲ ಒಂದು, ಕೊಳತ್ತಿಕೆ ಒಂದು, ಪುಚ್ಚಪಾಡಿ ಒಂದು, ಅಂತು ಗ್ರಾಮಗಳು ನೂರ ಹತ್ತು, ಮಜರೆ ಒಂಬತ್ತಕ್ಕೆ ಸಹ ಜೇರೀಜ ಕಂಠೀರಾಯಿ ಗ. ೨೨,೪೨೧—೪—೧—೩, ಸುಂಕ ಕಾರಕ ಸಹ ಕಂಠೀರಾಯಿ ಗ. ೧೭೪೦—೭—೩—೦—೩ ಬ್ರಹ್ಮದಾಯ ಉತ್ತಾರ ಕಂಠೀರಾಯಿ ಗ. ೭೧೭—೭—೧—೧. ಅಂತೂ ಕಂಠೀರಾಯಿ ಗ. ೨೪೮೭೯—೯—೨—೦—೩. ವಸೂಲು ಆಗುವಂಥ ಬೇರೀಜನ ಸೀಮೆಯನ್ನು ಕೊಡಗಿನ ತಾಲೂಕಿಗೆ ದಾಕಲು ಮಾಡಿಸಿ, ನೀವು ಸಮಸ್ತ ಜನರು ಕೊಡಗಿನ ಸಂಸ್ಥಾನದ ಸ್ವಾಧೀನವಾಗಿ ನಡದುಕೊಂಡು ಇರುವಂತೆ, ಹುಕುಂ ಕೊಟ್ಟು ಇದ್ದೀತಾಬ್ದರಿಂದಾ ಆ ಮೇರೆಗೆ ಸನ್ ೧೨೧೪ ಫಸಲಿಗೆ, ರಕ್ತಾಕ್ಷಿ ಸಂವತ್ಸರದ ಜುಲೈ ತಾರೀಕು ೧೩ರ ಆರಭ್ಯ ನಿಮ್ಮ ನಿಮ್ಮ ಕಡೆಯಿಂದಾ ಸರಕಾರಕ್ಕೆ ಸಲ್ಲತಕ್ಕಂಥಾ ಹಣಮಣಿಹ್ಯಯವನ್ನು ಕೊಡಗಿನ ತಾಲೂಕಿಗೆ ಕೊಟ್ಟುಕೊಂಡು, ಈ ವರೆಗೆ ಕುಂಪನಿ ಸರಕಾರದಲ್ಲು ಯಾವ ಪ್ರಕಾರ ನಡದುಕೊಂಡು ಇದ್ದೀರೋ, ಆ ಮೇರೆ ಯಾವದೊಂದು ಕೆಲಸದ

ಬಗ್ಯೆ ಆದಾಗ್ಯೂ, ಅವರ ಸ್ವಾಧೀನವಾಗಿ ನಡದುಕೊಂಡು ಬಾಹುದು. ಸಾಲುಗು ದಾಸ್ತ ಸನ್ ೧೨೧೩ನೇ ಫಸಲಿ, ರುಧಿರೋದ್ಗಾರಿ ಸಂವತ್ಸರಕ್ಕೆ ನಿಮ್ಮ ನಿಮ್ಮ ಕಡೆಯಿಂದಾ ಸರಕಾರಕ್ಕೆ ಸಲ್ಲತಕ್ಕ ಹಣಕಾಸು ಏನೊಂದು ಇದ್ದಾಗ್ಯೂ, ಕುಂಪನಿ ಸರಕಾರದಲ್ಲು ವಸೂಲಾಗಿ ಇದೆಯೆಂದು, ರಾಜಶ್ರೀ ಕೊಡಗಿನ ದೊರೆ ಗಳಿಗೆ ತಿಳಿಸಿ ಇದ್ದೀತಾದ್ದರಿಂದಾ, ಆ ಮೇರೆಗೆ ಸಾಲುಗುದಾಸ್ತ ಬಾಕಿ ಹಣ ಏನು ಇದ್ದಾಗ್ಯೂ, ನಿಮ್ಮ ಕಡೆಯಿಂದಾ ವಸೂಲು ಮಾಡತಕ್ಕ ನಿಲಾ, ಮಾಗಣೆ ಶ್ಯಾನುಭಾಗ ವ ಚರಾದಾಯ ಸಾಯರ ಶ್ಯಾನುಭಾಗ ವಗೈರೆ ನಿಮ್ಮ ನಿಮ್ಮ ಮಾಗಣೆ ಸುಂಕದ ಲೆಖ್ಖ ಸಹ ಏನೊಂದು ಇದ್ದಾಗ್ಯೂ, ಕೊಡಗಿನ ಸಂಸ್ಥಾನದಿಂದಾ ಬಂದಿರುವ ಕರಣೀಕರ ಬಳಿಯ ಬರಸಿಕೊಟ್ಟು, ಅವರು ಹೇಳಿದ ರೀತಿ ನಡದುಕೊಂಡು ಇರುವುದು" ಎಂಬದಾಗಿ ರಕ್ತಾಕ್ಷಿ ಸಂವತ್ಸರದ ಶ್ರಾವಣ ಶು. ೮ ಸೋಮವಾರ ಬರದದ್ದು.

ಈ ಮೇರೆಗೆ ಇಸ್ತಿಹಾರುನಾಮೆಯನ್ನು ಆ ಕಲೆಕ್ಟರ್ ಸಾಹೇಬರು ಬರಸಿ, ಕರಣೀಕ ಸುಬ್ಬೈಯ್ಯನಿಗೆ ಕೊಟ್ಟು, ಆ ತಾಲೂಕಿನಲ್ಲು ಇರುತ್ತಿದ್ದ ತಹಶೀಲು ದಾರ ಮುಂತಾದವರಿಗೆ ತಾಕೀತಿ ಸಹ ಬರೆಸಿ, ಆ ಸೀಮೆಯನ್ನು ಕೊಡಗಿನ ಸಂಸ್ಥಾನಕ್ಕೆ ಸೇರಿಸಿ, ಕುಂಪನಿ ಸರಕಾರದಿಂದಾ ಬಿಟ್ಟುಕೊಟ್ಟು, ರಕ್ತಾಕ್ಷಿ ಸಂವತ್ಸರದ ಶ್ರಾವಣ ಶು. ೯ರಲ್ಲು ಕಲೆಕ್ಟರ್ ರೇವಿನ್‌ಶಾ ಸಾಹೇಬರವರು ರಾಜರವರಿಗೆ ಬರಸಿ ಕಳುಹಿದ ಕಾಗದದಲ್ಲಿ: "ಮಂಗಳೂರು ತಾಲೂಕಿನಿಂದಾ, ಇಂಗ್ರೇಜ ಸರಕಾರದ ಹುಕುಂ ಪ್ರಕಾರ ತಮ್ಮ ಸಂಸ್ಥಾನಕ್ಕೆ ಸೇರಿಸಿಕೊಡುವ ಸೀಮೆ ಲೆಕ್ಕಹೊಕ್ಕ ಯಾವತ್ತೂ ಕರಣೀಕ ಸುಬ್ಬೈಯ್ಯನಿಗೆ ಬರಸಿಕೊಟ್ಟು, ಆ ಪ್ರಕಾರ ಮಾಗಣೆಗಳು ತಮ್ಮ ಸ್ವಾಧೀನವಾಗಿ ನಡೆಯತಕ್ಕ ಬಗ್ಯೆ ಕಚೇರಿ ಇಲಾಖೆಯಿಂದಾ ವಿಂಗಡಿಸಿ ಇರುವ ಮಾಗಣೆ ಗ್ರಾಮಗಳ ರೈತ ವಗೈರೆ ಸಮಸ್ತ ಜನರಿಗೂ, ತಮ್ಮ ಸಂಸ್ಥಾನ ಸ್ವಾಧೀನವಾಗಿ ನಡಕೊಂಡು ಇರುವಂತೆ, ಇಸ್ತಿ ಹಾರುನಾಮೆ; ಈ ಬಗ್ಯೆ ರೈತಜನರನ್ನು ತಮ್ಮ ಕಡೆ ಕರಣೀಕ ಸುಬ್ಬೈಯ್ಯನ ತಾಬೆ ಮಾಡಿಕೊಡುವಂತೆ, ತಹಶೀಲುದಾರರಿಗೆ ತಾಕೀತಿ ಒಂದು; ಬೇರೀಜ ವಿಂಗಡಿಸಿ ಇರುವ ಬಗೆ ಗ್ರಾಮವಾರು ವಿವರ ಪ್ರಕಾರ ಪಟ್ಟಿ ಒಂದು ಸಹ, ಬರಸಿ ಕಳುಹಿಸಿ ಇದ್ದೇವೆ" ಎಂಬದಾಗಿ, ಬರಸಿ ಕಳುಹಿಸಿ ಇದ್ದರು.

ಆ ಬಳಿಕ ಮಹಾರಾಜರವರು ಬರಸಿದ ಇಸ್ತಿಹಾರುನಾಮೆ ವಿವರಾ:

" ನಮ್ಮ ಅರಮನೆ ಸೀಮೆಗೆ ಕೊಡೆಯಾಲದ ತಾಲೂಕಿನ ಸೀಮೆಯಿಂದಾ ಸೇರಿದ ಸುಬ್ರಹ್ಮಣ್ಯದ ವಳಿತವಾದ, ಕಡಬದ ವಳಿತವಾದ, ಬೆಳ್ಳಾರೆ, ಅಮರ, ಕಾಸಪಾಡಿ ವಳಿತವಾದ ಬಂಡಾಡಿ ಮಾಗಣೆ ಪಂಜ್ಯ, ನರಿಮೊಗರು, ಬಾರಿ, ಬೇಲೂರು, ಪುತ್ತೂರು, ಅಡೂರು, ಸಾವಿರಾಳವಟ್ಟೆ ಮುಂತಾದ ಸೀಮೆ ಮೊಕ್ತೇಸರು, ಗೌಡಗಳು, ಪ್ರಜೆಗಳು ಮುಂತಾದವರಿಗೆ ಅಪ್ಪಣೆ ಕೊಡಿಸಿದ ನಿರೂಪದ ಕ್ರಮವೆಂತೆಂದರೆ: ಇಂಗ್ರೇಜ ಕುಂಪನಿ ಸರಕಾರದ ದೋಸ್ತಿ ಮೆಹರ್ಬಾನಗಿ ನಿಶಾನಿ ಆಗಿ, ಬಂಗಾಳದ ನವಾಬ ಮಾಲಿಖುಲ್ ಅಲ್‌ಕಾಬ್ ಅಷರ್‌ಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲಿಸ್ಲಿ ಸಾಹೇಬ್ ಬಹಾದ್ದುರವರ ಹುಕುಂ ಪ್ರಕಾರ ಮೇಲೆ ಸದರಿ ಬರದು ಇರುವ ಸೀಮೆಯನ್ನು ಕೊಡೆಯಾಲದ ಇಲಾಖೆ ಸೀಮೆಯಿಂದಾ ವಿಂಗಡಿಸಿ ಬಂಗಾಳದ ದೊಡ್ಡ ಸಾಹೇಬ್ ಬಹಾದ್ದುರವರ ಕಡೆ ವಕೀಲರಾಗಿ ಬಂದು ಇರುವ ರಾಜಶ್ರೀ ಕಪಿತಾನ್ ದಿನಿಸ್ ಮಾವಿನಿ ಸಾಹೇಬರ ಮಾರಿಫತ್ತಿನಿಂದಾ ನಮ್ಮ ಸೀಮೆಗೆ ಸೇರಿಸಿ, ಸರಹದ್ದು ಬಂದುಬಸ್ತು ಮಾಡಿಸಿ ಕೊಡಿಸಿ ಇರುವದರಿಂದಾ, ಈ ವಿವರ ತಿಳಿದು, ಇಂಗ್ರೇಜ ಕುಂಪನಿ ಸರಕಾರದಿಂದಾ ನಿಮ್ಮ ಸುಖದುಃಖವನ್ನು ವಿಚಾರಿಸಿ, ನಿಮ್ಮಿಂದಾ ಆ ಸರಕಾರಕ್ಕೆ ಕಾಲಂಪ್ರತಿಯಲ್ಲು ವಾಜಬಿ ಸಲ್ಲತಕ್ಕ ಕಂದಾಯ ಕಾಣಿಕೆ ವಸೂಲು ಮಾಡಿಕೊಂಡು, ನಿಮ್ಮನ್ನು ಯಾವ ಮೇರೆ ಕಾಪಾಡುತ್ತಾ ಇದ್ದರೊ, ಅದೇ ಮೇರೆ ನಿಮ್ಮಿಂದಾ ನಮ್ಮ ಅರಮನೆಗೆ ಕಾಲಂಪ್ರತಿಯಲ್ಲು ಬರುವಂಥಾ ಕಂದಾಯ ಕಾಣಿಕೆಯನ್ನು ಲೆಖಾಚಾರ ಪ್ರಕಾರಕ್ಕೆ ವಸೂಲು ಮಾಡಿಸಿಕೊಂಡು, ನಿಮ್ಮ ಸುಖದುಃಖವನ್ನು ಸತ್ಯಸ್ಥಿತಿ ಆಗಿ ವಿಚಾರಿಸಿ ಪರಿಪಾಲನೆ ಮಾಡುವ ಬಗ್ಯೆ, ನಮಗೆ ಬಹಳ ಸಂತೋಷವಿರುವದರಿಂದಾ, ನೀವು ಸಮಸ್ತರು ನಮ್ಮ ಅರಮನೆ ಉಪ್ಪಿಗೆ ಸರಿಯಾಗಿ ಭಕ್ತಿಯಿಂದಾ ನಡದುಕೊಂಡು, ನಮ್ಮ ಅರಮನೆಗೆ ಕಾಲಂಪ್ರತಿಯಲ್ಲು ನಿಮ್ಮಿಂದಾ ಬರುವಂಥಾದನ್ನು ಇಂಗ್ರೇಜ್ ಸರಕಾರದಿಂದಾ ನಗದಿ ನಿಗದಿ ಆದ ಲೆಖಾಚಾರ ಪ್ರಕಾರಕ್ಕೆ ವಾಜಬಿ ಆಗಿ ಕೊಟ್ಟುಕೊಂಡು, ಪ್ರಜೆಗಳಿಗೆ ಸಲುವಂಥಾದ್ದನ್ನು ಪ್ರಜೆಗಳು ಅನುಭವಿಸಿಕೊಂಡು, ಸುಖರೂಪಿನಲ್ಲಿ ಅವರ ಪುತ್ರಪೌತ್ರಪಾರಂಪರ್ಯವಾಗಿ ಸಂತೋಷದಿಂದಾ ಬದುಕಬೇಕೆಂಬದಾಗಿ, ನಮಗೆ ಒಹಳ ಖುಷಿ ಇದೆ. ಆದ್ದರಿಂದ ಈ ವಿವರವನ್ನು ನಿಮಗೆ ನಿರೂಪದಲ್ಲು ಬರೆಸಿ, ಕರಣೀಕ ಸುಬ್ಬೈಯ್ಯನಿಗೂ ಮೊಕ್ತಾ

ಅಪ್ಪಣೆ ಕೊಟ್ಟು ಕಳುಹಿಸಿ ಇದೆ. ಎಲ್ಲಾ ವಿವರವು ಅವನ ಮುಖವಚನ ದಿಂದಾ ತಿಳಿದು, ನಿಮಗೆ ಸಂತೋಷವಾದೀತು. ಚಿಕ್ಕವರು, ದೊಡ್ಡವರು ಆಲಾ ಅದನಾ ಮುಂತಾದ ಸಮಸ್ತ ರೈತರು ನಿಮಕ್‌ಹಲ್ಲಾಗಿ ಸ್ವಾಮಿಕಾರ್ಯ ಧುರಂಧರರಾಗಿ ನಡಕೊಳ್ಳಬೇಕು. ಮೇಲಾದ ನಮ್ಮ ಅರಮನೆ ಸೀಮೆ ರೈತರು ಯಾವತ್ತು ಒಂದು ತಾಯಿಮಕ್ಕಳೋಪಾದಿ ಅನ್ಯೋನ್ಯದಲ್ಲಿ ಬಾಯಾ ಚಾರ ದೋಸ್ತಿಯಿಂದಾ ಹಕ್ಕು ವಾಜಬಿ ಲೇವಾದೇವಿ ಸತ್ಯಸ್ಥಿತಿ ಇದ್ದ ಮೇರೆ, ಕೊಡುಕೊಳ್ಳುವಲ್ಲಿ ವಿಹಿತವಿದ್ದ ಪ್ರಕಾರಕ್ಕೆ, ಕೂಡಿ ನಡಕೊಳ್ಳಬೇಕು. ಇದೇ ಮೇರೆ ಲೇವಾದೇವಿಯಲ್ಲಿ ಇಂಗ್ರೇಜ ಸರಕಾರದ ಸೀಮೆ ರೈತರೂ ನೀವೂ ಭೇದವಿಲ್ಲದೆ ಏಕರಾಜ್ಯವಾಗಿ ಅನ್ಯೋನ್ಯದಿಂದಾ ಹೆಣ್ಣು ಮದುವೆ ಮಾಡಿ ಕೊಡುವಲ್ಲಿ, ಮದುವೆ ಮಾಡಿಕೊಂಡು ತರುವಲ್ಲಿ, ವ್ಯಾಪಾರ ಕೊಡುವಲ್ಲಿ ತರುವಲ್ಲಿ, ಲೇವಾದೇವಿ ಯಥಾಸ್ಥಿತಿ ಆಗಿ, ನಡದುಕೊಳ್ಳಬೇಕು. ಈ ಮಾರ್ಗ ದಲ್ಲಿ ಅಪ್ಪಣೆ ಪ್ರಕಾರ ನಡದವರಿಗೆ ಆರೈಕೆಮಾಡಿ, ರಕ್ಷಣೆಯ ಮಾಡುವಂಥಾ ದ್ದಕ್ಕೆ ನಾವು ಬಹಳ ರಜಾವಂದಿಯಿಂದಾ ಖುಷಿ ಆಗಿ ಇದ್ದೇವೆ. ಮೇಲೆ ಬರದು ಇರುವ ಮಾರ್ಗ ಬಿಟ್ಟು, ತಮ್ಮ ತಮ್ಮ ಯುಕ್ತಯಾರಿಕೆಯಿಂದಾ, ಮನಸುಬಂದಂತೆ, ನಿಮಕ್‌ಹರಾಮತನ ಕೈಯಿಂದಾ ಮಾಡುವದು, ಬಾಯಿಂದ ಹೇಳುವದು, ನಿಮಕ್‌ಹರಾಮರ ದೋಸ್ತಿ ಮುಲಾಜ ಮಡಗುವದು, ಅರಮನೆಗೆ ಸಲುವಂಥಾ ವಡವೆ ಕೊಡದೆ, ತಕರಾರು ಮಾಡುವದು, ಕೊಡುವಂಥವರಿಗೆ ಕೊಡದ ಹಾಗೆ ಅಡ್ಡಿ ಮಾಡುವದು, ಅರಮನೆ ಸೀಮೆ ರೈತರಿಗಾಗಲಿ, ಇಂಗ್ರೇಜ ಕುಂಪನಿ ಸರಕಾರದ ಸೀಮೆ ರೈತರಲ್ಲಿ ಆಗಲಿ, ಕೊಡುವಂಥಾ ವಡವೆ ಕೊಡದೆ, ಕೊಡದಂಥಾ ವಡವೆ ಕೊಡಬೇಕು ಎಂತಾ ತಕರಾರು ಮಾಡುವದು, ಲೇವಾ ದೇವಿಯಲ್ಲಿ ಸುಳ್ಳು ಸಟೆ, ದಗಲ್‌ಬಾಜ, ವಿಶ್ವಾಸಘಾತಕ, ಕಳ್ಳತನ ಮಾಡಿ, ಸರಹದ್ದಿನಲ್ಲಿ ಈ ಕಡೆ ಆಗಲಿ, ಆ ಕಡೆ ಆಗಲಿ, ಜಲುಮೆ ಜಾಸ್ತಿ ತಂಟೆ ತಕ ರಾರು, ಚಾಡಿ ಕ್ಷುದ್ರ ಹೇಳಿ, ನ್ಯಾಯ ಮಾಡುವದು, ಇಂಥಾ ಅನ್ಯಾಯದ ಮಾರ್ಗವಿಡಿದು ಹೋಗುವಂಥಾ ದುಷ್ಟ ಜನರ ಮೇಲೆ ನಮ್ಮ ದಯ ವಳ್ಳಿತಾಗಿ ಬರಲಿಕ್ಕಿಲ್ಲಾ. ಇದರಿಂದಾ ಅವರಿಗೆ ಸುಖ ಬಾರದು ಎಂಬದನ್ನು ದುಷ್ಟ ಜನರು ತಿಳಿದು, ಈ ಅಲ್ಲದ ನಡತೆ ಬಿಟ್ಟು, ವಳ್ಳೇ ಮಾರ್ಗದಲ್ಲು ನಡದು, ನಮ್ಮ ದಯಕ್ಕೆ ಪಾತ್ರರಾಗಿ, ನಮ್ಮ ಉಪ್ಪಿಗೆ ಹಲಾಲಾಗಿ, ನಮ್ಮ ಸರಕಾರದ ಬೈರ್‌ಕಾ ಆಗಿ ಇರಬೇಕು. ಅವರನ್ನ ಆರೈಕೆ ಮಾಡಬೇಕೆಂಬದಾಗಿ, ಅವರ ಸುಖದುಃಖ

ವಿಚಾರಿಸಿ, ಅವರ ನಡತೆ ಇದ್ದಂತೆ ಆರೈಕೆ ಮಾಡಬೇಕೆಂಬದಾಗಿ ದರೀಯಾಪ್ತು ಮಾಡಲಾದೀತು. ಅಲ್ಲಿ ಅಮಲುಮಾಡುವಂಥಾ ವ ಪಾರುಪತ್ಯ ಮಾಡುವಂಥಾ ವ ಮೊಖ್ತೇಸರು ಸಹ ನಿಮ್ಮ ಸುಖದುಃಖ ದಾದ್ ಫಿರ್ಯಾದಿ ವಿಚಾರಿಸದೆ, ನಿಮಗೆ ದುಃಖಕೊಟ್ಟದ್ದುಂಟಾದರೆ, ಅಲಾ ಆಗಲಿ, ಅದನಾ ಆಗಲಿ, ಆ ಫಿರಿಯಾದಿ ತೆಗೆದುಕೊಂಡು ಬಂದು, ಸನ್ನಿಧಾನದಲ್ಲಿ ಅರಿಕೆ ಮಾಡಿದರೆ, ಅವನ ಸತ್ಯಸ್ಥಿತಿ ಇದ್ದ ಮೇರೆ, ಮಹಾದೇವ ಮೆಚ್ಚುವಂತೆ, ದರಿಯಾಪ್ತು ಮಾಡಲಾದೀತು ಎಂಬದ ನಿಶ್ಚಯ ತಿಳಿದು, ನಮ್ಮ ಅಪ್ಪಣೆ ಪ್ರಕಾರ ಕರಣೀಕ ಸುಬ್ಬೈಯ್ಯನು ಮೇಲಾದ ವಿವರ ಯಾವತ್ತೂ ಹೇಳಿ ತಿಳಿಸಲಾಗಿ, ನಿಮ್ಮನಸ್ಸಿಗೆ ಸಂತೋಷವಾದೀತು" ಎಂಬದಾಗಿ ಬರಸಿ ಕಳುಹಿಸಿಕೊಟ್ಟರು.

ಆ ಬಳಿಕ ಅದೇ ಸಂವತ್ಸರದ ಭಾದ್ರಪದ ೧೨ನೇ ತಾರೀಕಿನಲ್ಲು ಬಂಗಾಳದ ಲಾರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹದ್ದೂರವರಿಗೆ ಮಹಾರಾಜರು ಬರಸಿ ಕಳುಹಿದ ಕಾಗದದಲ್ಲಿ : "ದೊಡ್ಡ ಸರಕಾರದಿಂದಾ ನಮಗೆ ಇನಾಯತ ಮಾಡಿ ಇರುವ ಹೊಸ ಸೀಮೆ ಲೆಖ್ಖದ ಬಗ್ಯೆ, ವಕೀಲ ಕಪಿತಾನ್ ಮಾವಿನಿ ಸಾಹೇಬರ ಹಿಷಾರೆ ಮೇರೆ, ನಮ್ಮ ಕಡೆ ಕರಣೀಕ ಸುಬ್ಬೈಯ್ಯನ ಕೊಡೆಯಾಲದ ಕಡೆಗೆ ರವಾನೆ ಮಾಡಿ ಇದ್ದೆವು. ಅಲ್ಲಿ ಕಲೆಕ್ಟರ್ ಜಾನ್ ರೇವಿನ್‌ಶಾ ಸಾಹೇಬರವರು ಆ ಸೀಮೆ ಲೆಖ್ಖವನ್ನು ನಮ್ಮ ಕರಣೀಕ ಸುಬ್ಬೈಯ್ಯನಿಗೆ ದಾಖಲೆ ಬರೆಸಿಕೊಟ್ಟು ಆ ಸೀಮೆ ರೈತ ಮುಂತಾದ ಯಾವತ್ತು ಜನರು ನಮ್ಮ ಹುಕುಮಿನ ಒಳಗೆ ನಡಕೊಳ್ಳತಕ್ಕ ಬಗ್ಯೆ ಒಂದು ಇಸ್ತಿಹಾರುನಾಮಾ, ಬರಕೊಟ್ಟು, ಸನ್ ೧೨೧೯ನೇ ಹಿಜರಿ, ಜಮಾದಿಲ್ ಅವಲ್ ೯ನೇ ತಾರೀಕಿನಲ್ಲು, ಇಲ್ಲಿಗೆ ಅದರ ನಕಲನ್ನು ರವಾನೆ ಮಾಡಿ ಇದ್ದರು. ಇದಲ್ಲದೆ ಆ ಸೀಮೆಯಿಂದಾ ಪರಾಕು ಸಂವತ್ಸರದ ವಸೂಲು ಆದ ಹಣವನ್ನು ನಮಗೆ ಕೊಡುವ ಹಾಗೆ, ಮದರಾಸಿನ ಗೌವರ್ನರ್ ಸಾಹೇಬರವರು ತಾಕೀತಿ ಬರಸಿ ಇರುವುದನ್ನು ಆ ವಕೀಲ ಸಾಹೇಬರ ಮುಖವಚನದಿಂದಾ ತಿಳಿಯಬಂತು. ಈ ದೌಲತ್ತು ಕೊಡುವಂಥಾದ್ದು ಸರಫರಾಜು ಮಾಡುವಂಥಾದ್ದು ಯಾವತ್ತು ತಮ್ಮ ಪರವರ್ಷ ಮೆಹರ್ಬಾನಗಿಯಿಂದಾ ಎಂಬದು ನಮಗೆ ನಿಶ್ಚಯವಿದೆ. ನಾವು ಎಲ್ಲಿತನಕ ತಾರೀಫು ಮಾಡಿಯೇವು. ಅದರ ತಾರೀಫು ನಮ್ಮಿಂದಾ ಪೂರ್ತಿ ಆಗುವುದಿಲ್ಲಾ" ಎಂಬದಾಗಿ ಬರಸಿ ಕಳುಹಿಸಿಕೊಟ್ಟರು.

ಇದೇ ತಾರೀಕಿನಲ್ಲು ಮದರಾಸಿನ ಗವರ್ನರ್ ಲಾರ್ಡ್ ವಿಲಿಯಂ ಬೆಂಟಿಕ್ ಸಾಹೇಬ್ ಬಹದ್ದೂರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: "ನವಾಬ ಮಾಲಿವುಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹದ್ದೂರವರ ಹುಕುಂ ಪ್ರಕಾರ, ವಕೀಲ್ ಕೆಪ್ಟನ್ ದಿನ್ಸ್ ಮಾವಿನಿ ಸಾಹೇಬ್ ಮೆಹರ್ಬಾನ್‌ರವರು ವಕಾಲತ್ತಿನ ಹುದ್ದೆ ಮೇಲೆ ನೊಕರರು ಆಗಿ, ಇಲ್ಲಿಗೆ ಬಂದು, ಆ ಲಾರ್ಡ್ ಸಾಹೇಬರವರ ಇನಾಯತನಾಮೆಯನ್ನು ಈ ದೋಸ್ತಾರರಿಗೆ ಕೊಟ್ಟರು. ಅವರ ಕೈಫಿಯತ್ತಿನಿಂದ ಬಹಳ ಸಂತೋಷ ಸರಫರಾಜ ಹಾಸಲಾಯಿತು. ಬಂಗಾಳದ ಲಾರ್ಡ್ ಸಾಹೇಬರವರ ಹುಕುಂ ಪ್ರಕಾರ, ತಾವು ನಮಗೆ ಸೀಮೆ ಹೆಚ್ಚು ಮಾಡಿದ ವಿವರ ಆ ವಕೀಲ ಸಾಹೇಬ ರವರ ಮುಖವಚನದಿಂದಾ ತಿಳಿಯಬಂತು. ಅವರ ಹಿಷಾರೆ ಮೇಲೆ ವಕಾಲತ್ ನಾಮೆಯನ್ನು ನಮ್ಮ ಕರಣೀಕ ಸುಬ್ಬೈಯ್ಯನ ಕೈಲಿ ಕೊಟ್ಟು, ಕೊಡೆಯಾಲದ ಕಡೆಗೆ ರವಾನೆ ಮಾಡಿದಲ್ಲಿ, ಅಲ್ಲಿ ಕಲೆಕ್ಟರ್ ಜಾನ್ ರೆವಿನ್‌ಶಾ ಸಾಹೇಬರವ ರನ್ನು ಕಂಡು, ನಮ್ಮ ಕಡೆ ಸೇರಿದ ಹೊಸ ಸೀಮೆ ಲೆಕ್ಕಪಕ್ಕ ಯಾವತ್ತು ಬರಕೊಂಡು, ಇಸ್ತಿಹಾರುನಾಮೆ ತೆಗೆದುಕೊಂಡು, ಪುತ್ತೂರಿಗೆ ಬಂದು ಇದ್ದಾನೆ. ಆ ಇಸ್ತಿಹಾರುನಾಮೆಯಿಂದಾ ಇಷ್ಟು ಸೀಮೆ ಕುಂಪನಿ ಸರಕಾರದ ಕಡೆ ಯಿಂದಾ ಕೊಡಗಿನ ಸಂಸ್ಥಾನಕ್ಕೆ ಸೇರಿತು, ಎಂಬದಾಗಿ ಯಾವತ್ತು ಜನರಿಗೂ ತಿಳಿಯಬಂತು. ಇದಲ್ಲದೆ ಈ ಹೊಸ ಸೀಮೆಯಿಂದಾ ಪ್ರಾಕು ಸಂವತ್ಸರದ ವಸೂಲು ಆದ ಹಣವನ್ನು ನಮ್ಮ ಸರಕಾರಕ್ಕೆ ಕೊಡುವಂತೆ, ತಾವು ಹುಕುಂ ಕೊಟ್ಟು ಇರುವಂಥಾದ್ದು ವಕೀಲ ಸಾಹೇಬರ ಮುಖವಚನದಿಂದಾ ತಿಳಿಯ ಬಂದು, ಬಹಳ ಸಂತೋಷವಾಯಿತು. ಈ ಹಣ ಪ್ರಾಕು ಸಂವತ್ಸರದಲ್ಲಿ ದೊಡ್ಡ ಸರಕಾರದ ಖಜಾನೆಗೆ ದಾಖಲಾದಂಥಾದ್ದು. ಆ ದೊಡ್ಡ ಸರಕಾರದ ಖಜಾನೆಯಿಂದಾ ತೆಗೆದು ನಮಗೆ ಕೊಟ್ಟು ಇದ್ದೀರಿ. ಇದು ಬಹಳ ದೊಡ್ಡ ಮಾತು. ಈ ಮೆಹರ್ಬಾನಗಿ ತಾರೀಫು ಎಷ್ಟು ಮಾಡಿದಾಗ್ಯೂ ತೀರಲಿಕ್ಕಿಲ್ಲಾ. ಆದುಕಾರಣ ಬರದು ಇದ್ದೇವೆ" ಎಂಬದಾಗಿ ದೊರೆಗಳು ಬರೆಸಿ ಕಳುಹಿದಲ್ಲಿ, ಆದಕ್ಕೆ ಜವಾಬಾಗಿ ಅವರು ಬರಸಿ ಕಳುಹಿದ ಕಾಗದದಲ್ಲಿ: "ತಾವು ಕುಂಪನಿ ಸರಕಾರಕ್ಕೆ ಒಳ್ಳೇ ಪ್ರಯತ್ನಮಾಡಿ ಇರುವದರಿಂದಾ, ನವಾಬ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಗವರ್ನರ್ ಜನರಲ್

ಸಾಹೇಬರವರ ಹುಕುಂ ಪ್ರಕಾರ ಕೊಡೆಯಾಲದ ತಾಲೋಕಿನಲ್ಲಿ ಕೆಲವು ಸೀಮೆಯನ್ನು ತಮಗೆ ಕೊಡುವಹಾಗೆ ನಾವು ಬಂದು ತಾಕೀತಿ ಬರೆಸಿ ಕಳುಹಿಸಿ ಇದ್ದದ್ದು, ಅದು ಯಾವತ್ತು ತಮಗೆ ಪಸಂದು ಆದ್ದರಿಂದಾ, ನಮ್ಮ ಮನಸ್ಸಿಗೆ ಖುಷಿ ಆಯಿತು. ತಾವು ಬಹಳ ದೋಸ್ತಿಯಿಂದ ಹಮೇಶ ಇಂಗ್ರೇಜ ಸರಕಾರದ ಆಶ್ರಯ ಕಬೂಲು ಮಾಡಿ, ಕುಂಪನಿ ಸರಕಾರದ ಸಂಗಡ ಸಹಾಯವಾಗಿ ಇದ್ದದ್ದು, ಸರಕಾರದ ಸಕಾಯ ಬಹಳ ಸರಗರಮಿನಿಂದಾ ಮಾಡಿದ್ದು ಯಾವತ್ತು ನಾವು ಕೇಳಿ, ನಮ್ಮನಸ್ಸಿನಲ್ಲಿ ತಾವು ತಮ್ಮ ಪುತ್ರಪೌತ್ರರು ಸುಖದಿಂದಾ ಇರಬೇಕು ಎಂತಾ ಬೇಡಿಕೊಳ್ಳುತ್ತಾ ಇದ್ದೇವೆ. ತಾವು ಸಂತೋಷದಲ್ಲಿ ಇರುವಂಥಾದ್ದು ನಮ್ಮನಸ್ಸಿಗೆ ಬಹಳ ಖುಷಿ ಇದೆ" ಎಂಬದಾಗಿ ಮದರಾಸಿನ ಗವರ್ನರ್ ಸಾಹೇಬರವರು ಬರೆಸಿ ಕಳುಹಿಸಿ ಇದ್ದರು.

ಆಮೇಲೆ ಕೆಲವು ದಿವಸ ಕಳೆದ ಬಳಿಕ, ಸನ್ ೧೨೧೯ನೇ ಹಿಜರಿ, ರಮ್ಜಾನ್ ತಿಂಗಳಲ್ಲಿ, ಮೈಸೂರ ದರ್ಬಾರದಲ್ಲು ವಕೀಲರಾಗಿ ಇರುವ ಮಾರ್ಕ್ ಉಲ್ಕೀಸ್ ಸಾಹೇಬರವರು ಬರದ ಕಾಗದದಲ್ಲಿ: "ಸರಹದ್ದಿನ ವಿಷಯದಲ್ಲಿ ತಮಗೆ ಸ್ವಲ್ಪ ಅಂದೇಶವಿದೆ ಎಂಬದಾಗಿ ನಾವು ಕೇಳಿ ಇದ್ದೇವೆ. ಇದರ ಕಾರಣ ಸಾಹೇಬ ಮೆಹರ್ಬಾನ್ ದೋಸ್ತಾನ್ ಪೀಲ್ ಸಾಹೇಬ್ ಬಹದ್ದೂರವರಿಗೆ ತಮ್ಮ ಬಳಿಗೆ ರವಾನೆ ಮಾಡಬೇಕೆಂಬದಾಗಿ, ಯೋಚನೆ ಮಾಡಿ ಇದ್ದೇವೆ. ಆ ಸಾಹೇಬರ ಕಂಡು ದೋಸ್ತಿಯಿಂದಾ ಸರಹದ್ದಿನ ನ್ಯಾಯ ತೀರಿಸಬೇಕು. ತಾವು ಇರುವ ಜಾಗ ತಿಳಿಸಬೇಕು. ಈ ಕಾಗದದ ಜವಾಬು ಬರುತ್ತಲೆ, ಪೀಲ್ ಸಾಹೇಬರನ್ನು ರವಾನೆ ಮಾಡುತ್ತೇವೆ" ಎಂಬದಾಗಿ ಬರೆಸಿ ಕಳುಹಿಸಿದಲ್ಲಿ, ಅದಕ್ಕೆ ಜವಾಬಾಗಿ, ೧೨೧೯ನೇ ಹಿಜರಿ, ರಮ್ಜಾನ್ ತಿಂಗಳು, ೧೭ನೇ ತಾರೀಕಿನಲ್ಲು ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ: "ಸರಹದ್ದಿನ ವಿಷಯದಲ್ಲಿ ನಮಗೆ ಅಂದೇಶ ಇರುವದರಿಂದಾ, ಆ ನ್ಯಾಯ ತೀರಿಸುವದಕ್ಕೆ ಪೀಲ್ ಸಾಹೇಬ್ ಬಹದ್ದೂರವರ ಕಳುಹುತ್ತೇವೆ ಎಂಬದಾಗಿ ತಾವು ಬರೆಸಿ ಇರುವದ ನೋಡಿದಲ್ಲಿ, ನಮ್ಮನಸ್ಸಿಗೆ ಬಹಳ ಸಂತೋಷವಾಯಿತು. ಕೆಲವು ಸಬಬಿನಿಂದಾ ಸರಹದ್ದಿನಲ್ಲಿ ನಮಗೆ ಅಂದೇಶವಿತ್ತು ಇದಕಾರಣ ಜನರಲ್ ವೆಲ್ಲೆಸ್ಲಿ ಸಾಹೇಬರಿಗೆ ಜಾಹೇರು ಮಾಡಿ ಇದ್ದೆವು. ತಮಗೆ ಮಾಲುಂ ಆಗಿ ಇದ್ದೀತು. ಈಗ ಪೀಲ್ ಸಾಹೇಬ ಮೆಹರ್ಬಾನರವರು ಬರುತ್ತಾರೆ ಎಂಬದಾಗಿ ಹಿಷಾರೆ ಮಾಡಿದರಿಂದಾ ಬಹಳ ಖುಷಿ ಆಯಿತು. ಈ ದೋಸ್ತಾರರು ಮಡಿಕೇರಿ ಕೋಟೆಯಲ್ಲಿ ಇರುತ್ತೇವೆ" ಎಂಬ

ದಾಗಿ ಬರೆಸಿ ಕಳುಹಿಸಿದರಿಂದಾ, ಅದಕ್ಕೆ ದರ ಜವಾಬಾಗಿ, ಶವಾಲು ತಿಂಗಳು ೫ನೇ ತಾರೀಕಿನಲ್ಲು, ಮಾರ್ಕ್ ಉಲ್ಕೀಸ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ "ಸಾಹೇಬ ಮೆಹರ್ಬಾನ್ ಪೀಲ್ ಸಾಹೇಬರವರು ಬರುತ್ತಾರೆಂಬ ದಾಗಿ, ತಮ್ಮನಸ್ಸಿಗೆ ಸಂತೋಷವಾದ ವರ್ತಮಾನವು, ಖೈರಿಯತ್ತಿನಿಂದಾ ಮಡಿಕೇರಿ ಕೋಟೆಯಲ್ಲಿ ಇರುವ ವರ್ತಮಾನವು, ಬರೆಸಿ ಇದ್ದದ್ದು ತಿಳಿಯಬಂತು. ಮಹಾದೇವನ ಅಪ್ಪಣೆಯಿಂದಾ ಆ ಸಾಹೇಬರು ಮೂರು ದಿವಸದಲ್ಲಿ ಇಲ್ಲಿಂದಾ ರವಾನೆ ಆಗುತ್ತಾರೆ; ತಮ್ಮ ಮಿಲಾಕತ್ತು ಆಗಿ, ಖುಷಿ ಆದಾರು" ಎಂಬದಾಗಿ ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬಾಗಿ ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ: "ಪೀಲ್ ಸಾಹೇಬರು ಬರುವ ವರ್ತಮಾನ ಬರೆಸಿದ್ದು ತಿಳಿಯಬಂತು. ಅದರಿಂದ ನಮ್ಮನಸ್ಸಿಗೆ ಬಹಳ ಖುಷಿ ಆಯಿತು. ನಮ್ಮ ಕಡೆ ಕರಣೀಕ ಸುಬ್ಬೈಯ್ಯನನ್ನು ಇದುರುಗೊಂಡು ಕರತರುವ ಬಗ್ಯೆ, ಕಳುಹಿ ಇದ್ದೇವೆ. ಅವನು ಅದರ ಕಿದ್ಮತ್ತಿನಲ್ಲಿ ಹಾಜರಾಗಿ, ಅವರಿಗೆ ಬೇಕಾದ ಹಾಗೆ ಕಿದ್ಮತ್ತು ನೇಕಿ ಫಾಯಿದಾ ಹಾಸಲ್ ಮಾಡ್ಯಾನು. ಆ ಸಾಹೇಬರು ಇಲ್ಲಿಗೆ ಬಂದಲ್ಲಿ, ಅವರ ಮಿಲಾಕತ್ತಿನ ಫಾಯಿದೆಯಿಂದಾ ಖುಷಿ ಆದೇವು" ಎಂಬದಾಗಿ ಬರೆಸಿ ಕಳುಹಿದರು.

ಆ ಬಳಿಕ ಮೈಸೂರ ದರ್ಬಾರದಲ್ಲಿ ಇರುವ ಪೀಲ್ ಸಾಹೇಬರವರು, ಕಲಿಸಂದ ೪೯೦೭ನೇ ರಕ್ತಾಕ್ಷಿ ಸಂವತ್ಸರದ ಪುಷ್ಯ ಬ. ೪ರಲ್ಲು ಮಡಿಕೇರಿಗೆ ಬಂದು, ಮಹಾರಾಜರವರ ಮಿಲಾಕತ್ತು ಆಗಿ, ಜನರಲ್ ವೆಲ್ಲೆಸ್ಲಿ ಸಾಹೇಬರವರು ರಾಜರವರಿಗೆ ಬರದು ಇದ್ದ ಕಾಗದವನ್ನು ಕೊಟ್ಟರು. ಆ ಕಾಗದದಲ್ಲಿ: "ಮೊದಲು ಸರಹದ್ದಿನ ಅಭಿಪ್ರಾಯವಾಗಿ ತಾವು ಬರೆಸಿ ಕಳುಹಿಸಿ ಇದ್ದದ್ದು ಜ್ನಾಪಕ ಇದ್ದೀತು. ಸರಹದ್ದಿನ ವ್ಯಾಜ್ಯ ತೀರಿಸುವ ಬಗ್ಯೆ, ಈವರೆಗೆ ತಾಮಸವಾದ ಕಾರಣವೇನು ಎಂದರೆ: ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕಡೆಯಿಂದಾ ಯಾರಿಗಾದರೂ ಸರದಾರರಿಗೆ ಕಳುಹಿಸುವ ಬಗ್ಯೆ ಸಂದರ್ಭ ಆಗಲಿಲ್ಲಾ. ಈಗ ಸಾಹೇಬ ಮೆಹರ್ಬಾನ್ ದೋಸ್ತಾನ್ ಪೀಲ್ ಸಾಹೇಬ್ ಬಹದ್ದೂರವರ, ಸರಹದ್ದಿನ ನ್ಯಾಯ ತೀರಿಸುವ ಬಗ್ಯೆ, ಕಳುಹಿಸಿ ಇದ್ದೇವೆ. ಆ ಸಾಹೇಬರು ಈ ಕಾಗದವನ್ನು ತಮಗೆ ತಲಪಿಸ್ಯಾರು. ಅವರು ಬಹಳ ಉಮ್ದಾ ಸಾಹೇಬರು, ಸತ್ಯದಿಂದಾ ನಡವಂಥಾ ದೋಸ್ತಾರರಿದ್ದಾರೆ. ಎಲ್ಲಾ

ಬಗೆಯಲ್ಲು ತಾರೀಫು ಉಳ್ಳಂಥವರು. ತಾವು ಇತಬಾರಿ ಮಡಗುವಂಥಾ ಲಾಯಖಿನವರಿದ್ದಾರೆ. ಈಗ ಸರಹದ್ದಿನ ತಕ್ರಾರು ಪೀಲ್ ಸಾಹೇಬರು ತೀರಿಸುವಲ್ಲಿ, ಉಭಯ ಕಡೆಯಿಂದಲೂ ಉಮ್ಮೆದಾ ಜನರು ಬೇಕಿಲ್ಲಾ. ಇಲ್ಲಿ ಜನರು ಮನಸ್ಸಿನ ದೋಸ್ತಿಯಿಂದಾ ಹೇಳುತ್ತಾರೆ. ಮನಸಿನಲ್ಲಿ ಇರುವ ಮೊದಲಿನ ಕಪಟ ದೂರಮಾಡಬೇಕು. ದೋಸ್ತಿ ಹಾಸಲ್ ಮಾಡಬೇಕು. ಇದರಿಂದ ಉಭಯ ಕಡೆಗೂ ಶುಭವಿದೆ. ಉಭಯ ಕಡೆ ರೈತರಿಗೂ ಫಾಯದೆ ಉಂಟು. ಇಲ್ಲಿ ಜನರು ಹೇಳುತ್ತಾರೆ. ಇದು ಹೊರ್ತು ಇನ್ನೊಂದು ಯೋಚನೆ ಮನಸ್ಸಿನಲ್ಲು ಇಲ್ಲಾ. ತಾವು ಸತ್ಯದಿಂದಾ ನಡಿಯುವಂಥವರು, ಬುದ್ಧಿ ದೊಡ್ಡ ದಾಗಿ ಇರುವಂಥವರು ಮೇಲೆ ಬರದ ಮೇರೆ ಅಮಲು ಮಾಡಿಸೀರಿ. ಈ ದೋಸ್ತುದಾರರು ಈ ಬರದು ಇರುವ ವಿವರ ದೊಡ್ಡದು ಮಾಡಬಾರದು. ತಾವು ನಿಶ್ಚಯವಾಗಿ ತಿಳಿಯಬೇಕು. ಮೈಸೂರ ಅರಸುಗಳ ಸರಕಾರವೂ ತಮ್ಮ ಸರಕಾರವೂ ತಮ್ಮೊಳಗೆ ಏಕೀಕರವಾಗಿ ದೋಸ್ತಿಯಿಂದಾ ಕೂಡಿ ಇರಬೇಕು ಎಂಬದಾಗಿ, ನವಾಬ ಮಾಲಿವುಲ್ ಅಲ್ಕಾಬ್, ಅಷರಫುಲ್ ಅಷರಾಫ್ ಗವರ್ನರ್ ಜನರಲ್ ಸಾಹೇಬ್ ಬಹದ್ದೂರವರ ಮನಸ್ಸಿನಲ್ಲಿ ಈ ಮೇರೆ ಇದೆ" ಎಂಬದಾಗಿ ಬರಸಿ ಇದ್ದರು.

ಇದಕ್ಕೆ ದರ ಜವಾಬಾಗಿ ವೀರರಾಜೇಂದ್ರ ವಡೆಯರವರು ಪುಷ್ಯ ಬ. ೧೦ರಲ್ಲು ಬರಸಿ ಕಳುಹಿದ ಕಾಗದದಲ್ಲಿ : "ಸಾಹೇಬ ಮೆಹರ್ಬಾನ್ ಜಾನ್ ಹೆನ್ರಿ ಪೀಲ್ ಸಾಹೇಬರವರು ಬಂದು, ತಮ್ಮ ಮೆಹರ್ಬಾನಗಿ ಕಾಗದ ನಮಗೆ ಕೊಟ್ಟರು. ಅದನ್ನು ನೋಡಿದಲ್ಲಿ ಪೀಲ್ ಸಾಹೇಬರವರು ಸರಹದ್ದಿನ ನ್ಯಾಯ ತೀರಿಸಿ, ಮೈಸೂರ ಅರಸುಗಳ ಸರಕಾರಕ್ಕೂ ತಮ್ಮ ಸರಕಾರಕ್ಕೂ ದೋಸ್ತಿ ಪಾಯಾ ಸಾಬೂತು ಮಾಡುವದರಿಂದಾ, ಉಭಯ ಕಡೆ ರೈತರಿಗೂ ಸುಖವೂ, ಫಾಯಿದೆಯೂ ಸಹಾ ಇದೆ ಎಂಬದಾಗಿ, ಬರೆಸಿದ್ದು ತಿಳಿಯಬಂತು. ನಮ್ಮ ನಸ್ಸಿಗೆ ಸಂತೋಷವಾಯಿತು. ಮೊದಲು ಟೀಪುಸುಲ್ತಾನರಿಗೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಸಲ್ಲಾ ಆದ ಸಮಯದಲ್ಲಿ ಇಂಗ್ರೇಜ ದೊಡ್ಡ ದೊಡ್ಡ ಸರದಾರರು ಕೊಡಗಿನ ಸೀಮೆ ಸರಹದ್ದು ಮೊಕರರು ಮಾಡಿ, ಆದರ ವಿವರ ಯಾವತ್ತು ತಪಶೀಲಲ್ಲು ಬರದು, ಮಲೆವಾರಿ ಕಮಿಷನರ ಬಳಿಗೆ ತಲಪಿಸಿ, ಬಹಳ ಕಾಗದಗಳು ಈ ಸರಹದ್ದಿನ ವಿಷಯವಾಗಿ ಬರದ್ದು, ಸನ್ನದಿನ ಮೇರೆ ನಮ್ಮ ಬಳಿಯ ಹಾಜರು ಇತ್ತು. ಅದನ್ನು ಈಗ ಪೀಲ್ ಸಾಹೇಬರಿಗೆ

ತೋರಿಸಿ ಇದ್ದೇವೆ. ಇದಲ್ಲದೆ ಮಲೆವಾರಿಯಿಂದಾ ಬಂದಿರುವ ತಪಶೀಲು ಹಾಜರು ಇದೆ. ಈ ವಿವರ ಯಾವತ್ತು ಪೀಲ್ ಸಾಹೇಬರವರ ಮುಖವಚನ ದಿಂದಾ ತಮ್ಮ ಕಿದ್ಮತ್ತಿಗೆ ಜಾಹೇರು ಆದೀತು. ಇದಲ್ಲದೆ ನವಾಬ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಗವರ್ನರ್ ಜನರಲ್ ಸಾಹೇಬ್ ಬಹದ್ದೂರವರ ಮನಸ್ಸಿನಲ್ಲಿ ಮೈಸೂರ ಸರಕಾರವೂ ನಮ್ಮ ಸರ ಕಾರವೂ ದೋಸ್ತಿಯಿಂದಾ ಏಕೀಕರವಾಗಿ ಇರಬೇಕು ಎಂತಾ ಇದೆ ಎಂಬದಾಗಿ ತಾವು ಬರಸಿ ಇರುವುದು ಸರಿಯುಷ್ಟೆ. ಈ ಬಗ್ಯೆ ಈ ದೋಸ್ತುದಾರರು ಇಂಗ್ರೇಜ ಬಹಾದ್ದರ ಕುಂಪನಿ ದೊಡ್ಡ ಸರಕಾರದ ಆಶ್ರಯ ಪರ್ವರ್ಷಿಯಾ ಒಳ್ಳೇ ದೋಸ್ತುದಾರರ ದೋಸ್ತಿಯೂ ಹೊರ್ತು, ಎರಡನೇ ಅಪೇಕ್ಷೆ ನಮ್ಮ ಮನಸ್ಸಿನಲ್ಲಿ ಇಲ್ಲಾ. ಈ ಮಾತು ತಮ್ಮ ಮನಸ್ಸಿನಲ್ಲು ಚಿತ್ರ ಬರದ ಹಾಗೆ ಇದ್ದೀತು. ಈ ದೋಸ್ತುದಾರರು ಎಲ್ಲಾ ಬಗೆಯಿಂದಲೂ ಕುಂಪನಿ ಸರಕಾರದ ತಾಬೆ ಆಗಿ, ನವಾಬ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಗವರ್ನರ್ ಜನರಲ್ ಬಹಾದ್ದೂರವರ ಹುಕುಮಿನ ಒಳಗೆ ಇದ್ದೇವೆ. ಈ ಯಾವ ಕಾರ್ಯಕ್ಕೂ ದೊಡ್ಡ ಸರಕಾರದ ಮರ್ಜಿಯೂ ತಮ್ಮ ಮರ್ಜಿಯೂ ಯಾವ ಮೇರೆ ಇದೆಯೋ, ಆ ಮೇರೆ ಹಾಜರು ಇದ್ದೇವೆ" ಎಂಬದಾಗಿ ಬರಸಿ, ಪೀಲ್ ಸಾಹೇಬರವರ ಕೈಯ ಕೊಟ್ಟರು.

ಆ ಬಳಿಕ ಜಾನ್ ಹೆನ್ರಿ ಪೀಲ್ ಸಾಹೇಬರವರ ಸಂಗಡ: "ನೀವು ಇಲ್ಲಿಗೆ ಬಂದ ಪೂರ್ವೋತ್ತರ ಏನು ಎಂತಾ ಬರದುಕೊಡಬೇಕು" ಎಂಬದಾಗಿ, ವೀರರಾಜೇಂದ್ರ ವಡೆಯರವರು ಕೇಳಿದಲ್ಲಿ, ಅವರು ಬರಕೊಟ್ಟ ಕಾಗದದ ವಿವರ: "ಮೈಸೂರ ಅರಸುಗಳ ಸರಕಾರಕ್ಕೂ ತಮಗೂ ಬಹಳ ದಿವಸದಿಂದಾ ಸರಹದ್ದಿನ ವ್ಯಾಜ್ಯ ಇದೆ. ಇದರಿಂದ ವ್ಯವಸಾಯಕ್ಕೆ ಅಡ್ಡಿ ಆಗಿ ಫಾಯಿದೆ ಇಲ್ಲದೆ ಹೋಗಿ, ಉಭಯ ಸರಕಾರಕ್ಕೂ ಖುಷಿ ಇಲ್ಲದೆ, ವಿರುದ್ಧ ವಾಗುತ್ತಾ ಇದೆ. ಎರಡು ಸರಕಾರವೂ ಕುಂಪನಿ ದೊಡ್ಡ ಸರಕಾರದ ಇಲಾಖೆ ಒಳಗೆ ಇದ್ದು, ಒಂದಕ್ಕೊಂದು ಜಿದ್ದು ಮಾಡುವಂಥಾದ್ದು ವಿಹಿತವಲ್ಲಾ. ಈ ನ್ಯಾಯ ತೀರಿಸಿ ಕಲ್ಲುಗಳ ನಿಲ್ಲಿಸಿದರೆ, ಉಭಯ ಸರಕಾರಕ್ಕೂ ದೋಸ್ತಿ ಜಾಹೇರು ಆದೀತು. ಇದೇ ಮಾತಿನ ಬಗ್ಯೆ ನಾವು ಬಂದು ಇದ್ದೇವೆ. ಈ ನ್ಯಾಯ ತೀರಿಸಿ, ಕಲ್ಲುಗಳ ನಿಲ್ಲಿಸಬೇಕು ಎಂಬದಾಗಿ ತಮಗೆ ತಿಳೀಪಡಿಸು ತ್ತೇವೆ. ಕೆಲು ಕಾರಣದಿಂದಾ, ಮೈಸೂರ ಅರಸುಗಳ ಸರಕಾರ ಸಿದ್ಧೇಶ್ವರನ

ಬೆಟ್ಟದಿಂದ ಸಿದ್ಧಾಪುರದ ಕಡಂಗ ಪರಿಯಂತರ ಭೂಮಿ ನಮ್ಮದು ಎಂತಾ ಹೇಳುತ್ತಾರೆ. ಈ ಮಾತಿನ ಬಗ್ಯೆ ಹಳೇ ಸಾಕ್ಷಿಮಾತುಗಳ ತೆಗೆಯುತ್ತಾರೆ. ಬೇರೆ ಒಂದು ಕಾಗದದಲ್ಲಿ ಪಟ್ಟಿ ಬರದು ಇದೆ. ಅದ ನೋಡಿದಲ್ಲಿ ತಿಳಿಯ ಬಂತು. ಇಂಥಾ ಸಾಕ್ಷಿಮಾತುಗಳ ಮೇಲೆ ದೃಷ್ಟಿ ಮಡಗಬೇಕೆಂಬದು ನಮಗೆ ಜರೂರು ಇಲ್ಲಾ. ಯಾತರಿಂದಾ ಎಂದರೆ: ಬಹಳ ಕಾಲ ದಾಟಿ ಹೋದಮೇಲೆ ಇದು ಸಹಜ, ಇದು ಅಸಹಜ, ಎಂಬದು ತಿಳೀಬರುವದಿಲ್ಲಾ. ಆದಾಗ್ಯೂ ಈ ಕಳುದ ಹೋದ ವರ್ಷಗಳಲ್ಲಿ ಒಂದು ವರ್ಷ ಮೊಕರರು ಮಾಡ ಬೇಕು; ಆ ವರ್ಷದಲ್ಲಿ ಈ ಭೂಮಿ ಯಾವ ಕಡೆ ಸೇರಿ ಇತ್ತು ಎಂತಾ ದಸ್ತೈ ವಜು ತೆಗೆದುಕೊಂಡು, ಸರಹದ್ದು ಮೊಕರರು ಮಾಡಬೇಕು. ಈ ಮಾತು ತೀರಿಸುವ ಬಗ್ಯೆ ಮೊದಲು ಲಾರ್ಡ್ ಕಾರ್ನವಾಲೀಸ್ ಸಾಹೇಬ್ ಬಹದ್ದೂರ ವರು ಟೀಪುಸುಲ್ತಾನ ಬಹದ್ದೂರವರ ಕೈಯಿಂದ ಕೊಡಗಿನ ಸೀಮೆ ತೆಗೆದು ಕೊಂಡು, ಕೌಲು ಕರಾರುನಾಮಾ ಬರದು ಇದ್ದರು. ಸನ್ ೧೭೭೨ನೇ ಇಸವಿ ವರ್ಷ ಮೊಕರರು ಮಾಡಬೇಕು, ಇದಲ್ಲದೆ ಮೈಸೂರ ಅರಸುಗಳ ಇರಾದಾ ಭೂಮಿ ಹೆಚ್ಚುಮಾಡಬೇಕೆಂಬದು ಇಲ್ಲಾ. ಸರಹದ್ದುಗಳ ಕಲ್ಲುಗಳ ನಿಲ್ಲಿಸಿದರೆ, ಈ ಭೂಮಿ ಎಲ್ಲರಿಗೂ ತಿಳಿಯುತ್ತಾ ಇದೆ. ಮುಂದೆ ವ್ಯಾಜ್ಯ ತಕ್ರಾರು ಬರಲಿಕ್ಕೆ ಇಲ್ಲಾ, ಎಂಬ ಇರಾದೆ ಇದೆ. ತಾವು ನಿಶ್ಚಯವಾಗಿ ತಿಳಿಯಬೇಕು. ಆ ಅರಸುಗಳು ತಮ್ಮ ದೋಸ್ತಿ ಮೇಲೆ ದೃಷ್ಟಿ ಮಡಗಿ ಈ ತಕ್ರಾರಿನ ಭೂಮಿ ಅವರ ರಜಾವಂದಿಯಿಂದಾ ಬಿಟ್ಟಾರು. ಉಭಯ ಸರಕಾರಕ್ಕೂ ದೋಸ್ತಿಮಾಡ ಬೇಕೆಂಬದಾಗಿ ನಾವು ಬಂದು ಇದ್ದೇವೆ. ಆ ಅರಸುಗಳ ಇರಾದಾ, ನಮ್ಮ ಇರಾದಾ ಸಹಾ, ಈ ದೋಸ್ತಿ ಹೊರ್ತು ಮತ್ತೊಂದಿಲ್ಲಾ, ತಮ್ಮ ಮನಸ್ಸಿನಲ್ಲು ಈ ನ್ಯಾಯ ತೀರಿಸಬೇಕೆಂತಾ, ಕಾಣಬಂದೀತು. ಇದಲ್ಲದೆ ನವಾಬ ಮುಸ್ತ ತಾಬ್ ಮಾಲಿವುಲ್ ಅಲ್ಕಾಬ್ ಅಷರ್‌ಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಸ್ಲಿ ಗವರ್ನರ್ ಜನರಲ್ ಬಹದ್ದೂರವರ ಇರಾದೆಯು ಎರಡು ಸರಕಾರವು ದೋಸ್ತಿಯಿಂದಾ ನಡೆಯಬೇಕೆಂಬದಾಗಿ ಇದೆ" ಎಂತಾ ಬರದು, ಇದರ ಸಂಗಡ ಆ ಬಗೆ ಮೈಸೂರು ಅರಸುಗಳು ಬರದ ಪಟ್ಟಿ ಸಹಾ ಮಹಾರಾಜರವರಿಗೆ ಕೊಟ್ಟರು.

ಆ ಪಟ್ಟಿಯಲ್ಲಿ ಬರದು ಇದ್ದ ವಿವರ: "ಪ್ರಾಕು ಕೊಡಗಿನ ಸೀಮೆ

ಸರಹದ್ದು ಸಿದ್ಧಾಪುರದ ಕಂದಕ ಪರಿಯಂತರ ಇದೆ. ಆ ಕಂದಕದ ಹೊರಗೆ ಕೊಡಗಿನ ರಾಜರ ಇಲಾಖೆ ಇತ್ತಿಲ್ಲಾ. ಕೊಡಗು ತೆಗೆದುಕೊಳ್ಳುವದಕ್ಕೆ ಮೊದಲು, ಆ ಕಂದಕದ ಸಮೀಪದಲ್ಲಿ ಪಿರಿಯಾಪಟ್ಟಣದ ತಾಲೂಕಿನ ಚನ್ನೈನ ಕೋಟೆ ಹೋಬಳೀದು ಇಪ್ಪತ್ತೇಳು ಗ್ರಾಮ ಉಕ್ತಲ್‌ಷಾಹರವರಿಗೆ ಜಹಗೀರು ಇತ್ತು. ಶೀರಿಹೋದ ಹೈದರಲ್ಲೀಖಾನರು ವಿಜಯ ಸಂವತ್ಸರದಲ್ಲಿ ಕೊಡಗು ತೆಗೆದುಕೊಂಡರು. ಅಪ್ಪಾಜಿರಾಜರಿಗೆ ಅಲ್ಲಿ ಅಮಲು ಕೊಟ್ಟರು. ಆವಾಗ್ಯೆ ಕೊಡಗಿನ ಸರಹದ್ದು ಅದೇ ಸಿದ್ಧಾಪುರದ ಕಂದಕ ಪರಿಯಂತರ ಇತ್ತು. ಆ ಗ್ರಾಮಗಳು ಪಿರಿಯಾಪಟ್ಟಣದ ಇಲಾಖೆ ಒಳಗೆ ಇತ್ತು. ಶೋಭಕೃತು ಸಂವತ್ಸರದಲ್ಲಿ ಹೈದರಲ್ಲೀಖಾನರು ಶೀರಿಹೋದರು. ಉತ್ತೆನಾಯಕನು ಜಗಳಾ ಮಾಡಿಕೊಂಡು, ಕೊಡಗು ಸೀಮೆಯನ್ನು ತನ್ನ ಸ್ವಾಧೀನ ಮಾಡಿಕೊಂಡು, ಆ ಗ್ರಾಮಗಳನ್ನು ಸುಟ್ಟು, ಹಾಳುಮಾಡಿದ. ಅಲ್ಲಿ ರೈತರು ಹಲಾಕಾಗಿ ತೀನುತೇರಾ ಆಗಿಹೋದರು. ಗ್ರಾಮಗಳಲ್ಲಿ ದೀಪ ಉರಿಯಲಿಲ್ಲಾ. ಹಾಳು ಬಿದ್ದುಹೋಯಿತು. ಕ್ರೋಧಿ ಸಂವತ್ಸರದಲ್ಲಿ ಟೀಪುಸುಲ್ತಾನರು ಕೊಡಗಿಗೆ ಹೋಗಿ, ಉತ್ತೆನಾಯಕನನ್ನು ಕೊಂದುಹಾಕಿ, ಸರಕಾರದ ಠಾಣ್ಯೆ ಕಾಯಂ ಮಡಗಿ, ಅಮಲುದಾರ ಕಿಲ್ಲೆದಾರರ ಸಹಾ ಕೊಡಗಿನಲ್ಲಿ ಮೊಕರರು ಮಾಡಿದರು. ಆವಾಗ್ಯೂ ಕೊಡಗಿನ ಸರಹದ್ದು ಆ ಸಿದ್ಧಾಪುರದ ಕಂದಕವಾಗಿ ಇತ್ತು. ಉಕ್ತಲ್‌ಷಾರವರ ಜಹಗೀರು ಮೊಖೂಪು ಮಾಡಿದರು. ಆ ಗ್ರಾಮಗಳನ್ನು ಸಾಗುಮಾಡಿಸುವ ಹಾಗೆ, ಪಿರಿಯಾಪಟ್ಟಣದ ಅಮಲುದಾರರಿಗೆ ತಾಕೀತು ಮಾಡಿದರು. ಅದಾಗ್ಯೂ ರೈತರು ಜಮಾ ಆಗದ್ದರಿಂದಾ, ಆ ಗ್ರಾಮಗಳು ಸಾಗು ಆಗಲಿಲ್ಲಾ. ಕೀಲಕ ಸಂವತ್ಸರದಲ್ಲಿ ವೀರರಾಜೇಂದ್ರ ಸಾಹೇಬರವರು ಪಿರಿಯಾಪಟ್ಟಣದ ಕೋಟೆ ಒಳಗೆ ಇದ್ದರು. ಅಲ್ಲಿಂದಾ ಕೊಡಗಿಗೆ ಹೋಗಿ, ಮಡಿಕೇರಿ ಕೋಟೆ ಒಳಗೆ ಠಾಣ್ಯೆ ಇದ್ದಂತೆ, ಕೊಡಗಿನ ಜನರ ಜಮಾಯಿಸಿ ಕೊಂಡು, ಕೊಡಗಿನ ಸೀಮೆಯನ್ನು ಅವರ ಸ್ವಾಧೀನಮಾಡಿಕೊಂಡರು. ಮಡಿಕೇರಿ ಕೋಟೆ ಒಳಗೆ ಇದ್ದ ಠಾಣ್ಯೆ ಅದೇ ಮೇರೆ ಕಾಯಂ ಆಗಿ ಇತ್ತು. ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ ಬಹದ್ದೂರವರು ಬೆಂಗಳೂರಿಗೆ ಬಂದಾಗ್ಯೆ, ಟೀಪುಸುಲ್ತಾನರು ಠಾಣ್ಯೆ ಇದ್ದ ಜನರ ಕರೆಸಿಕೊಂಡರು. ಆ ಲಾರ್ಡ್ ಸಾಹೇಬರವರು ವಿರೋಧಿಕೃತು ಸಂವತ್ಸರದ ಕಡೆಗಾಲದಲ್ಲಿ ಶ್ರೀರಂಗ

ಪಟ್ಟಣಕ್ಕೆ ಬಂದು, ಕೊಡಗಿನ ಸೀಮೆಯನ್ನು ವೀರರಾಜೇಂದ್ರ ಸಾಹೇಬರವರಿಗೆ ಮೆಹರ್ಬಾನಗಿ ಮಾಡಿಕೊಟ್ಟರು. ಕಾಳಯುಕ್ತಿ ಸಂವತ್ಸರದವರೆಗೆ ವೀರ ರಾಜೇಂದ್ರ ಸಾಹೇಬರವರ ಅಮಲು ಸಿದ್ದಾಪುರದ ಕಂದಕ ಪರಿಯಂತರ ಇತ್ತು. ಈಗ ಶ್ರೀರಂಗಪಟ್ಟಣವನ್ನು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದವರು ತೆಗೆದುಕೊಂಡಮೇಲೆ ಸಿದ್ಧಾರ್ಥಿ ಸಂವತ್ಸರದಿಂದಾ ವೀರರಾಜೇಂದ್ರ ಸಾಹೇಬ ರವರು ಪಿರಿಯಾಪಟ್ಟಣದ ಇಲಾಖೆ ಚನ್ನೈನ ಕೋಟೆ ಹೋಬಳಿ ಇಪ್ಪತ್ತೇಳು ಗ್ರಾಮವು ಅವರ ತಾಬೆ ಮಾಡಿಕೊಂಡು, ಅದರ ಸಂಗಡ ಈ ಕಡೆ ಸಿದ್ದಾಪುರದ ಕಂದಕ ಪರಿಯಂತರ ಅಗಲದಲ್ಲಿ ಪೂರ್ವ–ಪಶ್ಚಿಮಕ್ಕೆ ಮೂರು ಅರೆ ಹರದಾರಿ ಉದ್ದದಲ್ಲಿ, ಉತ್ತರ–ದಕ್ಷಿಣಕ್ಕೆ ನಾಲ್ಕು ಹರದಾರಿ ಭೂಮಿ ಸಹಾ, ಆ ಇಪ್ಪತ್ತೇಳು ಗ್ರಾಮ ಯಾವತ್ತೂ ಆಬಾದು ಮಾಡಿ ಇದ್ದಾರೆ. ಈ ವಿಷಯದಲ್ಲಿ ಬೇರೆ ಒಂದು ಪಟ್ಟಿ ಬರಸಿ ಇದ್ದೇವೆ. ಅದರಿಂದಲೂ ತಿಳಿಯಬಂದೀತು" ಎಂಬದಾಗಿ ಬರದ ಪಟ್ಟಿ.

ಇದಕ್ಕೆ ಜವಾಬಾಗಿ ಪೀಲ್ ಸಾಹೇಬರವರಿಗೆ ಬರದುಕೊಟ್ಟ ವಿವರ: "ಮೈಸೂರ ಅರಸುಗಳು ಸಿದ್ಧೇಶ್ವರನ ಬೆಟ್ಟದಿಂದ ಸಿದ್ದಾಪುರದ ಪೇಟೆ ಕಂದಕ ಪರಿಯಂತರ ಭೂಮಿ ತಮ್ಮ ಇಲಾಖೆ ಎಂಬದಾಗಿ ತಿಳಿದು, ಹಳೆ ಸಾಕ್ಷಿ ಮಾತಿನಿಂದಾ ವಿಂಗಡವಾಗಿ ಒಂದು ಪಟ್ಟಿಯನ್ನು ಬರೆಸಿ ಇದ್ದದ್ದು ಸರಿಯಷ್ಟೆ. ಅದು ತಮ್ಮ ಕಾಗದದ ಸಂಗಡ ಬಂದು ಮುಟ್ಟಿತು. ಅದರ ವಿವರ ತಿಳಿಯ ಬಂತು. ಸರಹದ್ದಿನ ಮಾತು ತೀರಿಸುವ ಬಗ್ಗೆ, ಹಳೆ ಮಾತಿನ ಮೇಲೆ ದೃಷ್ಟಿ ಮಡಗುವದಿಲ್ಲಾ. ಯಾತರಿಂದಾ ಎಂದರೆ: ಬಹಳ ವರ್ಷ ಕಳುದುಹೋದ ಕಾರಣ ಸಹಜ ಅಸಹಜ ಎಂತಾ, ತಿಳಿಯುವದಿಲ್ಲಾ. ಅದರಿಂದ ಕೊಡಗಿನ ಸೀಮೆ ಟೀಪುಸುಲ್ತಾನರ ಹುಕುಮತ್ತಿನಿಂದಾ ತೆಗೆದುಹೋಗಿ, ನವಾಬ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬರವರ ಹುಕುಮತ್ತಿನ ಒಳಗೆ ಬಂದು ಇರುವ ವರ್ಷ ಸರಹದ್ದು ಮೊಕರರು ಮಾಡಬೇಕೆಂಬದಾಗಿ ಹಿಷಾರೆ ಮಾಡಿ ಇರುವದು ಸರಿಯಷ್ಟೆ. ಅಂಥಾ ಹಳೆ ಸಾಕ್ಷಿಮಾತುಗಳು ಬಹಳ ಇತ್ತು. ಅದೆಲ್ಲಾ ಬಿಟ್ಟು, ನಾವು ಯಾವಾಗ್ಯೆ ಪಿರಿಯಾಪಟ್ಟಣ ಬಿಟ್ಟು, ನಮ್ಮ ಕದೀಂ ಕೊಡಗಿನ ಸೀಮೆಗೆ ಬಂದಂಥಾ ಕೀಲಕ ಸಂವತ್ಸರದಿಂದ ರುಧಿರೋದ್ಗಾರಿ ಸಂವತ್ಸರದವರೆಗೆ ಹದಿನಾರು ವರ್ಷವಾಯಿತು. ಇದರ ಒಳಗೆ ಕೊಡಗಿನ

ಸೀಮೆ ಸರಹದ್ದಿನ ಬಂದುಬಸ್ತು ಇದ್ದದ್ದನ್ನು ಮಾಡಿದೆವು. ಆ ಪೂರ್ವೋತ್ತರ ಯಾವತ್ತು ವಿವರವಾಗಿ ಬರದು ಇಜಾರನಾಮೆ ಎಂತಾ ಅದರ ಹೆಸರು ಮಡಗಿ, ಆ ಇಜಾರನಾಮೆಯನ್ನು ತಮ್ಮ ಬಳಿಗೆ ರವಾನೆ ಮಾಡಿ ಇದ್ದೇವೆ. ಅದ ನೋಡಿದಲ್ಲಿ, ತಮ್ಮನಸ್ಸಿಗೆ ಜಾಹೇರಾದೀತು. ಅದು ಮಾಲುಂ ಆದಮೇಲೆ, ಯಾವ ಕಡೆ ಮಾತು ನಿಜವಾಗುತ್ತದೊ, ಆಗ್ಯೆ ಹಳೆ ಸಾಕ್ಷಿಮಾತು, ಹೊಸ ಮಾತು ಎಲ್ಲಾ ನಿಜ ಎಂತಾ ತಿಳಿಯಬೇಕು. ಯಾವ ಕಡೆ ಮಾತು ನಿಜ ವಾಗುತ್ತದೋ, ಅವರಿಗೆ ಈ ಸರಹದ್ದಿನ ನ್ಯಾಯ ತೀರಿಸಿ, ಆ ಸರಹದ್ದನ್ನು ಅವರಿಗೆ ಕೊಡಬೇಕು. ಇದಲ್ಲದೆ ಮೈಸೂರ ಅರಸುಗಳು ದೋಸ್ತಿ ಮೇಲೆ ನಜರು ಮಡಗಿ, ತಕ್ರಾರು ಇರುವ ಭೂಮಿಯನ್ನು ಬಿಟ್ಟಾರು ಎಂತಲೂ, ನಾವು ಬಂದದ್ದು ಉಭಯ ಸರಕಾರಕ್ಕೂ ದೋಸ್ತಿ ಮಾಡಿಸುವ ಬಗ್ಯೆ ಎಂಬದಾಗಿಯೂ ನವಾಬ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್‌ಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಸ್ಲಿ ಗವರ್ನರ್ ಬಹದ್ದೂರವರ ಇರಾದೆಯೂ, ಎರಡು ಸರಕಾರಕ್ಕೂ ದೋಸ್ತಿ ಮಾಡಿಸುವದರ ಮೇಲೆ ಇದೆ ಎಂಬದಾಗಿ ಸಹಾ, ತಾವು ಬರೆಸಿ ಇರುವದು ಸರಿಯಷ್ಟೆ. ತಾವು ನಿಶ್ಚಯವಾಗಿ ತಿಳಿಯಬೇಕು: ಈ ದೋಸ್ತುದಾರರು ಎಲ್ಲಾ ಬಗೆಯಿಂದಲೂ ಇಂಗ್ರೇಜ ಬಹಾದ್ದರ ಕುಂಪನಿ ದೊಡ್ಡ ಸರಕಾರ ನಂಬಿ ಇದ್ದೇವೆ. ಆ ದೊಡ್ಡ ಸರಕಾರದ ಪರ್ವರ್ಷಿಯೂ ಸತ್ಯವುಳ್ಳಂಥಾ ದೋಸ್ತರ ದೋಸ್ತಿಯೂ ಹೊರ್ತು, ಮತ್ಯಾರದಾದರೂ ಒಡವೆ ತೆಗೆದುಕೊಳ್ಳಬೇಕೆಂಬ ಅಪೇಕ್ಷೆ ನಾವು ಮಡಗುವದಿಲ್ಲಾ. ಯಾವದೊಂದು ಕಾರ್ಯಕ್ಕೂ ಆ ಇಂಗ್ರೇಜ ಬಹಾದ್ದರ ಕುಂಪನಿ ಮುಬಾರಕ್ ಮರ್ಜಿ ಯಾವ ಮೇರೆ ಇದೆಯೋ, ಅದರಲ್ಲಿ ಈ ದೋಸ್ತುದಾರರಿಗೆ ಅಬ್ರು ಕೀರ್ತಿ ದೊಡ್ಡ ದಾದೀತು ಎಂತಾ ತಿಳಿದು ಇದ್ದೇವೆ" ಎಂತಾ ಬರದುಕೊಟ್ಟರು.

ಇದರ ಸಂಗಡ ಪೀಲ್ ಸಾಹೇಬರವರಿಗೆ ಬರದುಕೊಟ್ಟ ಇಜಹರನಾಮೆ ವಿವರ: "ವಿಕೃತು ಸಂವತ್ಸರದ ಆರಭ್ಯ ನವಾಬ ಹೈದರಲ್ಲೀಖಾನ್ ಬಹಾದ್ದ ರವರಿಗೂ ನಮ್ಮ ತಂದೆಯವರಾದ ಲಿಂಗರಾಜೇಂದ್ರ ಒಡೆಯರವರಿಗೂ ತಮ್ಮ ಒಳಗೆ ದೋಸ್ತಿ ಪ್ರಾರಂಭವಾಗಿ, ಕೀಲಕ ಸಂವತ್ಸರದವರೆಗೆ ಹತ್ತೊಂಭತ್ತು ವರ್ಷ ದೋಸ್ತಿ ಕಾಯಂ ಆಗಿ ಇತ್ತು. ಅದರ ಒಳಗೆ ಆ ನವಾಬ ಸಾಹೇಬ ರವರ ದೌಲತ್ತಿನಲ್ಲು, ಅವರ ಮಗ ಟೀಪುಸುಲ್ತಾನರ ದೌಲತ್ತಿನಲ್ಲಿ ಸಹಾ,

ನಾವು ವೀರರಾಜೇಂದ್ರ ವಡೆಯರವರು, ನಮ್ಮ ಹಿರಿಯರು ಸಹಾ, ಗುಜರಾನು ಮಾಡಿದೆವು.

ಕೀಲಕ ಸಂವತ್ಸರದಲ್ಲಿ ಕೆಲವು ಕಾರ್ಯಕಾರಣದಿಂದಾ ನಾವು ವೀರ ರಾಜೇಂದ್ರ ಒಡೆಯರವರು ಟೀಪುಸುಲ್ತಾನರ ದೋಸ್ತಿಯಿಂದಾ ಕೈತೆಗೆದು, ಪಿರಿಯಾಪಟ್ಟಣದಿಂದಾ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬಂದು ದಾಖಲಾಗಿ, ಸರಹದ್ದು ಸಿದ್ಧೇಶ್ವರನ ಬೆಟ್ಟದ ಬೆನ್ನಿನ ಆಶ್ರಯದಲ್ಲಿ ಮೂರು ವರ್ಷ ಪರಿಯಂತರ ಇದ್ದೆವು. ಅಲ್ಲಿ ಇರಬೇಕಾದ ಕಾರಣವೇನು ಎಂದರೆ: ಟೀಪು ಸುಲ್ತಾನರು ಕೊಡಗಿನ ಸೀಮೆ ಜನರ ಬೇರು ಸಹಿತ ಕಿತ್ತು, ಮೈದಾನಸೀಮೆಗೆ ಬಿಸಾಡಿಬಿಟ್ಟು ಅದರ ಬದಲಿಗೆ ಮಹಾಮರಜಾಖಾನನ ದಸ್ತೆಯವರು ನೂರುಲ್ ಆಪರಖಾನನ ದಸ್ತೆಯವರು ಲಷ್ಕರ ಕಚೇರಿಯವರು ಸೇಖ, ಸೈಯದ, ಮೊಗಲ್, ಪಠಾಣ— ಈ ನಾಲ್ಕು ಜಾತಿ ಮುಸಲ್‌ಮಾನರ ಮರದ ಆದ್ಮಿ ಶಿಪಾಯಿಗಳ ಬೇರು ಕೊಡಗಿನ ಸೀಮೆ ಒಳಗೆ ನೆಟ್ಟು, ಕೊಡಗ ಸೀಮೆ ಒಳಗೆ ಆರಂಬ ವ್ಯವಸಾಯದ ಬಗ್ಯೆ, ಆಥ್ವಾನಿ ಸೀಮೆ ರೈತರನ್ನು ಮಡಗಿ, ಈ ಸೀಮೆಯನ್ನು ಜಹಗೀರು ಇನಾಮಾಗಿ ನಿಮಗೆ ಕೊಟ್ಟು ಇದ್ದೇವೆ; ನಿಮ್ಮ ಕರ್ಚಿನ ಒಳಗೆ ಮಾಡಿಕೊಳ್ಳುವದು, ಖುಷಿಯಿಂದಾ ಇರುವದು. ನಾವು ಕೊಡಗಿನ ಸೀಮೆ ಜನರ ಬೇರು ಕಿತ್ತು ಬಿಸಾಡಿ ಇದ್ದೇವೆ. ಅದರಲ್ಲಿ ಯಾರಾದರೂ ಬಂದು ಅರೆ ಔತುಕೊಂಡು ಇದ್ದರೆ, ಪತ್ತೆ ಹತ್ತಿಸಿ ಹಿಡಿದು, ಅವರನ್ನು ಕಡುದು ಹಾಕುವದು. ಅವರ ಹೆಂಗಸರನ್ನು ನೀವು ಮಡಗಿಕೊಳ್ಳುವದು. ಆ ಹೆಂಗಸರ ಹೊಟ್ಟೆಯಲ್ಲಿ ಮಕ್ಕಳು ಹುಟ್ಟಿದರೆ, ಆ ಮಕ್ಕಳು ಈ ಸೀಮೆಯಲ್ಲಿ ಕಾಯಂ ಇರಬೇಕು. ನಾವು ಈ ಹಿಂದು ದೊರೆಗಳ ದೌಲತ್ತು ತೆಗೆದುಕೊಂಡು, ಮಡಿಕೇರಿ ಎಂಬ ಹೆಸರಿಗೆ ಬದಲು ಜಹೀರಾಬಾದು; ತಲಕಾವೇರಿ ತೀರ್ಥದ ಜಾಗ ಹಿಂದು ಜನದ ಎರಡನೆ ಕಾಶಿ ಇದೆ. ಅದರ ಹೆಸರು ಅಬ್ಜಲಾಬಾದು; ಇದಲ್ಲದೆ ಮುಳ್ಳುಸೋಗೆ ಗ್ರಾಮದ ಬಳಿಯಲ್ಲಿ ಒಂದು ಕೋಟೆ ಕಟ್ಟಿಸಿ, ಅದರ ಹೆಸರು ಖುಷಾಬಿನಗರ ಎಂತಾ ಮಡಗಿ ಇದ್ದೇವೆ. ಈ ಜಾಗ ಮುಸಲ್ಮಾನರು ಇರುವ ಬಗ್ಯೆ, ಒಳ್ಳೆ ಲಾಯಖಿನ ಜಾಗ. ಈ ಸೀಮೆಯಲ್ಲಿ ಯಾವಾಗ್ಯೂ ಮುಸಲ್ಮಾನ ದೀನ್ ಇಸ್ಲಾಮರ ಜಾಂಡೆ ಹಾರಬೇಕು. ಈ ಹುಕುಂ ಮೇರೆ ನೀವು ನೌಕ್ರಿ ಮಾಡಬೇಕೆಂಬದಾಗಿ, ಟೀಪುಸುಲ್ತಾನರು ಆ ಮುಸಲ್ಮಾನರಿಗೆ ಹುಕುಂ ಕೊಟ್ಟು ಇದ್ದರು.

ಇದಕಾರಣ ನಾವು ಲಾಚಾರಿಯಿಂದಾ, ವಶೀಲಿ ಇಲ್ಲದೆ, ನಮ್ಮ ಕುಟುಂಬಮಕ್ಕಳನ್ನು ಆ ಸಿದ್ಧೇಶ್ವರನ ಬೆಟ್ಟದ ಬೆನ್ನಿನ ಆಶ್ರಯದಲ್ಲಿ ಮೂರು ವರ್ಷ ಮಡಗಿ, ರಾತ್ರಿಕಾಲದಲ್ಲಿ ಟೀಪುಸುಲ್ತಾನರ ಸೀಮೆಗೆ ಹೋಗಿ, ಬಹಳ ಬಗೆ ಮೆಹನತ್ತು ಮಾಡಿ, ರಾಗಿ ಮುಂತಾದ ಅನಾಜು ತಂದು, ನಮಗೂ ನಮ್ಮ ಮಕ್ಕಳಿಗೂ ಅನ್ನಾ ಮಾಡಿಕೊಂಡು, ಹಗಲು ಕೊಡಗ ಸೀಮೆಗೆ ಬಂದು, ಆ ಮುಸಲ್ಮಾನರನ್ನು ಗ್ರಾಮಾನುಗ್ರಾಮದಿಂದಾ, ಬಹಳ ಜಗಳಾ ಮಾಡಿ, ಹೊರಗೆ ತೆಗೆದು, ಅವರ ಬದಲಿಗೆ ಕದೀಂ ರೈತರನ್ನು, ಸಿಕ್ಕಿದವರನ್ನು ಆ ಗ್ರಾಮಗಳಲ್ಲಿ ಮಡಗಿ, ನಮ್ಮ ಸಂಗಡ ಇದ್ದ ಕದೀಂ ಜನರ ತೆಗೆದುಕೊಂಡು, ಅದೇ ಸಿದ್ಧೇಶ್ವರನ ಸರಹದ್ದಿನ ಬೆಟ್ಟದ ಬೆನ್ನಿನ ಆಶ್ರಯದಲ್ಲಿ ಮೂರು ವರ್ಷ ಇದ್ದು, ನಮ್ಮ ಗುಜರಾನು ಮಾಡಿದೆವು.

ಅದರ ಒಳಗೆ ಆ ಮುಸಲ್ಮಾನರ ಹೊರಡಿಸುವ ಬಗ್ಯೆ, ಆರು ತಿಂಗಳು ದಿವಸವಾಯಿತು. ಬಾಕಿ ಎರಡು ಅರೆ ವರ್ಷದ ಒಳಗೆ ಸದೂರು ಗುಲಾಮಲ್ಲಿ ಟೀಪುಸುಲ್ತಾನರ ಭಾವಮೈದುನ ನವಾಬ ಬರಹಾನುದ್ದೀನ್ ಶಿಪಾಸಾಲಾರ್ ಎರಡು ಸಲಾ ಬಂದು ಇದ್ದರು. ಇದಲ್ಲದೆ ಸೈದ್‌ಹಮಿದ್ ಶಿಪಾದಾರ, ಶೇಖ್ ಅನ್ಸರ ಶಿಪಾದಾರ, ಸೇಖ್ ಇಮಾಮು ಶಿಪಾದಾರ, ದೇಕಲದ ಫೌಜುದಾರ, ಚರಕಲ ರಾಜರು ಸಹಾ, ಅವರವರ ಫೌಜು ತೆಗೆದುಕೊಂಡು, ಆಗಾಗ್ಯೆ ಕೊಡಗಿನ ಸೀಮೆ ಒಳಗೆ ಬಂದು, ನಮಗೆ ಬಹಳ ಹಲಾಕುಮಾಡಿ, ಶ್ರಮಪಡಿಸಿದರು. ಅವರ ಮನಸ್ಸಿನಲ್ಲಿ ನಮಗೆ ಯಾವ ಮೇರೆ ಮಾಡಬೇಕೆಂಬ ಅಪೇಕ್ಷೆ ಇತ್ತೋ ಅದೆಲ್ಲಾ ಅವರ ಮೇಲೆ ಅನುಭವವಾಯಿತು. ಕಡೆಗೆ ಲಾಚಾರಾಗಿ ತಿರಿಗಿ ಹೋದರು. ಇದಲ್ಲದೆ ಪಾಜಲ್ ಖಾನ್ ಶಿಪಾದಾರ, ಫರಾಶೀಸರ ಜಾತಿ ಸರದಾರ ಸರ್ ಜಾನ್ ಕಸ್ತೂರಿ ಸಹಾ, ಫೌಜು ಸುದಾ ಬಂದು, ಹೆಗ್ಗಳದ ಗಟ್ಟದ ಮೇಲೆ ಕೆಲು ಜನ ಮುಳುಗಿಹೋದರು ; ಕೆಲವು ಓಡಿಹೋದರು ; ಆಮೇಲೆ ಖಾದರ್ ಖಾನ್ ಕೆಸಗಿ ಶಿಪಾದಾರ ಬಂದು, ಲಡಾಯಿಗೆ ನಿಲ್ಲಲಾರದೆ, ಲಾಚಾರಾಗಿ ಸಲ್ಲಾಮಾಡಬೇಕೆಂತಾ ಆಶ್ರಯ ಕೇಳಿದರಿಂದಾ, ಅವನಿಗೆ ಆಬ್ರುಯಿಂದಾ ರವಾನೆ ಮಾಡಿದೆವು. ಈಗ ಆ ಖಾದರ್‌ಖಾನ್ ಕೆಸಗಿಯು ಇದೇ ಸೀಮೆಯಲ್ಲಿ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಉಪ್ಪು ಉಂಡುಕೊಂಡು, ಇಲ್ಲೇ ಇದ್ದಾನೆ. ಇದಲ್ಲದೆ ನಾಯಕ ಗೋವಿಂದರಾವು, ಮಲ್ಲಪ್ಪ ನಾಯಕ ಸಹಾ, ಫೌಜು ಸಮೇತ ಮತ್ತೂ ಕೆಲವು ಸರದಾರರು (ಅವರ ಹೆಸರು ನಮಗೆ

ತಿಳಿಯಲಿಲ್ಲಾ) ಅವರು ಎಲ್ಲಾರು ಬಂದು, ನಮಗೆ ಬಹಳ ಮೆಹನತ್ತು ಮಾಡಿಸಿದರು. ಅವರ ಮನಸ್ಸಿನಲ್ಲಿ ನಮ್ಮೇಲೆ ಏನು ಅಪೇಕ್ಷೆ ಮಡಗಿ ಇದ್ದರೋ, ಅದೆಲ್ಲಾ ಅವರ ಮೇಲೆ ಸಾಬೂತಾಯಿತು. ಕಡೆಗೆ ಲಾಚಾರಾಗಿ ತಿರಿಗಿ ಹೋದರು. ಇದೇ ಜಗಳದ ತಂಟೆ ಒಳಗೆ ಎರಡು ಅರೆ ವರ್ಷ ಕಳುದುಹೋಯಿತು. ಇದರ ಒಳಗೆ ಕೊಡಗಿನ ಸೀಮೆ ಕೋಟೆಗಳು ಯಾವತ್ತು ನಮ್ಮ ಹುಕುಮತ್ತಿನ ಒಳಗೆ ಬಂತು. ನಮ್ಮನಸ್ಸಿನಲ್ಲಿ ಇದ್ದ ಮೇರೆ ಅದರ ಬಂದುಬಸ್ತು ಮಾಡಿದೆವು.

ಆಮೇಲೆ ಅಲಿಷಾಂ ರಾಬರ್ಟ್ ಟೈಲರ್ ಸಾಹೇಬರವರು, ತಲಚೇರಿ ಬಂದರದಿಂದಾ ಕೆಪ್ಟನ್ ಬ್ರೌನ್ ಸಾಹೇಬರವರು, ಅವರ ಸಂಗಡ ಎರಡು ಗಾರ್ಡ್ ಸಿಪಾಯಿಗಳ ಕೂಡಿಸಿ, ತಮ್ಮ ಸರಕಾರದ ದೋಸ್ತಿ ಆಶ್ರಯದ ಒಳಗೆ ತೆಗದುಕೊಳ್ಳುವ ಬಗ್ಯೆ, ನಮ್ಮನ್ನು ತಲಚೇರಿಗೆ ಕರಕೊಂಡು ಬರುವ ಬಗ್ಯೆ, ರವಾನೆ ಮಾಡಿ ಇದ್ದರು. ಅದೇ ಕೆಪ್ಟನ್ ಬ್ರೌನ್ ಸಾಹೇಬರ ಸಂಗಡ ಇಬ್ಬರು ಇಂಜನೇರು ಸಾಹೇಬರನ್ನು ಮುಂಬಾಯಿ ಲಷ್ಕರು ಪಟ್ಟಣದ ಕಡೆಗೆ ಹೋಗುವ ಬಗ್ಯೆ, ಕೊಡಗಿನ ಸರಹದ್ದಿನ ಮಾರ್ಗ ನೋಡಿಕೊಂಡು ಬರುವ ಬಗ್ಯೆ, ಕಳುಹಿಸಿ ಇದ್ದರು. ಈ ಮೂರು ಜನ ಸರದಾರರು ಬಂದು, ತೋಮರದ ಗಟ್ಟದ ಮೇಲೆ ಇದ್ದರು. ಆ ವರ್ತಮಾನ ನಾವು ಕೇಳಿ, ಆ ಮೂರು ಜನ ಸರದಾರರ ಮಿಲಾಕತ್ತು ಮಾಡಿದೆವು. ಆವಾಗ್ಯೆ ಆ ಕೆಪ್ಟನ್ ಸಾಹೇಬರು ನಮ್ಮ ಕೈ ಹಿಡಿದುಕೊಂಡು, ತಲಚೇರಿ ಬಂದರ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಹುಕುಮತ್ತಿನ ಜಾಗಾ ಇದೆ. ಈಗ ನೀವು ಅಲ್ಲಿಗೆ ಬರಬೇಕು. ನಿಮ್ಮನ್ನು ಸರಕಾರದ ದೋಸ್ತಿ ಒಳಗೆ ಕಬೂಲು ಮಾಡಿ, ದೋಸ್ತಿ ಸಾಬೂತು ಆಗುವ ಬಗ್ಯೆ ಸೂರ್ಯಚಂದ್ರ ಇರುವ ಪರಿಯಂತರ ಕಾಯಂ ಆಗಿ ಇರಬೇಕು. ಈ ಮಾತಿನಲ್ಲಿ ಏನಾದರೂ ತಫಾವತು ಆಗಬಾರದು ಎಂಬದಾಗಿ ನಿಮ್ಮ ಸರಕಾರವೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರವೂ ಒಡಂಬಟ್ಟು, ಖುಷಿಯಿಂದ ಮಹಾದೇವನ ಸಾಕ್ಷಿಯಿಂದ, ಮೊಹರ ದಸ್ಕತ್ತಿನಿಂದ, ಎರಡು ಕರಾರು ನಾಮಾ ಬರದು, ಅದರಲ್ಲಿ ಒಂದನ್ನು ಇಂಗ್ರೇಜ ಕುಂಪನಿ ಸರಕಾರದ ಇಲಾಖೆ ತಲಚೇರಿಯಲ್ಲು ಮಡಗಿ, ಮತ್ತೊಂದು ತಮ್ಮ ಸಂಗಡ ಕೊಟ್ಟು ರವಾನೆಮಾಡಬಹುದು. ಈ ಕೆಲಸ ನಮ್ಮದು. ಈ ಇಬ್ಬರು ಇಂಜನೇರು ಸಾಹೇಬರ ಕೆಲಸವೇನು ಎಂದರೆ: ಮುಂಬಾಯಿ ಲಷ್ಕರು ಪಟ್ಟಣಕ್ಕೆ ಹೋಗುವ ಮಾರ್ಗ

ತಮ್ಮ ಕೊಡಗಿನ ಸರಹದ್ದು ಪರಿಯಂತರ ಎತ್ತರವಾದ ಜಾಗಕ್ಕೆ ಹೋಗಿ ನಿಂತು, ಪಿರಿಯಾಪಟ್ಟಣ, ಬೆಟ್ಟದಪುರದ ಸೀಮೆ ದುರ್ಬೀನಿನಿಂದಾ ನೋಡಿ ವಿಚಾರಿಸಿ, ಆ ವಿವರ ಯಾವತ್ತು ಬರದು, ಅಲ್ಲಿಂದಾ ತಿರುಗಿ, ತಮ್ಮ ಸೀಮೆ ಒಳಗೆ ಲಷ್ಕರು ಹೋಗುವ ಮಾರ್ಗವನ್ನು ನೋಡಿ, ಅದರ ವಿವರವು ಬರದು ಕೊಂಡು, ಹೆಗ್ಗಳದ ಗಟ್ಟಾ ಇಳಿದು ತಲಚೇರಿಗೆ ಬಂದಾರು ಎಂಬದಾಗಿ ಆ ಕೆಪ್ಟನ್ ಸಾಹೇಬರು ಹೇಳಿದರು. ಅವರು ಹೇಳಿದ ಮೇರೆ, ನಾವು ಆ ಇಂಜನೇರು ಸಾಹೇಬರ ಸಂಗಡ ಕೆಲವು ಜನರನ್ನು ಕೂಡಿಸಿಕೊಟ್ಟು ಸಿದ್ಧೇಶ್ವರನ ಬೆಟ್ಟದ ಕಡೆಗೆ ರವಾನೆ ಮಾಡಿ, ನಾವು ಆ ಕೆಪ್ಟನ್ ಸಾಹೇಬರ ಸಂಗಡ ಕೊಡಗ ಸೀಮೆಯಿಂದಾ ಹೊರಟು, ಸಾಧಾರಣ ಸಂವತ್ಸರದ ಆಶ್ವೀಜ ತಿಂಗಳಲ್ಲಿ ತಲಚೇರಿಗೆ ದಾಖಲಾಗಿ ಇದ್ದೆವು. ಆ ಇಬ್ಬರು ಇಂಜನೇರು ಸಾಹೇಬರು ಸಿದ್ಧೇಶ್ವರನ ಬೆಟ್ಟದ ಮೇಲಕ್ಕೆ ಬಂದು ಮೂರು ತಂಬು ನಿಲ್ಲಿಸಿ, ಅವರ ಮರ್ಜಿ ಮೇರೆ ನೋಡಿ ಬರಕೊಳ್ಳುವ ವಿವರ ಯಾವತ್ತು ಬರಕೊಂಡು, ಆ ಸಿದ್ಧೇಶ್ವರನ ಬೆಟ್ಟದಿಂದಾ ತಿರುಗಿ, ನಾವು ತಲಚೇರಿಗೆ ತಲಪಿದ ಏಳೆಂಟು ದಿವಸದ ಒಳಗೆ ಅವರು ಅಲ್ಲಿಗೆ ಬಂದರು. ಅದೇ ಸಾಧಾರಣ ಸಂವತ್ಸರದ ಆಶ್ವೀಜ ೨೦ನೇ ತಾರೀಕಿನಲ್ಲು ಆಲಿಷಾಂ ರಾಬರ್ಟ್ ಟೈಲರ್ ಸಾಹೇಬರವರು ಮೇಜರ್ ಕೌಂಸಲದಾರ್‌ರು ಸಹಾ, ಇಂಗ್ರೇಜ ಕುಂಪನಿ ಸರಕಾರದ ಕಡೆ ಯಿಂದ ಬಂಗಾಳದ ಗವರ್ನರ್ ಸಾಹೇಬರ ಹೆಸರು, ಮುಂಬಾಯಿ ಗವರ್ನರ್ ಸಾಹೇಬರ ಹೆಸರು, ತಲಚೇರಿ ಗವರ್ನರ್ ಸಾಹೇಬರ ಹೆಸರಿನಿಂದ ಸಹಾ, ದೋಸ್ತಿ ಕಾಯಂ ಆಗಿ, ಸೂರ್ಯಚಂದ್ರ ಇರುವ ಪರಿಯಂತರ ನಡದುಬರುವ ಬಗ್ಗೆ, ಉಭಯ ಕಡೆ ಮೊಹರ ದಸ್ಕತ್ತು ಮಾಡಿ, ಎರಡು ಕರಾರುನಾಮೆ ಬರದು, ಅದರಲ್ಲಿ ಒಂದನ್ನು ತಲಚೇರಿ ಸರಕಾರದಲ್ಲಿ ಕುಂಪನಿ ಇಂಗ್ರೇಜಿಯವರ ಇಲಾಖೆ ಒಳಗೆ ಮಡಗಿಕೊಂಡು, ಮತ್ತೊಂದು ವೀರರಾಜೇಂದ್ರ ಒಡೆಯರವರ ವಶಕ್ಕೆ ಕೊಟ್ಟು ಕಳುಹಿದರು.

ಆಮೇಲೆ ಮೇಜರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ ಬಹಾದ್ದುರವರು ಎರಡಾವರ್ತಿ ಮುಂಬಾಯಿ ಲಷ್ಕರು ತೆಗೆದುಕೊಂಡುಬಂದು, ಸಿದ್ಧಾಪುರದ ಬಾಗಿಲ ಹೊರಗಿನಿಂದ ಸರಹದ್ದು ಸಿದ್ಧೇಶ್ವರನ ಬೆಟ್ಟ ಪರ್ಯಂತರ ಎರಡು ಕಾಂಪು ಫೌಜು ತಮ್ಮ ಸಂಗಡ ಇದ್ದದ್ದನ್ನು ಇಳಿಸಿ ಇದ್ದರು. ಅದೇ

ಸರಹದ್ದು ಸಿದ್ಧೇಶ್ವರನ ಬೆಟ್ಟದ ಮೇಲೆ ಇಂಜನೇರು ಕೆಪ್ಟನ್ ರನೆಲ್ ಸಾಹೇಬ್ ಬಹಾದ್ದುರವರು ನಿಶಾನಿ ನಿಲ್ಲಿಸಿ, ದುರ್ಬೀನಿನಿಂದಾ ನೋಡಿ, ತಮ್ಮ ಸರಕಾರದ ಫಾಯದೆ ಕೆಲಸ ಮಾಡುತ್ತಿದ್ದರು. ಇದೇ ಮೇರೆ ಟೇಪುಸುಲ್ತಾನರ ಸಂಗಡ ಲಡಾಯಿ ಮಾಡುವ ಫಾಯದೆ ಕೆಲಸಗಳ ತೆಗೆಯುತ್ತಲೂ, ನಮ್ಮಿಂದಾ ಆಗುವ ನೌಕ್ರಿ ಕಿದ್ಮತ್ತು ಮಂಜೂರು ಮಾಡುತ್ತಲೂ, ಎರಡು ವರ್ಷ ಸರಿಯಾಗಿ ಕಳುದುಹೋಯಿತು.

ಆಮೇಲೆ ಜಯಪ್ರದವಾದ ಮದರಾಸಿನ ಭಾರಿ ಫೌಜು ತೆಗೆದುಕೊಂಡು, ಬಂಗಾಳದ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ್ ಬಹಾದ್ದುರವರು, ಜನರಲ್ ಮೆಂಡೂಸ್ ಸಾಹೇಬ್ ಬಹಾದ್ದುರವರು ಸಹಾ, ಬಂದರು. ಮುಂಬಾಯಿ ತಾಲೂಕಿನ ಫೌಜು ತೆಗೆದುಕೊಂಡು, ಸರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದುರವರು ಬಂದರು. ಆಲಿಷಾಂ ಈ ಮೂರು ಸರದಾರರು ಬಂದು, ದೊಡ್ಡ ದುಷ್ಮಾನ ಟೇಪುಸುಲ್ತಾನರ ಸಂಗಡ ಲಡಾಯಿ ಮಾಡಿದಲ್ಲಿ, ಆ ಟೇಪುಸುಲ್ತಾನರು ಲಡಾಯಿದಲ್ಲಿ ಮುರುದ್ದರಿಂದಾ, ಟೇಪುಸುಲ್ತಾನರಿಂದಾ ತಮ್ಮ ಲಷ್ಕರಿನ ಕರ್ಚಿನ ಬದಲಿಗೆ ಬಹಳ ಹಣವೂ ಸೀಮೆಯೂ ತೆಗೆದುಕೊಂಡು, ಅಬ್ದುಲ್‌ಕಾಲರ್, ಮೊಹಜುದ್ದೀನ್ ಎಂಬ ಇಬ್ಬರು ಟೇಪುಸುಲ್ತಾನರ ಮಕ್ಕಳನ್ನು ತೆಗೆದುಕೊಂಡು, ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ್ ಬಹಾದ್ದುರವರು ಮದರಾಸಿನ ಕಡೆಗೆ ಹೋದರು.

ಸರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ ಬಹಾದ್ದುರವರು ಮುಂಬಾಯಿ ಲಷ್ಕರು ತೆಗೆದುಕೊಂಡು, ಈ ಕಡೆ ಕೊಡಗಿಗೆ ಬಂದರು. ಆವಾಗ್ಯೆ ನಾವು ಸಿದ್ಧೇಶ್ವರನ ಸರಹದ್ದಿನ ಬೆಟ್ಟದ ಬಳಿಗೆ ಹೋಗಿ, ಹಾಜರು ಇದ್ದು, ಜಯಪ್ರದವಾದದರ ಶ್ರೇಯಸ್ಸು ಹಾರೈಸಿ, ಸಲಾಂ ಮಾಡಿದೆವು. ಆವಾಗ್ಯೆ ಆ ಜನರಲ್ ಸಾಹೇಬರವರು ಹೇಳಿದರು: ಟೇಪುಸುಲ್ತಾನರ ಸರಕಾರದ ಸಂಗಡ ಸಲ್ಲಾ ಆಯಿತು. ತಾಯ ತಮ್ಮ ಕೊಡಗಿನ ಕದೀಂ ಸರಹದ್ದು ಸಿದ್ಧೇಶ್ವರನ ಬೆಟ್ಟದ ಬಳಿಯ ಪಹರ ಮಡಗಿ, ತಮ್ಮ ಸರಹದ್ದಿನ ಬಂದುಬಸ್ತು ಮಾಡಿಕೊಳ್ಳಬೇಕು. ಸರಹದ್ದು ತಫಾವತು ಮಾಡಿ, ಮುಂದೆ ಹೋಗುವದಕ್ಕೆ ಕುಂಪನಿ ಹುಕುಂ ಇಲ್ಲಾ ಎಂತಾ, ಹೇಳಿದರು. ಆ ಜನರಲ್ ಸಾಹೇಬರವರ ಹಿಷಾರೆ ಪ್ರಕಾರ ತಲೆಕೂದಲಷ್ಟು ತಫಾವತು ಮಾಡದೆ, ಸಿದ್ಧೇಶ್ವರನ

ಬೆಟ್ಟದ ಬಳಿಯ ಸರಹದ್ದಿನಲ್ಲಿ ಪಹರೆ ಮಡಗಿ, ನಮ್ಮ ಸರಹದ್ದಿನ ಬಂದುಬಸ್ತು ಮಾಡಿದೆವು. ಪರಿಧಾವಿ ಸಂವತ್ಸರದ ಮಾರ್ಗಶಿರ ೨೭ ತಾರೀಕಿನಲ್ಲಿ ಆಲಿಷಾನ್ ಸತ್ಯವಾದ ನಡತೆಯಾದ ಇಂಜನೇರು ಇಮಾಟನ್ ಸಾಹೇಬರವರು ಬಂದು, ಕೊಡಗಿನ ಸೀಮೆ ಸರಹದ್ದು ತಿರಿಗಿ ನೋಡಿ, ಕೊಡಗಿನ ಸೀಮೆ ಸರಹದ್ದು ಮೊಕರರು ಮಾಡಿ, ಇರುವದನ್ನು ತಪಶೀಲಲ್ಲು ಬರಕೊಂಡುಹೋಗಿ, ಮುಂಬಾಯಿ ಸರಕಾರದಲ್ಲಿ ಒಪ್ಪಿಸಿ ಇದ್ದಾರೆ. ಮುಂದೆ ಸರಹದ್ದಿನಲ್ಲಿ ಏನಾದರೂ ತಕರಾರು ಬಂದರೆ, ತೀರಿಸುವ ಬಗ್ಯೆ, ಅದರ ನಕಲನ್ನು ಮಲೆವಾರಿ ಕಮಿಶನ್ ಸಾಹೇಬರವರ ಬಳಿಯಲ್ಲಿ ಕೊಟ್ಟು ಇದ್ದಾರೆ. ಕಮಿಶನ್ ಸಾಹೇಬರವರು ಆ ಎಂಟು ವರ್ಷ ವಳಗೆ ನಾವು ದೋಸ್ತಿಯಿಂದಾ ಯಾವದೊಂದು ನೌಕ್ರಿಮಾಡಿ ಇದ್ದೇವೋ, ಅದೆಲ್ಲಾ ಕಬೂಲುಮಾಡಿ, ಸರಹದ್ದಿನ ವಿಷಯವಾಗಿಯೂ, ಮತ್ತು ಬರದು ಇರುವಂಥಾ ಮೆಹರ್ಬಾನಗಿ ಕಾಗದಗಳು ಸನ್ನದಿನ ಹಾಗೆ ಹಾಜರು ಇದೆ. ಆ ಎಂಟು ವರ್ಷ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಟೀಪುಸುಲ್ತಾನರಿಗೂ ಸಲ್ಲಾದ ಒಳಗೆ ಕಳುದು ಹೋಯಿತು. ಆ ಎಂಟು ವರ್ಷದ ಮೇಲೆ ನವಾಬ್ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್‌ಫುಲ್ ಅಷರಾಫ್ ಗವರ್ನರ್ ಜನರಲ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ ಬಹಾದ್ದುರವರು ಹಿಂದುಸ್ಥಾನದ ಸೀಮೆ ಬಂದುಬಸ್ತಿನ ಬಗ್ಯೆ, ತೆರಳಿ ಬಂದಾಗ್ಯೆ, ಇನಾಯತನಾಮಾ ಕಳುಹಿಸಿ ಇದ್ದರು. ಅದರ ಅಭಿಪ್ರಾಯ: ಟೀಪುಸುಲ್ತಾನರಿಗೆ ಸಲ್ಲಾದ ಬೇರು ಕಾಯಂ ಮಡಗಬೇಕು, ಎಂಬದು ಖುಷಿ ಇಲ್ಲಾ. ಟೀಪುಸುಲ್ತಾನ ನಿಮಗೆ ದೊಡ್ಡ ದುಷ್ಮಾನ. ತಮ್ಮ ಸರಹದ್ದಿನ ರೂಬರೂಬು ಇದ್ದಾನೆ. ಎಲ್ಲಾ ಬಗೆಯಿಂದಲೂ ತಮ್ಮ ಸೀಮೆಗೆ ನಿಗಾವಾನಿ ಮಾಡುವಂಥಾದ್ದು ಜರೂರು ಇದೆ. ಇದುಕಾರಣ ದೋಸ್ತಿ ಕಲಮಿನಿಂದಾ ಬರೆಯುತ್ತೇವೆ. ತಮ್ಮ ಜಮಿಯತ್ತಿನ ಜನರ ಲಡಾಯುದ ಸಾಮಾನು ಹತ್ಯಾರು ತಯಾರುಮಾಡಬೇಕು. ಖಬರ್‌ದಾರಿಯಿಂದಾ ತಮ್ಮ ಸರಹದ್ದಿನ ಬಂದುಬಸ್ತು ಮಾಡಿಕೊಳ್ಳಬೇಕು. ಕೆಲವು ದಿವಸದಲ್ಲಿ ಷಹಮತ್ ಮಂಜಲತ್ ಮಾಲಿ ಮರ್ತಬತ್ ಕೆಪ್ಟನ್ ಮಾವಿನಿ ಸಾಹೇಬರವರನ್ನು ವಕಾಲತ್ತಿನ ಹುದ್ದೆ ಮೇಲೆ ಮೊಕರರು ಮಾಡಿ ತಮ್ಮ ಬಳಿಗೆ ರವಾನೆ ಮಾಡಿಯೇವು. ಆಲಿಯುಕ್ಕಾದ್ರು ಜನರಲ್ ಸ್ಟ್ಯೂಯರ್ಟ್ ಸಾಹೇಬ ಬಹಾದ್ದೂರವರು

ಮೊದಲಿನ ದಸ್ತೂರಿ ಮೇರೆ ಮುಂಬಾಯಿ ಫೌಜು ತೆಗೆದುಕೊಂಡು ಬರುತ್ತಾ ಇದ್ದಾರೆ. ಅವರು ಹೇಳಿದ ಮೇರೆ, ಆ ವಕೀಲ ಕೆಪ್ಟನ್ ದಿನಸ್ ಮಾವಿನಿ ಸಾಹೇಬ ಬಹಾದ್ದೂರವರು ತಮಗೆ ಜಾಹೇರು ಮಾಡ್ಯಾರು. ಅದೇ ಮೇರೆ ಅಮಲು ಮಾಡಬೇಕು. ಏನೊಂದು ಸಕಾಯ ತಮ್ಮಿಂದಾ ಆಗತಕ್ಕಂಥಾ ಉಪಕಾರವಮಾಡಬೇಕು ಎಂಬದಾಗಿ ಬರದು ಇದ್ದರು.

ಅದೇ ಮೇರೆ ಜನರಲ್ ಸ್ಟೂಯರ್ಟ್ ಸಾಹೇಬ್ ಬಹಾದ್ದುರವರು ದೊರೆಗಳ ಸರಹದ್ದಿನಲ್ಲಿ ಶ್ರೀರಂಗಪಟ್ಟಣದ ಕೋಟೆ ತೆಗೆದುಕೊಳ್ಳುವ ಬಗ್ಯೆ, ಮೋರ್ಚೆ ಸಾಮಾನು ತಯಾರುಮಾಡಿಸುವ ಬಗ್ಯೆ, ಕೆಪ್ಟನ್ ಜಾನ್‌ಸನ್ ಸಾಹೇಬರಿಗೆ ಮೊಕರರು ಮಾಡಿ ಇದ್ದೇವೆ. ಆ ಸಾಹೇಬರು ಬಂದಾರು. ಆ ಸರಂಜಾಮು ತಯಾರುಮಾಡುವ ಬಗ್ಯೆ, ಬೇಕಾದ ಆಳುಗಳನ್ನು ದೊರೆಗಳವರ ಸಂಗಡ ತೆಗೆದು ಕೊಳ್ಳುವದು ಎಂತಾ, ಆ ವಕೀಲ್ ಸಾಹೇಬರಿಗೆ ಹಿಷಾರೆ ಮಾಡಿದರು. ಆ ಮೇರೆ ಆ ವಕೀಲ್ ಸಾಹೇಬರು ಹೇಳಿದರಿಂದಾ, ನಾನೂರು ಜನವನ್ನು ಕೊಟ್ಟು ಇದ್ದೆವು. ಆ ಜನರನ್ನು ಜಾನ್‌ಸನ್ ಸಾಹೇಬರವರು ಅವರ ಸಂಗಡ ತೆಗೆದುಕೊಂಡು, ಸಿದ್ಧೇಶ್ವರನ ಬೆಟ್ಟದ ಸರಹದ್ದಿನ ಕೆಳಗೆ ಮೂರು ತಿಂಗಳು ಪರ್ಯಂತರ ಮೋರ್ಚೆಗೆ ಬೇಕಾದ ಸರಂಜಾಮು ತಯಾರುಮಾಡಿಸುತ್ತಾ ಇದ್ದರು. ದಿನಚರಿಯಲ್ಲು ಒಂದು ವೇಳೆ ಆ ಸಿದ್ಧೇಶ್ವರನ ಬೆಟ್ಟದಮೇಲೆ ಹತ್ತಿ, ದುರ್ಬೀನಿನಿಂದಾ ನೋಡಿ, ಸರಕಾರದ ಫಾಯದೆ ಕೆಲಸಗಳ ಬರೆಯುತ್ತಿದ್ದರು. ಆಮೇಲೆ ಸರದಾರ ಇಂಜ ನೇರು ಕೆಪ್ಟನ್ ದಿನಸ್ ಮಾಂಕ್ರಿಫ್ ಸಾಹೇಬ್ ಬಹದ್ದೂರವರು ಐನೂರು ಜನ ಪಯನಿಯರು ಎಂಬ ಕಾಮಾಟಿಯವರನ್ನು ತೆಗೆದುಕೊಂಡು ಬಂದು, ಹೆಗ್ಗಳದ ಗಟ್ಟದ ಕೆಳಗೆ ಇರುವ ಕಲ್ಲುಹೊಳೆಯಿಂದಾ ಸಿದ್ಧೇಶ್ವರನ ಬೆಟ್ಟದಿಂದಾ ಮುಂದೆ ಒಂದು ಗುಂಡಿನಯಿಸಿಗೆ ದಫರ ಪರಿಯಂತರ ಮೊದಲು ನಾವು ದುರಸ್ತು ಮಾಡಿಸಿ ಇದ್ದ ಮಾರ್ಗ ಪೆರಂಗಿಗಾಡಿ ಮುಂತಾಗಿ ಹೋಗುವ ಬಗ್ಯೆ, ಚನ್ನಾಗಿ ದುರುಸ್ತುಮಾಡಿ ಇಲ್ಲಾ ಎಂತಾ, ಅದೇ ಕಲ್ಲುಹೊಳೆಯಿಂದಾ ಸಿದ್ಧೇಶ್ವರನ ಬೆಟ್ಟದ ಮುಂದೆ ಒಂದು ಗುಂಡಿನ ಯಿಸಿಗೆ ದೂರ ಪರಿಯಂತರ ತಯಾರು ಮಾಡಿ, ಅದೇ ಬೆಟ್ಟದ ಮೇಲೆ ಒಂದು ತಂಬು ನಿಲ್ಲಿಸಿ, ಎರಡು ಅರೆ ತಿಂಗಳು ಪರಿಯಂತರ ಆ ಜಾಗಾದಲ್ಲಿ ದುರ್ಬೀನಿನಿಂದಾ ನೋಡಿ, ಸರಕಾರದ ಫಾಯದೆ ಕೆಲಸಗಳ ಬರೆಯುತ್ತಾ ಇದ್ದರು. ಮತ್ತು ಮೋರ್ಚೆಗೆ ಇರುವ ಸರಂಜಾಮು

ಆ ಜಾನ್‌ಸನ್ ಸಾಹೇಬರವರ ತಾಬೆ ಒಳಗೆ ಇತ್ತು. ಆ ಇಬ್ಬರು ಸಾಹೇಬರು ದೊಡ್ಡ ಲಷ್ಕರಿನ ನಿಶಾನಿ ಫಿರಂಗಿ ಆವಾಜು ಕೇಳಿದರೆ, ಅದರ ಜವಾಬು ಕೊಡುವ ಬಗ್ಯೆ, ಆ ಸಿದ್ಧೇಶ್ವರನ ಸರಹದ್ದಿನ ಬೆಟ್ಟದ ಮೇಲೆ ಇರುತ್ತಿದ್ದರು. ಅವರ ಕಿದ್ಮತ್ತು ನೌಕ್ರಿ ಮಾಡುವ ಬಗ್ಯೆ, ಅದೇ ಸಿದ್ಧೇಶ್ವರನ ಬೆಟ್ಟದ ಸಮೀಪದ ಚನ್ನೈನ ಕೋಟಿ ಜನರಿಗೆ ತಾಕೀತಿ ಮಾಡಿಸಿ ಇದ್ದೆವು. ಆ ಜನರು ಆ ಸಮಯದಲ್ಲಿ ಆ ಸಾಹೇಬರ ಚಾಕ್ರಿಯನ್ನು ಚನ್ನಾಗಿ ಮಾಡಿ ಇದ್ದಾರೆ.

ಆಮೇಲೆ ಬಂಗಾಳದ ನವಾಬ ಸಾಹೇಬರವರ ಹಿಷಾರೆ ಪ್ರಕಾರ, ಜನರಲ್ ಸ್ಟ್ವಾಯರ್ಟ್ ಸಾಹೇಬ್ ಬಹದ್ದೂರವರು ಮುಂಬಾಯಿ ಫೌಜು ತೆಗೆದುಕೊಂಡು, ಹೆಗ್ಗಳದ ಗಟ್ಟಾ ಹತ್ತಿ ಬಂದರು. ಆ ಜನರಲ್ ಸ್ಟ್ವಾಯರ್ಟ್ ಸಾಹೇಬರವರ ಬಳಿಗೆ ನಾವು ಹೋಗಿ, ಮಿಲಾಕತ್ತು ಮಾಡಿದೆವು. ಆವಾಗ್ಯೆ ಆ ಜನರಲ್ ಸಾಹೇಬರವರು ಹೇಳಿದರು : ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬರವರ ದಿವಸದಲ್ಲಿ ಇಂಗ್ರೇಜ ಕುಂಪನಿ ಸರಕಾರದ ಕೆಲಸದಮೇಲೆ ಬಹಳ ಖೈರುಕಾಯಿ ಪ್ರಯತ್ನಮಾಡಿ ಇದ್ದೀರಿ. ಆ ವಿವರ ಯಾವತ್ತು ದೊಡ್ಡ ದೊಡ್ಡ ಸರದಾರರ ಮುಖವಚನದಿಂದಾ ಕೇಳಿ, ನಮ್ಮ ಮನಸ್ಸಿನಲ್ಲಿ ಚಿತ್ರ ಬರದ ಹಾಗೆ ಇದೆ. ಈಗಲೂ ಅದೇ ಮೇರೆ ತಾವು ಸಕಾಯ ಮಾಡೀರಿ ಎಂಬದಾಗಿ ಉಮೇದು ಮಡಗುತ್ತೇವೆ. ಏನೊಂದು ಕುಮುಕು ಮದತ್ತು ಮಾಡುವಂಥಾದ್ದು ಈಗ ಮಾಡಬೇಕು ಎಂತಾ ಹೇಳಿದರು. ಈ ಮಾತ ನಾವು ಕಬೂಲು ಮಾಡಿ, ಆ ವಕೀಲ ಸಾಹೇಬರವರು ಹಿಷಾರೆ ಮಾಡಿದ ಮೇರೆ, ಏನೊಂದು ನೌಕ್ರಿ ನಮ್ಮ ಕೈಯಿಂದಾ ಆಗುವಂಥಾದ್ದನ್ನು ಶಿರಸಾದಿಂದಾ ಮಾಡಿದೆವು. ಆ ಜನರಲ್ ಸ್ಟ್ವಾಯರ್ಟ್ ಸಾಹೇಬರವರು ಬರುವದಕ್ಕೆ ಹದಿನೈದು ದಿವಸಕ್ಕೆ ಮೊದಲು, ಕರ್ನಲ್ ಮಂತ್ರಿಜೊರು ಸಾಹೇಬ್ ಬಹದ್ದೂರವರು, ಮೇಜರ್ ಡಿಜನಿ ಸಾಹೇಬ್ ಬಹದ್ದೂರವರು ಸಹಾ ಒಂದು, ಎರಡು ಪಟಾಲಮಿನ ಬಾರು ಸಿದ್ಧೇಶ್ವರನ ಸರಹದ್ದಿನ ಬೆಟ್ಟದ ಕೆಳಗೆ ಇಳಿಸಿ ಇದ್ದರು. ಆ ಸಾಹೇಬರು ನಮ್ಮಿಂದಾ ಆಗತಕ್ಕ ನೌಕ್ರಿ ತೆಗೆದುಕೊಂಡು ಇದ್ದಾರೆ. ಆಮೇಲೆ ಆ ಜನರಲ್ ಸ್ಟ್ವಾಯರ್ಟ್ ಸಾಹೇಬ್ ಬಹದ್ದೂರವರು ಹೆಗ್ಗಳದ ಗಟ್ಟದ ಮೇಲೆ ನಾಲ್ಕು ಐದು ದಿವಸ ಮೊಕ್ಕಾಂ ಮಾಡಿ ಯಾವತ್ತೂ ಲಷ್ಕರು ಸಂಗಡ ತೆಗೆದುಕೊಂಡು ಬಂದು, ಸಿದ್ಧಾಪುರದ ಸುಂಕದ ಬಾಗಿಲ ಹೊರಗೆ, ಕರಡಿಗೋಡಿಂದಾ ಸಿದ್ಧೇ

ಶ್ವರನ ಸರಹದ್ದಿನ ಬೆಟ್ಟ ಪರಿಯಂತರ ಲಷ್ಕರಿನ ಬಜಾರು ಇಳಿಸಿ ಇದ್ದರು.

ಮತ್ತೆ ಕೆಲವು ದಿವಸದ ಮೇಲೆ ಖಾಸಾ ಟೀಪುಸುಲ್ತಾನರು, ಅವರ ಭಾರಿ ಫೌಜು ಸಮೇತ ಬಂದು, ಪಿರಿಯಾಪಟ್ಟಣದ ಮೈದಾನದಲ್ಲು ಇಳುದರು. ಆವಾಗ್ಯೆ ನಾವು, ಆ ವಕೀಲ್ ಕೆಪ್ಟನ್ ದಿನಸ್ ಮಾವಿನಿ ಸಾಹೇಬರು ಮುಂತಾದ ಸರದಾರರು, ಲಷ್ಕರಿನಿಂದಾ ಹೊರಟು, ಸಿದ್ಧೇಶ್ವರನ ಬೆಟ್ಟದ ಮೇಲೆ ಹತ್ತಿ, ಮಾಂಕ್ರಿಫ್ ಸಾಹೇಬರವರ ತಂಬಿನ ಒಳಗೆ ಕುಂತುಕೊಂಡು, ಪಿರಿಯಾಪಟ್ಟಣದ ಮೈದಾನದ ಕಡೆ, ದುರ್ಬೀನಿನಿಂದಾ ನೋಡುತ್ತಿದ್ದೆವು. ಆವಾಗ್ಯೆ ಹಗಲು ಹನ್ನೆರಡು ಗಳಿಗೆ ಹೊತ್ತು ಆಗಿ ಇತ್ತು. ಅಷ್ಟರಲ್ಲಿ ಏಕಾ ಯೇಕಿ ಟೀಪುಸುಲ್ತಾನರ ದಂಡಿನ ಒಂದು ತಂಬು ನಿಲ್ಲಿಸಿದ್ದು ಕಾಣಬಂತು. ಆಮೇಲೆ ಮೂರು ಜಾವ ಪರಿಯಂತರ ಏಳುನೂರು ತಂಬು ನಿಲ್ಲಿಸಿದ್ದು ಕಾಣ ಬಂತು. ಅವರ ಫೌಜು ಹದಿನೆಂಟು ಸಾವಿರ ಜನದ ಸುಮಾರು ಬಂದು ಇಳೀತು. ಆ ವಕೀಲ ಸಾಹೇಬರು ಮುಂತಾದ ಸರದಾರರು, ಟೀಪುಸುಲ್ತಾನರ ಫೌಜಿನ ತಂಬು ಯಾವತ್ತು ನಿಲ್ಲಿಸಿದ್ದನ್ನು ಕಣ್ಣಿಂದಾ ನೋಡಿ, ದೊಡ್ಡ ಲಷ್ಕರಿಗೆ ತಿರಿಗಿ ಬಂದು, ಆ ಕಣ್ಣಾರೆ ಕಂಡು ಬಂದಂಥಾ ವಿವರ ಯಾವತ್ತು ಜನರಲ್ ಸ್ಟ್ಯುಯರ್ಟ್ ಸಾಹೇಬರವರಿಗೆ ಜಾಹೀರು ಮಾಡಿದೆವು.

ಆ ಮಾರಣೆ ದಿವಸ ಟೀಪುಸುಲ್ತಾನರು ಅವರ ಫೌಜು ಯಾವತ್ತು ತೆಗೆದು ಕೊಂಡು ಬಂದು, ತಮ್ಮ ಸರಹದ್ದಿನಲ್ಲಿ ಕುಂತುಕೊಂಡು, ಏನೂ ಅಂದೇಶ ಮಾಡದೆ, ಕಾಳಯುಕ್ತಿ ಸಂವತ್ಸರದ ಫಾಲ್ಗುಣ ಶು. ೧ ದಿವಸ, ನಮ್ಮ ಕೊಡಗಿನ ಸೀಮೆ ಸರಹದ್ದಿನ ಒಳನುಗ್ಗಿ, ಕರ್ನಲ್ ಮಂತ್ರಿಜೋರು ಸಾಹೇಬ ರವರು, ಮೇಜರ್ ಡಿಜನಿ ಸಾಹೇಬರವರು, ಜನರಲ್ ಹಾಟ್ಲೆ ಸಾಹೇಬರವರು ಸಹಾ, ನಮ್ಮ ಕೊಡಗಿನ ಸೀಮೆ ಸರಹದ್ದಿನಲ್ಲಿ ಹಾಜರು ಇದ್ದರು. ಅವರ ಸಂಗಡ ಲಡಾಯಿ ಶುರು ಮಾಡಿ, ಮೂರು ನಾಲ್ಕು ಜಾವ ಪರಿಯಂತರ ಎರಡು ಕಡೆ ಫೌಜು ಲಡಾಯಿವಾಗುತ್ತಾ ಇತ್ತು. ಆಮೇಲೆ ಜನರಲ್ ಸ್ಟ್ಯುಯರ್ಟ್ ಸಾಹೇಬ್ ಬಹದ್ದೂರರವರು ಎರಡು ರಿಜಿಮಿಟು ಸೋಜರ ಜಮಾಮುರ್ದ್ ಬಹದ್ದೂರರವರ ತಮ್ಮ ಸಂಗಡ ತೆಗೆದುಕೊಂಡು, ದೊಡ್ಡ ದೊಡ್ಡ ಸರದಾರರು ಸಹಾ ಕುಮುಕು ಮಾಡುವ ಬಗ್ಯೆ ಬಂದರು. ನಾವು ಆ ವಕೀಲ್ ಸಾಹೇಬರ ಹಿಷಾರಿ ಮೇರೆ ನೌಕ್ರಿ ಮಾಡುತ್ತಾ, ಆ ಲಡಾಯಿದ ಸಮಯದಲ್ಲಿ ಅದೇ

ಜಾಗದಲ್ಲಿ ಹಾಜರು ಇದ್ದೆವು. ಆ ರಾತ್ರೆ ಎಂಟು ಗಳಿಗೆ ಆದಮೇಲೆ, "ಮಂತ್ರಿಜೊರು ಸಾಹೇಬರವರ ಆಗಾಡಿ ತುಕ್ಕಡಿ ಫೌಜನ್ನು ಸಂಗಡ ತೆಗೆದುಕೊಂಡು, ದೊಡ್ಡ ಲಷ್ಕರಿನ ಬಳಿಯು ಹೋಗಿ ಇಳಿಸಬೇಕು. ನೀವು ನಿಮ್ಮ ಜನರನ್ನು ಸರಹದ್ದಿನಲ್ಲಿ ಚೌಕಿ ಮುಡಗಿ, ಖಬರ್ದಾರಿ ಮಾಡಬೇಕು" ಎಂತಾ, ಜನರಲ್ ಸಾಹೇಬರವರು ಹೇಳಿದರು. ಆ ಜನರಲ್ ಸಾಹೇಬರು ಹೇಳಿದ ಮೇರೆ, ಸರಹದ್ದಿನಲ್ಲಿ ಆಯಾಯ ಜಾಗದಲ್ಲಿ ಖಬರ್ದಾರಿ ಬಗ್ಯೆ ಪಹರೆ ಮುಡಗಿದೆವು.

ಆಮೇಲೆ ಟೇಪುಸುಲ್ತಾನರು ಮುರುದು, ಹಿಂದಕ್ಕೆ ಹೋಗಿ, ಪಿರಿಯಾಪಟ್ಟಣದಲ್ಲಿ ಐದು ದಿವಸ ಮೊಕ್ಕಾಂ ಮಾಡಿ, ಅಲ್ಲಿಂದಾ ಕೂಚು ಮಾಡಿ, ಶ್ರೀರಂಗಪಟ್ಟಣದ ಕಡೆಗೆ ಹೋದರು.

ಎರಡನೆ ಸಲಾ ಮಂತ್ರಿಜೊರು ಸಾಹೇಬರವರ ಅಗಾಡಿ ತುಕ್ಕಡಿ ಒಂದು, ಮೊದಲಿನ ಹಾಗೆ ಸಿದ್ಧೇಶ್ವರನ ಬೆಟ್ಟದ ಕೆಳಗೆ ಲಡಾಯುವಾದ ಜಾಗದಲ್ಲಿ ಇಳೀತು. ಇದಲ್ಲದೆ ಆ ಲಡಾಯುದ ದಿವಸ ರಾತ್ರೆ, ಜನರಲ್ ಸಾಹೇಬರವರು ಹೇಳಿದರು: "ಟೇಪುಸುಲ್ತಾನರು ಗರೂರಿಯಿಂದಾ ಇಂಗ್ರೇಜ ಕುಂಪನಿ ಸರಕಾರ ಇಲಾಖೆ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬಂದು, ಲಡಾಯು ಶುರು ಮಾಡಿ, ಸಲ್ಲಾದ ನಡತೆ ತಾವಾಗಿ ಮುರುದು ಇದ್ದಾರೆ. ಎಲ್ಲಾ ಬಗೆಯಿಂದಲೂ ಈ ಮಾತಿನ ತಕ್ಷೀರು ಅವರ ಮೇಲೆ ಸಾಬೂತಾಗಿ ಇದೆ. ಈಗ ನಿಮಗೆ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕಡೆಯಿಂದಾ ಹುಕುಮ್ ಆಗುತ್ತದೆ. ನೀವು ಮಾಡಬೇಕು: ನಿಮ್ಮ ಜನರಿಗೆ ತಾಕೀತಿ ಮಾಡಿ, ಟೇಪು ಸುಲ್ತಾನರ ಸೀಮೆಗೆ ನುಗ್ಗಿ, ಲೂಟಿ ಮಾಡಿ ತರಬೇಕು. ಅಥಾಪಿಸಿ, ಅವರ ಕಡೆ ಶಿಪಾಯಿ ಜನ ಲಡಾಯಿ ಮಾಡಿದರೆ, ನೀವು ಲಡಾಯು ಮಾಡಬೇಕು. ಈ ಹುಕುಮ್ ನಾವು ರಜಾವಂದಿಯಿಂದಾ ನಿಮ್ಮೇಲೆ ಹೇಳಿ ಇದ್ದೇವೆ. ಇದಕ್ಕೆ ನೀವು ಕಬೂಲು ಮಾಡಿ, ಸರಕಾರದ ನೌಕ್ರಿ ಖೈರುಕಾಯಿ ಪ್ರಯತ್ನದಿಂದಾ, ಯಾವತ್ತೂ ಜನರಿಗೂ ತಿಳಿಯುವ ಹಾಗೆ ಮಾಡಬೇಕು" ಎಂಬದಾಗಿ ನಮಗೆ ಹೇಳಿದರು. ಈ ಮಾತಿಗೆ ಜನರಲ್ ಸಾಹೇಬರವರು ಹುಕುಮ್ ಕೊಟ್ಟ ಮೇರೆಗೆ, ನಮ್ಮಿಂದಾ ದೊಡ್ಡ ಸರಕಾರದ ಖೈರುಕಾಯಿ ಪ್ರಯತ್ನ ನೌಕ್ರಿ ಆಗುವಂಥಾದ್ದು ಆಗುಮಾಡಿದೆವು.

ಈ ಮಾತಿಗೆ ಮುಂಬಾಯಿ ಲಷ್ಕರಿನ ಸರದಾರರು ಅದನಾ ಆಲಾ

ಸಮಸ್ತರು ಸಾಕ್ಷಿ ಇದ್ದಾರೆ. ಆ ಜಾಗ ಟೀಪುಸುಲ್ತಾನರ ಫೌಜಿಗೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಫೌಜಿಗೂ ಲಡಾಯುವಾದ ಜಾಗ ಅದು; ಖಾಸಾ ಸರಹದ್ದು ಸಿದ್ಧೇಶ್ವರನ ಬೆಟ್ಟ ಇದೆ. ಅದು ಕೊಡಗಿನ ಸೀಮೆ ಸರಹದ್ದಿನ ಒಳಗೆ ಇದೆ. ಅದಲ್ಲಾ, ಮೈಸೂರು ಸೀಮೆ ಸರಹದ್ದಿನ ಒಳಗೇ ಇದೆಯೋ ಎಂತಾ, ದರಿಯಾಪ್ತು ಮಾಡಬೇಕು. ಆಮೇಲೆ ಆ ಸರಹದ್ದು ಯಾರ ಸೀಮೆ ಇಲಾಖೆ ಇದೆಯೋ, ಅವರಿಗೆ ಕೊಡಿಸಬೇಕು. ಈ ಮಾತಿಗೆ ನಾವು ರಜಾ ವಂದಿಯಿಂದಲೂ, ಖುಷಿಯಿಂದಲೂ ಕಬೂಲು ಮಾಡಿಯೇವು. ಈ ಸದರಿ ಬರದು ಇರುವ ಕೆಲು ವಿವರವನ್ನು ದರಿಯಾಪ್ತು ಮಾಡಬೇಕು. ಶ್ರಮವಾದೀತು ಎಂತಾ ಬಿಡಬಾರದು.

ನಾವು ಕೊಡಗಿನ ದೊರೆಗಳಾದ ವೀರರಾಜೇಂದ್ರ ವಡೆಯರವರು ಕೀಲಕ ಸಂವತ್ಸರದಲ್ಲಿ ಟೀಪುಸುಲ್ತಾನರ ದೋಸ್ತಿಯಿಂದಾ ಕೈತೆಗದು, ನಮ್ಮ ಕೊಡಗಿನ ಸೀಮೆ ಒಳಗೆ ಬಂದು, ನಮ್ಮ ಸೀಮೆ ಸರಹದ್ದು ಸಿದ್ಧೇಶ್ವರನ ಬೆಟ್ಟವಾದ್ದರಿಂದಾ, ಆ ಬೆಟ್ಟದ ಬೆನ್ನಿನ ಮರೆಯಲ್ಲಿ ಮೂರು ವರ್ಷ ಇದ್ದು, ನಮ್ಮ ಹಿರಿಯರು ದೊರೆತನ ಮಾಡಿದಂಥಾವರು ಬಂದುಬಸ್ತು ಮಾಡಿದ ಮೇರೆ ಆ ಸಿದ್ಧೇಶ್ವರನ ಬೆಟ್ಟದ ಮುಂದೆ, ಒಂದು ಕೋವಿ ಗುಂಡಿನ ಯಸಿಗೆ ದೂರದಲ್ಲಿ ನಾವು ಪಹರೆ ಚೌಕಿ ಮಡಗಿ, ಆ ಸರಹದ್ದಿನ ಬಂದುಬಸ್ತು ಮಾಡಿ ಇದ್ದೇವೆ. ಈ ಸರಹದ್ದು ಅಥಾಪಿಸಿ ಟೀಪುಸುಲ್ತಾನರ ಸೀಮೆಯುದು ಆಗಿ ಇದ್ದರೆ, ಟೀಪುಸುಲ್ತಾನರ ಬಂದುಬಸ್ತಿನ ಒಳಗೆ ಇರುತ್ತಿತ್ತು. ಇದಲ್ಲದೆ ಮೂರು ವೇಳೆ ಇಂಗ್ರೇಜ ಬಹಾದ್ದರರ ಲಷ್ಕರು ಕೊಡಗಿನ ಸೀಮೆ ಒಳಗೆ ಬಂದು ಇತ್ತು. ಆ ಲಷ್ಕರು ಬರುವದಕ್ಕೆ ಎರಡು ಮೂರು ತಿಂಗಳಿಗೆ ಮೊದಲು ಆ ಮಾರ್ಗ ದುರುಸ್ತುಮಾಡಿ ಸುತ್ತಾ ಇದ್ದೆವು. ಇದಲ್ಲದೆ ಇಂಗ್ರೇಜ ಬಹಾದ್ದರ ಸರದಾರರು ಅದೇ ಮಾರ್ಗ ವನ್ನು ದುರುಸ್ತುಮಾಡಿಸುತ್ತಾ ಇದ್ದರು. ಇದಲ್ಲದೆ ಅದೇ ಸಿದ್ಧೇಶ್ವರನ ಬೆಟ್ಟದ ಕೆಳಗೆ ಮೋದಿಖಾನೆ ಕಟ್ಟಿಸಿ, ದರೋಬಸ್ತು ಲಷ್ಕರಿನ ಸಾಮಾನು ಆ ಮೋದಿ ಖಾನೆ ಒಳಗೆ ತುಂಬಿಸಿ ಇದ್ದೆವು. ಅಥಾಪಿಸಿ, ಆ ಸರಹದ್ದು ಅವರ ಇಲಾಖೆ ಆಗಿ ಇದ್ದರೆ, ಆ ಲಷ್ಕರು ಹೋಗುವ ಮಾರ್ಗ ಯಾವ ಮೇರೆ ದುರುಸ್ತು ಆಗುತ್ತಿತ್ತು ? ಅಲ್ಲಿ ಮೋದಿಖಾನೆ ಯಾವ ಮೇರೆ ಇರುತ್ತಿತ್ತು ? ಇದಲ್ಲದೆ ಆ ಸಿದ್ಧೇಶ್ವರನ ಬೆಟ್ಟದ ಕೆಳಗೆ ಕೆಪ್ಟನ್ ಜಾನ್‌ಸನ್ ಸಾಹೇಬರವರು ಇದ್ದು,

ಮೂರು ತಿಂಗಳು ಪರಿಯಂತರ ಮೋರ್ಚೆಗೆ ಇರುವ ಸಾಮಾನು ತಯಾರು ಮಾಡಿಸುತ್ತಿದ್ದರು. ಅಥಾಪಿಸಿ, ಆ ಸರಹದ್ದಿನ ಸಿದ್ಧೇಶ್ವರನ ಬೆಟ್ಟ ಟೇಪು ಸುಲ್ತಾನರ ಸೀಮೆಗೆ ಕೂಡಿದ್ದಾಗಿ ಇದ್ದರೆ, ಅವರ ಶ್ರೀರಂಗಪಟ್ಟಣ ತೆಗದು ಕೊಳ್ಳುವ ಬಗ್ಯೆ ಇರುವ ಸಾಮಾನು ಅಲ್ಲಿ ತಯಾರುಮಾಡುವ ಬಗ್ಯೆ, ಟೇಪು ಸುಲ್ತಾನರು ಯಾವ ಮೇರೆ ಬಿಡುತ್ತಿದ್ದರು? ಇದಲ್ಲದೆ, ಕರಡಿಗೋಡು ಮೈದಾನದಿಂದಾ ಆ ಸರಹದ್ದಿನ ಸಿದ್ಧೇಶ್ವರನ ಬೆಟ್ಟ ಪರಿಯಂತರ ಇಂಗ್ರೇಜ ಬಹಾದ್ದರ ಲಷ್ಕರು ಇಳಿವ ಜಾಗವಾಗಿ ಇತ್ತು. ಇಂಗ್ರೇಜ ಲಷ್ಕರು ಇಳಿವ ಬಗ್ಯೆ, ಆ ಜಾಗಾ ಟೇಪುಸುಲ್ತಾನರು ಯಾವ ಮೇರೆ ಕೊಡುತ್ತಿದ್ದರು? ಇದಲ್ಲದೆ ಪರಿಧಾವಿ ಸಂವತ್ಸರದಲ್ಲಿ ಟೇಪುಸುಲ್ತಾನರ ಸರಕಾರಕ್ಕೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಸಲ್ಲಾ ಮೊಕರರು ಆಯಿತು. ಅವಾಗ್ಯೆ ಸರ್ ಜನರಲ್ ರಾಬರ್ಟ್ ಆಬಕ್ರ್ರಂಬಿ ಸಾಹೇಬ್ ಬಹದ್ದೂರವರು ಇಂಜನೇರು ಇಮಿಾಟ್ ಸಾಹೇಬ್ ಬಹದ್ದೂರವರನ್ನು ರವಾನೆ ಮಾಡಿ, ಕೊಡಗಿನ ಸೀಮೆ ಸರಹದ್ದು ಮೊಕರರು ಆಗಿ ಇರುವ ತಪಶೀಲು ಬರೆಸಿ ಇದ್ದಾರೆ. ಆ ತಪಶೀಲು ಮಲೆವಾರಿ ಕಮಿಾಶನ್ ಸಾಹೇಬರವರ ಬಳಿಯಲ್ಲು ಹಾಜರು ಇದೆ. ದರಿಯಾಪ್ತು ಮಾಡಿಸಬೇಕು. ಇದಲ್ಲದೆ ಲಾರ್ಡ್ ಕಾರ್ನ್‌ವಾಲೀಸ್ ಸಾಹೇಬ್ ಬಹದ್ದೂರವರ ಹೊತ್ತಿನಲ್ಲಿ ಉಭಯ ಸರಕಾರಕ್ಕೂ ಸಲ್ಲಾ ಮೊಕರರು ಆಗಿ, ಎಂಟು ವರ್ಷ ಪರಿಯಂತರ ಆ ಸಲ್ಲಾ ಕರಾರು ಕಾಯಂ ಆಗಿತ್ತು. ಅಥಾಪಿಸಿ, ಆ ಸಿದ್ಧೇಶ್ವರನ ಬೆಟ್ಟದ ಸರಹದ್ದು ನಾವು ಜಬರ್‌ದಸ್ತಿಯಿಂದಾ ಹೆಚ್ಚಿಸಿ, ದೊಡ್ಡದು ಮಾಡಿದ್ದಾಗಿ ಇದ್ದರೆ, ಟೇಪುಸುಲ್ತಾನರು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದಲ್ಲಿ ಫಿರಿಯಾದಿ ಮಾಡಿ ತೆಗೆದುಕೊಳ್ಳದೆ ಯಾವ ಮೇರೆ ಬಿಡುತ್ತಿದ್ದರು. ಟೇಪುಸುಲ್ತಾನರು ಹಗೆತನದಲ್ಲಿ, ಶಕ್ತಿಯಲ್ಲಿ, ಕುದರತ್ತಿನಲ್ಲಿ ಸಹಾ ಏನಾದರೂ ಕಡಿಮೆ ಆಗಿ ಇರಲ್ಲಾ. ಯಾವ ವಿಷಯದಲ್ಲಿ ಆದರೂ ಅವರ ಕಾರ್ಯವಾಗಿ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಒಳಗೆ ಫಿರಿಯಾದಿ ಮಾಡಿ ಇದ್ದರೆ, ಕುಂಪನಿ ಸರಕಾರದ ಹುಕುಮತ್ತು ನಡಸುವಂಥಾ ಸರದಾರರು ಅದನ್ನು ವಿಚಾರಿಸದೆ, ಬರಿದೆ ಯಾವ ಮೇರೆ ಬಿಡುತ್ತಿದ್ದರು? ಟೇಪುಸುಲ್ತಾನರು ಮುಸಲ್ಮಾನರು. ಇಷ್ಟು ಹಗೆತನ ಮಡಗಿ, ಬದುಕಿ ಇರುವ ಪರಿಯಂತರ ಯಾವ ಸಮಯದಲ್ಲಿ ಆದರೂ ಆ ನಮ್ಮ ಸರಹದ್ದು ಆಗಬೇಕು

ಎಂತಾ, ಯೋಚನೆ ಮಾಡಲಿಲ್ಲಾ. ಈಗ ನಮ್ಮ ಹಿಂದೂ ಜಾತಿ ದೋಸ್ತು ದಾರರು ಮೈಸೂರ ಕೃಷ್ಣರಾಜ ಸಾಹೇಬರವರು ಕೊಡಿಗಿನ ಸೀಮೆ ಸರಹದ್ದನ್ನು ತಮ್ಮ ಸೀಮೆ ಸರಹದ್ದು ಎಂತಾ ತಿಳಿದು, ಎಲ್ಲರಿಗೂ ತಿಳಿದ ಹಾಗೆ, ಜಬರ್ ದಸ್ತಿಯಿಂದಾ ತಮ್ಮ ಸೀಮೆ ಸರಹದ್ದು ಹೆಚ್ಚಿಸುತ್ತಾ ಇದ್ದಾರೆ. ಅದರ ತಕ್ಷೀರು ನಮ್ಮೇಲೆ ಮಡಗುತ್ತಾರೆ. ಆದ್ದರಿಂದಾ ಎಲ್ಲಾ ತರದಿಂದಲೂ ಲಾಚಾರಾಗಿ ಇದ್ದೇವೆ. ದರಿಯಾಪ್ತು ಮಾಡಬೇಕು.

ಕೀಲಕ ಸಂವತ್ಸರದ ಆರಭ್ಯ ರುಧಿರೋದ್ಗಾರಿ ಸಂವತ್ಸರದವರೆಗೆ ಹದಿನಾರು ವರ್ಷವಾಯಿತು. ಈ ರಕ್ತಾಕ್ಷಿ ಸಂವತ್ಸರದ ಒಂಬತ್ತನೆ ತಿಂಗಳು ೨೨ನೇ ತಾರೀಕು, ಚಂದ್ರವಾರ ದಿವಸ, ವಕೀಲ್ ಕೆಪ್ಟನ್ ದಿನಸ್ ಮಾವಿನಿ ಸಾಹೇಬ ಬಹಾದ್ದುರವರು ಕರಂಘರ್ಮಾ ಜಾನ್ ಹನೆರಿ ಪೀಲ್ ಸಾಹೇಬ್ ತವಜ್ಜು ಗುಸ್ತರ ಮೊಕಲೀಸಾನವರು ಸಹಾ, ನವಾಬ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬ್ ಬಹಾದ್ದುರವರ ಹಜೂರಿಂದಾ ಇನಾಯತ ಆಗಿರುವ ಶವ್‌ಶೇರನ್ನು ಆ ಇಬ್ಬರು ಸಾಹೇಬರ ಮುಬಾರಕ್ ಹಸ್ತದಿಂದಾ ನಮ್ಮ ನಡುವಿಗೆ ಕಟ್ಟಿ, ಬಹಳ ಖುಷಿ ಮಾಡಿದರು. ಈವರೆಗೆ ನಮ್ಮ ಸೀಮೆ ಸರಹದ್ದು ಹೆಚ್ಚು ಕಡಿಮೆ ಆಗದೆ, ನಮ್ಮ ಹಿರಿಯುವರು ಬಂದುಬಸ್ತು ಮಾಡಿದ ಮೇರೆ, ನಾವು ಬಂದುಬಸ್ತು ಮಾಡಿಕೊಂಡು, ಇಂಗ್ರೇಜ ಬಹಾದ್ದರ ಕುಂಪನಿ ದೊಡ್ಡ ಸರಕಾರದ ಆಶ್ರಯದ ಒಳಗೆ ಇದ್ದು, ಆಬ್ರು ಹುರಮತ್ತಿನಿಂದ ಪರ್ವರ್ಷ ಆಗುತ್ತಾ ಇದ್ದೇವೆ. ಆ ಪರ್ವರ್ಷಿ ಹೊರ್ತು, ನಾವು ಮತ್ತೊಬ್ಬರ ಒಡವೆ ಮೇಲೆ ಅಪೇಕ್ಷೆ ಮಡಗುವ ದಿಲ್ಲಾ. ಈ ಮಾತಿಗೆ ಇದೇ ಶವ್‌ಶೇರು ಶಿವಮುಹಾದೇವ, ನನಾಬ ಸಾಹೇಬ ರವರ ಜವಾಬು ದೋಸ್ತುದಾರರಾದ ಇಂಗ್ರೇಜ ಕುಂಪನಿ ಸರಕಾರದ ದೊಡ್ಡ ದೊಡ್ಡ ಸರದಾರರು ಸಹಾ, ಸಾಕ್ಷಿ ಶಾಯಿದಿ ಇದ್ದಾರೆ.

ಈ ಕೆಲವು ಮಾತುಗಳನ್ನು ಸರಹದ್ದಿನ ತಕ್ರಾರು ಬಂದಕಾರಣ, ಬರದು ಕೊಟ್ಟು ಇದ್ದೇವೆ. ಉಳಿಕೆ ನಮ್ಮ ಹಿರಿಯುರ ದಿವಸದ ಕೈಫಿಯತು ಟೀಪು ಸುಲ್ತಾನರ ದಿವಸದಲ್ಲಿ ಹೋಗಿ ಹೋಯಿತು. ಆದಾಗ್ಯೂ ಅದರಲ್ಲಿ ನೂರ ಅರುವತ್ತು ವರ್ಷದ ಈಚೆಗೆ ಕೆಲವು ಕೈಫಿಯತನ್ನು ಕನ್ನಡ ಬರಹದಲ್ಲು ಬರದ್ದು ಹಾಜರು ಇದೆ. ಬೇಕಾದರೆ ಫಾರ್ಶಿ ಬರಹದಿಂದಾ ನಕಲು ಬರೆಸಿ, ರವಾನೆ ಮಾಡಿಯೇವು.

ಸನ್ ೧೨೯೯ನೇ ಹಿಜರಿ ಶವಾಲು ತಿಂಗಳು, ೨೩ನೇ ತಾರೀಕು, ರಕ್ತಾಕ್ಷಿ ಸಂವತ್ಸರದ ಪುಷ್ಯ ತಿಂಗಳು, ತಾರೀಕು ೨೩ರಲ್ಲಿ ಈ ಪ್ರಕಾರ ಬರದುಕೊಟ್ಟಲ್ಲಿ, ಜಾನ್ ಹನೆರಿ ಪೀಲ್ ಸಾಹೇಬರವರು ಇನ್ನು ನಾವು ಗಡಿಸರಹದ್ದನ್ನು ತಿರಿಗಿ ನೋಡಿ, ಕಲ್ಲುಗಳ ನಿಲ್ಲಿಸುವ ಬಗ್ಯೆ ಹೋಗಬೇಕು ಎಂಬದಾಗಿ ಹೇಳಿದಲ್ಲಿ, ಮಹಾರಾಜರವರು : " ನಾವು ಮಡಿಕೇರಿಯಲ್ಲು ಹೊಸ್ತಾಗಿ ಅರಮನೆ ಕಟ್ಟಿಸಿ ಇದ್ದೇವೆ. ಈ ಮಾಘ ಶು. ೧ ದಿವಸ ಅರಮನೆ ಗೃಹಪ್ರವೇಶ ಆಗಬೇಕೆಂತಾ ಮಾಡಿ ಇದ್ದೇವೆ. ಈ ಗೃಹಪ್ರವೇಶ ಆಗುವ ಪ್ರಸ್ತ ತೀರಿಸಿಕೊಂಡು ಹೋಗ ಬೇಕು" ಎಂತಾ, ಬಹಳ ಬಗೆ ಹೇಳಿ, ನಿಲ್ಲಿಸಿಕೊಂಡು, ಇಂಗ್ರೇಜ ಸರದಾರರು ಇದ್ದು, ರಕ್ತಾಕ್ಷಿ ಸಂವತ್ಸರದ ಮಾಘ ಶು. ೧ರಲ್ಲಿ, ಗುರುವಾರ ದಿವಸ, ರಾತ್ರೆ ಗಳಿಗೆ ೧೯ಕ್ಕೆ ವೃಶ್ಚಿಕ ಲಗ್ನದಲ್ಲು, ಶುಭಮುಹೂರ್ತದಲ್ಲಿ, ಮಹಾಸಂತೋಷ ದಿಂದಾ ವೀರರಾಜೇಂದ್ರ ಒಡೆಯರವರು ಅರಮನೆ ಗೃಹಪ್ರವೇಶವಾದರು.

ಆ ಬಳಿಕ ಮಾಘ ಶು. ೭ ದಿವಸ, ಸರಹದ್ದಿನ ತಕ್ರಾರು ತೀರಿಸುವ ಬಗ್ಯೆ, ಜಾನ್ ಹನೆರಿ ಪೀಲ್ ಸಾಹೇಬರವರು, ಕರಣೀಕ ಸುಬ್ಬೈಯ್ಯ, ಮೈಸೂರ ಕಡೆ ತಮ್ಮಾಜಿಪಂಥ ಸಹಾ, ಮಡಿಕೇರಿಯಿಂದಾ ಹೊರಟು, ಏಳುಸಾವಿರ ಸೀಮೆಗೆ ಹೋದರು. ವಕೀಲ ಕೆಪ್ಟನ್ ದಿನಸ್ ಮಾವಿನಿ ಸಾಹೇಬರವರು ಇದೇ ದಿವಸ ತಲಚೇರಿಗೆ ಹೊರಟುಹೋದರು.

ಆ ಬಳಿಕ ಇದೇ ಮಾಘ ಶು. ೧೩ ಯು ಸೋಮವಾರ ದಿವಸ ಸ್ವಾದೆ ಸಂಸ್ಥಾನದ ಸವಾಯಿ ಬಸವಲಿಂಗರಾಜರು ಗೋವೆ ಇಲಾಖೆ ಬಾಂದವಾಡಿ ಯಿಂದ ಮಡಿಕೇರಿಗೆ ಬಂದು ತಲಪಿದರು.

ಆ ಬಳಿಕ ಇತ್ತಲಾಗಿ ಸರಹದ್ದಿನ ಕಡೆಗೆ ಹೋದಂಥಾ, ಸದರಿ ಸಾಹೇ ಬರು ಮುಂತಾಗಿ ಏಳುಸಾವಿರ ಸೀಮೆಯಿಂದಾ ಬಿಸಲೆಗಟ್ಟಕ್ಕಾಗಿ ಗಟ್ಟಾ ಇಳಿದು, ಸುಬ್ರಹ್ಮಣ್ಯಕ್ಕೆ ಹೋಗಿ, ಕೊಡಗಿನ ಸಂಸ್ಥಾನದ ಸೀಮೆ, ಮೈಸೂರ ಸೀಮೆ ಸಹ ಕೂಡಿದ ಗಡಿಸರಹದ್ದಿನ ರೈತಮುಖ್ಯಸ್ಥ ಮುಂತಾಗಿ, ಸುಬ್ರಹ್ಮಣ್ಯ ದಲ್ಲು ಕೂಡಿ, " ಮಂಗಳೂರ ತಾಲೂಕು ಸೀಮೆ, ಮೈಸೂರ ತಾಲೂಕು ಸೀಮೆ, ಕೊಡಗಿನ ಸಂಸ್ಥಾನದ ಸೀಮೆ ಸಹಾ ಕೂಡಿದ ಸರಹದ್ದು ಯಾವದು" ಎಂಬ ದಾಗಿ ವಿಚಾರಿಸಿ, ಮೂರು ಸರಕಾರದ ಸೀಮೆ ಸರಹದ್ದು ಕೂಡಿದ ಕುಮಾರ ಧಾರೆ ಹೊಳೆ ಹುಟ್ಟಿದ ಬುಡಾ, ಮುಗ್ಗುಡೆ ಎಂಬ ಸರಹದ್ದಿನಿಂದಾ ಹೆಗ್ಗಡ

ದೇವನಕೋಟಿ ಸೀಮೆ ಸರಹದ್ದು, ಬೈನಾಡು ಸೀಮೆ ಸರಹದ್ದು, ಕೊಡಗಿನ ಸರಹದ್ದು ಸಹಾ, ಕೂಡಿದ ಕೇದಗೆ ಮುಂಡಿಗೆಹಳ್ಳದ ಕರೆ ಮುಗ್ಗುಡೆ ಪರಿಯಂತರ ಜಾನ್ ಹನೆರಿ ಪೀಲ್ ಸಾಹೇಬರು, ಮೆಕ್ಕಂಜಿ ಸಾಹೇಬರು, ಕರಣೀಕ ಸುಬ್ಬೈಯ್ಯ, ತಮ್ಮಾಜಿಪಂಥ, ಉಭಯ ಕಡೆಯಿಂದಲೂ ಗಡಿ ಸರಹದ್ದು ಬಲ್ಲಂಥಾ ರೈತಮುಖ್ಯಸ್ಥ ಮುಂತಾದ ಜನರು ತಿರಿಗಿ ಯಾವತ್ತು ತಕ್ರಾರನ್ನು ತೀರಿಸಿ, ಅತಃ ಪ್ರಾಕಾರಭ್ಯದಿಂದಾ ಕೊಡಗಿನ ಸಂಸ್ಥಾನಕ್ಕೆ ಯಾವ ಸರಹದ್ದು ಮೊಕರರು ಆಗಿ ಇತ್ತೋ, ಆ ಸರಹದ್ದನ್ನು ಪ್ರಾಕು ಸರ್ ಜನರಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದುರವರು, ಇಂಜನೇರು ಇಮಿಾಟ್ ಸಾಹೇಬರವರ ಕಳುಹಿ, ಅವರು ಬಂದು ಗಡಿಸರಹದ್ದನ್ನು ತಪಶೀಲಲ್ಲು ಬರಕೊಂಡು ಹೋಗಿದ್ದಾರಲ್ಲಾ ? ಅದೇ ಸರಹದ್ದನ್ನು, ಲೇಶಾಂಶ ಹೆಚ್ಚುಕಡಿಮೆ ಇಲ್ಲದೆ, ಉಭಯ ಕಡೆ ಜನರ ಸಮ್ಮತದಿಂದಾ, ಇಂಗ್ರೇಜ ಸರಕಾರದ ಸರದಾರರು ವಾಜಿಬಿ ಆಗಿ ನಿರ್ಣಯ ಮಾಡಿ, ಮೇಲೆ ಬರದ ಸರಹದ್ದು ಕುಮಾರಧಾರೆ ಕೊಡಗಿನ ಸೀಮೆ, ಮೈಸೂರ ಸೀಮೆ ಸಹಾ, ಕೂಡಿದ ಮುಗ್ಗುಡೆಯಿಂದಾ ಹಿಡಿದು, ಹೆಗ್ಗಡದೇವನಕೋಟೆ, ಬೈನಾಡು ಕೊಡಗಿನ ಸೀಮೆ ಸಹಾ, ಕೂಡಿದ ಕೇದಗೆ ಮುಂಡಿಗೆಹಳ್ಳದ ಕರೆ ಸರಹದ್ದು ಪರಿಯಂತರ ಗಡಿಗಳಲ್ಲಿ ಮುದ್ರೆಕಲ್ಲುಗಳ ನೆಡುವ ಬಗ್ಯೆ, ಅಲ್ಲಲ್ಲಿ ಒಂದೊಂದು ಗೂಟಗಳ ನಿಶಾನಿ ಬಗ್ಯೆ ನಿಲ್ಲಿಸಿ, ಒಂದು ಕಡೆ ಕೊಡಗಿನ ಸಂಸ್ಥಾನದ ಮುದ್ರೆ, ಒಂದು ಕಡೆ ಮೈಸೂರ ಸಂಸ್ಥಾನದ ಮುದ್ರೆ, ಕಲ್ಲಿನ ತಲೇಮೇಲೆ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಮುದ್ರೆ ಸಹಾ, ಕೆತ್ತಿದಂಥಾ ಮುದ್ರೆಕಲ್ಲು ನೂರತೊಂಭತ್ತಾರನ್ನು ಅಲ್ಲಲ್ಲಿ ನೆಡಿಸತಕ್ಕ ಬಗ್ಯೆ, ಕಂದುಕದ ನಮೂನೆ ತೆಗೆಸುವಂತೆ ಸಹಾ ಹೇಳಿಬಿಟ್ಟು, ಈ ಬಗೆ ಲೆಖ್ಖವನ್ನು ಉಭಯ ಕಡೆ ಸರಕಾರದವರು, ಇಂಗ್ರೇಜ ಸರದಾರರು ಸಹಾ, ಬರಕೊಂಡು, ಬಂದುಬಸ್ತು ಮಾಡಿ, ಈ ಸರಹದ್ದಿನ ತಪಶೀಲನ್ನು ಪೀಲ್ ಸಾಹೇಬರವರು ಬರೆಸಿ ದೊರೆಗಳ ಬಳಿಗೆ ಕಳುಹಿಸಿಕೊಟ್ಟು, ಆ ಪೀಲ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: " ಉಭಯ ಕಡೆ ಸರಕಾರದ ಸರಹದ್ದಿನ ಹೆಚ್ಚುಕಡಿಮೆಯಿಂದಾ ವ್ಯಾಜ್ಯ ತಕ್ರಾರು ಇದ್ದದ್ದು, ಎರಡು ಕಡೆ ಚಾಕರ ಜನರ ಸಾಕ್ಷಿಯಿಂದಾ ತೀರಿ ಇದೆ. ಆ ಸರಹದ್ದಿನ ತಪಶೀಲನ್ನು, ಮುಂದೆ ವ್ಯಾಜ್ಯ ತಕ್ರಾರು ಬಂದರೆ, ತೀರಿಸುವ ಬಗ್ಯೆ, ದಸ್ತೈವಜಿನ

ಹಾಗೆ, ಮೆಕ್ಕಂಜಿ ಸಾಹೇಬರ ಕೈಯಿಂದಾ ಬರೆಸಿ, ಈ ಕಾಗದದ ಸಂಗಡ ಕಳುಹಿಸಿ ಇದ್ದೇವೆ. ಬಂದು ತಲಪಿದಲ್ಲಿ ಕಬೂಲಾದೀತು. ಯಾವದೊಂದು ಸರಹದ್ದಿನ ವ್ಯಾಜ್ಯ ಇದ್ದಂಥಾದ್ದು ಮೊಕ್ತಾ ತೀರಿಸಿ ಇದ್ದೇವೆ. ಸರಹದ್ದು ಮೊಕರರು ಆಗಿರುವ ಜಾಗದಲ್ಲಿ ಕಲ್ಲುಗಳು ಇಲ್ಲದರಿಂದಾ, ಮರದ ಗೂಟಗಳ ನಿಲ್ಲಿಸಿ ಇದ್ದೇವೆ. ಕಲ್ಲುಗಳು ತಯಾರಾದಮೇಲೆ, ಆ ಗೂಟಗಳ ಹಾಕಿರುವ ಜಾಗದಲ್ಲಿ ಕಲ್ಲುಗಳ ನಿಲ್ಲಿಸಬೇಕು. ಆಮೇಲೆ ಒಂದು ಕಲ್ಲಿಂದಾ ಮತ್ತೊಂದು ಕಲ್ಲು ಪರಿಯಂತರ ಕಂದಕ ತೆಗೆಸುವದು ಒಳ್ಳೇ ಕೆಲಸ ಎಂತಾ, ನಮ್ಮನಸ್ಸಿಗೆ ಕಾಣುತ್ತಾ ಇದೆ. ಈ ಕೆಲಸ ಮೈಸೂರ ತಾಲೂಕಿನ ಜನರ ಮೊಕ್ತಾ ಮಾಡಿಸ ಬೇಕು. ತಮ್ಮ ಕಡೆ ಅಮಲುದಾರ ಮುಂತಾದವರಿಗೆ ತಾಕೀತಿ ಮಾಡಿ, ವರ್ಷ ವರ್ಷಕ್ಕೂ ಕಂದಕಗಳು ಹೆಚ್ಚುಕಡಿಮೆ ಆಗುವದರ ಖಬರು ತೆಗೆದುಕೊಳ್ಳ ಬೇಕು. ಈ ನಿಶಾನಿಕಲ್ಲುಗಳ ನಿಲ್ಲಿಸಿ ಆದಮೇಲೆ, ಉಭಯ ಸರಕಾರಕ್ಕೂ ಸರಹದ್ದಿನ ತಕ್ರಾರು ಬರಲಿಕ್ಕಿಲ್ಲಾ ಎಂತಾ, ನಮ್ಮನಸ್ಸಿಗೆ ಕಾಣುತ್ತದೆ" ಎಂಬ ದಾಗಿ ಬರೆಸಿ ಕಳುಹಿದಲ್ಲಿ, ಆದಕ್ಕೆ ದರಜವಾಬಾಗಿ ಮಹಾರಾಜರವರು, ಜಿಲ್ ಕಜ್ಜ ತಿಂಗಳು ೨೨ನೇ ಸನ್ ೧೨೧೯ನೇ ಹಿಜರಿಯಲ್ಲು, ಬರೆಸಿ ಕಳುಹಿದ ಕಾಗದದಲ್ಲಿ: "ಉಭಯ ಸರಕಾರದ ಕಡೆ ಚಾಕರ ಜನರ ಸಾಕ್ಷಿಯಿಂದಾ ಸರಹದ್ದಿನ ನ್ಯಾಯ ತೀರಿತು ಎಂಬದಾಗಿ, ಬರೆಸಿ ಇರುವದನ್ನು ನೋಡಿದಲ್ಲಿ ಬಹಳ ಸಂತೋಷವಾಯಿತು. ಇಂಜನೇರು ಮೇಜರ ಮೆಕ್ಕಂಜಿ ಸಾಹೇಬ ರಿಂದಾ ಆ ತಪಶೀಲನ್ನು ಬರೆಸಿ ಸರಹದ್ದು ಚನ್ನಾಗಿ ತಿಳಿಯುವ ಹಾಗೆ, ದುರುಸ್ತು ಮಾಡಿಸಿ ಕಳುಹಿಸಿದ್ದೇವೆ ಎಂತಾ ಬರೆದ ಮೇರೆ, ಅದು ಬಂದು ತಲಪಿತು. ಬಹಳ ದಿವಸ ಯಾದಗಾರಿ ನಿಶಾನಿ ಆಗಿ ಇದ್ದೀತು. ಇದಲ್ಲದೆ ಸರಹದ್ದಿನಲ್ಲಿ ಅಲ್ಲಲ್ಲಿ ನಿಶಾನಿ ಕಲ್ಲುಗಳು ಇಲ್ಲದರಿಂದಾ, ಮರದ ಗೂಟಗಳ ನಿಲ್ಲಿಸಿ ಇದ್ದೇವೆ. ಕಲ್ಲುಗಳು ತಯಾರಾದಮೇಲೆ ಮರದ ಗೂಟಗಳ ನೆಟ್ಟು ಇರುವ ಜಾಗಗಳಲ್ಲಿ ಕಲ್ಲುಗಳ ನಿಲ್ಲಿಸಬೇಕೆಂಬದಾಗಿ, ಹಿಷಾರೆ ಮಾಡಿ ಇರುವದು ಸರಿಯಷ್ಟೆ. ಈ ಬಗ್ಗೆ ಯಾರಾದರೂ ಗೂಟಗಳ ಕಿತ್ತುಬಿಟ್ಟು, ಸರಹದ್ದು ಹೆಚ್ಚುಕಡಿಮೆ ಮಾಡಿದರೆ, ಸರಹದ್ದಿನಲ್ಲಿ ತಫಾವತು ಬಂದೀತು. ಇದಲ್ಲದೆ, ಕಲ್ಲುಗಳು ತಯಾರಾಗುವ ಬಗ್ಗೆ, ನಾಲ್ಕು ಐದು ತಿಂಗಳು ತಾಮಸವಾದೀತು ಎಂತಾ ಕಾಣುತ್ತದೆ. ಆದ್ದರಿಂದಾ ಉಭಯ ಸರಕಾರದ ತಾಬೆಯವರಿಗೆ

ಹುಕುಂ ಕೊಟ್ಟು, ಗೂಟಗಳ ನೆಟ್ಟು ಇರುವ ಜಾಗಗಳಲ್ಲಿ ನಡುವಿನ ಉದ್ದ ಪ್ರಮಾಣ ಗುಂಡಿಗಳ ತೆಗಸಿದರೆ ಒಳ್ಳೇದು ಎಂತಾ, ನಮ್ಮ ಮನಸ್ಸಿಗೆ ಕಾಣುತ್ತಾ ಇದೆ. ಇದಲ್ಲದೆ ಕಲ್ಲುಗಳ ನೆಡುವ ಬಗ್ಯೆ, ಗುಂಡಿ ತೆಗೆಯಬೇಕಾಗುತ್ತದೆ. ಕಲ್ಲುಗಳು ತಯಾರಾದಮೇಲೆ, ಅದೇ ಗುಂಡಿಗಳಲ್ಲಿ ನಿಲ್ಲಿಸಬಹುದು. ಆ ಗುಂಡಿ ಗಳಲ್ಲಿ ನಿಶಾನಿಕಲ್ಲುಗಳ ನಿಲ್ಲಿಸುವ ಪರಿಯಂತರ ಕಾಯಂ ಆದೀತು. ಇದಲ್ಲದೆ ಒಂದು ಕಲ್ಲಿಂದಾ ಮತ್ತೊಂದು ಕಲ್ಲು ಪರಿಯಂತರ ಕಂದಕಗಳ ಉಭಯ ಕಡೆಯವರ ಮೊಕ್ತಾ ತಯಾರುಮಾಡಿಸಿದರೆ, ಒಳ್ಳೇದು ಎಂತಾ, ಹಿಷಾರೆ ಮಾಡಿ ಇರುವದು ಸರಿಯಷ್ಟೆ. ಈ ಮಾತು ನಮಗೆ ಪಸಂದು ಆಯಿತು. ತಾವು ಹಿಷಾರೆ ಮಾಡಿ ಇರುವ ಮೇರೆ ಕಂದಕಗಳು ತಯಾರಾದರೆ, ಸರಹದ್ದು ಬಹಳ ಬಂದುಬಸ್ತು ಆದೀತು. ಈ ಕಂದಕ ತೆಗೆವ ಕೆಲಸ ಸುಬ್ರಹ್ಮಣ್ಯದ ಸರಹದ್ದಿನಿಂದಾ ಬೈನಾಡು ಸರಹದ್ದು ಪರಿಯಂತರ ಆಗಬೇಕು. ಈ ಬಗ್ಯೆ ತಮ್ಮ ಹಿಷಾರೆ ಪ್ರಕಾರ ಸರಹದ್ದಿನಲ್ಲಿ ನಿಶಾನಿಕಲ್ಲುಗಳ ನಿಲ್ಲಿಸಿ ಆದಮೇಲೆ, ಕಂದಕ ತಯಾರುಮಾಡುವ ಬಗ್ಯೆ, ನಮ್ಮ ತಾಬೆಯವರಿಗೆ ತಾಕೀತಿ ಮಾಡಿಸಿ ಇದ್ದೇವೆ. ತಾವು ಮೈಸೂರ ಇಲಾಖೆಯವರಿಗೆ, ಕಂದಕದ ಕೆಲಸ ಜರೂರಾಗಿ ತಯಾರುಮಾಡುವ ಹಾಗೆ, ತಾಕೀತಿ ಮಾಡಿಸಬೇಕು. ಸರಹದ್ದಿನ ಕಲ್ಲುಗಳ ನಮ್ಮ ಕಡೆ ಜನರು ಹೊರುತ್ತಾರೆ. ಮೈಸೂರ ಇಲಾಖೆಯವರು ಹೊರುವ ಹಾಗೆ, ತಾಕೀತಿ ಮಾಡಿದರೆ, ಮೆಹರ್ಬಾನಗಿ ಆದೀತು. ನಮಗೆ ಈಗ ಹೊಸ್ತಾಗಿ ಸೇರಿ ಇರುವ ಪುತ್ತೂರು ಸೀಮೆಯಲ್ಲಿ ಕಲ್ಲುಕುಟಿಗರ ತಲಾಸು ಮಾಡುವ ಹಾಗೆ, ನಾವು ಹುಕುಂ ಕೊಟ್ಟು ಇದ್ದೇವೆ. ಅಲ್ಲಿಂದಾ ಸಿಕ್ಕಿದಷ್ಟು ಜನರನ್ನು, ಕಲ್ಲುಗಳ ತಯಾರುಮಾಡುವ ಬಗ್ಯೆ, ರವಾನೆ ಮಾಡಿಯೇವು. ತಾವು ಮೈಸೂರ ಸೀಮೆ ಒಳಗೆ ಕಲ್ಲುಕುಟಿಗರ ತಲಾಸು ಮಾಡಿಸಿ, ಕಲ್ಲುಗಳ ತಯಾರುಮಾಡುವ ಬಗ್ಯೆ, ಕಳುಹಿಸಿಕೊಟ್ಟರೆ, ಬಹಳ ಉಪಕಾರವಾದೀತು" ಎಂಬದಾಗಿಯೂ, ಎರಡನೇ ಕಾಗದದಲ್ಲಿ: "ತಾವು ಇಲ್ಲಿಗೆ ಬಂದು ಇದ್ದಾಗ್ಯೆ, ನಮ್ಮ ಕೊಡಗಿನ ಸೀಮೆ ಸರಹದ್ದು ಪ್ರಾಕು ದೊರೆತನ ಮಾಡಿದಂಥಾ ನಮ್ಮ ಹಿರಿಯವರ ದಿವಸದಲ್ಲಿ ಮೊಕರರು ಆಗಿ ಇರುವದರಲ್ಲಿ, ಪರಾಯಿ ಇಲಾಖೆ ಜನದ ಅಪೇಕ್ಷೆ ಮೇರೆ ಅದರಲ್ಲಿ ಏನಾದರೂ ಹೆಚ್ಚುಕಮ್ಮಿ ಆದರೆ, ನಮ್ಮ ಇತಬಾರಿ ಮರ್ತಬೆ ಪಾಯ ಕಡಿಮೆ ಆದೀತು ಎಂತಾ, ನಮ್ಮ ಮನಸ್ಸಿನಲ್ಲಿ ಈ

ಮಾತಿನ ಅಂದೇಶ ಉಂಟಾಯಿತು. ಅಥಾಪಿಸಿ, ಸರಹದ್ದು ಏನಾದರೂ ಹೆಚ್ಚು ಕಡಿಮೆ ಆದರೆ, ನಮ್ಮ ಜಿಹ್ವೆಯಿಂದಾ ನಾವು ಹೇಳದೆ ಇದ್ದಾಗ್ಯೂ, ಉಭಯ ಕಡೆ ಜನರು ಹೇಳ್ಯಾರಷ್ಟೆ. ತಾವು ಮಾಮಿಲತ್ತು ತಿಳಿಯುವಂಥಾದ್ದೂ ರಾಸ್ತಿ ತೂಕ ಮಾಡುವಂಥಾದ್ದೂ ತಮ್ಮ ಹಾಸ್ತದ ಆಟವಿದೆ. ಹೀಗೆ ಇರುವಲ್ಲಿ, ಪರಾಯಿ ಜನರ ಇರಾದೆ ಮೇರೆ ಈ ಸರಹದ್ದು ಯಾವ ಮೇರೆ ಹೆಚ್ಚುಕಮ್ಮಿ ಆದೀತು? ತಾವು ಇಂಜನೇರು ಮೆಕ್ಕಂಜಿ ಸಾಹೇಬರು ಸಹಾ ಬಹಳ ಪ್ರಯತ್ನಬಟ್ಟು, ಬೆಟ್ಟ ಗುಡ್ಡಗಳಲ್ಲಿ, ದೊಡ್ಡ ದೊಡ್ಡ ಕಾಡಲ್ಲಿ ಸಹಾ, ಒಂದು ತಿಂಗಳು ಪರಿಯಂತರ ತಿರುಗಿ, ನಮ್ಮ ಕೊಡಗಿನ ಸೀಮೆಗೂ ಮೈಸೂರ ಸೀಮೆಗೂ ಸರಹದ್ದು ಮೊಕರರು ಇರುವದನ್ನು ಯಾವ ಮೇರೆ ಅಳದು ಇದ್ದೀರಿ ಎಂದರೆ: ಒಂದು ಹಜ್ಜೆ ಭೂಮಿ ಆ ಕಡೆಯಿಂದಾ ಈ ಕಡೆ, ಈ ಕಡೆ ಯಿಂದಾ ಆ ಕಡೆ ತಫಾವತು ಇಲ್ಲದೆ, ಸುಬ್ರಹ್ಮಣ್ಯದ ಸರಹದ್ದಿನಿಂದಾ ಬಯು ನಾಡು ಸರಹದ್ದು ಪರಿಯಂತರ ತ್ರಾಸಿನಲ್ಲಿ ತೂಗಿದ ಮೇರೆ ಅಳದು, ಸರಹದ್ದಿನಲ್ಲಿ ನೆಡುವಂಥಾ ಕಲ್ಲಿನ ತಲೆಮೇಲೆ ಇಂಗ್ರೇಜ ಬಹಾದ್ದರ ಕುಂಪನಿ ನಿಶಾನಿ, ಆಚೆ ಕಡೆ ಮೈಸೂರ ಸರಕಾರದ ನಿಶಾನಿ, ಈಚೆ ಕಡೆ ನಮ್ಮ ಕೊಡಗಿನ ಸರಕಾರದ ನಿಶಾನಿ ತಯಾರುಮಾಡಿಸಿ, ಅಂಥಾ ಕಲ್ಲುಗಳ ನಿಲ್ಲಿಸುವಂಥಾದ್ದು ತಮ್ಮ ಮೆಹರ್ಬಾನಗಿಯಿಂದಾ ಬಹಳ ದುರುಸ್ತು ಆಗಿ ಇದೆ, ಎಂಬ ವಿವರ ನಮ್ಮ ಕರಣೀಕ ಸುಬ್ಬೈಯ್ಯನ ಮುಖವಚನದಿಂದಾ ತಿಳಿದು, ನಮ್ಮನಸ್ಸಿಗೆ ಬಹಳ ಸಂತೋಷವಾಯಿತು. ಈ ಹಿಂದುಸ್ಥಾನದ ಒಳಗೆ ಇರುವಂಥಾ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ದೊಡ್ಡ ದೊಡ್ಡ ಸರದಾರರು ಈ ಸೀಮೆಗೆ ಬಂದು, ನಮ್ಮ ಸೀಮೆ ಸರಹದ್ದಿನ ಬಂದುಬಸ್ತನ್ನು ಚನ್ನಾಗಿ ಮಾಡಿ ಇದ್ದಾರೆ. ಈ ವಿವರ ತಮಗೂ ಚೆನ್ನಾಗಿ ಜಾಹೇರು ಇದೆ. ಆದಾಗ್ಯೂ ನಮ್ಮ ಸೀಮೆ ಸರಹದ್ದಿನ ಬಂದುಬಸ್ತು ತಮ್ಮ ಹಾಗೆ ಯಾರೂ ಮಾಡಲಿಲ್ಲಾ. ಈ ಬಂದುಬಸ್ತಿನ ಒಳಗೆ ದೋಸ್ತಿ ಪಾಯ ಶಾಶ್ವತವಾಗಿಯೂ, ಜನರಿಗೆ ಸುಖವು ಬಹಳ ದಿವಸ ಪರಿಯಂತರ ಇದ್ದೀತು" ಎಂಬ ವಿವರಗಳಾಗಿ ಬರೆಸಿ ಕಳುಹಿದರಿಂದಾ, ಇದಕ್ಕೆ ಜವಾಬಾಗಿ, ಪೀಲ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: "ಮೈಸೂರ ಸರಕಾರದ ಚಾಕರ ತಮ್ಮಾಜಿಪಂಥನು ನಮ್ಮ ಸಂಗಡ ಅಲ್ಲಿಗೆ ಬಂದದ್ದು ತಾವು ಬಲ್ಲಿರಷ್ಟೆ. ಅವನನ್ನು ಬಿಸಲೆಗಟ್ಟದ ಕಡೆಗೆ

ರವಾನೆ ಮಾಡಿ ಇದ್ದೇವೆ. ತಾವು ಹಿಷಾರಿ ಮಾಡಿ ಇರುವ ಮೇರೆ ಅವನು ಸರಹದ್ದಿನಲ್ಲಿ ಕಲ್ಲುಗಳ ನೆಡುವ ಚಾಕ್ರಿ ಮೇಲೆ ಸರಗರಂ ಆಗಿ ಇದ್ದಾನು. ಅದೇ ಮೇರೆ ತಮ್ಮ ಸರಕಾರದ ಕಡೆಯಿಂದಾ ಅಮಾಲ ಮುತ್ತಣ್ಣನಿಗೆ ಆ ಕಡೆ ರವಾನೆ ಮಾಡಿಸಬೇಕು. ಅವರು ಇಬ್ಬರು ಕೂಡಿ, ಉಭಯ ಸರಕಾರದ ಸರಹದ್ದಿನ ಚಾಕ್ರಿ ಮೇಲೆ ಸರಗರಂ ಆಗಿ ಇದ್ದಾರು. ಕಲ್ಲು ತಯಾರಾಗಿ ಇಲ್ಲದ ಜಾಗದಲ್ಲಿ ನಮ್ಮ ರೂಬ್ ರೂಬು ಮರದ ಗೂಟಗಳ ನೆಟ್ಟು ಇರುವದರ ಸುತ್ತಾ ಗುಂಡಿ ತೆಗೆವ ಹಾಗೂ, ಮರದ ಗೂಟ ನೆಡದೆ ಇರುವ ಜಾಗದಲ್ಲಿ ಮರದ ಗೂಟ ನೆಟ್ಟು, ಅದರ ಸುತ್ತ ಗುಂಡಿ ತೆಗೆವ ಹಾಗೂ, ಕಲ್ಲು ತಯಾರಾಗಿ ಇರುವ ಜಾಗದಲ್ಲಿ ಮರದ ಗೂಟ ತೆಗೆದುಬಿಟ್ಟು, ಕಲ್ಲು ನಿಲ್ಲಿಸುವ ಹಾಗೆ ಸಹಾ ತಮ್ಮಾಜಿಪಂಥನಿಗೆ ಹುಕುಂ ಕೊಟ್ಟು ಇದ್ದೇವೆ. ಮಳೆಗಾಲ ಸಮೀಪ ನಾಯಿತು. ಇನ್ನು ಸ್ವಲ್ಪ ದಿವಸ ಬಾಕಿ ಇದೆ. ಈಗ ಕಂದುಕ ತೆಗೆವದಕ್ಕೆ ಆಗಲಿಕ್ಕಿಲ್ಲಾ. ಇದಕಾರಣ ಒಂದು ಕಲ್ಲಿಂದಾ ಮತ್ತೊಂದು ಕಲ್ಲಿಗೆ ಮಧ್ಯೆ ಒಂದೆರಡು ಜಾಗದಲ್ಲಿ ನಾಲ್ವತ್ತು ಐವತ್ತು ಗಜದ ಮೇರೆ ಕಂದಕ ತೆಗೆಸುವದು; ಮಳೆಗಾಲ ದಾಟಿದಮೇಲೆ ಆ ಕೆಲಸ ತೀರಿಸುವದು ಎಂಬದಾಗಿ, ಈ ಮೇರೆ ನಾವು ತಮ್ಮಾಜಿಪಂಥನಿಗೆ ಹೇಳಿ ಇದ್ದೇವೆ ತಾವು ಇದೇ ಮೇರೆ ಅಮಾಲ ಮುತ್ತಣ್ಣನಿಗೆ ಹುಕುಂ ಕೊಡಬೇಕು. ಇವರು ಇಬ್ಬರು ಸರಹದ್ದಿನ ಚಾಕ್ರಿ ಒಳಗೆ ಕೂಡಿ ಇದ್ದಾರು" ಎಂಬದಾಗಿ ಬರಸಿ ಕಳುಹಿದ್ದರಿಂದಾ, ಅದಕ್ಕೆ ಜವಾಬಾಗಿ ಸನ್ ೧೨೨೦ನೇ ಹಿಜರಿ, ಮೊಹರಮ್ ೨೦ನೇ ತಾರೀಕಿನಲ್ಲು, ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ: "ಉಭಯ ಸರಕಾರದ ಸರಹದ್ದಿನ ಬಂದೂಬಸ್ತಿನ ಬಗ್ಯೆ, ಮೈಸೂರ ಸರಕಾರದ ಚಾಕರ ತಮ್ಮಾಜಿ ಪಂಥನನ್ನು ಬಿಸಲೆಗಟ್ಟದ ಕಡೆಗೆ ರವಾನೆ ಮಾಡಿ ಇದ್ದೇವೆ ಎಂಬದಾಗಿ, ಬರಸಿ ಇರುವದು ಸರಿಯುಷ್ಟೆ. ತಾವು ಹಿಷಾರೆ ಮಾಡಿ ಇರುವ ಮೇರೆ ಅಮಾಲ ಮುತ್ತಣ್ಣನಿಗೆ ಹುಕುಂ ಕೊಟ್ಟು, ಮರ್ಜೆ ಆದ್ಮಿ ತಮ್ಮಾಜಿಪಂಥನ ಸಂಗಡ ಕೂಡಿ ಇದ್ದು, ಸರಹದ್ದಿನ ಕೆಲಸದ ಒಳಗೆ ತಕ್ರಾರು ಬಾರದ ಹಾಗೆ ನಡದುಕೊಂಡು, ಚಾಕ್ರಿ ಮಾಡುವ ಹಾಗೆ, ತಾಕೀತಿ ಮಾಡಿ, ತಮ್ಮ ಕಾಗದದ ನಕಲನ್ನು ಬರೆಸಿ, ಈ ಮುತ್ತಣ್ಣನ ಕೈಯ ಕೊಟ್ಟು, ರವಾನೆ ಮಾಡಿ ಇದ್ದೇವೆ. ತಾವು ಬರೆಸಿ ಇರುವ ಮೇರೆ ಕೂದಲಷ್ಟು ತಫಾವತು ಮಾಡದೆ, ಸರಹದ್ದಿನ ಕೆಲಸದಲ್ಲಿ ಸರಗರಂ ಆಗಿ ಇದ್ದಾನು" ಎಂಬದಾಗಿ ಬರೆಸಿ ಕಳುಹಿದರು.

ನಾವು ಎಲ್ಲಾ ಕೂಡಿ ಹೋಗುವದರ ಒಳಗೆ ಉರಿ ಹೆಚ್ಚಾದ್ದರಿಂದಾ, ನೀರು ಹುಯಿದು, ಕೆಡಿಸಿಬಿಟ್ಟೆವು. ನಿನ್ನೆ ಮಂಗಳವಾರ ರಾತ್ರೆ, ಗಳಿಗೆ ಒಂದರಲ್ಲಿ ಕೊಂಡದ ಗುಂಡಿ ಕೆರೆ ಕೆಳಗಣ ಹಲಸಿನ ಮರದ ಬಳಿಯಲ್ಲಿ ಮೂರು ಜನ, ಕಂಬಳಿ ಗುಬ್ಬಿ ಕಂಬಳಿ ಟೊಪ್ಪಿ ಸಹಾ ಹಾಕಿಕೊಂಡು, ಕೈಲಿ ಕೋವಿ ಹಿಡು ಕೊಂಡು, ಪಿಸಿ ಮಾತು ಆಡುತ್ತಿದ್ದಲ್ಲಿ, ಶಿವಾಚಾರದ ನಂಜಪ್ಪ ಎಂಬ ಚಾವಡಿಕಾರ ಕಂಡು, ಬಂದು ಹೇಳಿದರಿಂದಾ, ಜನರ ಕಳುಹಿ ನೋಡಿಸು ವದರ ಒಳಗೆ ಅವರು ಇತ್ತಿಲ್ಲಾ. ಈ ಬುಧವಾರ ಬೆಳಿಗ್ಯೆ ಆ ಜಾಗಾ ನೋಡಿಸಿ ದಲ್ಲಿ, ಜನರು ಕುಂತಿದ್ದ ಜಾಡು ಕಂಡಿತು. ಅಲ್ಲಿ ಎರಡು ಬಾಳೆಕಾಯಿ ಬಿದ್ದು ಇತ್ತು. ಈ ರಾತ್ರೆ ಗಳಿಗೆ ಎರಡರಲ್ಲಿ ಗರಡಿಮನೆ ಹತ್ರ ಶಬ್ದ ಕೇಳಿದ ರಿಂದಾ, ಎರಡು ಜನ ಪಹರೆದವರ ಚೋರು ಪಹರೆ ಇಟ್ಟಲ್ಲಿ, ಅಗಳದ ಬೇಲಿ ಕೊರಕೊಂಡು, ಎರಡು ಜನ ದುಷ್ಮಾನರು ಬಂದಲ್ಲಿ, ಪಹರೆದವರು ಅಟಕಾ ಯಿಸುವಾಗ್ಯೆ, ದುಷ್ಮಾನರು ಪಹರೆದವರ ಮೇಲೆ ಗುಂಡು ಹಾರಿಸಿದಲ್ಲಿ, ಒಂದು ಗುಂಡು ಹಾರಿ, ನಾನು ಮಲಗುವ ಕೊಮರೆ ಗೋಡೆಗೆ ಬಡೀತು. ಮತ್ತೊಂದು ಕೋವಿ ರಂಜಕ ಮಾತ್ರ ಹತ್ತಿ, ಈ ಪಹರೆದವರು ಎದೆಗೆ ಕಟ್ಟಿ ಕೊಂಡು ಇದ್ದ ಕರಿ ರುಮಾಲಿಗೆ ಆ ರಂಜಕದ ಕಿಡಿ ಹಾರಿ ಸುಟ್ಟಿತು. ಅಗಳದ ಕೆಳಗೆ ಎಷ್ಟು ಜನ ಇದ್ದರೋ ಗೊಂತು ಇಲ್ಲಾ. ಇಲ್ಲಿ ಮದ್ದು, ಗುಂಡು, ಬಾರು, ಕೋವಿ ಸಹಾ ಇಲ್ಲವಾಗಿದೆ. ಅಪ್ಪಣೆ ಆಗಬೇಕು" ಎಂತಾ ಬರ ಕೊಂಡು ಇದ್ದಲ್ಲಿ; ಜಮೇದಾರ ಏಡೂರ ಬೈರೆಗೌಡ ಸಹಾ, ಒಂದು ಪಹರೆದ ಚಾವಡಿಕಾರರನ್ನು ಮದ್ದು, ಗುಂಡು, ಬಾರು ಕೋವಿ ಸಹಾ ಕೊಟ್ಟು, ಆ ಕಳ್ಳನನ್ನು ಬೇವು ಸೋವಿನಿಂದಾ ಫತ್ತೆ ಹತ್ತಿಸಿ ಹಿಡಿಯುವಂತೆ, ಅಪ್ಪಣೆ ಕೊಟ್ಟು, ಗರವಲೆಗೆ ಕಳುಹಿಸಿಕೊಟ್ಟರು.

ಆ ಬಳಿಕ ಇದೇ ಪುಷ್ಯ ಬ. ೯ರಲ್ಲಿ ಅವನು ಬರದು ಕಳುಹಿದ ಬಿನ್ನ ವತ್ತಳೆಯಲ್ಲಿ: "ಗುರುವಾರ ದಿವಸ ರಾತ್ರೆ ಅಗಳದ ಹಿಂದಣ ಕಾಡ ಒಳಗೆ ಮೂರು ವೇಳ್ಯ ಕೊಕ್ಕಲೆ ಕಡ್ಡಿಮೆಟ್ಟುವ ಶಬ್ದ ಕೇಳಿದ್ದೇ ಹೊರ್ತು, ಇಂಥಾದ್ದು ಎಂತಾ ತಿಳಿಯಲಿಲ್ಲಾ. ದುಷ್ಮಾನರು ಈ ಮೇರೆ ಮಾಡಬೇಕಾದರೆ, ನಾಡ ಜನರ ಸಹಾಯವಿಲ್ಲದೆ ಮಾಡಲಿಕ್ಕಿಲ್ಲಾ ಎಂಬದಾಗಿ, ನನ್ನ ಮನಸ್ಸಿಗೆ ಕಾಣುತ್ತಾ ಇದೆ" ಎಂತಾ ಬರದುಕೊಂಡು ಇದ್ದಾ.

ಇದೇ ಪುಷ್ಯ ಬ. ೧೦ರಲ್ಲಿ ಬರದು ಕಳುಹಿದ ಬಿನ್ನವತ್ತಳೆಯಲ್ಲಿ: "ಮೊದಲು ಸೋಮವಾರ ದಿವಸ ಗರಡಿಮನೆಗೆ ಬೆಂಕಿ ಹಾಕಿದ್ದು ಯಾರೋ ಹೆಣ್ಣು ಹುಡುಗೀರ ಕೆಲಸ ಎಂಬದಾಗಿಯೂ, ಮೂರನೆ ಮಂಗಳವಾರ ರಾತ್ರೆ ಕೆರೆ ಕೆಳಗಣ ಹಲಸಿನ ಮರದ ಬುಡದಲ್ಲಿ ನಿಂತು ಇದ್ದು, ಬಾಳೆಕಾಯಿ ಬಿಸಾಟು ಹೋದವರು ಯಾರೋ ಹೊಲೇರ ಕೆಲಸ ಎಂಬದಾಗಿಯೂ, ಆ ವಾರನೇ ಬುಧವಾರ ಅಸ್ತಮಾನದಲ್ಲಿ ಗರಡಿಮನೆ ಹಿಂದಣ ಕಾಡಲ್ಲಿ ಕೊಕ್ಕಲೆ ಕಡ್ಡಿ ಮೆಟ್ಟಿದ ಶಬ್ದ ಕೇಳಿದ್ದು, ವೃಗಜಾತಿಗಳ ಕೆಲಸ ಎಂಬದಾಗಿಯೂ, ಉದಾಸೀನದಲ್ಲಿ ಇದ್ದೆ. ಯಾವಾಗ ಬುಧವಾರ ದಿವಸ ರಾತ್ರೆ ಎರಡು ಗಳಿಗೆ ಒಳಗೆ ಬಂದು ಗುಂಡು ಹೊಡೆಯುವದು ಇದೇನೋ ತುಂಟರ ಕೆಲಸ ಎಂಬದಾಗಿ ತಿಳಿದು, ಪಹರೆ ಬಂದುಬಸ್ತು ಮಾಡಿ ಇದ್ದೇನೆ. ಚತುರೋಪಾಯದಿಂದಾ ಸೋವು ಬೇವು ಮಡಗಿ, ಫತ್ತೆ ಹತ್ತಿಸಿ, ಸಿಕ್ಕಿದರೆ, ಆ ತುಂಟರನ್ನು ಹಿಡಿದು ಕಳುಹುತ್ತೇನೆ" ಎಂಬದಾಗಿ ಬರಕೊಂಡು ಇದ್ದನು.

ಈ ಮೇರೆ ಈ ಅಪ್ಪಾಜೈಯ್ಯನು ದ್ರೋಹಗಳ ಯೋಚಿಸಿ, ಕಳ್ಳರು ಬಂದು ಶರಾರತ್ತು ಮಾಡುತ್ತಾರೆ ಎಂತಾ ಇಲ್ಲದ ಸುಳ್ಳು ಸುದ್ದಿ ಹುಟ್ಟಿಸಿ, ಇಂಥಾ ತುಂಟ ಕೆಲಸಗಳನ್ನು ತನ್ನ ಬಳಿಯ ಚಾಕ್ರಿ ಮಾಡಿಕೊಂಡು ಇರುವ ಹುಡುಗರಿಂದಾ ಮಾಡಿಸುತ್ತಾ, ಬಿನ್ನವತ್ತಳೆ ಬರಕೊಳ್ಳುತ್ತಾ ಇದ್ದಂಥಾದ್ದು ಸಹಾ ಆ ಗಡಿನಾಡ ತಾಲೂಕಿನಲ್ಲಿ ಪಾರುಪತ್ಯ ಮಾಡಿಕೊಂಡು ಇದ್ದಂಥಾ ಶೀರುಗೌಡನ ಬೀರೆಗೌಡ ಎಂಬವನು ಅರಮನೆ ಉಪ್ಪಿಗೆ ಸರಿಯಾದವನಾದ್ದರಿಂದಾ, ತಿಳಿದು, ದೊರೆಗಳ ಬಳಿಗೆ ಬಂದು, ರಕ್ತಾಕ್ಷಿ ಸಂವತ್ಸರದ ಚೈತ್ರ ಶು. ೧೦ರಲ್ಲಿ ಅರಿಕೆ ಮಾಡಿದ ವಿವರಾ:

"ತಾವು ಮಹಾದೇವಪುರದಲ್ಲು ದೊಡ್ಡದೊರೆಗಳ ಗದ್ದಿಗೆಮಂಟಪವನ್ನು ಹೊಸ್ತಾಗಿ ಕಟ್ಟುತ್ತಾ ಇದ್ದಂಥಾದ್ದ ನೋಡುವ ಬಗ್ಯೆ, ದಯಮಾಡಿ ಬಂದು ಇದ್ದಾಗ್ಯೆ, ಚಾವಡಿಕಾರರ ಮುಂತಾಗಿ ಎಲ್ಲರನ್ನು ಹಿಂದೆ ಬಿಟ್ಟು, ತಾವು, ತಮ್ಮ ಸಂಗಡ ಮೂರು ನಾಲ್ಕು ಜನ ಊಳಿಗದವರು ಸಹಾ ಕುದುರೆಯನ್ನು ಓಡಿಸಿಕೊಂಡು, ಮುಂದೆ ಮಹಾದೇವಪುರಕ್ಕೆ ಬಂದು, ಅಲ್ಲಿಂದಾ ಗರಗಂದೂರಿಗೆ ಅದೇ ಮೇರೆ ಕುದುರೆ ಮೇಲೆ ಸವಾರಿ ಆಗಿ ಓಡಿಸಿಕೊಂಡು, ಹಕ್ಕಿಬೇಟೆಗೆ ದಯಮಾಡಿದಲ್ಲಿ; ಅಲ್ಲಿಂದಾ ಅಪ್ಪಾಜೈಯ್ಯನಿಗೂ ಇಲ್ಲಿಗೆ ಬರುವದಿದ್ದರೆ,

ಕರದುಕೊಂಡು ಬನ್ನಿ ಎಂತಾ, ಚಾವಡಿಕಾರರನ್ನು ಕಳುಹಿಸಿ ಕರೆಸಿಕೊಂಡು, ಒಂದು ದಿವಸ ರಾತ್ರೆ ಮಹಾದೇವಪುರದಲ್ಲು ಇದ್ದು, ಮಾರನೆ ದಿವಸ ಮಧ್ಯಾಹ್ನದ ಮೇಲೆ ಅಲ್ಲಿಂದಾ ಸ್ವಾಮಿಯವರು ಮಡಿಕೇರಿ ಅರಮನೆಗೆ ದಯಮಾಡಿ ಬರುವಾಗ್ಯೆ, ಸಂಗಡ ಅಪ್ಪಾಜೈಯ್ಯನು ಕುರಂಬಳ್ಳಿ ಗದ್ದೆಗೆ ಬಂದು ಇಳಿಯುವಲ್ಲಿ ತಮ್ಮ ಸಂಗಡ ಅಪ್ಪಣೆ ತೆಗೆದುಕೊಂಡು, ಅಲ್ಲಿಯೇ ಒಂದು ಗಳಿಗೆ ಪರಿಯಂತರ ನಿಂತುಕೊಂಡು, ತಮ್ಮ ಖಾಸಾ ಸ್ವಾರಿ ಆ ಹಡಲು ದಾಟಿ ಚಿತ್ತೈಸುವಾಗ್ಯೆ, ಆ ಹಡಲು ದಾಟಿ ಕಾಡು ಮರೆ ಆಗುವ ಪರಿಯಂತರಕ್ಕೂ, ಅಪ್ಪಾಜೈಯ್ಯನು ಬಿಟ್ಟ ಕಣ್ಣು ಮುಚ್ಚದ ಹಾಗೆ ನೋಡುತ್ತಲೇ ನಿಂತು ಇದ್ದು, ಆ ಬಳಿಕ ತಾವು ಮುಂದೆ ದಯಮಾಡಿದಮೇಲೆ, ಅಲ್ಲಿಂದಾ ಬಂದು, ಗರವಲೆಗೆ ಹೋಗಿ, ದೊರೆಗಳು ಒಬ್ಬ ಒಬ್ಬರೆ ಕುದುರೆ ಮೇಲೆ ಸವಾರಿ ಆಗಿ ಓಡಿಸಿಕೊಂಡು ಬರುತ್ತಾರೆ, ಅವರಿಗೆ ದಗಾಮಾಡಬೇಕು ಎಂಬದಾಗಿ ಮನಸ್ಸಿನಲ್ಲಿ ನಿಶ್ಚೈಸಿ, ಇನ್ನು ಗರವಲೆಗೆ ಕಳ್ಳರು ಬಂದು ಮನೆಗೆ ಹಮ್ಮಿದರು, ಇಂಥಾ ತಾವಾ ಬೇಲಿ ಕೊರದು, ಕನ್ನಾ ಮಾಡಿ, ಬಂದು ಹೋಗಿದ್ದಾರೆ ಎಂತಾ, ಒಂದಲ್ಲಾ, ನಾಲ್ಕು ಸಲಾ ಕಳ್ಳರು ಬಂದು ಹೋಗಿದ್ದಾರೆ ಎಂತಾ, ಸುದ್ದಿ ಹುಟ್ಟಿಸಿ, ಈ ಮೇರೆ ಈ ಮೇರೆ ಎಂತಾ ತಮ್ಮ ಸನ್ನಿಧಾನಕ್ಕೆ ಬಿನ್ನವತ್ತಳೆಯನ್ನು ಇಲ್ಲದ ಸುಳ್ಳು ಮಾತು ಬರಕೊಂಡು ಇದ್ದಾನೆ. ಇಂಥಾ ಆಗದಂಥಾ ಅನ್ಯಾಯದ ಮಾತೇ ಹೊರ್ತು, ಒಂದಾದರೂ ತಮ್ಮ ಜೀವಕ್ಕಾಗಲೀ, ತಮ್ಮ ಮಕ್ಕಳಿಗಾಗಲೀ, ತಮ್ಮ ದವಲತ್ತಿಗಾಗಲೀ, ಆಗದ್ದ ಹಾರೈಸುವದಲ್ಲದೆ, ಒಳ್ಳೇದು ಹಾರೈಸಿ, ಒಳ್ಳೇ ಮಾತು ಈವರಿಗೂ ಅವನ ಬಾಯಿಂದಾ ಹೊರಡುವಂಥಾದ್ದು ಕೇಳಲಿಲ್ಲಾ; ಯಾವಾಗ ನೋಡಿದಾಗ್ಯೂ, ಇಂಥಾ ಸ್ವಾಮಿ ದ್ರೋಹದ ಮಾತು ಹೇಳುವದ ಕೇಳುವದೇ ಹೊರ್ತು, ತಮಗೆ ಶ್ರೇಯಸ್ಸು ಹಾರೈಸುವಂಥಾದ್ದ ಈವರಿಗೂ ನಾನು ಕೇಳಲಿಲ್ಲಾ. ಆದ್ದರಿಂದಾ ನನಗೆ ಬಹಳ ಸಂಶಯವಾಗಿ ಆ ಮೇರೆ ಯೋಚಿಸಿದ್ದನ್ನು ನನಗೆ ಸ್ವಲ್ಪ ಸುಳು ಸಿಕ್ಕಿದರಿಂದಾ, ಈ ಮಾತು ನಿಜವೋ ಸುಳ್ಳೋ, ಎಂಬದನ್ನು ಚನ್ನಾಗಿ ತಿಳಿಯಬೇಕೆಂತಾ ನಾನು ಯಾವಾಗ್ಯೂ ಹೋಗುವ ಮೇರೆ ಹೋದಲ್ಲಿ, ಇಲ್ಲಿಗೆ ಯಾರೋ ಕಳ್ಳರು ಬಂದು, ಗುಂಡು ಇಟ್ಟು, ಈ ಮೇರೆ ಮಾಡಿದರು ಎಂತಾ, ಅಪ್ಪಾಜೈಯ್ಯನು ಹೇಳಿದಲ್ಲಿ, ಆವಾಗ್ಯೆ ನಾನು ಹೇಳಿದ್ದು: ಮಹಾರಾಜರ ರಾಜ್ಯದ ಸುತ್ತಾ

ಬಹಳ ಬಂದುಬಸ್ತಾಗಿ ಪಹರೆ ಚೌಕಿ ಉಂಟು ; ಇದರ ಒಳಗೆ ಕಳ್ಳರು ಬಂದರು ಎಂದರೇನು ? ಗುಂಡು ಇಟ್ಟರು ಎಂದರೇನು ? ಇಲ್ಲಿಗೆ ಕಳ್ಳರು ಯಾರೂ ಬರಲಿಲ್ಲಾ. ಈ ಮೇರೆ ಗುಂಡು ಇಟ್ಟು ತುಂಟಾಟ ಮಾಡಿದ್ದು ನಿಮ್ಮ ಬಳಿಯು ಇರುವ ಹುಡುಗರ ಕೆಲಸವೇ ಸರಿಯಂತಾ ನಾನು ಹೇಳುವಾಗ್ಯೆ, ಅಪ್ಪಾಜಯ್ಯನು : ಈ ಶೀರುಗೌಡನ ಬೀರೆಗೌಡನು ಈ ಸುಳ್ಳು ತಿಳುದಾ, ಇವನು ಹಿಂದಕ್ಕೆ ದೊಡ್ಡ ದೊರೆಗಳ ಉಪ್ಪು ಉಂಡವಾ, ಈಗಲೂ ದೊರೆಗಳ ಉಪ್ಪು ಉಣ್ಣುತ್ತಾನೆ. ಇಂಥಾ ಸ್ವಾಮಿದ್ರೋಹ ಇವನು ತಿಳುದಮೇಲೆ, ಸ್ವಾಮಿ ಪಾದಕ್ಕೆ ಅರಿಕೆ ಮಾಡದೆ ಇರುವದಕ್ಕಿಲ್ಲಾ ಎಂಬದಾಗಿ ತಿಳಿದು, ಈ ಮಾತು ದೊರೆಗಳ ಸಂಗಡವಾಗಲೀ ಮತ್ತೊಬ್ಬರ ಸಂಗಡವಾಗಲೀ, ಹೇಳಬ್ಯಾಡ ಎಂಬ ದಾಗಿ, ನನ್ನ ಕೂಡೆ ವೀರಭದ್ರದೇವರ ಗುಡಿ ತಾವ ಗಂಧಪ್ರಸಾದ ಮುಟ್ಟಿಸಿ, ಭಾಷೆ ಮಾಡಿಸಿದರು. ಇನ್ನು ಖಾಸಾ ಸ್ವಾರಿ ಮಹಾದೇವಪುರಕ್ಕೆ ದಯಮಾಡ ಬೇಕಾದರೆ, ಒಂದು ಗುಂಡಿನ ಯಸಿಗೆ ಎಡಬಲಕ್ಕೆ ಶೋಧನೆ ಮಾಡಿಸಿ, ದಯ ಮಾಡಬೇಕು" ಎಂತಾ, ಶೀರುಗೌಡನ ಬೀರೆಗೌಡನು ಅರಿಕೆ ಮಾಡಿದಲ್ಲಿ, ಈ ಮಾತು ನಿಜವೋ, ಈಗಲೇ ಹಿಡಿದು ವಿಚಾರಿಸುತ್ತದೆ ಎಂಬದಾಗಿ, ಮಹಾ ರಾಜರು ಅಪ್ಪಣೆ ಕೊಟ್ಟಲ್ಲಿ, ನಾನು ಇನ್ನು ಚನ್ನಾಗಿ ಹಿಕ್ಮತ್ತಿನಿಂದಾ ವಿಚಾರಿಸಿ ಕೊಂಡು, ಇನ್ನು ಹದಿನೈದು ಇಪ್ಪತ್ತು ದಿವಸದ ಒಳಗೆ ಇದೆಲ್ಲಾ ಚನ್ನಾಗಿ ತಿಳುಕೊಂಡು ಬರುತ್ತೇನೆ ಎಂತಾ, ಬೀರೆಗೌಡನು ಹೇಳಿ, ಅಪ್ಪಣೆ ತೆಗೆದು ಕೊಂಡು, ಗರಿವಾಲೆಗೆ ಹೋದನು.

ಆ ಬಳಿಕ ಅಪ್ಪಾಜಯ್ಯನು ಮಾಡಿದಂಥಾ ಸ್ವಾಮಿದ್ರೋಹದ ಯೋಚನೆ ಯನ್ನು ಶೀರುಗೌಡನ ಬೀರೆಗೌಡನು ತಿಳುಕೊಂಡು, ಮಹಾರಾಜರಿಗೆ ಅರಿಕೆ ಮಾಡಬೇಕೆಂಬದಾಗಿ, ಮಡಿಕೇರಿಗೆ ಬಂದಲ್ಲಿ, ಅಷ್ಟುಹೊತ್ತಿಗೆ ಮಹಾರಾಜರು ನಾಲ್ಕುನಾಡ ಅರಮನೆಗೆ ದಯಮಾಡಿ ಇದ್ದದ್ದರಿಂದಾ, ಸುಭೇದಾರ ಮಾದೈಯ್ಯ ಕಾರೆಕಾರ ಬೋಪು ಸಹಾ ಕಂಡು, ಯಾಕೆ ಬಂದೆ ಬೀರೆಗೌಡಾ, ಎಂತಾ ಕೇಳಿದ್ದಲ್ಲಿ : ದೊರೆಗಳ ಪಾದಾ ಕಾಣುವ ಬಗ್ಯೆ ಬಂದೆ ಎಂತಾ ಹೇಳಿದನು. ಆವಾಗ್ಗೆ : ದೊರೆಗಳು ನಾಲ್ಕುನಾಡ ಅರಮನೆಗೆ ದಯಮಾಡಿ ಇದ್ದಾರೆ, ಅಲ್ಲಿಗೆ ಹೋಗುತ್ತೀಯೋ ? ಎಂತಾ ಅವರು ಕೇಳುವಾಗ್ಯೆ, ಅಲ್ಲಿಗೆ ಹೋಗುತ್ತೇನೆ, ಎಂತಾ ಹೇಳಿ, ಆ ದಿವಸ ಸಾಯಂಕಾಲವಾದ್ದರಿಂದಾ ಮಡಿಕೇರಿ ಪೇಟೆಯಲ್ಲಿ ಬೀರೆಗೌಡನು ಇಳುಕೊಂಡನು.

ಅಷ್ಟರ ಒಳಗೆ ಅಪ್ಪಾಜೈಯ್ಯನು : ನಾನು ಈ ಪ್ರಕಾರ ಸ್ವಾಮಿಯವರಿಗೆ ದಗಾ ಮಾಡಬೇಕೆಂಬದಾಗಿ ಯೋಚಿಸಿ ಮನಸುಬಾ ಮಾಡಿ ಇರುವಂಥಾದ್ದು, ಈ ಬಗ್ಯೆ ಕಳ್ಳರು ಬಂದು, ಗುಂಡು ಇಟ್ಟರು, ಮನೆಗೆ ಹವ್ಮಿದರು ಎಂಬದಾಗಿ, ಸುಳ್ಳು ಸಮಾಚಾರ ಹುಟ್ಟಿಸಿದ್ದು ಸಹಾ, ಬೀರೆಗೌಡ ಚೆನ್ನಾಗಿ ತಿಳಿದು ಅರಿಕೆ ಮಾಡುವ ಉದ್ದಿಶ್ಯ ಹೋಗಿ ಇಧ್ದಾನೆ. ಇನ್ನು ನನ್ನ ಪ್ರಾಣದ ಮೇಲೆ ಬರುತ್ತದೆ ಎಂತಾ ಯೋಚಿಸಿ, ತನ್ನ ಕಡೆ ಸಾಕಾರವಾಗಿ ಇದ್ದ ಮೂಡಗೆರಿನಾಡು ದೀವರ ಹುಡುಗ ಎಂಬವನ ಕರದು, ಈ ಮೇರೆ ಬೀರೆಗೌಡನು ಹೋಗಿ ಇದ್ದಾನೆ; ನೀನು ಮಡಿಕೇರಿಗೆ ಹೋಗಿ ನೋಡು, ಅಲ್ಲಿ ಅವನು ಇದ್ದರೆ, ಮೂಡ ಸೀಮೆ ಹೋಗುವಂಥಾ ಜನರಿಗೆ ರಹದಾರಿ ಚೀಟು ಕೊಡಬೇಕು. ಆದ್ದರಿಂದಾ ನಿನ್ನನ್ನು ಒಂದು ಸಲಾ ಜರೂರು ಬಂದುಹೋಗುವುದಕ್ಕೆ ಹೇಳಿ ದ್ದಾರೆ ಎಂತಾ ಹೇಳಿ, ಕರಕೊಂಡು ಬಾ, ಅವನು ಅಲ್ಲಿ ಇಲ್ಲದೆ, ನಾಲ್ಕುನಾಡ ಅರಮನೆಗೆ ಹೋಗಿ ಇದ್ದರೆ, ನೀನು ಹೋಗಬೇಡ. ಮಡಿಕೇರಿಯಿಂದಲೇ ತಿರುಗಿ ಬಾ ಎಂಬದಾಗಿ ಹೇಳಿ ಕಳುಹಿದಲ್ಲಿ, ಅದೇ ಮೇರೆ ಆ ದೀವರ ಹುಡುಗನು ಬಂದು, ಮೇಲೆ ಬರದ ಪ್ರಕಾರ ಹೇಳಿ ಕರದಲ್ಲಿ, ಈಗ ಮೂಡ ಸೀಮೆಯಿಂದಾ ವಿದಳ ಸದಳ ತರುವ ಬಗ್ಯೆ ಹೋಗುವ ಜನರಿಗೆ ರಹದಾರಿ ಕೊಡುವ ಬಗ್ಯೆ, ಅಲ್ಲಿ ಯಾರೂ ಇಲ್ಲ; ಆದ್ದರಿಂದಾ ನನ್ನನ್ನು ಕರೆವದಕ್ಕೆ ಬಂದು ಇದೆ. ಈಗ ನಾನು ಹೋಗಿ, (ಸ್ವಾಮಿಯವರ ಖಾಸಾ ಸ್ವಾರಿ ದಯ ಮಾಡುವುದು.) ಬರುತ್ತೇನೆ ಎಂತಾ, ಸುಭೇದಾರ ಮಾದೈಯ್ಯನ ಸಂಗಡ ಹೇಳಿ, ಉಂಡಿಗೆ ತೆಗದುಕೊಂಡು, ಗರವಲೆಗೆ ಹೋದನು.

ಆ ಬಳಿಕ ಅಪ್ಪಾಜೈಯ್ಯನು ತನ್ನ ಮನಸುಬಕ್ಕೆ ಕೂಡಿದಂಥಾ ಚೋಕನ ಮಂದು ಎಂಬವನ ಸಂಗಡ : " ಈ ಬೀರೆಗೌಡನ ಇನ್ನು ಬಿಡಬಾರದು. ನೀನು ದಾರೀಲಿ ಕಾಡ ಒಳಗೆ ಕುಂತು ಇದ್ದು, ಬೀರೆಗೌಡನು ಅವನ ಮನೆಗೆ ಹೋಗು ವಾಗ, ಗುಂಡಲ್ಲಿ ಇಟ್ಟುಬಿಡು " ಎಂತಾ ಹೇಳಿದಲ್ಲಿ, " ನನಗೆ ಕೈ ಊನವಾಗಿದೆ, ಭಯವು ಆಗುತ್ತಾ ಇದೆ, ನಾನು ಗುಂಡು ಇಟ್ಟು, ಅವನು ಸಾಯದೆ ಉಳಿದರೆ, ನನ್ನ ಸಂತಾನ ಹೋದೀತು " ಎಂತಾ ಹೇಳಿದಲ್ಲಿ, ಆವಾಗ್ಯೆ " ನಿನ್ನ ಕೈಲಿ ಹರಿಯದು, ನೀನು ಬೇಡ " ಎಂತಾ ಹೇಳಿ, ತನ್ನ ಚಾಕ್ರಿ ಮಾಡಿಕೊಂಡು ಇದ್ದ ಶಿವಾಚಾರದ ಚನ್ನವೀರ ಎಂಬ ಹುಡುಗನ ಸಂಗಡ ಕೇಳುವಾಗ್ಯೆ, ತಾನು

ಗುಂಡು ಇಡುತ್ತೀನೆ ಎಂತಾ ಒಪ್ಪಿದರಿಂದಾ, ಬಡಗಿ ಕರಿಯನ ಮನೆ ಕಿತ್ತಟ್ಟನ ಕೊಲ್ಲಿ ಬಳಿಯಲ್ಲಿ, ಕಾಡ ಒಳಗೇ ಉಳೀ ನಿಲ್ಲುವ ಪ್ರಕಾರ, ಜಾಗಾ ಮಾಡಿ, ಅಲ್ಲಿ ಅಪ್ಪಾಜೈಯ್ಯನು, ಅವನ ಕಡೆ ಚನ್ನವೀರ ಎಂಬವನು ಸಹಾ, ಕಾದು ಕುಂತು ಇದ್ದು, ಈ ವೈಶಾಖ ಶು. ೭ ಗುರುವಾರ ದಿವಸ, ಈ ಬೀರೆಗೌಡನು ತನ್ನ ಮನೆಗೆ ಹೋಗುವಾಗ, ಗುಂಡಲ್ಲಿ ಇಟ್ಟು, ಕೊಂದುಹಾಕಿ, ಅವನ ಮ್ಯೆಲಿ ಇದ್ದಂಥಾ ತೊಡಂಗ ಕತ್ತಿ, ಕೋವಿ, ಬಳೆ, ಸರಪಣಿ ಮುಂತಾಗಿ ತೆಗೆದು ಕೊಂಡು, “ ಈ ಮೇರೆ ಬೀರೆಗೌಡನು ಗರವಲೆಗೆ ಬಂದು, ತನ್ನ ಮನೆಗೆ ಹೋಗುತ್ತಿದ್ದಲ್ಲಿ, ನಡು ದಾರಿಯಲ್ಲಿ ಕಾಡ ಒಳಗೆ ಯಾರೋ ಕಳ್ಳರು ಗುಂಡಲ್ಲಿ ಇಟ್ಟು, ಅವನ ಕೈ ಮ್ಯೆಲಿ ಇದ್ದಂಥಾ ವಡವೆ ವಸ್ತನ್ನು ತೆಗೆದುಕೊಂಡು ಹೋದರು, ಇಂಥಾವರು ಎಂಬುದು ಗೊಂತು ಇಲ್ಲಾ. ಇಲ್ಲಿ ಕಳ್ಳರ ಉಪದ್ರ ಬಹಳವಾಗಿ ಇದೆ ” ಎಂಬದಾಗಿ, ಮರೆಕನಡವಾಗಿ ದೊರೆಗಳ ಸನ್ನಿಧಾನಕ್ಕೆ ಅಪ್ಪಾಜೈಯ್ಯನು ಬಿನ್ನವತ್ತಳೆಯನ್ನು ಬರೆದು ಕಳುಹಿದನು.

ಇದ ನೋಡಿ, ಬೀರೆಗೌಡನು ಮೊದಲು ದೊಡ್ಡ ದೊರೆಗಳ ದಿವಸದಲ್ಲು ಆಪ್ತನಾಗಿ, ಅರಮನೆ ಉಪ್ಪಿಗೆ ಸರಿಯಾಗಿ ಚಾಕ್ರಿ ಮಾಡಿದಂಥವಾ, ಬಹಳ ದಿನದ ಹಳಬನಾಗಿ ಇದ್ದಾ. ಆದರಿಂದಾ ಅವನಿಗೆ ಆ ನಾಡ ಪಾರುಪತ್ಯವನ್ನು ಕೊಟ್ಟು ಮಡಗಿ ಇತ್ತು. ಈ ಅಪ್ಪಾಜೈಯ್ಯನು ನಮಗೆ ದಗಾಮಾಡಬೇಕೆಂತಾ ಯೋಚಿಸಿದ್ದು, ಕಳ್ಳರು ಬಂದರು ಎಂತಾ, ಇಲ್ಲದ ಸಟೆ ಸುದ್ದಿ ಹುಟ್ಟಸಿದ್ದು ಸಹಾ, ಈ ಬೀರೆಗೌಡನು ಮೊದಲು ಬಂದು ನಮ್ಮ ಸಂಗಡ ಅರಿಕೆ ಮಾಡಿ, ಇನ್ನೂ ಚನ್ನಾಗಿ ವಿವರ ತಿಳಿದುಕೊಂಡು ಬರುತ್ತೀನೆ, ಎಂತಾ ಹೇಳಿ, ಹೋಗಿ ಇದ್ದನಷ್ಟೆ. ಇಂಥಾವನ ಕಳ್ಳರು ಬಂದು ಗುಂಡಲ್ಲಿ ಇಟ್ಟು, ಹ್ಯಾಗೆ ಕೊಂದರು ? ಕಳ್ಳರು ಕೊಂದಂಥಾದ್ದೇ ಸಟೆ. ಈ ಅಪ್ಪಾಜೈಯ್ಯನ ಕಡೆಯಿಂದಲೇ ಅವನ ಪ್ರಾಣಘಾತವಾಗಿ ಇದೆ ಎಂತಾ, ದೊರೆಗಳವರು ಚಿತ್ತದಲ್ಲು ತಿಳಿದು, ಈ ಅಪ್ಪಾಜೈಯ್ಯನ ಬಳಿಯಲ್ಲಿ ಚಾಕ್ರಿ ಮಾಡಿಕೊಂಡು ಇದ್ದಂಥಾ ಚೋಕನ ಮಂದು ಜನ ಒಂದು, ಶಿವಾಚಾರದ ಚನ್ನವೀರ ಜನ ಒಂದು, ಗರಗಂದೂರು ಶಿವಾಚಾರದ ಪುಟ್ಟ ಜನ ಒಂದು, ಸಹಾ, ಈ ಮೂರು ಜನರನ್ನು ವಿಂಗಡ ವಿಂಗಡವಾಗಿ ಕರೆಸಿ ಕೇಳಿದಲ್ಲಿ, ಕ್ರೋಧನ ಸಂವತ್ಸರದ ಜ್ಯೈಷ್ಠ ಶು. ೮ರಲ್ಲಿ ಚೋಕನಮಂದು ಎಂಬವನು ಹೇಳಿದ ಕಲಮಿನ ವಿವರ :

" ಈಗ ಆರು ತಿಂಗಳಿನ ಖುಮಾರಿನಲ್ಲಿ ಅಪ್ಪಾಜೈಯ್ಯನು ನನ್ನನ್ನು, ಚನ್ನವೀರ ಪುಟ್ಟನ ಸಹಾ, ಅವರು ಮಲಗುವ ಕೊಮರೆಗೆ ಕರದು, ಹೇಳಿದ ಮಾತು : ದೊರೆಗಳು ಮಹಾದೇವಪುರಕ್ಕೆ ಶಿವಯೋಗಕ್ಕೆ ಬರುವಾಗ್ಯೆ, ನೀವು ಮೂವರು ಹಟ್ಟಿ ಬಾರಿಕೆ ಹೊಳೆ ತಾವ ಹೋಗುವ ಕಾಡ ಒಳಗೆ ಮಾರ್ಗದ ಸಮಿಾಪದಲ್ಲಿ ಕಾದು ಕುಂತು ಇದ್ದು, ಅವರ ಮೇಲೆ ಗುಂಡು ಹಾಕೀರೋ ಎಂತಾ ಕೇಳಿದರು. ಅದು ಯಾಕೆ ಬೇಕು ? ಎಂತಾ, ನಾನು ಹೇಳಿದೆ. ಆವಾಗ್ಯೆ ಅಪ್ಪಾಜೈಯ್ಯನು ಹೇಳಿದ್ದು : ಅವರು ದೊರೆ ಮಗನಾದರೆ, ನಾನು ದೊರೆ ಮಗ ಇದ್ದೇನೆ. ಅವರು ದೊರೆತನ ಮಾಡಿದರೆ, ನನಗೆ ದೊರೆತನ ಮಾಡುವದಕ್ಕೆ ಕೂಡದೋ ? ನಾನು ದೊರೆ ಹೊಟ್ಟೇಲಿ ಹುಟ್ಟಲಿಲ್ಲವೋ ? ಹಂದಿಗೆ ಹತ್ತು ಮರಿ ; ಹುಲಿಗೆ ಒಂದು ಮರಿ : ಆ ಪ್ರಕಾರ ದೊರೆಗಳಿಗೆ ಹತ್ತು ಮಕ್ಕಳು ಇದ್ದಾರೆ. ನನಗೆ ಇಬ್ಬರು ಮಕ್ಕಳು ಇರುವಂಥಾದ್ದು ಹುಲಿ ಮರಿಯಂಥಾ ಮಕ್ಕಳು ಇದ್ದಾರೆ. ನೋಡಬೇಕು. ನೀನು ಕೈಲಿ ಹರಿಯದ ಮಾತು ಏನಂತಾ ಹೇಳುತ್ತೀಯೋ ? ಸುಮ್ಮನೆ ಇರು ಎಂತಾ ಹೇಳಿದರು. ಆವಾಗ್ಯೆ ಚನ್ನವೀರ ಎಂಬವನು, ಪುಟ್ಟೇಗೌಡ ಸಹಾ, ಅದೇ ಮೇರೆ ನಾವು ಮಾಡಿಯೇವು ಎಂತಾ, ಹೇಳುವಾಗ್ಯೆ ; ಒಳ್ಳೇದು, ಆ ಬಗ್ಯೆ ಎಲ್ಲಾ ನಾನು ವಿವರಾ ಮಾಡಿಕೊಟ್ಟೇನು ಎಂತಾ, ಹೇಳಿದರು. ಬೀರೆಗೌಡನ ಕೊಲ್ಲುವದಕ್ಕೆ ಕೆಲವು ತಿಂಗಳಿಗೆ ಮೊದಲು ಹೊತ್ತಾರೆ ಹೊತ್ತು ಕೊಮರೇಲಿ ಕರದು ಹೇಳಿದ ಮಾತು : ಶೀರುಗೌಡನ ಬೀರೆಗೌಡನು ಮಡಿಕೇರಿ ಅರಮನೆಗೆ ಹೋಗಿ, ಅಪ್ಪಾಜೈಯ್ಯ ಅಂಥವ ಇಂಥವ, ತಮಗೆ ದಗಾ ಮಾಡುವದಕ್ಕೆ ಯೋಚಿಸಿ ಇದ್ದಾನೆ ಎಂಬದಾಗಿ, ಸಿಕ್ಕಿದ ಹಾಗೆ ಎಲ್ಲಾ ಬಾಯಿಗೆ ಬಂದಂತೆ ನಿಂದನೆ ಮಾಡಿ, ಅಪ್ಪಾಜೈಯ್ಯ ದೊರೆಗಳ ಹೊಟ್ಟೆಯಲ್ಲಿ ಯೇನೆಂತಾ ಹುಟ್ಟಿದಾ ? ತಾವು ಪಿರಿಯಾಪಟ್ಟಣದಿಂದಾ ದಯ ಮಾಡದಿದ್ದರೆ, ಇವ ಏನಾಗುತ್ತಿದ್ದನೊ ಎಂಬದಾಗಿ, ಅರಿಕೆ ಮಾಡಿದನಂತೆ ; ಈ ವಿವರವನ್ನು ಅವನೆ, ಗರಗಂದೂರ ಪುಟ್ಟೇಗೌಡನ ಸಂಗಡ ಈ ಮೇರೆ ಅರಿಕೆ ಮಾಡಿದೆಯಂತಾ ಹೇಳಿದನಂತೆ. ಬೀರೆಗೌಡನು ಈ ಮೇರೆ ಹೇಳುತ್ತಾನೆಯಂತಾ ಆ ಪುಟ್ಟೇಗೌಡನು ನಮ್ಮ ಸಂಗಡ ಹೇಳಿದಲ್ಲಿ, ನಾವು ದೊರೆಗಳಿಗೆ ದಗಾ ಮಾಡುವದಕ್ಕೆ ಮನಸುಬಾ ಮಾಡಿದಂಥಾದ್ದನ್ನು ಅವನು ತಿಳಿದು ಇದ್ದಾನೆ. ಅದಕ್ಕಾಗಿ ಬೀರೆಗೌಡನು ಈ ಮೇರೆ ಹಾರಿ ಆಡುತ್ತಾನೆ. ಆ ಲೌಡೀ ಮಗನ ಕೊಲ್ಲಬೇಕು.

ನಾವು ನಿನ್ನ ಕೈಲಿ ವಿಷಾ ಕೊಡುತ್ತೇವೆ. ನೀನು ಅವನನ್ನು ನಿನ್ನ ಮನೆಗೆ ಕರಕೊಂಡು ಹೋಗಿ, ಊಟಾ ಮಾಡುವಾಗ್ಯೆ, ಯಾತರಲ್ಲಿಯಾದರೂ ಬೆರಸಿ ಹಾಕಿ, ಕೊಂದುಬಿಡು" ಎಂತಾ, ನನ್ನ ಸಂಗಡ ಹೇಳಿದರು. ಆ ಮೇರೆ ಮಾಡುವದಕ್ಕೆ ನನ್ನ ಕೈಲಿ ಕೂಡದು. ಹೆದರಿಕೆ ಆಗುತ್ತದೆ. ಎಲ್ಲಾದರೂ ತಿಳುದರೆ, ನನ್ನ ಹೀಚು ಪಾಚು ಯಲ್ಲಾ ಹೋದೀತು ಎಂತಾ ಹೇಳಿದೆ. ಆವಾಗ್ಯೆ ನನ್ನ ಸಂಗಡಲೂ ಚನ್ನುವೀರನ ಸಂಗಡಲೂ ಹೇಳಿದ ವಿವರಾ: ಬೀರೆಗೌಡನ ಹೆಮ್ಮೆ ಮುರಿವದಕ್ಕೆ ಒಂದು ಉಪಾಯು ಉಂಟು. ಅಲ್ಲಿ ಹೇಳಿ ಬಂದ ಈಚೆಗೆ ನಮ್ಮ ಕಂಡರೆ, ಬಹಳ ಹೆಮ್ಮೆಯಿಂದಾ ಗರ್ವದಲ್ಲಿ ಇದ್ದಾನೆ. ಈ ಬಗ್ಯೆ ಈಗ ಇಲ್ಲಿ ರಾತ್ರೆ ಒಳಗೆ ಯಾರೋ ಹೆಂಗಸರು ಮಕ್ಕಳು ಗರಡಿ ಮನೆಗೆ ಬೆಂಕಿ ಹಾಕಿ, ನಾವು ಹಾಕಲಿಲ್ಲಾ ಎಂತಾ, ಹೇಳುತ್ತಾರೆ. ಈ ಸಮಯುದಲ್ಲಿ ಕುನ್ಯಬಂಟ ಎಂಬವನು ಗಟ್ಟದ ಕೇಗೆ ಲೂಟಿ ಮಾಡುತ್ತಾನೆ. ಅಪ್ಪುಗಳದ ಪಣ್ಯೆಕ್ಕೂ ಯಾರೋ ಬೆಂಕಿ ಹಾಕಿ ಇದ್ದಾರೆ. ಈ ಸಮಯುದಲ್ಲಿ ಕಳ್ಳರು ಬಂದರು ಯಂತಾ, ಸುಮ್ಮಗೆ ಗುಂಡು ಇಟ್ಟರೆ, ದಿಟವಾಗುತ್ತದೆ ಎಂಬದಾಗಿ, ಸುಮ್ಮನೆ ಗುಂಡು ಇಟ್ಟು ಕೂಗಿ ಯಂತಾ, ಚನ್ನುವೀರಮಾಂತನಿಗೆ ಸಹಾ ತಾಕೀತಿ ಮಾಡಿದಲ್ಲಿ, ಮುಂದೆ ಚನ್ನುವೀರ ಗುಂಡು ಇಟ್ಟಾ, ಅದರ ಮೇಲೆ ಮಾಂತ ಗೋಡೆಗೆ ಇಟ್ಟಾ. ಚನ್ನಬಸವ ಎಂಬವನು, ಬೋಳ ಸುಬ್ಬಾ ಮತ್ತು ಎರಡು ಜನ ಹುಡುಗರು ಗುಂಪಿನಲ್ಲಿ ನಿಂತುಕೊಂಡು, ಗುಂಡು ಇಟ್ಟು, ಕಳ್ಳರು ಬಂದು, ಈ ಪ್ರಕಾರ ಮಾಡಿದರು ಎಂಬದಾಗಿ, ಪುಕಾರು ಮಾಡಿ, ಆ ವಿವರಕ್ಕೆ ಅಪ್ಪಾಜೈಯ್ಯನು ದೊರೆಗಳಿಗೆ ಬಿನ್ನವತ್ತಳೆ ಬರದು ಕಳುಹಿದಾ. ಆ ಬಳಿಕ ಬೀರೆಗೌಡನು ಅಪ್ಪಾಜೈಯ್ಯನ ಬಳಿಗೆ ಬಂದಲ್ಲಿ, ಯಾರೋ ಕಳ್ಳರು ಬಂದು, ಈ ಪ್ರಕಾರ ಗುಂಡು ಇಟ್ಟು, ಗರಡಿಮನೆಗೆ ಬೆಂಕಿ ಹಾಕಿ ಇದ್ದಾರೆ ಎಂತಲೂ, ಇಂಥಾ ಬಳಿಯು ಬೇಲಿಯಲ್ಲಿ ಕನ್ನಾ ಕೊರದು, ನುಸ್ತು ಬಂದಿದ್ದಾರೆ ಎಂತಾ, ಬೀರೆಗೌಡನ ಸಂಗಡ ಅಪ್ಪಾಜೈಯ್ಯನು ಹೇಳಿದಲ್ಲಿ, ಬೀರೆಗೌಡನು ಆ ಬೇಲಿ ಬಳಿಗೆ ಹೋಗಿ, ಕನ್ನಾ ಕೊರದಂಥಾದ್ದು, ಗೋಡೆಗೆ ಗುಂಡು ಇಟ್ಟಂಥಾದ್ದು ಸಹಾ ನೋಡಿ, ಇದು ಕಳ್ಳರು ಬಂದು ಇರುವ ಹಾಗೆ ಕನ್ನಾ ಕಾಣುವದಿಲ್ಲಾ, ಗುಂಡು ಇಟ್ಟದ್ದು ಕಳ್ಳರು ಬಂದು ಇಟ್ಟ ಹಾಗೆ ಕಾಣುವದಿಲ್ಲಾ, ಚನ್ನುವೀರ ಚನ್ನಬಸವಾ ಎಂಬ ಹುಡುಗರು ಸಹಾ, ಮಾಡಿದ ಹಾಗೆ ಕಾಣುತ್ತದೆ ಎಂತಾ, ಅಪ್ಪಾಜೈಯ್ಯನ ಸಂಗಡ ಹೇಳಿದಲ್ಲಿ, ಕಳ್ಳರು ಬಂದಂಥಾ

ವೇಳ್ಯದಲ್ಲಿ ನಮ್ಮ ಪ್ರಾಣ ಕಾದಂಥಾ, ಪ್ರಾಣ ಆಪ್ತರಾದಂಥಾ ಹುಡುಗರ ಮೇಲೆ ಇಲ್ಲದ ಮಾತು ಹೇಳಿ, ಅವರನ್ನ ಕೆಡಿಸುವ ಬಗ್ಯೆ ನೀನು ಈ ಮೇರೆ ಇಲ್ಲದ್ದ ಹೇಳುವಂಥಾದ್ದು ; ಕಳ್ಳರು ಬಂದು, ಈ ಮೇರೆ ಎಲ್ಲಾ ಮಾಡಿದರು ಎಂತಾ, ನಾವು ಮಡಿಕೇರಿಗೆ ಬಿನ್ನವತ್ತಳೆ ಬರಕೊಂಡಂಥಾದ್ದ ಹುಸಿ ಮಾಡುವ ಬಗ್ಯೆ ನೀನು ಈ ಮೇರೆ ಹೇಳುವದು ಎಂತಾ ಹೇಳಿ, ಇವನು ಮಡಿಕೇರಿಗೆ ಹೋಗಿ, ಅರಿಕೆ ಮಾಡ್ಯಾನು ಎಂತಾ, ಗರಡಿಮನೆ ಮೊಕ ತೊಳೆವ ಜಾಗಕ್ಕೆ ಕರಕೊಂಡು ಹೋಗಿ, ಕಳ್ಳರು ಮಾಡಿದ್ದೇ ಸರಿ. ಹುಡುಗರು ಈ ಮೇರೆ ಮಾಡಿದ್ದು ಎಂತಾ, ಹೇಳುವದಿಲ್ಲಾ ಎಂಬದಾಗಿ, ಭಾಷೆ ಮಾಡು ಎಂತಾ, ಅಪ್ಪಾಜೈಯ್ಯನು ಹೇಳಿದಲ್ಲಿ, ನಾನು ಯಾಕೆ ಹೇಳಲಿ ? ಹೇಳುವದಿಲ್ಲಾ ! ಎಂತಾ, ಬೀರೆಗೌಡ ಹೇಳುವ ಹೊತ್ತಿಗೆ, ಗರಗಂದೂರ ಪುಟ್ಟಿಗೌಡನು ಹೇಳಿದ್ದು: ಗಂಧಪ್ರಸಾದ ಮುಟ್ಟಿಸಿ, ಭಾಷೆಮಾಡಿಸಿಕೊಳ್ಳಬೇಕು. ಹಾಗೆ ಬಾಯಿಮಾತಿನ ಮೇಲೆ ಬಿಡಬಾರದು, ಎಂತಾ ಹೇಳಿದಾ. ಆದೇ ಮೇರೆ ವೀರಭದ್ರದೇವರ ಗಂಧ ಪ್ರಸಾದವನ್ನು ತರಿಸಿ, ಈ ಮೇರೆ ಹುಡುಗರು ಗುಂಡು ಇಟ್ಟಾಡಿದ್ದು, ನಾನು ಯಾರ ಸಂಗಡಲೂ ಹೇಳುವದಿಲ್ಲಾ ಎಂಬದಾಗಿ, ಸತ್ಯಮಾಡಿಸಿದರು. ಆ ಬಳಿಕ ಏಳೆಂಟು ದಿವಸದ ಮೇಲೆ ಬೀರೆಗೌಡನು ಮಡಿಕೇರಿ ಅರಮನೆಗೆ ಬಂದಲ್ಲಿ, ಆವಾಗ್ಯೆ ದೊರೆಗಳು ನಾಲ್ಕುನಾಡ ಅರಮನೆಗೆ ದಯಮಾಡಿ ಇದ್ದರು. ಆವಾಗ್ಯೆ ಅಪ್ಪಾಜೈಯ್ಯನು ಈ ಗುಂಡು ಇಟ್ಟಾಡಿ ಚದಿ ಮಾಡಿದ ಪೂರ್ವೋತ್ತರ ಅರಿಕೆ ಮಾಡುವ ಬಗ್ಯೆ ಬೀರೇಗೌಡನು ಅರಿಕೆ ಮಾಡುವ ಬಗ್ಯೆ ಹೋಗಿರುವದೇ ಸರಿ ಎಂತಾ ತಿಳಿದು, ಆ ಬೀರೆಗೌಡನು ಮಡಿಕೇರಿಯಲ್ಲಿ ಇದ್ದರೆ, ಮೂಡಲಾಗಿ ದೀನಸು ಪಾನಸು ತರುವದಕ್ಕೆ ಹೋಗುವಂಥವರಿಗೆ ರಹದಾರಿ ಕೊಡುವ ಜಂಬ್ರ ವಿದೆ ; ಬೇಗ ಒಂದಂತರ ಬಂದು, ಹೋಗಬೇಕಂತೆ ಎಂಬದಾಗಿ ಹೇಳಿ, ಕರ ಕೊಂಡು ಬಾ ; ಅವನು ನಾಲ್ಕುನಾಡ ಅರಮನೆಗೆ ಹೋಗಿ ಇದ್ದರೆ, ನೀನು ಸುಮ್ಮನೆ ಬಾ ಎಂಬದಾಗಿ ಹೇಳಿ, ಮೂಡಗೇರಿನಾಡಲ್ಲಿ ಒಕ್ಕಲುತನ ಇರುವ ದೀವರ ಹುಡುಗನ ಕಳುಹಿದರಿಂದಾ, ಅವನು ಮಡಿಕೇರಿಗೆ ಬಂದಲ್ಲಿ, ಬೀರೆ ಗೌಡನು ಇದ್ದದರಿಂದಾ ಸದರಿ ವಿವರ ಅವನಿಗೆ ಹೇಳಿ, ಮಾರನೆ ದಿವಸ ಕರಕೊಂಡು ಬಂದದರಿಂದಾ, ಇವನಿಗೆ ನೀನು ಗುಂಡಲ್ಲಿ ಇಟ್ಟು, ಕೊಂದುಹಾಕಿ ಬಿಡು ಎಂತಾ, ನನ್ನ ಸಂಗಡ ಹೇಳಿದಲ್ಲಿ, ನನಗೆ ಹೆದರಿಕೆ ಆಗುತ್ತದೆ. ನನ್ನ

ಕೈಯೂ ದುರುಸ್ತು ಇಲ್ಲಾ ಎಂತಾ ಹೇಳಿದೆ. ಆವಾಗ್ಯೆ ಅಪ್ಪಾಜೈಯ್ಯನು ಹೇಳಿದ್ದು : ನಿನ್ನ ಸಂಗಡ ಏನು ಹೇಳಿದರೂ ಹೀಗೆ ಹೇಳುತ್ತೀಯೇ ? ಬ್ಯಾಟಿಗೆ ಕರಕೊಂಡು ಹೋದ ಹಾಗೆ, ಕರಕೊಂಡು ಹೋಗಿ, ಗುಂಡಲ್ಲಿ ಇಟ್ಟು ಕೊಂದು ಹಾಕಿಬಿಡಬೇಕು ಎಂತಾ, ಪುಟ್ಟಿಗೌಡ ಹೇಳುವಾಗ್ಯೆ, ಈಗ ಕಳ್ಳರು ಬಂದು ಗುಂಡು ಇಟ್ಟು ಇದ್ದಾರೆ ಎಂತಾ ಬಿನ್ನವತ್ತಳೆ ಬರಕೊಳ್ಳುವ ಹೊತ್ತಿಗೆ, ಮದ್ದು, ಗುಂಡು, ಕೋವಿ, ಕತ್ತಿ ಎಲ್ಲಾ ಅರಮನೆಯಿಂದಾ ಕಳುಹಿಸಿ ಕೊಟ್ಟರು. ಬೇಟಿಗೆ ಎಂತಾ, ಕರದುಕೊಂಡು ಹೋಗಿ, ಇಟ್ಟು ಹಾಕಿ ಬಿಡು ಎಂತಾ ಹೇಳಿದರು. ನನ್ನಿಂದಾ ಆದ್ದಲ್ಲಾ ಎಂಬದಾಗಿ ನಾನು ಹೇಳಿದೆ. ಆ ಬಳಿಕ ಶೀರುಗೌಡನ ಬೀರೆಗೌಡನು ಮನೆಗೆ ಹೋಗುವಾಗ್ಯೆ, ಮಾರ್ಗದಲ್ಲು ಗುಂಡಲ್ಲಿ ಇಡುವದಕ್ಕೆ ಉಳೀ ಕಟ್ಟುವ ಉದ್ದಿಶ್ಯ ಬೇಟಿಗೆ ಹೋದವರ ಹಾಗೆ ಹೋಗಿ, ಚನ್ನುವೀರನಿಗೂ ಜಾಗಾ ತೋರಿಸಿ, ಮರುದಿನ ಅವರೇ ಬಂದು, ನಮ್ಮಿಬ್ಬರ ಕೂಡೆ ಕುಂತುಕೊಳ್ಳುವ ಹಾಗೆ, ಮೆಳೆ ಸವರಿಸಿ, ಮೆಳೆ ಒಳಗೆ ಒಂದು ಕೋಲನ್ನು ಕೋವಿ ಹೇರಿಕೊಳ್ಳುವ ಬಗ್ಯೆ ಕಟ್ಟಿ, ಅದರ ಮೇಲೆ ನನಗೂ ಚನ್ನುವೀರನಿಗೂ ಎರಡು ಸಲಾ ತಿರುಗಿಸಿ, ಎದೆ ಸಮಕ್ಕೆ ಹುಟಾರ ಕಟ್ಟಿ, ಬಂದು, ನನಗೂ ಚನ್ನುವೀರನಿಗೂ, ಅಕ್ಕಸಾಲೆ ನಂಜು, ಚನ್ನಬಸವ, ಮಾಂತನ ಕೂಡೆ ಸಹಾ, ಎರಡೆರಡು ಚಿಲ್ಲು ಗುಂಡು ಗುರಿ ಇಡಿಸಿದಲ್ಲಿ, ಚನ್ನುವೀರ, ಅಕ್ಕಸಾಲೆ ನಂಜು, ಇವರಿಬ್ಬರು ಗುರಿಗೆ ಇಟ್ಟದ್ದು ತಗಲಿತು. ಉಳಿಕೆ ಮೂರು ಜನ ಇಟ್ಟದ್ದು ತಪ್ಪಿಹೋಯಿತು. " ಈ ಹುಡುಗರಿಗೆ ಚಿಕ್ಕಂದಿನಾರಭ್ಯದಿಂದಾ ಗುರಿ ಇಡುವ ಬಗ್ಯೆ ಕಲಿಸಿ ತರ್ಬಿಯತ್ತು ಮಾಡಿದ್ದೇವೆ. ಚನ್ನುವೀರನನ್ನು ನಮ್ಮ ಸಂಗಡ ಕರದುಕೊಂಡು, ನಾವು ಹೋಗಿ ಗುಂಡಲ್ಲಿ ಇಟ್ಟು, ಕೊಂದುಹಾಕಿಬಿಡುತ್ತೇವೆ. ಆ ಬೀರೆಗೌಡನ ಸಂಗಡ ಇರುವ ಹುಡುಗನು ಹಿಂದಕ್ಕೆ ಓಡಿಬಂದರೆ, ನೀನು ಸ್ವಲ್ಪ ಹೊತ್ತು ತಡಕೊ " ಎಂತಾ ನನ್ನ ಸಂಗಡ ಹೇಳಿದರು. ಆದೀತು ಎಂತಾ, ನಾನು ಹೇಳಿದೆ. ಆಮೇಲೆ ಬೀರೆಗೌಡನು ಅಪ್ಪಾಜೈಯ್ಯನ ಮನೆಗೆ ಬೆಳಿಗ್ಯೆ ಬಂದು ಇದ್ದಂಥಾವನಿಗೆ ಅಪ್ಪಾಜೈಯ್ಯನು ಹೇಳಿದ್ದು : " ಸಾಯಂಕಾಲಕ್ಕೆ ನಾಲ್ಕು ಐದು ಗಳಿಗೆ ಹೊತ್ತು ಇದ್ದ ಹಾಗೆ ಹೋಗಬಹುದು, ಆವಾಗ್ಯೆ ನಾವು ಹೊರಗೆ ಬಂದರೂ ಸರಿ ; ಅಷ್ಟು ಹೊತ್ತಿಗೆ ಹೊರಗೆ ಬಾರದೆ ಇದ್ದರೂ ಸರಿ. ನೀನು ನಿನ್ನ ಮನೆಗೆ ಹೋಗು " ಎಂತಾ, ಅಪ್ಪಾಜೈಯ್ಯನು ಹೇಳಿದನು. ಆ ಮೇರೆ ಬೀರೆಗೌಡನು

ಸಾಯಂಕಾಲಕ್ಕೆ ಐದು ಗಳಿಗೆ ಹೊತ್ತು ಇದ್ದ ಹಾಗೆ, ಇನ್ನು ಅವರು ಹೊರಗೆ ಬರಲಿಲ್ಲಾ. ನಾನು ಹೋಗುತ್ತೇನೆ ಎಂತಾ ಹೇಳಿ, ಬೀರೆಗೌಡನು ತನ್ನ ಮನೆಗೆ ಹೋಗುವ ಬಗ್ಯೆ ಹೊರಟು ಹೋದಾ. ಅವನು ಹೋಗುವದಕ್ಕೆ ಮೊದಲೇ ಅಪ್ಪಾಜೈಯ್ಯನು ತನ್ನ ಸಂಗಡ ಚನ್ನುವೀರನನ್ನು ಕರೆದುಕೊಂಡು, ಹಿತ್ತಲ ಬಾಗಿಲಿಗಾಗಿ, ತೊಂಬಾರದ ಹಿಂದಟ್ಟಿಗಾಗಿ, ಅಗಳಾ ಇಳಿದು, ಬಾವಿ ಮನೆ ಅಗಳದ ಅಡ್ಡಲಾಗಿ, ಕೆರೆ ಬಾಗಿಲಿಗಾಗಿ ನುಗ್ಗಿ ಹಟ್ಟಿ ಅಡಿ ಮ್ಯೆಗೆ ಆಗಿ ಹೋಗಿ, ಬಡಗಿ ಕರಿಯುನ ಮನೆ ಕಿತ್ತಟ್ಟನ ಕೊಲ್ಲಿಯಲ್ಲು ಮೊದಲು ಉಳೀ ಕಟ್ಟಿ ಇದ್ದ ಜಾಗದಲ್ಲಿ ಕಾದು ಕೂತು ಇದ್ದು, ಆ ಬೀರೆಗೌಡನು ಅದೇ ಮಾರ್ಗದ ಓಣಿಗಾಗಿ ಬರುವದು, ಮೊದಲಾಗಿ ಅಪ್ಪಾಜೈಯ್ಯನು ಬೀರೆಗೌಡನ ಎದೆಗೆ ಗುಂಡಲ್ಲಿ ಹೊಡದಾ. ಅದರ ಕೂಡೆ ಚನ್ನುವೀರನು ಎದೆಗೆ ಗುಂಡಲ್ಲಿ ಹೊಡದಾ. ಇವರು ಇಬ್ಬರೂ ಹೊಡದ ಗುಂಡು ಎದೆಗೆ ತಾಗುವದು, ಕೂಗುತ್ತಾ ವಚ್ಚಾರಿ ಮುಗ್ಗುಲಾಗಿ ಬಿದ್ದಾ. ಆ ಎರಡು ಕೋವಿಯಲ್ಲು ಅವರೆಕಾಳಿನ ಗಾತ್ರರದ ಸಣ್ಣ ಗುಂಡು ಮೂರು ಮೂರು, ದೊಡ್ಡ ಗುಂಡು ಒಂದೊಂದು ತುಂಬಿ ಇತ್ತು. ಅದರಲ್ಲಿ ಇಡುವದು ಬೀರೆಗೌಡನ ಸಂಗಡ ಇದ್ದ ಹುಡುಗನು, ಯಾರೋ ಕಳ್ಳರು ಪಾರುಪತ್ಯಗಾರರಿಗೆ ಗುಂಡಲ್ಲಿ ಇಟ್ಟರು ಎಂತಾ ಅಲ್ಲಿಂದಾ ಹಿಂದಕ್ಕೆ ಓಡಿ ಬಂದಾ. ಬರುವ್ಪದು ಏನೋ? ಹಿಂದಕ್ಕೆ ಯಾಕೆ ಓಡಿ ಬಂದೆ ಎಂತಾ, ಹೆಬ್ಬಾಗಿಲ ಮುಂದೆ ಇರುವ ಕೊಡೆ ಗದ್ದೆ ತಾವ ತಡಕೊಂಡು, ನಾನು ಕೇಳಿದೆ. ಈ ಮೇರೆ ಯಾರೋ ಕಳ್ಳರು ಗುಂಡಲ್ಲಿ ಇಟ್ಟರು, ಎಂತಾ, ಹೇಳಿದಾ. ಅಷ್ಟು ಹೊತ್ತಿಗೆ ಅಪ್ಪಾಜೈಯ್ಯನೂ ಚನ್ನುವೀರನೂ ಕೂಡಿ, ಆ ಬೀರೆಗೌಡನ ಕ್ಯೆಲಿದ್ದ ಚಿನ್ನದ ಬಳೆ ಎರಡು, ತೊಡಂಗದ ಸರಪಣಿ, ಬೆಳ್ಳಿ ಕಟ್ಟಿದ ಚೂರಿ, ವರೆ ಚೂರಿ, ಇದನ್ನು ಅವನ ಮ್ಯೆಯಿಂದಾ ತೆಗದು, ಇಬ್ಬರೂ ಕೂಡಿ, ತಂದು, ಅಂಬಲದ ಕಾಡಲ್ಲಿ ಕೊಕ್ಕಲೆ ಮುಚ್ಚಿ ಮಡಗಿ ಬಂದರು. ಆಮೇಲೆ ಎಂಟು ಹತ್ತು ದಿನ ಕಳಿದ ಮೇಲೆ, ಕತ್ತಿ ಚೂರಿ ತೊಡಂಗ ಸಹಾ ಮೂರು ನಗವನ್ನು ಅಲ್ಲೇ ನಾನು, ಚನ್ನುವೀರನು ಕೂಡಿ, ಹೂಳಿಬಿಟ್ಟು, ತೊಡಂಗದ ಸರಪಣಿ, ಬಳೆಯನ್ನು ತಂದು, ಅವರು ಹೇಳಿದ ಮೇರೆ ಬಾವಿ ಮನೆಯಲ್ಲಿ ಕರಗಿಸಿ ಗಟ್ಟಿ ಮಾಡಿ, ಒಂದು ಬಳೆ ಚಿನ್ನವನ್ನು ಚನ್ನುವೀರ ತೆಗದುಕೊಂಡಾ; ಮತ್ತೊಂದು ಬಳೆ ಚಿನ್ನವನ್ನು ನನಗೆ ಕೊಟ್ಟಾ; ಬೆಳ್ಳಿ

ಸರಪಣಿ ಕರಗಿಸಿದ ಗಟ್ಟಿಯನ್ನು ಚನ್ನವೀರನು ಅಪ್ಪಾಜೈಯ್ಯನ ಬಳಿಗೆ ತೆಗದು ಕೊಂಡು ಹೋದಾ. ಈ ಮೇರೆ ಎಲ್ಲಾ ಮಾಡಿ, ಕಳ್ಳರು ಇಟ್ಟರು ಎಂತಾ, ಸುದ್ದಿ ಹುಟ್ಟಿಸಿ, ಅಪ್ಪಾಜೈಯ್ಯನು ಸ್ವಾಮಿಪಾದಕ್ಕೆ ಬಿನ್ನವತ್ತಳೆ ಬರದು ಕಳುಹಿದನು ಎಂಬದಾಗಿ ಹೇಳಿದಾ.

ಆಮೇಲೆ ಚನ್ನವೀರಗೂ ಪುಟ್ಟಿಗೌಡಗೂ ಬೇರೆ ಬೇರೆ ವಿಚಾರಿಸಿದಲ್ಲಿ, ಇವರಿಬ್ಬರು ಸದರಿ ಬರದ ವಿವರವನ್ನೇ ಹೇಳಿದರಿಂದಾ, ಆ ಚೋಕನ ಮಂದು ಎಂಬವನ ಕೈಗೆ ಬೇಡಿ ಹಾಕಿ, "ಆ ಬೀರೆಗೌಡನ ತೊಡಂಗ ಚೂರಿ ಕತ್ತಿ ಸಹಾ, ಯಾವ ಬಳಿಯು ಹೂಳಿ ಇದ್ದೀರಿ? ಅದನ್ನು ತೋರಿಸಿಕೊಡು" ಎಂತಾ ಹೇಳಿ, ಇವನ ಸಂಗಡ ಖಾಸಾ ಸನ್ನಿಧಿ ಊಳಿಗದ ಜಮಾದಾರ ಮೊಣ್ಣೈಯ್ಯ, ಶಂಕರೈಯ್ಯ, ಕರಣೀಕ ಸುಬ್ಬೈಯ್ಯ, ನಾಲ್ಕುನಾಡ ಅರಮನೆ ಕಚೇರಿ ತಾಲೂಕಿನ ಸೀಮೆ ೨ನೇ ಸುಭೇದಾರ ಹೊಂಬಾಳೆನಾಯಕ, ಚಾವಡಿ ಜಮೆದಾರರು, ಚಾವಡಿಕಾರರ ಸಹಾ ಕೂಡಿಸಿ, ಗರವಲೆಗೆ ಕಳುಹಿಸಿದಲ್ಲಿ, ಇವಂದಿರು ಆ ಮಂದುವನ್ನು ಕರಕೊಂಡು ಹೋಗಿ, ಆ ಗಡಿನಾಡ ರೈತರಲ್ಲಿ ಮನೆ ಒಂದಕ್ಕೆ ಒಂದೊಂದು ಜನ, ಆ ಶೀರುಗೌಡನ ಬೀರೆಗೌಡನ ಹೆಂಡರು ಮಕ್ಕಳು ಮುಂತಾದ ಅವನ ಮನೆ ಯಾವತ್ತೂ ಜನರ ಕರಸಿಕೊಂಡು, "ಆ ಶೀರುಗೌಡನ ಬೀರೆಗೌಡನನ್ನು ಯಾರೋ ಕಳ್ಳರು ಗುಂಡಲ್ಲಿ ಇಟ್ಟು ಕೊಂದು, ಅವನ ಮೈ ಕೈಯಲ್ಲಿ ಇದ್ದದ್ದನ್ನು ತೆಗೆದುಕೊಂಡು ಹೋದರೆಂತಾ ಸುದ್ದಿ ಆಗಿ ಇದೆಯಷ್ಟೆ. ಈ ವಿವರವನ್ನು ಸ್ವಾಮಿಯವರು ತಲಾಸು ಮಾಡಿ ಇಚಾರಿಸಿದಲ್ಲಿ ಕಳ್ಳರು ಮಾಡಿದಂಥಾ ಕೆಲಸವೆಲ್ಲಾ, ಈ ಗರವಲೇಲಿ ಇರುವಂಥಾ ಅಪ್ಪಾಜೈ ಯ್ಯನು, ಈ ಚೋಕನ ಮಂದು ಮುಂತಾದ ಜನರ ಸಂಗಡ ದಗಾ ಮಾಡ ಬೇಕೆಂಬದಾಗಿ ಯೋಚಿಸಿ, ಈ ಮೇರೆ ಮಾಡಿದ್ದಾನೆ. ಈ ವಿವರ ನೀವು ಸರ್ವರು ತಿಳಿಯಲಿ ಎಂತಾ, ಅಪ್ಪಣೆ ಆಗಿ ಬಂದು ಇದ್ದೇವೆ ಎಂತಾ, ಸದರಿ ಬರದ ವಿವರ ಯಾವತ್ತೂ ಚೋಕನ ಮಂದು ಬಾಯಲ್ಲಿ ಹೇಳಿಸಿ, ಎಲ್ಲರಿಗೂ ತಿಳಿಸಿ, ಆಮೇಲೆ ಇಲ್ಲಿಂದಾ ಹೋದಂಥಾವರು ಆ ನಾಡ ಜನರ ಯಾವತ್ತು ಕರಕೊಂಡು ಹೋಗಿ, ಗುಂಡು ಇಟ್ಟ ಜಾಗದಲ್ಲಿ ಮಾಳ ಕಟ್ಟಿದಂಥಾದ್ದು, ಬೀರೆಗೌಡ ಸತ್ತ ಜಾಗಾ ಸಹಾ ತೋರಿಸಿ, ಅಲ್ಲಿಂದಾ ತೊಡಂಗ ಕತ್ತಿ ಚೂರಿ ಸಹಾ ಹೂಳಿ ಇದ್ದಂಥಾ ಅಂಬಲದ ಕಾಡಿಗೆ ಕರದುಕೊಂಡು ಹೋಗಿ,

ಯಾವತ್ತು ಜನರ ನಿಲ್ಲಿಸಿ, ಯಾವ ಬಳಿಯು ಹೂಳಿ ಇದೆ, ತೋರಿಸು ಎಂತಾ, ಮುಂದುಗೆ ಕೇಳಿದಲ್ಲಿ, ಮೊದಲು ತಂದು, ಈ ಜಾಗದಲ್ಲಿ ಕೊಕ್ಕಲೆ ಮುಚ್ಚಿ ಮಡಗಿ ಇತ್ತು. ಅಲ್ಲಿಂದಾ ತೆಗದು ಈ ಬಳಿ ಹೂಳಿ ಇದ್ದೇವೆ ಎಂತಾ, ಹೂಳಿದ ಜಾಗಾ ತೋರಿಸಿದಲ್ಲಿ, ಆ ಬಳಿ ಅಗೆಯುವಾಗ್ಯೆ, ಬೀರೆಗೌಡನ ತೊಡಂಗ ಕತ್ತಿ ಚೂರಿ ಸಹಾ ಸಿಕ್ಕಿತು. ಆ ಬಳಿಕ ನಾಡ ಜನ ಯಾವತ್ತು, "ಮಹಾಸ್ವಾಮಿ ವಿಚಾರದಿಂದಾ ಇದು ಗೊಂತು ಸಿಕ್ಕಿದ್ದು ಹೊರ್ತು, ಇಲ್ಲದಿದ್ದರೆ ಇದು ಯಾರಿಗೆ ತಿಳಿಯುತ್ತಿತ್ತು?" ಎಂತಾ, ಬಹಳ ದುಃಖಬಟ್ಟು, "ಈ ಅಪ್ಪಾಜೈಯ್ಯನಿಗೆ ಬೇಕಾದ್ದು ಕೊಟ್ಟು ಮಡಗಿರುವಲ್ಲಿ, ಮತ್ತು ಇಂಥಾ ದ್ರೋಹಗಳ ಯೋಚಿಸಿ, ಮಾಡಬಾರದ ಕೆಲಸ ಮಾಡಿದಾ" ಎಂತಾ ಹೇಳಿದರು. ಆ ಬಳಿಕ ಬೀರೆಗೌಡನ ಬಳಿ, ಸರಪಣಿ ಸಹಾ, ಕರಗಿಸಿ ಗಟ್ಟಿ ಮಾಡಿದಂಥಾದ್ದನ್ನು ತರಿಸಿ, ಅವನ ಹೆಂಗಸರು ಮಕ್ಕಳಿಗೆ ಕೊಡಿಸಿ, ನಾಡವರನ್ನು ಅವರವರ ಮನೆಗೆ ಕಳುಹಿಸಿಕೊಟ್ಟು, ಆ ಕತ್ತಿ, ತೊಡಂಗ ಚೂರಿ ಸಹಾ ಮಡಿಕೇರಿಗೆ ದೊರೆಗಳ ಬಳಿಗೆ ತಂದು ಒಪ್ಪಿಸಿದರು. ಅದನ್ನು ನೋಡಿ, "ಈ ಮೇರೆ ಮಾಡಬಾರದ ಅಕೃತ್ಯದ ಕೆಲಸ ಮಾಡಿ ಇದ್ದಾನೆ" ಎಂತಾ ಸರ್ವ ಜನರಿಗೂ ತೋರಿಸಿ, ತಿಳಿಸಿ, ಅದನ್ನು ಅಮಾನತಾಗಿ ಕಟ್ಟಿ ಮಡಗಿಸಿಇದ್ದಾರೆ.

ಈ ಮೇರೆ ಇರುತ್ತಿದ್ದಲ್ಲಿ ತಪ್ಸೀರು ಬರೆಯುವಂಥಾ ನಸ್ ಸಾಹೇಬರವರು ಮಡಿಕೇರಿಗೆ ಬಂದು ಇದ್ದಲ್ಲಿ, ಮಹಾರಾಜರು ಸಿಂಹನ ನೋಡಬೇಕೆಂಬ ಅಪೇಕ್ಷೆ ಇದೆ ಎಂತಾ ಪ್ರಸ್ತಾಪಮಾಡಿದಲ್ಲಿ, ಈ ಸಾಹೇಬರು ಮುಂಬಾಯಿಗೆ ಹೋಗಿ, ಗವರ್ನರ್ ಡಾಂಕಿನ್ ಸಾಹೇಬರ ಸಂಗಡ ಈ ವಿವರ ಹೇಳಿದಲ್ಲಿ, "ಆ ಪ್ರಕಾರ ರಾಜರಿಗೆ ಸಿಂಹನ ನೋಡಬೇಕೆಂಬ ಖುಷಿ ಇದ್ದರೆ, ನಮ್ಮಲ್ಲಿ ಒಂದು ಸಿಂಹ ಇದೆ. ಅದನ್ನು ಕೊಟ್ಟೇವು" ಎಂತಾ ಹೇಳಿ ಇದ್ದರು.

ಆ ಬಳಿಕ ಕೆಲವು ದಿವಸದಲ್ಲಿ ಮಹಾರಾಜರವರ ಖಾಸಾ ಸನ್ನಿಧಿ ಊಳಿಗದ ಜಮಾದಾರ ಮೊಣ್ಣೈಯ್ಯ, ಶಂಕರೈಯ್ಯನ ಸಹಾ, ಮುಂಬಾಯಿಗೆ ಸರಕಾರದ ಕೆಲಸ ಉದ್ದಿಶ್ಯ ಕಳುಹಿದಲ್ಲಿ, ಆವಾಗ ಡಾಂಕಿನ್ ಸಾಹೇಬರು ಇವರ ಸಂಗಡ "ನಿಮ್ಮ ದೊರೆಗಳು ಸಿಂಹನ ನೋಡಬೇಕೆಂಬದಾಗಿ, ನಸ್ ಸಾಹೇಬರವರ ಸಂಗಡ ಮಾತಾಡಿ ಇದ್ದಾರಂತೆ, ಆದ್ದರಿಂದಾ ಈಗ ನಾವು ಒಂದು ಸಿಂಹನ ಕೊಡುತ್ತೇವೆ. ಇದನ್ನು ಸಾಗಿಸಿಕೊಂಡು ಹೋಗಿ, ನಿಮ್ಮ

ದೊರೆಗಳಿಗೆ ಒಪ್ಪಿಸಿ " ಎಂತಾ ಹೇಳಿ, ಒಂದು ಸಿಂಹನನ್ನು ಕೊಟ್ಟಲ್ಲಿ, ಅದನ್ನು ಜೋಪಾನದಿಂದಾ ಸಾಗಿಸಿಕೊಂಡು ಬಂದಲ್ಲಿ, ತಲಕಾವೇರಿ ಹೊಳೆ ಬೇತರಿ ಕಡವಿಗೆ ಬರುವ ತನಕ ಚನ್ನಾಗಿ ಬಂತು. ಅಲ್ಲಿಗೆ ಬರುವದು, ಸಂಕಟ ತೊಡಗಿ, ಆ ಬೇತರಿ ಕಡಾ ದಾಟಿ, ಸ್ವಲ್ಪ ದೂರ ಬರುವದು, ಪ್ರಾಣ ಬಿಟ್ಟಿತು. ಈ ಸಮಾಚಾರ ಮಹಾರಾಜರು ಕೇಳಿ, ಬಹಳ ಕರಕರೆ ಮಾಡಿಕೊಂಡು, " ಆ ಸಿಂಹ ಮೃತವಾದರೂ ಚಿಂತೆ ಇಲ್ಲಾ, ಅದರ ರೂಪವನ್ನಾದರೂ ನೋಡ ಬೇಕು ; ಆ ಶವ ಸಾಗಿಸಿಕೊಂಡು ಬನ್ನಿ " ಎಂತಾ ಅಪ್ಪಣೆ ಕೊಟ್ಟು, ಅದನ್ನು ತರಿಸಿ, ನೋಡಿ, ಸರ್ವ ಜನಕ್ಕೂ ತೋರಿಸಿ, ಈ ಸಿಂಹಮೃಗವು ಈ ರಾಜ್ಯಕ್ಕೆ ಎಂದೂ ಬಂದಂಥಾದ್ದು ಅಲ್ಲಾ. ಬಹಳ ಅಪರೂಪವಾದಂಥಾದ್ದು ಎಂಬದ ರಿಂದಾ, ನಿಶಾನಿ ಉದ್ದಿಶ್ಯವಾಗಿ ಆ ಸಿಂಹನ ಶರೀರದ ಚರ್ಮ, ಹಲ್ಲು, ಉಗುರು ಸಹಾ, ತೆಗೆಸಿ ಮಡಗಿ ಇದ್ದಾರೆ.

ಹೀಗೆ ಇರುತ್ತಾ ಇದ್ದಲ್ಲಿ ಸ್ವಾದೆ ಬಸವಲಿಂಗರಾಜರ ಪಟ್ಟದ ರಾಣಿಯುವ ರಾದ ರಾಜಮ್ಮಾಜಿಯುವರು ಕಲಿ ಸಂದ ೪೯೦೭ನೇ ಕ್ರೋಧನ ಸಂವತ್ಸರದ ಪುಷ್ಯ ಶು. ೧೩ರಲ್ಲಿ ಗುರುವಾರ ರಾತ್ರೆ ಗಳಿಗೆ ಹತ್ತೊಂಭತ್ತು ಮುಕ್ಕಾಲಿಗೆ, ಶುಭಲಗ್ನದಲ್ಲಿ, ಕುಮಾರರು ಜನಿಸಿದರು. ಈ ಕುಮಾರರ ಹೆಸರು ಸದಾಶಿವ ರಾಜರು ಎಂಬದಾಗಿ ಮಡಗಿದರು. ಈ ಕುಮಾರರು ಸ್ವಾದೆ ರಾಜರ ದೌಲತ್ತಿಗೆ ಬಾಧ್ಯರಿದ್ದಾರೆ. ಇವರನ್ನು ಇವರ ಪುತ್ರಪೌತ್ರಪಾರಂಪರ್ಯವಾಗಿ ಪರ್ವರ್ಷಿ ಮಾಡಿ, ಆರೈಕೆ ಮಾಡುವಂಥಾ ಭಾರ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಕೂಡಿ ಇದೆ.

ಈ ಮೇರೆ ಇರುತ್ತಾ ಇರಲಿಕ್ಕಾಗಿ, ತಲಚೇರಿಯಿಂದಾ ಮೆಸ್ತರ ರಿಜಿಟ್ ಟೊರಿಯನ್ ಸಾಹೇಬರು, ಮೆಸ್ತರ ಬೆಲ್ ಸಾಹೇಬರು, ತುರುಪು ಸವಾರ ಪಾರ್ಸನ್ ಸಾಹೇಬರು, ಶ್ರೀರಂಗಪಟ್ಟಣದಿಂದಾ ಬಂದ ಜನರಲ್ ಮಕಡಾಲ್ ಸಾಹೇಬರ ತಮ್ಮ ಕೆಪ್ಟನ್ ಮಕಡಾಲ್ ಸಾಹೇಬರು, ಕೆಪ್ಟನ್ ಕಿಂಗ್ ಸಾಹೇಬರು, ಇವರ ಸಂಗಡ ಮತ್ತೂ ಎರಡು ಜನ ಸರದಾರರು ಸಹಾ, ಇಂತಿಷ್ಟು ಸಾಹೇಬರು ದೊರೆಗಳವರ ಮುಲಾಖತಿಗೆ ಬಂದು ಇದ್ದಲ್ಲಿ, " ಹೊರಮಲೆನಾಡು ಕೋಟೆಕಾಡು ಎಂಬ ಅರಣ್ಯಕ್ಕೆ ಎರಡು ಆನೆ ಬಂದು ಇದೆ. ರೈತರ ಪೈರುಪಚ್ಚೆ ಕರಡು ಮಾಡುತ್ತದೆ " ಎಂತಾ, ಕೇಳಿದರಿಂದಾ,

ಮಹಾರಾಜರು ಸ್ವಾದೆ ಬಸವಲಿಂಗರಾಜರ, ಸದರಿ ಸಾಹೇಬ ಜನರ ಸಹಾ ಕರದುಕೊಂಡು, ಆ ಅರಣ್ಯಕ್ಕೆ ಹೋಗಿ, ಅದರ ಸುತ್ತಾ ಜನರ ನಿಲ್ಲಿಸಿ, ಕೆಲವು ಜನರ ಆ ಕಾಡ ಒಳಗೆ ಕೂಡಿಸಿ, ಅಟ್ಟಿಸಿದಲ್ಲಿ, ವೀರರಾಜೇಂದ್ರ ಒಡೆಯರವರ ಬಳಿಗೆ ಎರಡು ಆನೆಯೂ ಬಂದದರಿಂದಾ, ಅದನ್ನು ತಮ್ಮ ಖಾಸಾ ಹಸ್ತದಿಂದಾ ರೈಫಲ್ ಕೋವಿಂದಾ ಹೊಡದಲ್ಲಿ, ಒಂದೊಂದು ಗುಂಡಿಗೆ ಆ ಎರಡು ಆನೆಯೂ ಅಲ್ಲಿಯೇ ಬಿದ್ದುಹೋಯಿತು. ಆ ಬಳಿಕ ಆ ಸರದಾರರು ಯಾವತ್ತು ನೋಡಿ, ಬಹಳ ಆಶ್ಚರ್ಯಪಟ್ಟು, ಸಂತೋಷವಾಗಿ, ಆ ಆನೆಗಳನ್ನು ಮೆಸ್ತರ ಬೆಲ್ ಸಾಹೇಬರ ಕೈಯಿಂದಾ ಅಳದಲ್ಲಿ, ಒಂದು ಆನೆ ಏಳೂಕಾಲು ಮೊಳ ಎತ್ತರ ಇತ್ತು. ಮತ್ತೊಂದು ಆನೆ ಆರುವರೆ ಮೊಳ ಎತ್ತರ ಇತ್ತು. ಆ ಬಳಿಕ ದೊರೆಗಳು, ಆ ಸರದಾರ ಸಾಹೇಬರು ಸಹಾ, ಅರಮನೆಗೆ ಬಂದು ಇರುತ್ತಿದ್ದಲ್ಲಿ, ಯಾವತ್ತು ಸಾಹೇಬರು ತಮ್ಮ ಸರಕಾರದ ಕೆಲಸದ ಮೇಲೆ ಹೊರಟುಹೋದರು. "ಇನ್ನು ಬೇಟೆ ನೋಡಬೇಕು" ಎಂಬದಾಗಿ, ತುರುಪು ಸವಾರ ಪಾರ್ಸನ್ ಸಾಹೇಬರು ನಿಂತರು. ಹೀಗೆ ಇರುವಾಗ್ಯೆ, ಕೆಲವು ದಿವಸದಲ್ಲಿ, ಎಡವನಾಡು ಏಳುಸಾವಿರ ಸೀಮೆ ಕಡೆಯಲ್ಲಿ, ಮೃಗಜಾತಿಗಳು ಹೆಚ್ಚಿ, ಪೈರುಪಚ್ಚೆ ಬಹಳ ಕೇಡು ಮಾಡುತ್ತದೆ ಎಂತಾ, ಸಮಾಚಾರ ಕೇಳಿದ್ದರಿಂದಾ, ಮಹಾರಾಜರವರು ಸ್ವಾದೆ ದೊರೆಗಳ, ತುರ್ಪು ಸವಾರ ಹಾರ್ಸನ್ ಸಾಹೇಬರ ಸಹಾ, ಕರದು ಕೊಂಡು, ಕಲಿ ಸಂದ ೪೯೦೮ನೇ ಕ್ಷಯ ಸಂವತ್ಸರದ ಚೈತ್ರ ಶು. ೬ರಲ್ಲಿ ಬುಧವಾರ ದಿವಸ, ಹೋಗಿ, ಯಡವನಾಡಲ್ಲು ಮೊಕ್ಕಾಮಾಗಿ, ಅಲ್ಲಿಂದಾ ಮಾರನೆ ಶು. ೭ರಲ್ಲಿ ಗುರುವಾರ ದಿವಸ, ಏಳುಸಾವಿರ ಸೀಮೆಗೆ ಹೋಗುವಾಗ್ಯೆ, ಬಾಗೆರಿ ಎಂಬ ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದಂಥಾ ಮೃಗಜಾತಿಗಳ ವಿವರಾ: ಸಾರಂಗ ಇಪ್ಪತ್ತೇಳು, ಕಡವೆ ಹದಿನಾಲ್ಕು, ಹಂದಿ ಮೂರು, ಕರಡಿ ಒಂದು, ಕಾಟಿ ಎರಡು, ಹೆಬ್ಬಾವು ಒಂದು ಅಂತೂ ನಾಲ್ವತ್ತೆಂಟಕ್ಕೆ; ಸ್ವಾದೆ ರಾಜರು ಒಂದು ಕಡವೆ ಇಟ್ಟರು. ಈ ದಿವಸ ಕಣಕಾಲಿಗೆ ಹೋಗಿ, ಮೊಕ್ಕಾಂ ಮಾಡಿ, ಮೂರು ದಿನ ಇದ್ದಲ್ಲಿ, ಈ ಶು. ೮ರಲ್ಲಿ ಶುಕ್ರವಾರ, ಮಾಲಂಬಿ ಬೆಟ್ಟದ ಅರಣ್ಯದಲ್ಲು ಬೇಟೆ ಆಡಿ ಇಟ್ಟ ಮೃಗಜಾತಿಗಳ ವಿವರಾ: ಸಾರಂಗ ಇಪ್ಪತ್ತೊಂದು, ಕಡವೆ ನಾಲ್ವತ್ತೊಂಭತ್ತು, ಹಂದಿ ಎರಡು, ಕರಡಿ ಒಂದು, ಕೂರ ಹಂದಿ ನಾಲ್ಕು, ಕಾಟಿ ಆರು, ಅಂತು ಎಂಬತ್ತಮೂರಕ್ಕೆ; ಕೊಡಗಿನ ಮಹಾ

ರಾಜರು ಇಟ್ಟಿದ್ದು ಕಡವೆ ಒಂದು, ಸಾರಂಗ ಒಂದು; ಪಾರ್ಸನ್ ಸಾಹೇಬರು ಇಟ್ಟಿದ್ದು ಕಡವೆ ಎರಡು; ಸ್ವಾದೆ ರಾಜರು ಇಟ್ಟಿದ್ದು ಕಾಟಿ ಒಂದು. ಈ ಶು. ೯ರಲ್ಲಿ ಸ್ಥಿರವಾರ, ಮೂರುಕಲ್ಲು ಬೆಟ್ಟದ ಕಾಡಿನಲ್ಲಿ ಬೇಟೆ ಆಡಿದಲ್ಲಿ, ಬಿದ್ದ ವೃಗಜಾತಿಗಳ ವಿವರಾ: ಸಾರಂಗ ನಾಲ್ವತ್ತು, ಕಡವೆ ಮೂವತ್ತು, ಹಂದಿ ಒಂದು, ಕೂರಪಂದಿ ಮೂರು, ಮುಳ್ಳುಪಂದಿ ಎರಡು, ಕಾಟಿ ಹದಿನೈದು, ಅಂತು ತೊಂಭತ್ತೊಂದಕ್ಕೆ; ವೀರರಾಜೇಂದ್ರ ಒಡೆಯರವರು ಇಟ್ಟಿದ್ದು ಸಾರಂಗ ಮೂರು; ಪಾರ್ಸನ್ ಸಾಹೇಬರು ಇಟ್ಟಿದ್ದು ಸಾರಂಗ ಒಂದು. ಅಲ್ಲಿಂದಾ ತಿರುಗಾ ಕೂಚಾಗಿ ಎಡವನಾಡಿಗೆ ಬಂದು, ನಾಲ್ಕು ದಿವಸ ಮೊಕ್ಕಾಂ ಆದಲ್ಲಿ, ಬೇಟೆ ಆದ್ದು, ಶು. ೧೦ರಲ್ಲಿ ಭಾನುವಾರ, ಜಕ್ಕಿನ ಕಡವಿನ ಕಾಡು ಬೇಟೆ ಆಡಿದಲ್ಲಿ ಬಿದ್ದ ವೃಗಗಳ ವಿವರಾ: ಸಾರಂಗ ಹದಿನೆಂಟು, ಕಡವೆ ಇಪ್ಪತ್ತು, ಹಂದಿ ಒಂದು, ಕುರಂಗಿ ಎರಡು, ಕಾಟಿ ಒಂದು, ಅಂತು ನಾಲ್ವತ್ತೆರಡಕ್ಕೆ; ಸ್ವಾದೆ ರಾಜರು ಇಟ್ಟ ಕಡವೆ ಒಂದು. ಈ ಶು. ೧೧ ಚಂದ್ರವಾರ ದಿವಸ, ಪಾರ್ಸನ್ ಸಾಹೇಬರವರು, ತಮಗೆ ಸರಕಾರದ ಕೆಲಸ ವಿದೆ, ಹೋಗಬೇಕು ಎಂಬದಾಗಿ, ಮಹಾರಾಜರಿಗೆ ಹೇಳಿಕೊಂಡು, ಹೊರಟು ಹೋದರು. ಈ ದಿವಸ ನೂರೊಂದು ಬಸವನ ಕಣುವೆ ಕಾಡಿನಲ್ಲು ಬೇಟೆ ಆಡಿದಲ್ಲಿ ಬಿದ್ದ ವೃಗಜಾತಿ ವಿವರಾ: ಸಾರಂಗ ಹತ್ತು, ಕಡವೆ ಇಪ್ಪತ್ತೇಳು, ಹಂದಿ ಒಂದು, ಕುರಂಗಿ ಎರಡು, ಹೆಬ್ಬುಲಿ ಒಂದು, ಅಂತು ನಾಲ್ವತ್ತು. ಈ ಮೇರೆ ಬೇಟೆ ಆಡಿಕೊಂಡು, ದೊರೆಗಳು ತಂಬಿಗೆ ಬಂದಲ್ಲಿ, " ಕುಸುಬೂರ ಕಾಡಲ್ಲಿ ಹೇರಳ ಆನೆಗಳು ಇದೆ" ಎಂತಾ ಅರಿಕೆ ಮಾಡಿದರಿಂದಾ: ಆನೆಗಳು ಬಹಳ ಕೆಲಸಕ್ಕೆ ಬರುತ್ತಾ ಇದೆ. ಬೇಟೆ ಬಿಲ್ಲು ಒಳಗೆ ಆನೆಗಳು ಸಿಕ್ಕಿದಾಗ್ಯೂ, ಒಬ್ಬರು ಗುಂಡು ಹೊಡೆಯುಬಾರದು" ಎಂಬದಾಗಿ, ಯಾವತ್ತರಿಗೂ ಅಪ್ಪಣೆ ಕೊಟ್ಟು ಇದ್ದಲ್ಲಿ, ಆ ದಿವಸ ಸಾಯಂಕಾಲದಲ್ಲಿ ನೂರೊಂದು ಬಸವನ ಕಣುವೆ ಕಾಡಿನ ಬೇಟೆಯಲ್ಲು ಬಿದ್ದ ವೃಗಜಾತಿಗಳ ಮಾಂಸ ಹೊತ್ತುಕೊಂಡು, ಕುಸುಬೂರ ಕಾಡ ಸಮೀಪದ ಮಾರ್ಗದಲ್ಲು ಜನರು ಬರುತ್ತಾ ಇದ್ದಲ್ಲಿ, ಕಾಡಿನಿಂದಾ ಮಸ್ತಾಗಿ ಇರುವ ಆನೆಗಳು ಬಂದು, ಈ ಮಾಂಸ ತರುತ್ತಿದ್ದಂಥಾ ಜನರ ಬೆನ್ನಟ್ಟಿ, ಬೆರಸಿ, ಒಬ್ಬ ಮನುಷ್ಯನ ತುಳುದು, ಕೊಂದು ಹಾಕಿದ್ದರಿಂದಾ, ಈ ಸಮಾಚಾರ ಮಹಾರಾಜರಿಗೆ ಅರಿಕೆ ಮಾಡಿದಲ್ಲಿ, " ಆನೆಗಳಿಗೆ

ಗುಂಡು ಇಡ ಕೆಲಸವಿಲ್ಲಾ ” ಎಂತಾ ಯಾವತ್ತರಿಗೂ ನಾವು ಅಪ್ಪಣೆ ಕೊಟ್ಟು ಇದ್ದೆವು. ಈ ಪ್ರಕಾರ ಸುಮ್ಮನೆ ದಾರೀಲಿ ಬರುತ್ತಾ ಇದ್ದಂತಾ ಮನುಷ್ಯನ ತುಳುದು ಕೊಂದಮೇಲೆ, ಅದೇ ಪ್ರಕಾರ, ಆನೆಗಳ ಕೊಲ್ಲದೆ ಬಿಡಬಾರದು; ಯಾವತ್ತೂ ಜನರು ತಯಾರಾಗಿ ಬೆಳಿಗ್ಯೆ ಆ ಆನೆಗಳು ಇರುವ ಕಾಡಿಗೆ ಬೇಟೆ ಆಡಬೇಕೆಂತಾ, ಅಪ್ಪಣೆ ಕೊಟ್ಟದರಿಂದಾ; ಅದೇ ಮೇರೆ ಆ ಮಾರನೆ ಶು. ೧೨ ಮಂಗಳವಾರ ದಿವಸ, ಬೆಳಿಗ್ಯೆ ದೊರೆಗಳವರು ಯಾವತ್ತು ಜನರನ್ನು ಕರದುಕೊಂಡು ಹೋಗಿ, ಆ ಕುಸುಬೂರ ಕಾಡಿಗೆ ಸುತ್ತಾ ಜನರ ನಿಲ್ಲಿಸಿ, ಹದಿನೈದು ಘಳಿಗ್ಯೆ ಆನೆಗಳಿಗೆ ಗುಂಡು ಇಡುವದಕ್ಕೆ ಶುರು ಆಗಿ, ಏಳು ಅರೆಗಳಿಗೆ ಒಳಗೆ ಆನೆ ಇಪ್ಪತ್ತಾರು, ಕಾಟಿ ಇಪ್ಪತ್ಮೂರು, ಹಂದಿ ನಾಲ್ಕು, ಕಡವೆ ಹದಿಮೂರು, ಸಾರಂಗ ಆರು, ಕುರಂಗಿ ಒಂದು, ಅಂತು ಎಪ್ಪತ್ತ ಮೂರನ್ನು ಹೊಡದು ಕೊಂದರು. ಇದರಲ್ಲಿ ವೀರರಾಜೇಂದ್ರ ಒಡೆಯರವರು ಇಟ್ಟದ್ದು: ಮನುಷ್ಯನ ತುಳುದ ಏಳು ಮೊಳ ಎತ್ತರದ ದೊಡ್ಡ ಕೊಂಬಿನ ಆನೆ ಒಂದು, ಸಣ್ಣ ಆನೆ ಒಂದು, ಕಾಟಿ ಎರಡು, ಕಡವೆ ಒಂದು. ಸ್ವಾದೆ ರಾಜರು ಇಟ್ಟದ್ದು: ಆನೆ ಒಂದು, ಕಡವೆ ಒಂದು. ಈ ಪ್ರಕಾರ ಹೊಡದರು. ಶು. ೧೪ ಗುರುವಾರ ದಿವಸ, ಒಳಗಾರದ ಕಾಡಿನಲ್ಲು ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿಗಳ ವಿವರಾ: ಸಾರಂಗ ಹದಿನಾಲ್ಕು, ಕಡವೆ ಇಪ್ಪತ್ತು, ಕುರಂಗಿ ಎರಡು, ಕಾಟಿ ಆರು, ಅಂತು ನಾಲ್ವತ್ತೆರಡಕ್ಕೆ; ಕೊಡಗಿನ ರಾಜರು ಇಟ್ಟದ್ದು: ಸಾರಂಗ ಒಂದು, ಸ್ವಾದೆ ರಾಜರು ಇಟ್ಟದ್ದು ಕಡವೆ ಒಂದು. ಆ ಮಾರನೆ ದಿವಸ ಶು. ೧೫ ಶುಕ್ರವಾರ ದಿವಸ, ಬೆಳಿಗ್ಯೆ ಕೂಚಾಗಿ ಹಾರಂಗಿಗೆ ಬಂದು, ಹುಂಡೂರು, ಹುದಗೂರು ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿಗಳ ವಿವರಾ: ಸಾರಂಗ ಹನ್ನೊಂದು, ಕಡವೆ ಹತ್ತೊಂಬತ್ತು, ಹಂದಿ ಎರಡು, ಕುರಂಗಿ ಒಂದು, ಕೂರಪಂದಿ ಒಂದು, ಕಾಟಿ ಎಂಟು, ಅಂತು ನಾಲ್ವತ್ತೆರಡಕ್ಕೆ; ಕೊಡಗಿನ ರಾಜರು ಇಟ್ಟದ್ದು: ಸಾರಂಗ ಒಂದು, ಕಡವೆ ಒಂದು. ಈ ಬ. ೧ರಲ್ಲಿ ಸ್ಥಿರವಾರ ಕೆಂಗರಿಬಾಗೆರಿ ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗ ಜಾತಿ ವಿವರಾ: ಸಾರಂಗ ಇಪ್ಪತ್ನಾಲ್ಕು, ಕಡವೆ ಹದಿನೈದು, ಕುರಂಗಿ ಎರಡು, ಕೂರಪಂದಿ ಒಂದು, ಕಾಟಿ ಒಂದು, ಅಂತು ನಾಲ್ವತ್ಮೂರಕ್ಕೆ; ಮಹಾರಾಜರು ಇಟ್ಟದ್ದು: ಸಾರಂಗ ಎರಡು, ಕಾಟಿ ಒಂದು. ಬಹುಳ ೨ರಲ್ಲಿ ಭಾನುವಾರ,

ಹದರಿ ಬೆಟ್ಟದ ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿಗಳ ವಿವರಾ: ಸಾರಂಗ ಎರಡು, ಕಡವೆ ಏಳು, ಹಂದಿ ಮೂರು, ಕರಡಿ ಒಂದು, ಕುರಂಗಿ ಒಂದು, ಕೂರಪಂದಿ ಒಂದು, ಅಂತು ಹದಿನ್ನೈದಕ್ಕೆ ಕೊಡಗಿನ ದೊರೆಗಳು ಇಟ್ಟದ್ದು: ಕರಡಿ ಒಂದು. ಈ ಬ. ೩ರಲ್ಲೂ ಚಂದ್ರವಾರ, ಕಾಜೂರ ಕಸಗೆ ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಗಳ ವಿವರಾ: ಸಾರಂಗ ಇಪ್ಪತ್ತೆರಡು, ಕಡವೆ ಮೂವತ್ತೊಂದು, ಹಂದಿ ಒಂದು, ಕುರಂಗಿ ಏಳು, ಕೂರಪಂದಿ ಐದು, ಕಾಟಿ ಹನ್ನೆರಡು, ಕಾಡ ಹೆಬ್ಬಳ ಒಂದು, ಅಂತು ಇಪ್ಪತ್ತೊಂಬತ್ತಕ್ಕೆ; ಕೊಡಗಿನ ಮಹಾರಾಜರು ಇಟ್ಟದ್ದು: ಸಾರಂಗ ಒಂದು, ಕಾಟಿ ಒಂದು, ಕಡವೆ ಆರು, ಹೆಬ್ಬಳ ಒಂದು, ಅಂತು ಒಂಬತ್ತು. ಬ. ೪ರಲ್ಲಿ ಮಂಗಳವಾರ ಗಂಜಿಗುಣಿ ಕಾಡಲ್ಲಿ ಬೇಟೆ ಆಡಿದಲ್ಲಿ, ಮೃಗಜಾತಿಗಳು ಬಿದ್ದ ವಿವರಾ: ಸಾರಂಗ ಒಂಬತ್ತು, ಕಡವೆ ಹತ್ತು, ಕೂರಪಂದಿ ಒಂದು, ಅಂತು ಇಪ್ಪತ್ತಕ್ಕೆ; ಸ್ವಾದೆ ರಾಜರು ಇಟ್ಟದ್ದು: ಕಡವೆ ಒಂದು. ಅಂತು ಬೇಟೆ ಹನ್ನೆರಡಕ್ಕೆ ಬಿದ್ದ ಮೃಗಜಾತಿಗಳು, ಆರುನೂರ ಇಪ್ಪತ್ತೆಂಟು ಬಿದ್ದುಹೋಯಿತು. ಈ ಮೇರೆ ಬೇಟೆ ಆಡಿಕೊಂಡು, ಮಹಾರಾಜರು ಅರಮನೆಗೆ ಬಂದರು. ದೊರೆಗಳವರು ಮೊದಲು ಬೇಟೆ ಆಡಿದ್ದರಲ್ಲಿ ಒಂದೊಂದು ಬೇಟೆ ಒಳಗೆ ನೂರು ನೂರಇಪ್ಪತ್ತೈದು ಪರಿಯಂತರ ಮೃಗಜಾತಿಗಳು, ಒಂದೊಂದು ಬೇಟೆ ಒಳಗೆ ಎಂಟು ಒಂಬತ್ತು ಆನೆ, ಮೂರು ನಾಲ್ಕು ಹೆಬ್ಬುಲಿಗಳು ಸಹಾ ಬಿದ್ದು ಇದೆ. ಆದಾಗ್ಯೂ ಒಳಗೆ ಬರದ ಮೇರೆ, ಒಂದು ಬೇಟೆಯಲ್ಲಿ ಹನ್ನೆರಡು ಗಂಟೆ ಮೇಲೆ ಮೂರು ಗಂಟೆ ಒಳಗೆ ಒಂದು ಜಾವ ಹೊತ್ತಿನಲ್ಲಿ ಇಪ್ಪತ್ತಾರು ಆನೆ ನಮ್ಮ ಬೇಟೆ ಒಳಗೆ ಸಿಕ್ಕಿಯೂ ಇಲ್ಲಾ, ಈ ಮೇರೆ ಸಿಕ್ಕಿದಂಥಾದ್ದು, ಕೇಳಲೂ ಇಲ್ಲಾ. ಇದು ಬಹಳ ಆಶ್ಚರ್ಯವಾದಂಥಾದ್ದು, ಶಿವಸಂಕಲ್ಪದಿಂದ ಸಿಕ್ಕಿದ್ದೇ ಹೊರ್ತು, ಮನುಷ್ಯಯೋಚನೆಯಿಂದಾ ಆದಂಥಾದ್ದಲ್ಲ. ಮುಂದು ಶಿಕಾರಿ ಮೇಲೆ ಬಹಳ ಪ್ರೀತಿ ಇರುವಂಥಾವರು ಬೇಟೆ ಆಡಿದರೆ, ಒಂದು ಜಾವದ ಒಳಗೆ ಇಪ್ಪತ್ತಾರು ಆನೆ ಸಿಕ್ಕಿ ಬಿದ್ದುಹೋಗುವಂಥಾದ್ದು ಬಹಳ ಪ್ರಯಾಸವಾದೀತು. ಆದ್ದರಿಂದ ಈ ಆನೆಗಳ ತಲೆಗಳನ್ನು ತರಿಸಿ, ಎಡವನಾಡ ತಾಲೂಕಿನ ಸೋಮವಾರಪೇಟೆ ಮುಂದೆ ಕಟ್ಟೆಯನ್ನು ಕಟ್ಟಿಸಿ, ಆ ಕಟ್ಟೆಯ ಮೇಲೆ ಇಪ್ಪತ್ತಾರು ಆನೆ ತಲೆಗಳನ್ನು ಮಡಗಿಸಿ, ಆನೆತಲೆಕಟ್ಟೆ ಎಂಬದಾಗಿ

ಹೆಸರು ಮಡಗಿ, ಈ ಇಪ್ಪತ್ತಾರು ಆನೆಗಳ ಬಾಲವನ್ನು, ನಿಶಾನಿ ಕಾಣುವ ಉದ್ದಿಶ್ಯ, ಇಂಗ್ರೇಜ ಸರದಾರರು, ಮೆಸ್ತರ ಟೋರಿಯನ್ ಸಾಹೇಬರು, ಬೆಲ್ ಸಾಹೇಬರು, ಪಾರ್ಸನ್ ಸಾಹೇಬರು ಸಹಾ ನೋಡುವ ಬಗ್ಯೆ, ವೀರರಾಜೇಂದ್ರಪೇಟೆಯಲ್ಲು ಅವರು ಇಳುದು ಇದ್ದಲ್ಲಿಗೆ ಕಳುಹಿಸಿಕೊಟ್ಟರು. ಈ ಬೇಟೆಯಲ್ಲಿ ಮಹಾದೇವನ ಅಪ್ಪಣೆಯಿಂದಾ ಈ ಪ್ರಕಾರ ಆದಂಥಾದ್ದು ಎಂತಾ ತಿಳಿವ ಬಗ್ಯೆ, ಈ ಸಾಧನದಲ್ಲು ಬರೆಸಿ ಮಡಗಿ ಇದೆ.

ಇಂಥಾ ಸಂತೋಷದಲ್ಲಿ ಮಹಾರಾಜರು ಅರಮನೆಯಲ್ಲಿ ಇರುತ್ತಾ ಇರುವಾಗ್ಯೆ, ಸನ್ ೧೨೨೧ನೇ ಹಿಜರಿ ಜಿಹಜ್ಜ ತಿಂಗಳು ೧೬ನೇ ತಾರೀಕಿನಲ್ಲು, ಬಂಗಾಳದ ಗವರ್ನರ್ ಜನರಲ್ ಅಷರ್‌ಫುಲ್ ಉಮರಾ ಸರ್ ಜಾರಿಜು ಹೀಲರ್ ಬಾರ್ಲು ಬಾರಂತು ಸಾಹೇಬ್ ಬಹದ್ದೂರವರು ಬರೆಸಿ ಕಳುಹಿದ ಕಾಗದದಲ್ಲಿ: ಮೊದಲು ಇಂಗ್ರೇಜಿಯವರ ವಿಲಾಯಿತ್ತಿಯಲ್ಲಿ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ, ಫರಾಶೀಸರ ಸರಕಾರಕ್ಕೂ, ಅದರ ಸಂಗಡ ಇರುವ ಸ್ಪಾನೆಯುಲ್ ಅವರ ಜಾತಿಯವರಿಗೂ, ಕೆಲವು ದಿವಸದಿಂದಾ ಲಡಾಯದ ಬೆಂಕಿ ಉರಿಯುವಂಥಾ ವರ್ತಮಾನ ತಮಗೆ ಕೇಳಪಟ್ಟು ಇದ್ದೀತು. ಇದು ನಿಶ್ಚಯವಿದೆ. ಈಗ ನಾವು ಬಹಳ ಖುಷಿಯಿಂದಾ ತಮಗೆ ಮಾಲುಂ ಆಗಬೇಕು ಎಂತಾ, ಜಾಹೇರು ಮಾಡುತ್ತೇವೆ. ಈ ಸಂತೋಷ ಕೂಡಿ ಇರುವ ದಿವಸಗಳಲ್ಲಿ ಈ ವರ್ತಮಾನ ನಿಶ್ಚಯ ತಲಪಿ ಇದೆ. ಅಕ್ಟೋಬರ ತಿಂಗಳಲ್ಲಿ ಸ್ಪಾನೆಯುಲ್ಲರ ಸೀಮೆ ಸಮುದ್ರದ ಕಿನಾರೆ ತಾರೀಪು ಎಂಬ ಬೆಟ್ಟದ ಸಮೀಪ, ರೂಮಿನ ಸಮುದ್ರದ ಮುಖದಲ್ಲಿ, ಫರಾಶೀಸರ ಸ್ಪಾನೆಯುಲ್ಲರದು ಸಹಾ, ಲಡಾಯದ ದೊಡ್ಡ ಜಹಜು ಮೂವತ್ತಮೂರರ ಸಂಗಡ ಇಂಗ್ಲಿಸ್ಥಾನದ ಪಾದಷಾಹಾ ಜಂಜಾಃ ಕೈವಾನೆ ಬಾರಗಾಹರವರ ಸರಕಾರದ ಇಪ್ಪತ್ತೇಳು ಜಹಜು ಸಮುದ್ರದಲ್ಲಿ ಲಡಾಯ ಮಾಡುವಂಥಾ, ನಾದರ ಸರದಾರ ಕೆಲವು ವರ್ಷದ ಮುಂದೆ ಬಕರ ಬಂದರದಲ್ಲಿ, ರೋಜತ್ತನ ಷಹರಿನ ಸಮೀಪದಲ್ಲಿ, ನೀಲ್ ನದೀ ಮುಖದಲ್ಲಿ, ಫರಾಶೀಸರ ಜಹಜುಗಳ ಮೇಲೆ ಮೊದಲು ಫತ್ತಾ ಮಾಡಿ ಇದ್ದರು. ಅವರಿಗೂ ಸದರಿ ಫರಾಶೀಸರ ಮುಂತಾದವರ ಜಹಜಿಗೂ ಲಡಾಯದ ಬೆಂಕಿ ಹತ್ತಿ, ಒಳ್ಳೆ ಎರಡು ಜಾವ ಪರಿಯಂತರ ಭಾರಿ ಲಡಾಯವಾಗಿ, ಕಡೆಗೆ ಮಹಾದೇವನ ಮದತ್ತಿನಿಂದಲೂ ಪಾದಷಾಹಾರವರ ದೌಲತ್ತಿನ

ಬರ್ಕತಿನಿಂದಲೂ ದುಷ್ಮಾನರ ಹತ್ತೊಂಬತ್ತು ಜಹಜನ್ನು ಫತ್ತೆ ಮಾಡುವಂಥಾ ಜಮಾಮರ್ದ್ ಜನರ ಕೈಗೆ ಸಿಕ್ಕಿತು. ಮತ್ತೆ ಗಳಿಗೆ ಮೇಲೆ ಐದು ಜಹಜು ಮುರುದು, ಸಮುದ್ರದಲ್ಲು ಮುಳುಗಿಹೋಯಿತು. ಇದಲ್ಲದೆ ಮತ್ತೊಂದು ಜಹಜಿನಲ್ಲಿ ಬಾರೂದಿಗೆ ಬೆಂಕಿ ಹತ್ತಿ ಬೆಂದುಹೋಯಿತು. ಆ ಫರಾಶೀಸರ ಜಹಜುಗಳ ಯಾವತ್ತು ಸರದಾರರು, ಅವರ ತಾಬೆ ಒಳಗೆ, ಇರುವ ಇಬ್ಬರು ಸರದಾರರು ಸಹಾ, ಇಂಗ್ರೇಜ ಬಹಾದ್ದರ ಜಮಾಮರ್ದ ಜನರ ಕೈಗೆ ಸಿಕ್ಕಿದರು. ಸ್ಪಾನೆಯುಲ್ಲರ ಜಹಜಿನ ಸರದಾರನಿಗೆ ದೊಡ್ಡ ಜಖಮಿ ಆಗಿ, ಆ ದುಷ್ಮಾನರ ಜಹಜುಗಳು ಸರಕಾರದ ಬಹಾದ್ದರ ಜನರ ಕೈಗೆ ಸಿಕ್ಕಿದವು. ಆ ಒಂದೊಂದು ಜಹಜುಗಳಲ್ಲಿ ಎಪ್ಪತ್ನಾಲ್ಕು ಫಿರಂಗಿಗೆ ಕಡಮೆ ಇರಲಿಲ್ಲಾ. ಆದರಲ್ಲಿ ಮತ್ತು ಸ್ಪಾನೆಯುಲ್ಲರ ಒಂದು ಜಹಜು ಬಹಳ ದೊಡ್ಡದು. ಅದರಲ್ಲಿ ನೂರಮೂವತ್ತಾರು ಫಿರಂಗಿ ಇತ್ತು. ಆ ಯಾವತ್ತೂ ಜಹಜುಗಳ ಫಿರಂಗಿಗಳ ಇಂಗ್ರೇಜ ಬಹಾದ್ದರ ಸರಕಾರದ ದೌಲತ್ತಿನ ಷತಹಾಮುಂದ ಸಾಹೇಬ ಜನರ ಕೈಗೆ ಸಿಕ್ಕಿದ್ದು ಲೆಕ್ಕ ವಾದಲ್ಲಿ, ಸಾವಿರದ ಆರನೂರ ಹದಿನಾಲ್ಕು ಫಿರಂಗಿ ಇತ್ತು. ಈ ಮೇರೆ ಮುರುದು ಹೋದ್ದರಿಂದಾ, ಫರಾಶೀಸರ ಜಾತಿಯವರಲ್ಲಿ ಜಹಜುಗಳ ಫೌಜಿನ ಪ್ರಯತ್ನ ಬಾಕಿ ಇರಲಿಲ್ಲಾ. ಮುಂದೆ ಇಂಗ್ರೇಜ ಬಹಾದ್ದರ ಸರಕಾರದ ಇಲಾಖೆ ದೂರದಲ್ಲಿ ಇರುವ ಸೀಮೆಗೆ ಹೋಗುವ ಅಪೇಕ್ಷೆಗೆ ಅದೃಷ್ಟವಿಲ್ಲದೆ ಹೋಯಿತು. ಬಹಾದ್ದರ ಜನರ ಧೀರತ್ವ ಪ್ರಾಣಪ್ರಯತ್ನ ಜಾಣತನ ಈ ಲಡಾಯದಲ್ಲಿ ಫೌಜುಗಳಿಂದಾ ಜಾಹೇರಾಯಿತು. ಇದರ ತಾರೀಫು ಹೇಳುವ ದಕ್ಕೆ ಹೊರೆಚ್ಚಾಗಿ ಇದೆ. ಈ ಜಯಪ್ರದ ಪಾದಷಾಹರ ದೌಲತ್ತಿನ ಸಾಹೇಬ ಜನರಿಗೆ ಜಾಹೇರಾಯಿತು. ಇದು ಮಹಾದೇವನ ಕಟಾಕ್ಷದಿಂದಲೂ ಪಾದ ಷಾಹರ ರುಸ್ತುಮ್ಮಿನೋಪಾದಿ ಫೌಜುಗಳ ಮೆಹನತ್ತಿನಿಂದಲೂ ಆಗಿ ಇದೆ. ಇಂಗ್ರೇಜ್ ಬಹಾದ್ದರರ ಜಯಪ್ರದವಾದ ಸರಕಾರದ ಯಾವತ್ತು ಜನರ ನೇಕು ನಿಯತ್ತಿನಿಂದಾ ಆಗಿ ಇದೆ ಯಾವಾಗ್ಯೂ ಆಗದಂಥಾ ಈ ಆಶ್ಚರ್ಯದ ಜಯವಾದ ಸಂತೋಷದ ವರ್ತಮಾನ ಇಂಗ್ರೇಜ ಬಹಾದ್ದರ ಸರಕಾರದ ಕ್ಷೇಮ ಲಾಭ ಹಾರೈಸುವಂಥವರಿಗೂ, ತಾವು ಹಮೇಷ ಇಂಗ್ರೇಜ ಬಹಾದ್ದರ ಸರಕಾರದ ಕಾರ್ಯಗಳನ್ನು ಖೈರ್ಕಾಯಿಯಿಂದಾ ಖೈರು ಅಂದೇಶಿಯಿಂದಾ **ತಾವು ಮಾಡಿ ಇರುವಂಥಾದ್ದು ಜಾಹೇರಾಗಿ ಇರುವದರಿಂದಾ, ಈ ವಿವರ**

ತಿಳಿದು, ಖಾಸಾ ತಮಗೂ ಬಹಳ ಖುಷಿ ಆದೀತು ಎಂಬದರಿಂದಾ, ಈ ಸಂತೋಷದ ವರ್ತಮಾನ ಬರದು ಕಳುಹಿಸಿ ಇದ್ದೇವೆ. ಈ ವರ್ತಮಾನ ಕೇಳಿದಲ್ಲಿ, ತಮ್ಮಮನಸ್ಸಿಗೆ ಸಂತೋಷವಾದೀತು" ಎಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬು: ಕ್ಷಯ ಸಂವತ್ಸರದ ಚೈತ್ರ ೨೫ನೇ ತಾರೀಕಿನಲ್ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಆಶ್ಚರ್ಯವಾದಂಥಾ ಜಯಪ್ರದವಾದ ವರ್ತಮಾನ ತಿಳಿದು, ನಮ್ಮಮನಸ್ಸಿಗೆ ಬಹಳ ಅತ್ಯಂತ ಹರುಷವಾಯಿತು. ಇಂಥಾ ಖುಷಿ ನಮಗೆ ಎಂದಿಗೂ ಆದ್ದಿಲ್ಲಾ. ಇನ್ನುಮುಂದೂ ಇದೇ ಮೇರೆ ದಿನದಿನಕ್ಕೆ ಇದಕ್ಕಿಂತಲೂ ದೊಡ್ಡ ದೊಡ್ಡ ಜಯಪ್ರದವಾಗಿ ಕುಂಪನಿ ಇಂಗ್ರೇಜ ಬಹಾದ್ದರ ಸರಕಾರಕ್ಕೆ ದೌಲತ್ತು ವರ್ಧನೆ ಆಗಿ ಬರಬೇಕು ಎಂಬದಾಗಿ, ಮಹಾದೇವನಿಗೆ, ಕೈವಡ್ಡಿ, ಬೇಡಿಕೊಳ್ಳುತ್ತಾ ಇದ್ದೇವೆಂಬದಾಗಿ, ಬಹಳ ವಿವರವಾಗಿ ಬಲು ಚನ್ನಾಗಿ ಬರೆಸಿ ಕಳುಹಿದರು.

ಆ ಬಳಿಕ ಇದೇ ಸಂವತ್ಸರದ ಪುಷ್ಯ ಮಾಸದಲ್ಲು, ಪೈಚಿ ಅರಸಿನ ಕಡೆ ದೊಡ್ಡ ಕಾರೆಕಾರ ಎಮ್ಮೆನಾಯರು ಎಂಬವನು ಕುಂಪನಿ ಸರಕಾರಕ್ಕೆ ತುಂಟನಾಗಿ ಕಾಡು ಸೇರಿಕೊಂಡು, ಜನರ ಪ್ರಾಣಹಿಂಸೆ ಮಾಡುತ್ತಾ ಇದ್ದದ್ದರಿಂದಾ ಅವನನ್ನು ಇಂಗ್ರೇಜ ಬಹಾದ್ದರ ಸರಕಾರದ ಸಿಪಾಯಿಗಳು ಹುಡುಕಿದಾಗ್ಯೂ, ಸಿಕ್ಕದೆ ಇದ್ದದ್ದರಿಂದಾ, ಈ ವರ್ತಮಾನ ಮಹಾರಾಜರು ಕೇಳಿ, ಆ ಎಮ್ಮೆನಾಯರು ಎಂಬವನು ನಮ್ಮ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬಂದರೆ, ಅವನನ್ನು ಹಿಡಿದು ಕಳುಹುವದು ಎಂಬದಾಗಿ, ತಮ್ಮ ಸೀಮೆ ಗಡಿ ಸರಹದ್ದಿನ ಉಕ್ಕಡದ ಪಹರೆದವರಿಗೆ ಅಪ್ಪಣೆ ಕೊಟ್ಟು ಇದ್ದಲ್ಲಿ, ಕೊಡಗಿನ ಸೀಮೆ ಬೈನಾಡು ಸೀಮೆ ಕೂಡಿದ ಸರಹದ್ದಿನ ಬಳಿಯು ಆ ಎಮ್ಮೆನಾಯರು, ಒಂದು ಹೆಂಗಸು ಸಂಗಡ ನಾಯರು ಜನ ಮೂರು ಸಹಾ ಬಂದು ಇದ್ದಲ್ಲಿ, ಆ ಉಕ್ಕಡದ ಪಹರೆದವರು ಹಿಡಿದು, ಪುಷ್ಯ ಮಾಸದಲ್ಲಿ ಮಹಾರಾಜರ ಬಳಿಗೆ ತಂದು ಒಪ್ಪಿಸಿದ್ದರಿಂದಾ, ಅವನ ಕಾಲಿಗೆ ಬೇಡಿ ಹಾಕಿ, ಪಹರೆದಲ್ಲು ಮಡಗಿಸಿ ಮಲೆವಾರಿ ಕಮಿಶನ್ ವಾರಡನ್ ಸಾಹೇಬರವರಿಗೆ ಬರೆಸಿ ಕಳುಹಿದ ವಿವರಾ: "ಎಮ್ಮೆನಾಯರು ಎಂಬವನು ಸಿಕ್ಕಿದರಿಂದಾ, ಅವನ ಕಾಲಿಗೆ ಬೇಡಿ ಹಾಕಿಸಿ,

ಪಹಾರದಲ್ಲು ಇಟ್ಟು ಇದ್ದೇವೆ. ಅವನ ಸಾಗಿಸಿಕೊಂಡು ಹೋಗುವ ಬಗ್ಯೆ, ಸಿಪಾಯಿಗಳ ಕಳುಹಬೇಕೆಂಬದಾಗಿ " ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬಾಗಿ ಆ ಕಮಿಶನ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: " ಎಮ್ಮೆ ನಾಯುರನು ಒಂದು ಹೆಂಗಸು ಸಂಗಡ ಇರುವ ಮೂರು ಜನರ ಸಹಾ, ಹಿಡಿಯು ಬೇಕು ಎಂಬದಾಗಿ, ತಲಾಷುಮಾಡಿ, ಪ್ರಯತ್ನ ಬಟ್ಟು ಇರುವಲ್ಲಿ, ಈವರೆಗೂ ಸಾಧ್ಯವಾಗದ ಕಾರ್ಯ, ಕುಂಪನಿ ಸರಕಾರಕ್ಕೆ, ಪರಮ ಅಂತಃಕರಣಪೂರ್ವಕ ವಾಗಿ ಶ್ರೇಯಸ್ಸು ಹಾರೈಸುವಂಥಾ ಪರಮ ಮಿತ್ರ ಶಿರೋಮಣಿಗಳಾದ್ದರಿಂದಾ, ಈ ಕಾರ್ಯ ತಮ್ಮಿಂದಾ ಸಾಧ್ಯವಾಯಿತು. ಇದೇನೂ ನೂತನವಲ್ಲಾ. ಇದಕ್ಕೂ ವಿಶೇಷವಾಗಿ ಪೂರ್ವಾರಭ್ಯವಾಗಿ ಕುಂಪನಿ ಸರಕಾರಕ್ಕೆ ಸಾಭಿಮಾನ ವಾದಂಥಾ ಅನೇಕ ಕಾರ್ಯಗಳೆಲ್ಲಾ ತಮ್ಮ ಮಿತ್ರತ್ವದಿಂದಾ ಜಯಪ್ರದವಾಗಿ ಬರುವ ಕಾರಣ, ಕುಂಪನಿಯಲ್ಲು ತಮ್ಮ ಯಶಸ್ಸು ಗುಣವರ್ಧನೆಗಳು ದಿನೇ ದಿನೇ ಅಭಿವೃದ್ಧಿ ಆಗಿ ಬರುವರೆ ಅನುಮಾನವಿಲ್ಲಾ. ಮದರಾಸಿನ ಜನರಲ್ ಗವರ್ನರ್ ಬೆಂಟೆಂಗ್ ಸಾಹೇಬರವರಿಗೂ ಶ್ರುತವಾಗಿ ಇರುವ ಕಾರಣ, ಈ ಸಂತೋಷದ ವರ್ತಮಾನಗಳನ್ನು ಬರೆಸಿ ಕಳುಹಿಸಿ ಇದ್ದೇವೆ. ಈ ವರ್ತಮಾನ ವೆಲ್ಲಾ ಸರಕಾರ ಕುಂಪನಿಯಲ್ಲು ದಾಖಲಾದಾಕ್ಷಣ ತಮ್ಮ ಪ್ರಕಾಶಗಳು ಅಧಿಕಾನು ಅಧಿಕವಾಗಿ ಇರುವದು. ಈ ಎಮ್ಮೆನಾಯುರವನ ತರುವ ಬಗ್ಯೆ, ಗಾಡದಿ ಪಹರೆದ ಜನವನ್ನು ಕಲ್ಲುಹೊಳೆ ಬಳಿಗೆ ಕಳುಹಿಸಿ ಇದ್ದೇವೆ. ಈ ಜನರ ಸಂಡ ಕೂಡಿಸಿ ಕಳುಹಿಸಿ ಕೊಡಬೇಕು " ಎಂಬದಾಗಿ, ಬರೆಸಿ ಕಳುಹಿಸಿದ್ದ ರಿಂದಾ, ಆ ಎಮ್ಮೆನಾಯುರು, ಅವನ ಹೆಂಡತಿ, ಆ ಮೂರು ಜನ ನಾಯಿ ಮಾರರ ಸಹಾ, ಆ ಗಾಡದಿ ಸಿಪಾಯಿಗಳ ಸಂಗಡ ಕೂಡಿಸಿ, ವಾರಡಸ್ ಸಾಹೇಬರವರ ಬಳಿಗೆ ಕಳುಹಿಸಿದರು.

ಈ ಮೇರೆ ಈ ಸಾಧನದಲ್ಲಿ ಬರದು ಇಟ್ಟಿಂಥಾದ್ದನ್ನು ಕಾಲಾನುಕಾಲಕ್ಕೂ ಮಹಾರಾಜರವರು ಆಲ್ ಅವಲಾದ್ ತಿಳಿಯುವ ಬಗ್ಯೆಯೂ, ಈ ವಿವರಗಳು ಶಾಶ್ವತವಾಗಿ ಇರುವ ಬಗ್ಯೆ, ಬರೆಸಿ ಶಾಹಿದೀ ಬಗ್ಯೆ, ಖಾಸಾ ದಸ್ಕತ್ತು ಮೋಹರ ಮಾಡಿ, ಮಡಗಿ ಇದೆ. ಈ ಸಾಧನದಲ್ಲಿ ಕಲಿಸಂದ ೪೭೩೪ನೇ ಆಂಗೀರಸ ಸಂವತ್ಸರದಾರಭ್ಯ, ಕಲಿಸಂದ ೪೯೦೯ನೇ ಪ್ರಭವ ಸಂವತ್ಸರದ ಜೇಷ್ಟ ಶು. ೭ರಲ್ಲಿ ಶುಕ್ರವಾರದವರೆಗೆ, ವರ್ಷ ನೂರ ಎಪ್ಪತ್ತೈದು, ತಿಂಗಳು ಎರಡು, ದಿವಸ

ಏಳು, ಆಗುತ್ತದೆ. ಇದರ ಒಳಗೆ ಕೊಡಗಿನ ಸಂಸ್ಥಾನದಲ್ಲಿ ದೊರೆತನ ಮಾಡಿ ಬಂದಂಥಾವರ ವೃತ್ತಾಂತ ಪ್ರಾಕು ಸಾಧನ ದಾಖಲೆಯಿಂದಲೂ, ತಮ್ಮ ದಿವಸ ದಲ್ಲಿ ಈ ವರೆಗೆ ನಡದಂಥಾ ವೃತ್ತಾಂತ ಯಾವತ್ತನ್ನು, ವೀರರಾಜೇಂದ್ರ ಒಡೆಯರವರು ಅಪ್ಪಣೆ ಕೊಟ್ಟು, ಬರಸಿ ಮಡಗಿ ಇದ್ದಾರೆಯಾಗಿ.

ಸಮಾಪ್ತಿ

---

## ವೀರರಾಜನ ಮರಣಶಾಸನ

ದೊಡ್ಡವೀರರಾಜನು ಬರೆಯಿಸಿದ ರಾಜೇಂದ್ರನಾಮೆಯು ಕ್ರಿ.ಶ. ೧೮೦೭ರ ವರೆಗಿನ ಚರಿತ್ರೆಯನ್ನು ಒಳಗೊಂಡಿದೆ. ಈ ಚರಿತ್ರೆಯನ್ನು ಲೆಫ್ಟ ನೆಂಟ್ ಅಬರ್‌ಕ್ರಾಂಬಿಯು ಆಂಗ್ಲ ಭಾಷೆಗೆ ಪರಿವರ್ತಿಸಿದನು. ಕ್ರಿ.ಶ. ೧೮೩೪ ರಲ್ಲಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸರ್ಕಾರವು ಕೊಡಗನ್ನು ವಶ ಪಡಿಸಿಕೊಂಡನಂತರ ಮಡಿಕೇರಿ ಅರಮನೆಯಲ್ಲಿ ಇಂಗ್ಲಿಷ್ ಅಧಿಕಾರಿಗಳಿಗೆ ರಾಜೇಂದ್ರನಾಮೆಯ ಹಸ್ತಪ್ರತಿಯೊಂದು ದೊರೆಯಿತು. ಆದರೆ ಈ ಹಸ್ತಪ್ರತಿ ಯಲ್ಲಿ ಅಬರ್‌ಕ್ರಾಂಬಿಯು ಆಂಗ್ಲ ಭಾಷೆಗೆ ಪರಿವರ್ತಿಸಿದ ಪ್ರತಿಯ ಕೊನೆಯ ಎರಡು ಪುಟಗಳು ಇರಲಿಲ್ಲ. ಈ ಎರಡು ಪುಟಗಳಲ್ಲಿ ವೀರರಾಜನ ಕೊನೆಯ ಮರಣಶಾಸನವು ಬರೆಯಲ್ಪಟ್ಟಿದ್ದಿತು. ದೊಡ್ಡವೀರರಾಜನಿಗೆ ಗಂಡುಮಕ್ಕಳು ಇರಲಿಲ್ಲ. ನಾಲ್ಕು ಹೆಣ್ಣುಮಕ್ಕಳು ಮಾತ್ರವಿದ್ದರು. ಆತನ ಪ್ರೀತಿಯ ರಾಣಿ ಯಾದ ಮಹದೇವಮ್ಮಾಜಿಯು ೧೮೦೭ರಲ್ಲಿ ಮೃತಳಾದಳು. ಆದುದರಿಂದ ರಾಜನಿಗೆ ಗಂಡುಮಕ್ಕಳಾಗುವ ಆಸೆಯೂ ತಪ್ಪಿತು. ತನಗೆ ಗಂಡುಮಕ್ಕಳಿಲ್ಲ ದಿದ್ದರೂ ತನ್ನ ರಾಜ್ಯವು ತನ್ನ ಅನಂತರ ತನ್ನ ಪ್ರೀತಿಯ ಮಗಳಾದ ದೇವಮ್ಮಾ ಜಿಗೂ ಆಕೆಯ ಗಂಡುಮಕ್ಕಳಿಗೂ ಹೋಗಬೇಕೆಂದೂ ಆಕೆಗೆ ಗಂಡುಮಕ್ಕಳಿಲ್ಲ ದಿದ್ದರೆ ಅನುಕ್ರಮವಾಗಿ ಉಳಿದ ಹೆಣ್ಣುಮಕ್ಕಳಿಗೂ ಅವರ ಮಕ್ಕಳಿಗೂ ಹೋಗ ಬೇಕೆಂದೂ ಅವರಲ್ಲಿ ಯಾರಿಗೂ ಮಕ್ಕಳಿಲ್ಲದಿದ್ದರೆ ಅವರನಂತರ ತನ್ನ ಉಪ ಪತ್ನಿಯ ಮಕ್ಕಳು ರಾಜಶೇಖರಪ್ಪ, ಶಿಶುಶೇಖರಪ್ಪ ಇವರಿಗೆ ಬರಬೇಕೆಂದೂ ಮರಣಶಾಸನವನ್ನು ಬರೆಯಿಸಿ ತನ್ನ ರಾಜಮುದ್ರೆಯನ್ನೊತ್ತಿ ಅದರ ಪ್ರತಿ ಗಳನ್ನು ಬಂಗಾಳದಲ್ಲಿದ್ದ ಗವರ್ನರ್ ಜನರಲನಿಗೂ ಮದರಾಸು ಗವರ್ನರನಿಗೂ ಕಳುಹಿಸಿದನು. ಇದರ ಪ್ರತಿಯೇ ಅವನು ಬರೆಯಿಸಿದ ರಾಜೇಂದ್ರನಾಮೆ ಯಲ್ಲಿ ಬರೆಯಲ್ಪಟ್ಟಿದ್ದಿತು. ಆದರೆ ವೀರರಾಜನ ಮರಣಾನಂತರ ಆತನ ಪ್ರೀತಿಯ ಮಗಳು ದೇವಮ್ಮಾಜಿಯು ಪಟ್ಟಕ್ಕೆ ಬಂದರೂ ಒಂದೆರಡು ವರ್ಷ ಗಳಲ್ಲಿ ಅವಳ ಚಿಕ್ಕತಂದೆ ಲಿಂಗರಾಜನು ಅವಳಿಂದ ತನಗೆ ರಾಜ್ಯ ಕೊಡಲ್ಪ ಟ್ಟಂತೆ ಬರೆಯಿಸಿಕೊಂಡು ತಾನೇ ರಾಜ್ಯವನ್ನು ಆಳತೊಡಗಿದನು. ಆಗ ವೀರರಾಜನ ಮರಣಶಾಸನವು ಯಾರಿಗೂ ತಿಳಿಯಬಾರದೆಂದು ಅರಮನೆಯ ಲ್ಲಿದ್ದ ಹಸ್ತಪ್ರತಿಯಿಂದ ಅದನ್ನು ಇಲ್ಲದೆ ಮಾಡಿದನು. ಹೀಗೆ ದೊಡ್ಡವೀರ

ರಾಜನು ಬರೆಯಿಸಿದ ರಾಜೇಂದ್ರನಾಮೆಗೂ ಮಡಿಕೇರಿ ಅರಮನೆಯಲ್ಲಿ ದೊರೆತ ರಾಜೇಂದ್ರನಾಮೆಯ ಹಸ್ತಪ್ರತಿಗೂ ಮರಣಶಾಸನದ ನಿರೂಪಣೆಯಲ್ಲಿ ವ್ಯತ್ಯಾಸವುಂಟಾಯಿತು. ಈ ಪುಸ್ತಕದಲ್ಲಿ ಅಚ್ಚಾದ ರಾಜೇಂದ್ರನಾಮೆಯಲ್ಲಿ ಮರಣಶಾಸನವಿರುವುದಿಲ್ಲ.

ದೊಡ್ಡವೀರರಾಜನು ತಾನು ಸಾಯುವ ಮೊದಲು ಶ್ರೀರಂಗಪಟ್ಟಣದಲ್ಲಿ ಬ್ರಿಟಿಷ್ ಸರ್ಕಾರದ ಪ್ರತಿನಿಧಿಯಾಗಿದ್ದ ಕರ್ನಲ್ ಕೋಲನನ್ನು ಮಡಿಕೇರಿಗೆ ಬರಮಾಡಿ ಆತನಿಗೆ ತನ್ನ ಮರಣಶಾಸನದ ಪ್ರತಿಯನ್ನು ಕೊಡಿಸಿ ಅದನ್ನು ನಡೆಸಿಕೊಡುವಂತೆ ಆತನಿಂದ ಭರವಸೆಯನ್ನು ಪಡೆದನು. ತನ್ನ ನಾಲ್ವರು ಹೆಣ್ಣುಮಕ್ಕಳನ್ನು ಕರ್ನಲ್ ಕೋಲನಿಗೆ ಪರಿಚಯಮಾಡಿಸಿ ಕೋಲನು ಅವರನ್ನು ತನ್ನ ಪೋಷಣೆಗೆ ಒಳಪಡಿಸಿದ ಹಾಗೆ ಆತನಿಂದ ಆ ಮಕ್ಕಳನ್ನು ಅಪ್ಪಿಸಿ ಮುದ್ದಿಸುವಂತೆ ಮಾಡಿದನು. ಆದರೆ ವಿಧಿವಿಲಾಸವು ಬೇರೆಯಾಗಿ ಇದ್ದಿತು. ದೊಡ್ಡವೀರರಾಜನ ಆಸೆಯು ಆತನು ಯಾರನ್ನು ನಂಬಿದ್ದನೋ ಆ ಆಂಗ್ಲ ಅಧಿಕಾರಿಗಳ ಉದಾಸೀನತೆ, ಕರ್ತವ್ಯಹೀನತೆಗಳಿಂದ ಮಣ್ಣು ಗೂಡಿತು. ಆತನ ಪ್ರೀತಿಯ ಮಗಳೂ ಉಳಿದ ಹೆಣ್ಣುಮಕ್ಕಳೂ ಚಿಕ್ಕವೀರ ರಾಜನ ಅತ್ಯಾಶೆಗೆ ಬಲಿಯಾಗಿ ಪ್ರಾಣವನ್ನು ಕಳೆದುಕೊಳ್ಳಬೇಕಾಯಿತು. ಈ ಕಥೆಯನ್ನೂ ದೊಡ್ಡವೀರರಾಜನ ಕೊನೆಯ ದಿನಗಳ ಮನಃಕ್ಲೇಶದ ಪರಿಣಾಮಗಳ ನಿರೂಪಣೆಯನ್ನೂ ಮುಂದಿನ ಪುಟಗಳಲ್ಲಿ ಓದುವಿರಿ.

## ವೀರರಾಜನ ಕೊನೆಯ ದಿವಸಗಳು

ವೀರರಾಜನಿಗೆ ಗಂಡುಮಕ್ಕಳಿರಲಿಲ್ಲ; ನಾಲ್ಕು ಹೆಣ್ಣುಮಕ್ಕಳಿದ್ದರು. ಈ ಕಾರಣದಿಂದ ರಾಜ್ಯವು ತನ್ನ ಮಕ್ಕಳಿಗೆ ಸಿಕ್ಕದೇ ಹೋಗುವುದೋ ಎಂಬ ಭಯವು ಆತನಿಗಿದ್ದಿತು. ಅದಕ್ಕೋಸ್ಕರ ವೀರರಾಜನು ತನ್ನನಂತರ ಕೊಡಗಿನ ರಾಜ್ಯಪಟ್ಟವು ತನ್ನ ಹಿರೇ ಮಗಳ ಗಂಡುಮಕ್ಕಳಿಗೆ ಹೋಗಬೇಕೆಂದೂ ಅವಳಿಗೆ ಮಕ್ಕಳಿಲ್ಲದಿದ್ದರೆ ಅನುಕ್ರಮವಾಗಿ ಉಳಿದ ಹೆಣ್ಣುಮಕ್ಕಳಿಗೆ ಹೋಗಬೇಕೆಂದೂ ಮರಣಶಾಸನವನ್ನು ಬರೆದು ಇಂಗ್ಲಿಷ್ ಸರ್ಕಾರವು ತನ್ನ ಹೆಣ್ಣುಮಕ್ಕಳ ಪೋಷಕರಾಗಿದ್ದುಕೊಂಡು ತನ್ನ ಮರಣಶಾಸನವನ್ನು ನಡೆಸಿಕೊಡಬೇಕೆಂದೂ ಕೇಳಿಕೊಂಡನು.

ವೀರರಾಜನ ಪ್ರೇಮದ ಪತ್ನಿಯಾದ ಮಹದೇವಮ್ಮಾಜಿಯು ೧೮೦೭ರಲ್ಲಿ ಸತ್ತುಹೋದಳು. ಅವಳು ಸತ್ತುಹೋದನಂತರ ವೀರರಾಜನ ಬುದ್ಧಿಯು ಕೆಟ್ಟಿತು. ಆತನು ತನ್ನ ಪ್ರಜೆಗಳು ತನ್ನನ್ನು ಕೊಲ್ಲಲು ಯತ್ನಿಸುತ್ತಿರುವರೆಂದು ಸಂಶಯಪಟ್ಟು ನೂರಾರು ಜನರನ್ನು ಅನುಮಾನದ ಮೇಲೆ ಕೊಲ್ಲಿಸಿದನು. ದಿನೇ ದಿನೇ ಅವನ ಕ್ರೂರತ್ವವು ಹೆಚ್ಚಾಯಿತು. ಅವನ ಕ್ರೂರತ್ವವನ್ನು ಸಹಿಸಲಾರದೆ ಒಂದು ದಿವಸ ಕೋಟೆಯ ಪಹರೆಯಲ್ಲಿದ್ದ ಮುನ್ನೂರು ಕೊಡಗರು ಅವನು ಮಲಗಿದ್ದಲ್ಲಿಯೇ ಅವನನ್ನು ಕೊಂದುಬಿಡಬೇಕೆಂದು ನಿಶ್ಚಯಿಸಿದರು. ಆದರೆ ಈ ವಿಷಯವು ರಾಜನಿಗೆ ಹೇಗೋ ತಿಳಿದು ಆತನು ತಪ್ಪಿಸಿಕೊಂಡು ತನ್ನ ಸಿದ್ದಿ ಕಾವಲುಗಾರರಿಂದ ಕೋಟೆಯ ಹೆಬ್ಬಾಗಿಲುಗಳನ್ನು ಮುಚ್ಚಿಸಿಬಿಟ್ಟನು. ರಾಜನು ತನ್ನ ಹಾಸಿಗೆಯಲ್ಲಿ ಒಂದು ಒಟ್ಟಿಗಂಟನ್ನು ತಾನು ಮಲಗಿದ ಹಾಗೆ ಕಾಣುವಂತೆ ಇಟ್ಟು, ತಾನು ಮಹಡಿಯಲ್ಲಿ ಅಡಗಿಕೊಂಡನು. ಒಳಸಂಚುಗಾರರು ಇವನು ಮಲಗುವ ಕೋಣೆಗೆ ಬಂದು ಇವನು ನಿದ್ರೆ ಮಾಡುತ್ತಿದ್ದಾನೆಂದು ತಿಳಿದು ಆ ಒಟ್ಟಿಗಂಟನ್ನು ಕತ್ತಿಯಿಂದ ಕಡಿದರು. ಆಗ ಅವರಿಗೆ ಮನುಷ್ಯನ ಬದಲಾಗಿ ಒಟ್ಟಿಗಂಟು ಇದ್ದುದು ಕಂಡು ತಾವು ಮೋಸಹೋದೆವು ಎಂದು ಗಾಬರಿಯಾಯಿತು. ಎಲ್ಲಿ ಓಡುವುದಕ್ಕೂ ದಿಕ್ಕಿಲ್ಲದಾಯಿತು. ರಾಜನನ್ನು ಕೊಲ್ಲಬೇಕೆಂದಿದ್ದವರು ತಾವೇ ರಾಜನ ಕೈಗೆ ಸಿಕ್ಕಿಬಿದ್ದರು. ರಾಜನು ಅರಮನೆಯ ಮುಂದೆ ತನ್ನ ಸಿದ್ದಿ ಕಾವಲುಗಾರರಿಂದ ಅವರ ತಲೆಗಳನ್ನು ಕಡಿಸಿದನು. ಅರಮನೆಯ ಉಪ್ಪರಿಗೆಯ ಕಿಟಕಿಯ ಬಳಿಯಿಂದ ಗುಂಡು ಹೊಡೆದು ವೀರರಾಜನು ತಾನೇ ಇಪ್ಪತ್ತೈದು ಜನರನ್ನು ಕೊಂದುಹಾಕಿದನು. ಆ ದಿವಸ ಅಲ್ಲಿ ಸತ್ತುಬಿದ್ದ ಜನರ ರಕ್ತವು ದೊಡ್ಡ ಮಳೆಯಲ್ಲಿ ನೀರು ಹರಿಯುವ ಹಾಗೆ ಹರಿಯಿತು ಎಂದು ಕಣ್ಣಾರೆ ಕಂಡವನೊಬ್ಬನು ಹೇಳಿರುವನು.

ದಿವಸಗಳು ಕಳೆದ ಹಾಗೆಯೇ ವೀರರಾಜನ ಬುದ್ಧಿಯು ಇನ್ನೂ ಕೆಟ್ಟಿತು. ಅವನ ಕ್ರೂರತ್ವವು ಇನ್ನೂ ಹೆಚ್ಚಾಯಿತು. ಆತನಿಗೆ ಅಪ್ಪಾಜಿರಾಜ ಮತ್ತು ಲಿಂಗರಾಜನೆಂಬ ಇಬ್ಬರು ತಮ್ಮಂದಿರು ಇದ್ದರು. ಅವರು ಅಪ್ಪಂಗಳ ಮತ್ತು ಹಾಲೇರಿ ಜಹಗೀರುಗಳಲ್ಲಿ ವಾಸವಾಗಿದ್ದರು. ಅವರು ತನ್ನ ಹೆಣ್ಣುಮಕ್ಕಳು ಪಟ್ಟಕ್ಕೆ ಬರುವುದಕ್ಕೆ ಅಡ್ಡಿಮಾಡಬಹುದೆಂದು ವೀರ

ರಾಜನು ಸಂಶಯಪಟ್ಟು ಒಂದು ದಿವಸ ಅವರನ್ನು ಕೊಲ್ಲುವುದಕ್ಕೆ ಅಪ್ಪಂಗಳಕ್ಕೊ ಹಾಲೇರಿಗೂ ಕೊಲೆಗಡುಕರನ್ನು ಕಳುಹಿಸಿದನು. ಆದರೆ ಇವರನ್ನು ಕಳುಹಿಸಿ ಒಂದು ಗಂಟೆಯೊಳಗೆ ವೀರರಾಜನ ಬುದ್ಧಿಯು ಸರಿಯಾಗಿ, ಅವರನ್ನು ಕೊಲ್ಲಬಾರದೆಂದು ಅಪ್ಪಣೆಮಾಡಿ ಜನರನ್ನು ಓಡಿಸಿದನು. ಆದರೆ ಜೀವದಾನ ಅಪ್ಪಣೆ ತಲುಪುವುದಕ್ಕೆ ಮೊದಲೇ ಕೊಲೆಗಡುಕರು ಅಪ್ಪಾಜಿ ರಾಜನ ತಲೆಯನ್ನು ಕಡಿದು ದಾರಿಯಲ್ಲಿ ತರುತ್ತಿದ್ದರು. ಆದರೆ ಲಿಂಗರಾಜನು ಸಾಯದೆ ಉಳಿದುಕೊಂಡನು. ವೀರರಾಜನು ಲಿಂಗರಾಜನಿಗೆ ಅಪ್ಪಾಜಿರಾಜನ ಅಪ್ಪಂಗಳ ಜಹಗೀರನ್ನು ಕೊಟ್ಟು ಅಪ್ಪಾಜಿರಾಜನ ಕುಟುಂಬದ ಪೋಷಣೆಯನ್ನು ಅವನ ಮೇಲೆ ಹೊರಿಸಿದನು.

ವೀರರಾಜನಿಗೆ ಆಗಾಗ ಬುದ್ಧಿ ಕೆಡುತ್ತಿರುವುದು ಮೈಸೂರಿನಲ್ಲಿ ಬ್ರಿಟಿಷ್ ರೆಸಿಡೆಂಟನಾಗಿದ್ದ ಕೋಲನಿಗೆ ತಿಳಿದು ಆತನು ಡಾಕ್ಟರ್ ಇಂಗೆಲ್‌ಡ್ಯೂ ಎಂಬ ವೈದ್ಯನನ್ನು ಮಡಿಕೇರಿಗೆ ಕಳುಹಿಸಿಕೊಟ್ಟನು. ರಾಜನಿಗೆ ಆಗಾಗ ಹುಚ್ಚು ಬರುತ್ತಿತ್ತು. ಬುದ್ಧಿ ಸರಿಯಾದಾಗ ಮನಸ್ಸಿಗೆ ಬಹಳ ನೋವುಂಟಾಗುತ್ತಿತ್ತು. ಹುಚ್ಚಿನ ಭರದಲ್ಲಿ ಒಂದು ಸಾರಿ ರಾಜನು ತನ್ನ ನಾಲ್ಕು ಮುಖ್ಯ ಉದ್ಯೋಗಸ್ಥರನ್ನು ಕೊಲ್ಲಿಸಿದನು. ಅವರಲ್ಲಿ ಕರಣಿಕ ಸುಬ್ಬಯ್ಯನೂ ಒಬ್ಬನಾಗಿದ್ದನು. ಹುಚ್ಚು ಬಿಟ್ಟಮೇಲೆ ತನ್ನ ಕ್ರೂರತ್ವಕ್ಕೆ ತಾನು ಪಶ್ಚಾತ್ತಾಪ ಪಟ್ಟು ತನ್ನ ಪ್ರಾಣ ತೆಗೆದುಕೊಳ್ಳಲು ಪ್ರಯತ್ನಪಟ್ಟನು. ಆದರೆ ಡಾ. ಇಂಗೆಲ್‌ಡ್ಯೂ ಇದನ್ನು ತಪ್ಪಿಸಿದನು.

೧೮೦೯ನೇ ಏಪ್ರಿಲ್ ತಿಂಗಳಲ್ಲಿ ಮೈಸೂರಿನ ರೆಸಿಡೆಂಟ್ ಕೋಲನು ಮಡಿಕೇರಿಗೆ ಬಂದನು. ವೀರರಾಜನು ಆತನಿಗೆ ತನ್ನ ನಾಲ್ಕು ಹೆಣ್ಣುಮಕ್ಕಳನ್ನು ಪರಿಚಯ ಮಾಡಿಸಿ ಕಂಪೆನಿ ಸರ್ಕಾರದವರು ತನ್ನ ಹಿರಿಯ ಮಗಳು ದೇವಮ್ಮಾಜಿಗೆ ತನ್ನನಂತರ ಕೊಡಗಿನ ಪಟ್ಟವನ್ನು ಕೊಡಬೇಕೆಂತಲೂ ಅವಳ ಹೆಸರಿನಲ್ಲಿ ಆರುಲಕ್ಷ ರೂಪಾಯಿಗಳನ್ನು ಕಂಪೆನಿಯ ಲೆಕ್ಕದಲ್ಲಿ ಮದ್ರಾಸಿನಲ್ಲಿ ಇಡಬೇಕೆಂತಲೂ ಕೇಳಿಕೊಂಡನು. ಕೋಲನು ವೀರರಾಜನ ಕೋರಿಕೆಗಳಿಗೆ ಒಪ್ಪಿ ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದನು. ಇಷ್ಟರಲ್ಲಿ ಗವರ್ನರ್ ಜನರಲನಿಂದ ವೀರರಾಜನ ಮೇಲೆ ತಮ್ಮ ವಿಶ್ವಾಸವನ್ನು ತೋರಿಸುವ ಒಂದು ಕಾಗದವು ವೀರರಾಜನಿಗೆ ಬಂದಿತು. ವೀರರಾಜನು ಇದಕ್ಕೆ ಒಂದು ಉತ್ತರ ಬರೆದನು.

ಇದೇ ವರ್ಷದ ಮೇ ತಿಂಗಳಲ್ಲಿ ವೀರರಾಜನಿಗೆ ತಿರುಗಿ ಹುಚ್ಚು ಕೆದರಿತು. ಮೈಸೂರಿಗೆ ಹೋಗಿದ್ದ ಡಾ. ಇಂಗೆಲ್‌ಡ್ಯೂ ತಿರುಗಿ ಮಡಿಕೇರಿಗೆ ಬಂದನು. ಆದರೆ ಜೂನ್ ತಿಂಗಳ ಒಂಬತ್ತನೆ ದಿವಸ ವೀರರಾಜನು ತನ್ನ ಪ್ರೀತಿಯ ಮಗಳು ದೇವಮ್ಮಾಜಿಯನ್ನು ತನ್ನ ಬಳಿಗೆ ಕರೆದು ಅವಳಿಗೆ ತನ್ನ ರಾಜಮುದ್ರೆಯನ್ನು ಕೊಟ್ಟು ಸ್ವಲ್ಪ ಸಮಯದಲ್ಲಿಯೇ ಸತ್ತುಹೋದನು. ಹೀಗೆ ಶೂರನಾಗಿ ಬಾಳಿ ಬದುಕಿದ ರಾಜನು ಕೊನೆಗೆ ಬುದ್ಧಿ ಸರಿಯಿಲ್ಲದೆ ದುಃಖದಿಂದ ಸತ್ತನು.

ವೀರರಾಜನು ತನ್ನ ಪ್ರೇಮದ ಪತ್ನಿಯು ಸತ್ತುಹೋದಮೇಲೆ ತಾನೂ ಸುಖವಾಗಿರಲಿಲ್ಲ; ತನ್ನ ಪ್ರಜೆಗಳನ್ನೂ ಸುಖವಾಗಿಡಲಿಲ್ಲ. ತನ್ನ ಪ್ರಜೆಗಳು ತನ್ನನ್ನು ಮಾಟಛಿದ್ರಗಳಿಂದ ಕೊಲ್ಲುವ ಪ್ರಯತ್ನದಲ್ಲಿರುವರು ಎಂದು ಆತನು ಮೂಢನಂಬಿಕೆಯಿಂದ ಸಂಶಯಪಟ್ಟು ತನ್ನ ವಿರೋಧಿಗಳು ಎಂದು ತೋರಿದವ ರನ್ನೆಲ್ಲಾ ಕೊಲ್ಲಿಸತೊಡಗಿನು ಆದರೆ ಆತನು ತನ್ನ ಪತ್ನಿಯು ಸಾಯುವ ವರೆಗೆ ಕೊಡಗಿನ ಜನರ ಅಚ್ಚುಮೆಚ್ಚಿನ ದೊರೆಯಾಗಿದ್ದನು. ಆತನು ಶೂರನೂ ಧೀರನೂ ಆದಷ್ಟೇ ಉದಾರಿಯೂ ಆಗಿದ್ದನು. ಯುದ್ಧಗಳಲ್ಲಿ ತನ್ನ ಸೈನಿಕರು ಸುಲಿಗೆಮಾಡಿದ ವಸ್ತುಗಳಲ್ಲಿ ತಾನು ಯುದ್ಧದ ಸಾಮಾನುಗಳನ್ನು ಮಾತ್ರ ತೆಗೆದುಕೊಂಡು ಉಳಿದ ಸಾಮಾನುಗಳನ್ನು ಅವರೊಳಗೆ ಹಂಚಿಬಿಡುತ್ತಿದ್ದನು. ಪಿರಿಯಾಪಟ್ಟಣದಿಂದ ತಾನು ತಪ್ಪಿಸಿಕೊಂಡು ಬರಲು ತನಗೆ ಸಹಾಯ ಮಾಡಿದವರಿಗೆಲ್ಲಾ ಜಹಗೀರು ಭೂಮಿಗಳನ್ನು ಕೊಟ್ಟನು. ಟಿಪ್ಪುಸುಲ್ತಾನನ ಮೇಲಿನ ಯುದ್ಧದಲ್ಲಿ ನಾಲ್ಕುಲಕ್ಷ ರೂಪಾಯಿಗಳ ಬೆಲೆಯ ಸಾಮಾನು ಸರಂಜಾಮುಗಳನ್ನು ಒಂದು ಪೈ ಪ್ರತಿಫಲ ತೆಗೆದುಕೊಳ್ಳದೆ ಕಂಪೆನಿಯವರಿಗೆ ಉಚಿತವಾಗಿ ಕೊಟ್ಟನು.

ವೀರರಾಜನಿಗೆ ಇಂಗ್ಲಿಷರ ಮೇಲೆ ತುಂಬಾ ವಿಶ್ವಾಸವಿದ್ದಿತು. ಅವನ ಆಳ್ವಿಕೆಯಲ್ಲಿ ಅನೇಕ ಇಂಗ್ಲಿಷ್ ಸೈನ್ಯಾಧಿಕಾರಿಗಳು ಬೇಟೆಯಾಡುವು ದಕ್ಕೋಸ್ಕರ ಕೊಡಗಿಗೆ ಬರುತ್ತಿದ್ದರು. ಅವರು ಮಡಿಕೇರಿಗೆ ಬಂದಾಗ ಇಳಿದು ಕೊಳ್ಳುವುದಕ್ಕೆ ವೀರರಾಜನು ಈಗ ಸೆಂಟ್ರಲ್ ಹೈಸ್ಕೂಲ್ ಇರುವ ಸ್ಥಳದಲ್ಲೇ ಒಂದು ಚಿಕ್ಕ ಅರಮನೆಯನ್ನು ಕಟ್ಟಿಸಿ ಅದರಲ್ಲಿ ಯೂರೋಪಿಯನ್ನರಿಗೆ ಬೇಕಾಗುವ ಎಲ್ಲಾ ಅನುಕೂಲತೆಗಳನ್ನು ಒದಗಿಸಿಟ್ಟದ್ದನು. ಯೂರೋ

ಪಿಯುನ್ ಕ್ರಮದ ಅಡಿಗೆ ಮಾಡಲು ಅಡಿಗೆಯವರನ್ನೂ ಇಟ್ಟಿದ್ದನು.

ಇಂಥಾ ರಾಜನ ಅವಸಾನವು ಅವನ ದುರ್ದೈವದಿಂದ ದುಃಖದಿಂದ ಕೂಡಿದ್ದಿತು. ಆದರೆ ಅವನಿಚ್ಛೆಯಂತೆ ಅವನ ಮಗಳೂ ಮಗಳ ಮಕ್ಕಳೂ ಕೊಡಗಿನ ಪಟ್ಟವನ್ನೇರಿದ್ದರೆ ಆತನ ಆತ್ಮಕ್ಕೆ ಬಹುಶಃ ಶಾಂತಿಯುಂಟಾಗುತ್ತಿತ್ತು. ಆದರೆ ಅವನಿಂದ ತುಂಬಾ ಸಹಾಯವನ್ನು ಪಡೆದು ಆತನಿಗೆ ಕೃತಜ್ಞತೆ ಸಲ್ಲಿಸಿದ ಇಂಗ್ಲಿಷ್ ಅಧಿಕಾರಿಗಳು ಆತನ ಅನಂತರ ಅವನ ಮಕ್ಕಳ ಯೋಗಕ್ಷೇಮದ ಚಿಂತೆಯನ್ನು ಮಾಡದೇ ಬಿಟ್ಟುಬಿಟ್ಟರು.

## ರಾಣಿ ದೇವಮ್ಮಾಜಿ (೧೮೦೯-೧೮೧೧)

ವೀರರಾಜನು ಮರಣಹೊಂದಿದ ಕೂಡಲೇ ಮಡಿಕೇರಿಯಲ್ಲಿ ಸಭೆಸೇರಿದ ಮುಖ್ಯಸ್ಥರು ಆತನ ಪ್ರೀತಿಯ ಮಗಳು ದೇವಮ್ಮಾಜಿಯನ್ನು ಕೊಡಗಿನ ರಾಣಿ ಎಂದು ಒಪ್ಪಿಕೊಂಡರು. ವೀರರಾಜನು ತಾನು ಸಾಯುವುದಕ್ಕೆ ಕೆಲವು ದಿವಸ ಮೊದಲು ತನ್ನ ಹಿರೇ ಹೆಂಡತಿಯ ಮಗಳು ರಾಜಮ್ಮಾಜಿಯ ಗಂಡ ಸೋಮದೆ ರಾಜನನ್ನು ತನ್ನ ಮುಖ್ಯ ದಿವಾನನ್ನಾಗಿ ನೇಮಿಸಿ, ಆತನು ದೇವಮ್ಮಾಜಿಯು ಪ್ರಾಯಕ್ಕೆ ಬರುವವರೆಗೆ ಆಕೆಯ ಹೆಸರಿನಲ್ಲಿ ರಾಜ್ಯಭಾರ ಮಾಡಬೇಕೆಂದು ಬರೆದಿಟ್ಟಿದ್ದನು. ಈಗ ದೇವಮ್ಮಾಜಿಯು ಕೊಡಗಿನ ರಾಣಿಯಾದುದು ಎಲ್ಲರಿಗೂ ಸಂತೋಷವನ್ನುಂಟುಮಾಡಿತು. ವೀರರಾಜನ ಕೊನೆಯ ದಿವಸಗಳ ಕ್ರೂರ ಆಳ್ವಿಕೆಯನಂತರ ಇನ್ನಾದರೂ ಕೊಡಗಿನಲ್ಲಿ ಸುಖಶಾಂತಿಗಳು ನೆಲೆಗೊಳ್ಳಬಹುದೆಂದು ಜನರು ಹಾರೈಸಿದರು. ಸೋಮದೆರಾಜನು ವೀರರಾಜನ ಇಷ್ಟದಂತೆ ದೇವಮ್ಮಾಜಿಯ ಹೆಸರಿನಲ್ಲಿ ರಾಜ್ಯಭಾರ ಮಾಡತೊಡಗಿದನು. ಎಲ್ಲಾ ಕಾರ್ಯಭಾರಗಳು ಚೆನ್ನಾಗಿ ನಡೆಯುವಂತೆ ತೋರಿತು.

ಆದರೆ ಈ ಮಧ್ಯೆ ವೀರರಾಜನ ತಮ್ಮ ಲಿಂಗರಾಜನಿಗೆ ತಾನೇ ಕೊಡಗಿನ ರಾಜನಾಗಬೇಕೆಂದು ಆಸೆಯಿದ್ದಿತು. ಆತನು ಆಗಾಗ್ಗೆ ಡಾ. ಇಂಗೆಲ್‌ಡ್ಯೂನನ್ನು ಸಂದರ್ಶಿಸಿ ಆತನ ದಯೆಯನ್ನು ಸಂಪಾದಿಸಲು ಯತ್ನಿಸಿದನು. ಮಡಿಕೇರಿಯಲ್ಲಿದ್ದ ಕೊಡಗು ಸರ್ದಾರರನ್ನು ಕಂಡು ಅವರ ಬೆಂಬಲವನ್ನು ಪಡೆಯಲು ಪ್ರಯತ್ನಿಸಿದನು. ಕೊಡಗಿನ ಸರ್ದಾರರಿಗೆ ಹೊರಗಿನ ರಾಜಕುಮಾರ ಸೋಮದೆ ರಾಜನು ದಿವಾನನಾಗಿ ಆಳುವುದು ಸಮಾಧಾನವಿರಲಿಲ್ಲ. ಆದರೂ ಅವರಿಗೆ

ಲಿಂಗರಾಜನ ಮೇಲೆ ವಿಶೇಷವಾದ ದಯೆಯೂ ಇರಲಿಲ್ಲ. ಒಂದು ದಿವಸ ಮಡಿಕೇರಿ ಅರಮನೆಯಲ್ಲಿ ಕೊಡಗಿನ ಎಲ್ಲಾ ಮುಖಂಡರ ಒಂದು ದೊಡ್ಡ ಸಭೆಯು ಜರುಗಿತು. ಆ ಸಭೆಯಲ್ಲಿ ಸೋದೆರಾಜನನ್ನು ದಿವಾನಗಿರಿಯಿಂದ ತೆಗೆದು ಲಿಂಗರಾಜನನ್ನು ದಿವಾನನನ್ನಾಗಿ ನೇಮಿಸಬೇಕೆಂಬ ಸೂಚನೆಯು ಲಿಂಗರಾಜನ ಸ್ನೇಹಿತರಿಂದ ತರಲ್ಪಟ್ಟು ಅದು ಬಿದ್ದು ಹೋಯಿತು.

ಆ ಕೂಡಲೇ ಲಿಂಗರಾಜನು ತನ್ನ ಕುದುರೆಯನ್ನು ಏರಿ ಬಹಳ ವ್ಯಸನ ದಿಂದ ಅಳುತ್ತಾ ಹಾಲೇರಿಗೆ ಹೊರಟನು. ಮಹದೇವಪೇಟೆಯಲ್ಲಿ ಕುದುರೆಯ ಮೇಲೆ ಕುಳಿತು ಅಳುತ್ತಾ ಹೋಗುತ್ತಿದ್ದ ಲಿಂಗರಾಜನನ್ನು ಚೌರಿರ ಅಪ್ಪಣ್ಣ ದಿವಾನನು ಕಂಡು ತಿರುಗಿ ಆತನನ್ನು ಅರಮನೆಗೆ ಕರೆದುಕೊಂಡು ಬಂದನು. ಚೌರಿರ ಅಪ್ಪಣ್ಣ ದಿವಾನನು ನ್ಯಾಯವಾದಿಯೂ ಪ್ರಭಾವಶಾಲಿಯೂ ಇದ್ದುದರಿಂದ ಕೊಡಗು ಮುಖ್ಯಸ್ಥರು ಆತನ ಮಾತಿಗೆ ಮರ್ಯಾದೆ ಕೊಟ್ಟು ಲಿಂಗರಾಜನನ್ನು ದಿವಾನನನ್ನಾಗಿ ಮಾಡುವುದಕ್ಕೆ ಒಪ್ಪಿದರು.

ಡಾ. ಇಂಗೆಲ್‌ಡ್ಯ್ಯಾನಿಗೆ ಲಿಂಗರಾಜನ ಒಳಸಂಚುಗಳು ತಿಳಿದಿರಲಿಲ್ಲ. ಲಿಂಗರಾಜನು ದಿವಾನನಾದ ಕೂಡಲೇ ರಾಣಿ ದೇವಮ್ಮಾಜಿಯು ಇಂಗೆಲ್‌ಡ್ಯ್ಯಾ ನನ್ನು ಕರೆಯಿಸಿ ಸೋದೆರಾಜನಲ್ಲಿ ತನಗೆ ವಿಶ್ವಾಸವಿಲ್ಲವೆಂದೂ ತನ್ನ ಚಿಕ್ಕಪ್ಪ ಲಿಂಗರಾಜನು ದಿವಾನನಾಗಬೇಕೆಂದೂ ಕೇಳಿಕೊಂಡಳು. ಸೋದೆರಾಜನು ತಾನು ಇನ್ನು ಕೊಡಗಿನಲ್ಲಿರುವುದು ಅಪಾಯಕರವೆಂದು ತನ್ನ ರಾಜ್ಯಕ್ಕೆ ಹೊರಟುಹೋದನು.

ಡಾ. ಇಂಗೆಲ್‌ಡ್ಯ್ಯಾ ಈ ಏರ್ಪಾಡಿಗೆ ಮೊದಲು ಒಪ್ಪದೆ ಇಲ್ಲಿ ನಡೆದ ಸಂಗತಿಗಳನ್ನು ಶ್ರೀರಂಗಪಟ್ಟಣದಲ್ಲಿ ರೆಸಿಡೆಂಟನಾಗಿದ್ದ ಕೋಲನ ಮೂಲಕ ಗವರ್ನರ್ ಜನರಲನಿಗೆ ತಿಳುಹಿಸಿದನು. ಮದರಾಸಿನ ಗವರ್ನರನೂ ಹಿಂದೂ ಸ್ಥಾನದ ಗವರ್ನರ್ ಜನರಲನೂ ೧೮೧೧ನೇ ಇಸವಿಯ ಫೆಬ್ರವರಿಯಲ್ಲಿ ಲಿಂಗ ರಾಜನು ರಾಣಿ ದೇವಮ್ಮಾಜಿಯ ಪೋಷಕನಾಗಿ ಕೊಡಗನ್ನು ಆಳುವುದಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸಿ ಪತ್ರಗಳನ್ನು ಬರೆದರು.

ಲಿಂಗರಾಜನ ಮೊದಲನೆಯ ಪ್ರಯತ್ನವು ಕೈಗೂಡಿತು. ಆತನು ಕೊಡಗಿ ನಲ್ಲಿ ರಾಣಿಯ ಹೆಸರಿನಲ್ಲಿ ಆಳಬಹುದೆಂದು ಇಂಗ್ಲಿಷರು ಒಪ್ಪಿಕೊಂಡರು. ಇನ್ನು ಲಿಂಗರಾಜನಿಗೆ ತಾನೇ ರಾಜನಾಗುವುದು ಮಾತ್ರ ಉಳಿದಿದ್ದಿತು.

ಆದಕ್ಕೆ ಆತನು, ದೇವಮ್ಮಾಜಿಯು ತಾನು ರಾಜ್ಯವನ್ನು ಲಿಂಗರಾಜನಿಗೆ ಬಿಟ್ಟುಕೊಟ್ಟ ಹಾಗೆ ಒಂದು ದಾನಪತ್ರವನ್ನು ಬರೆಯಿಸಿ ದೇವಮ್ಮಾಜಿಯಿಂದ ಸಹಿ ಹಾಕಿಸಿ ಕಂಪೆನಿಯ ಅಧಿಕಾರಿಗಳ ಒಪ್ಪಿಗೆಗೆ ಮದರಾಸು ಗವರ್ನರನಿಗೂ ಇಂಡಿಯಾ ಗವರ್ನರ್ ಜನರಲನಿಗೂ ಕಳುಹಿಸಿ ಕೊಟ್ಟನು. ಗವರ್ನರ್ ಜನರಲನು ದೇವಮ್ಮಾಜಿಯು ಇನ್ನೂ ಚಿಕ್ಕ ವಯಸ್ಸಿನವಳಾದುದರಿಂದ ಅವಳಿಗೆ ತನ್ನ ರಾಜ್ಯವನ್ನು ಬಿಟ್ಟುಕೊಡುವ ಅಧಿಕಾರವಿಲ್ಲವೆಂದೂ ಅವಳು ಪ್ರಾಯಃ ಪ್ರಬುದ್ಧಳಾದ ಮೇಲೆ ಈ ವಿಷಯವನ್ನು ತೀರ್ಮಾನ ಮಾಡಬಹುದೆಂದೂ ಬರೆದನು. ಆದರೆ ಇಷ್ಟರಲ್ಲಿ ಲಿಂಗರಾಜನು ರಾಣಿ ದೇವಮ್ಮಾಜಿಯನ್ನು ಮೂಲೆಗೊತ್ತಿ ತಾನೇ ಸರ್ವಾಧಿಕಾರವನ್ನು ವಹಿಸಿದ್ದನು. ರಾಣಿ ದೇವಮ್ಮಾಜಿಯ ಹೆಸರಿನಲ್ಲಿ ದೊಡ್ಡವೀರರಾಜನು ಬಹಳ ಹಣವನ್ನು ಮದರಾಸು ಸರ್ಕಾರದಲ್ಲಿಯೂ ಬೊಂಬಾಯಿ ಸರ್ಕಾರದಲ್ಲಿಯೂ ಇಟ್ಟಿದ್ದನು. ಲಿಂಗರಾಜನು ಈ ಹಣವೂ ತನಗೆ ಬರಬೇಕೆಂದು ವಾದಿಸಿ ಬೊಂಬಾಯಿ ಸರ್ಕಾರದಿಂದ ಹಣವನ್ನು ಪಡೆದನು. ಮದರಾಸು ಸರ್ಕಾರದಿಂದ ಬಡ್ಡಿಯನ್ನು ಪಡೆದನು.

ಹೀಗೆ ಲಿಂಗರಾಜನು ದೊಡ್ಡವೀರರಾಜನು ಸತ್ತ ಎರಡು ವರ್ಷಗಳಲ್ಲೇ ದೇವಮ್ಮಾಜಿಯನ್ನು ಸಿಂಹಾಸನದಿಂದ ತಳ್ಳಿಹಾಕಿ ತಾನೇ ಕೊಡಗಿನ ರಾಜನಾದನು. ಇಂಗ್ಲಿಷರ ಪರಮ ಮಿತ್ರನಾದ ವೀರರಾಜನ ಮರಣಶಾಸನವೂ ತನ್ನ ಪ್ರೀತಿಯ ಮಗಳು ತನ್ನ ಅನಂತರ ಆಳಬೇಕೆಂಬ ಆತನ ಇಚ್ಛೆಯೂ ಆತನ ಮಿತ್ರರಾದ ಬ್ರಿಟಿಷರ ಅಲಕ್ಷ್ಯದಿಂದಲೇ ಮಣ್ಣುಗೂಡಿದವು. ವೀರರಾಜನು ತಾನು ಸಾಯುವುದಕ್ಕೆ ಕೆಲವು ದಿವಸಗಳ ಮೊದಲು ಕೋಲ್ ಸಾಹೇಬನನ್ನು ಬರಮಾಡಿ, ಆತನಿಗೆ ತನ್ನ ಹೆಣ್ಣುಮಕ್ಕಳನ್ನು ಪರಿಚಯ ಮಾಡಿಸಿ, ಸಾರ್ವಭೌಮ ಸರಕಾರದ ಹೆಸರಿನಲ್ಲಿ ಅವರನ್ನು ರಕ್ಷಣೆ ಮಾಡಬೇಕೆಂದು ಕೇಳಿಕೊಂಡಿದ್ದನು. ಆದರೆ ಕಂಪೆನಿ ಸರ್ಕಾರವು ತನ್ನ ಹೊಣೆಗಾರಿಕೆಯನ್ನು ಸ್ವಲ್ಪವೂ ಅರಿತುಕೊಳ್ಳದೆ ತನ್ನ ಆಶ್ರಿತನೂ ನಂಬಿಗಸ್ಥ ವಿಶ್ವಾಸಿಯೂ ಆಗಿದ್ದ ವೀರರಾಜನ ಮಕ್ಕಳಿಗೆ ದುರಂತರವಾದ ಅನ್ಯಾಯವನ್ನು ಮಾಡಿದರು.

## ಲಿಂಗರಾಜೇಂದ್ರ ಒಡೆಯ (೧೮೧೧-೧೮೨೦)

ಲಿಂಗರಾಜೇಂದ್ರನು ೧೮೧೧ರಲ್ಲಿ ತಾನು ಕೊಡಗಿನ ರಾಜನೆಂದು ಇಸ್ತಿಹಾರನ್ನು ಹೊರಡಿಸಿ ಅದರ ಪ್ರತಿಯನ್ನು ಮದರಾಸಿನ ಗವರ್ನರನಿಗೆ ಕಳುಹಿಸಿ ಕೊಟ್ಟನು. ಇಂಗ್ಲಿಷರು ಇದಕ್ಕೆ ಬಹಿರಂಗವಾಗಿ ಒಪ್ಪದಿದ್ದರೂ ವಿರೋಧ ಮಾಡಲಿಲ್ಲ. ಆದರೂ ಲಿಂಗರಾಜನಿಗೆ ತನ್ನ ಪ್ರಜೆಗಳು ಯಾರಾದರೂ ತನ್ನ ಮೇಲೆ ಒಳಸಂಚು ನಡೆಸಬಹುದೆಂದು ಹೆದರಿಕೆ ಇದ್ದಿತು. ಹಾಗಾಗಿ ತಾನು ರಾಜಪದವಿಯನ್ನು ವಹಿಸಿಕೊಂಡ ಕೂಡಲೇ ತನ್ನ ರಾಜ್ಯದಲ್ಲಿ ಗೂಢ ಚಾರರ ಸಂಖ್ಯೆಯನ್ನು ಹೆಚ್ಚು ಮಾಡಿದನು. ಯಾರಾದರೂ ತನಗೆ ವಿರೋಧವಾಗಿ ಮಾತನಾಡಿದುದು ಅಥವಾ ವರ್ತಿಸಿದುದು ಅವನಿಗೆ ತಿಳಿದ ಕೂಡಲೇ ಆತನು ಅವರನ್ನು ಕ್ರೂರವಾಗಿ ಶಿಕ್ಷಿಸುತ್ತಿದ್ದನು. ಆದರೆ ಇದೊಂದು ವಿಚಾರವನ್ನು ಬಿಟ್ಟರೆ ಲಿಂಗರಾಜನ ಆಳ್ವಿಕೆಯು ಜನರಿಗೆ ಸುಖಕರ ವಾಗಿತ್ತು. ಆತನು ತನ್ನ ಪ್ರಜೆಗಳ ಸುಖವನ್ನು ಕೋರಿ ಅನೇಕ ಅಪ್ಪಣೆಗಳನ್ನು ಮಾಡಿದನು.



ಲಿಂಗರಾಜನ ಸೀಲು

## ಚೌರಿರ ಅಪ್ಪಣ್ಣ ದಿವಾನನ ಕೊಲೆ

ಲಿಂಗರಾಜನು ರಾಜನಾದ ಒಂದೆರಡು ವರ್ಷಗಳಲ್ಲಿ ಅಪ್ಪಣ್ಣ ದಿವಾನನು ಮುಖ್ಯ ದಿವಾನನಾಗಿದ್ದನು. ಅಪ್ಪಣ್ಣನು ನ್ಯಾಯವಾದಿಯೂ ಪ್ರಭಾವ ಶಾಲಿಯೂ ಆಗಿದ್ದನು. ಆತನನ್ನು ಎಲ್ಲರೂ ಗೌರವಿಸುತ್ತಿದ್ದರು. ಆತನು ಲಿಂಗರಾಜನನ್ನು ಅಧಿಕಾರದಲ್ಲಿ ಕೂರಿಸಿದುದರಿಂದ ಲಿಂಗರಾಜನು ನ್ಯಾಯತಪ್ಪಿ ಜನರನ್ನು ಹಿಂಸಿಸುವುದಕ್ಕೆ ಬಿಡುತ್ತಿರಲಿಲ್ಲ. ಆತನಿಗೆ ಆಗಾಗ ಬುದ್ಧಿ ಹೇಳು ತ್ತಿದ್ದನು. ಲಿಂಗರಾಜನಿಗೆ ಕ್ರಮೇಣ ಅಪ್ಪಣ್ಣ ದಿವಾನನು ತನ್ನ ಮೇಲೆ ಅಧಿಕಾರ ನಡೆಸುವುದು ಸರಿಬೀಳಲಿಲ್ಲ. ಆದುದರಿಂದ ಒಂದು ದಿವಸ ಅಪ್ಪಣ್ಣ ದಿವಾನನನ್ನು ಹಿಡಿತರಿಸಿ ಆತನಮೇಲೆ ರಾಜದ್ರೋಹದ ತಪ್ಪನ್ನು ಹೊರಿಸಿದನು.

ಅಪ್ಪಣ್ಣ ದಿವಾನನು ಆ ತಪ್ಪನ್ನು ಒಪ್ಪಿಕೊಳ್ಳದೆ ' ನಾನು ಒಂದು ತಪ್ಪನ್ನು ಮಾಡಿರುವೆನು ; ಅದು ನಿನ್ನಂತಹ ನೀಚನನ್ನು ರಾಜನನ್ನಾಗಿ ಮಾಡಿದುದು ' ಎಂದನು. ಆಗ ರಾಜನು ಇನ್ನೂ ಹೆಚ್ಚಾಗಿ ಸಿಟ್ಟಾಗಿ ಅಪ್ಪಣ್ಣನನ್ನೂ ಆತನ ಆಪ್ತರು ಕೆಲವರನ್ನೂ ಮಡಿಕೇರಿಯ ಬಳಿ ಸಿದ್ದಿ ಕಾಡಿನಲ್ಲಿ ಮರಗಳಿಗೆ ಕಟ್ಟಿಸಿ ಮೊಳೆ ಹೊಡಿಸಿ ತಾನು ಅವರ ಸಂಕಟವನ್ನು ನೋಡಿ ಸಂತೋಷಪಟ್ಟನು. ಮೊಳೆ ಹೊಡೆಸಿಕೊಂಡವರು ಹದಿನೈದು ದಿವಸ ಮರಗಳ ಮೇಲೆ ಜೀವದಿಂದಿದ್ದು ರಾಜನಿಗೆ ಶಾಪ ಹಾಕುತ್ತಾ ಸತ್ತರು. ಸತ್ತವರ ಕುಟುಂಬದವರನ್ನೂ ನೆಂಟರಿಷ್ಟ ರನ್ನೂ ಈ ಸಮಯದಲ್ಲಿ ರಾಜನು ಕೊಲ್ಲಿಸಿದನು.

## ಲೆಫ್ಟಿನೆಂಟ್ ಕೋನರನ ಕೊಡಗಿನ ಸರ್ವೆ

ಈ ಸಮಯದಲ್ಲಿ ಕಂಪೆನಿಯ ಅಧಿಕಾರಿಗಳು ಕೊಡಗಿನ ಭೂಸ್ವರೂಪ ವನ್ನೂ ವಿಸ್ತೀರ್ಣವನ್ನೂ ತಿಳಿಯುವುದಕ್ಕಾಗಿ ಲೆಫ್ಟನೆಂಟ್ ಕೋನರ್ ಎಂಬ ಉದ್ಯೋಗಸ್ಥನನ್ನು ಕೊಡಗನ್ನು ಸರ್ವೆ ಮಾಡಿ ಬರೆದಿಡುವುದಕ್ಕೆ ೧೮೧೭ರಲ್ಲಿ ಕಳುಹಿಸಿದರು. ಈತನು ಕೊಡಗಿನ ಸರ್ವೆಯನ್ನು ಮಾಡಿ ಕೊಡಗಿನ ಜನರ ಮತ್ತು ರಾಜರ ವಿಷಯವಾಗಿ ತಾನು ಆ ಕಾಲದಲ್ಲಿ ತಿಳಿದದ್ದನ್ನು ಬರೆದಿಟ್ಟನು. ಈ ವಿಷಯಗಳನ್ನು ಒಳಗೊಂಡಿರುವ ಪುಸ್ತಕಕ್ಕೆ ಇಂಗ್ಲಿಷ್‌ನಲ್ಲಿ ' ಕೂರ್ಗ್ ಸರ್ವೆ ' (Coorg Survey) ಎಂದು ಹೆಸರು.

## ಲಿಂಗರಾಜನ ರಾಜ್ಯಾಡಳಿತ

ಲಿಂಗರಾಜನು ತನ್ನ ಆಳ್ವಿಕೆಗೆ ವಿರೋಧವಾಗಿರುವವರು ಎಂದು ತನಗೆ ಸಂಶಯ ಬಂದವರನ್ನು ಕ್ರೂರವಾಗಿ ಕೊಲ್ಲಿಸುತ್ತಿದ್ದರೂ ಸಾಮಾನ್ಯ ರೈತರಿಗೆ ಹಿತಕರವಾದ ರೀತಿಯಲ್ಲಿಯೇ ಆಳಿದನು. ಆತನು ಕೃಷಿಮಾಡಲ್ಪಡುತ್ತಿದ್ದ ಎಲ್ಲಾ ಭೂಮಿಯನ್ನು ಲಿಂಗರಾಜನ ಕೋಲು ಎಂಬ ಅಳತೆಕೋಲಿನಿಂದ ಅಳತೆ ಮಾಡಿಸಿ ಮಣ್ಣಿನ ಗುಣಕ್ಕೆ ಸರಿಯಾಗಿ ಕಂದಾಯವನ್ನು ನಿಗದಿಮಾಡಿದನು. ಹೀಗೆ ನಿಗದಿಮಾಡಿದ್ದಕ್ಕೆ ಲಿಂಗರಾಜನ ಶಿಸ್ತು ಎಂದು ಕರೆಯುತ್ತಾರೆ. ಮಡಿ ಕೇರಿ ಅರಮನೆಯಲ್ಲಿ ಲಿಂಗರಾಜನು ಪ್ರತಿ ನಾಡಿನಲ್ಲಿಯೂ ಮಾಡಿಸಿದ ಭೂಮಿ ಅಳತೆ, ನಿಗದಿಮಾಡಿದ ಕಂದಾಯ ಇವುಗಳ ಪತ್ರಗಳ ಕಟ್ಟುಗಳು ಇವೆ.

ಈತನು ಅರಮನೆಯ ನೌಕರರು ರೈತರಿಂದ ಸಲ್ಲಬೇಕಾದ ಕಂದಾಯ ಮತ್ತು ಇತರ ತೆರಿಗೆಗಳು ಮತ್ತು ಬಿಟ್ಟೀ ಕೆಲಸಗಳು ಇವನ್ನು ತನ್ನ ಹುಕುಂಗಳಲ್ಲಿ ನಮೂದಿಸಿರುವಷ್ಟೇ ತೆಗೆದುಕೊಳ್ಳಬೇಕೆಂದೂ ರೈತರಿಗೆ ಅನಾವಶ್ಯಕವಾಗಿ ಕಷ್ಟ ಕೊಡಬಾರದೆಂದೂ ರೈತರು ಹೇಗೆ ಹೇಗೆ ನಡೆದುಕೊಳ್ಳಬೇಕೆಂದೂ ಮುಂತಾಗಿ ಅನೇಕ ವಿಷಯಗಳನ್ನು ಒಳಗೊಂಡ ಐವತ್ತೆರಡು ಹುಕುಂಗಳನ್ನು ಹೊರಡಿಸಿದನು. ಈ ಹುಕುಂಗಳನ್ನು ಅಥವಾ ಅಪ್ಪಣೆಗಳನ್ನು ಪ್ರತಿಯೊಂದು ನಾಡಿನ ಪಾರ್ಪತಿಗಾರರೂ ಶ್ಯಾನುಭೋಗರೂ ಆಚರಣೆಗೆ ತರಬೇಕಾಗಿದ್ದಿತು.

ಲಿಂಗರಾಜನು ೧೮೧೨ರಿಂದ ೧೮೧೪ರೊಳಗೆ ಮಡಿಕೇರಿಯಲ್ಲಿ ಈಗ ಇರುವ ಅರಮನೆಯನ್ನು ಕಟ್ಟಿಸಿದನು. ಪೇಟೆಯ ಉತ್ತರದ ಎತ್ತರದ ಮೈದಾನದಲ್ಲಿ ದೊಡ್ಡವೀರರಾಜನು ತನಗೋಸ್ಕರ ಸ್ವಲ್ಪ ಕಟ್ಟಿಸಿಟ್ಟಿದ್ದ ಗೋರಿಯನ್ನು ಪೂರೈಸಿ ಅಲ್ಲಿಯೇ ವೀರರಾಜನನ್ನೂ ಆತನ ಪ್ರೀತಿಯ ಹೆಂಡತಿಯನ್ನೂ ಸಮಾಧಿ ಮಾಡಿಸಿದನು.

ಮಡಿಕೇರಿಯಲ್ಲಿ ಈಗಿರುವ ಓಂಕಾರೇಶ್ವರ ದೇವಸ್ಥಾನವೂ ಲಿಂಗರಾಜನಿಂದಲೇ ೧೮೨೦ರಲ್ಲಿ ಕಟ್ಟಿ ಪೂರೈಸಲ್ಪಟ್ಟಿತು. ರಾಜನು ತಾನು ಅನ್ಯಾಯವಾಗಿ ಒಬ್ಬ ಸಾತ್ವಿಕ ಬ್ರಾಹ್ಮಣನನ್ನು ಕೊಲ್ಲಿಸಿದನೆಂದೂ ಆ ಬ್ರಾಹ್ಮಣನು ಬ್ರಹ್ಮರಾಕ್ಷಸನಾಗಿ ರಾಜನಿಗೆ ಉಪದ್ರವ ಕೊಟ್ಟನೆಂದೂ ಅದರ ನಿವಾರಣೆಗೆ ರಾಜನು ಆ ಬ್ರಾಹ್ಮಣನ ಮನೆಯಿದ್ದ ಸ್ಥಳದಲ್ಲೇ ದೇವಸ್ಥಾನವನ್ನು ಕಟ್ಟಿಸಿ ಕಾಶಿಯಿಂದ ಲಿಂಗ ತರಿಸಿ ಪ್ರತಿಷ್ಠಿಸಿದನೆಂದೂ ಅವನ ಕಾಲದ ಜನರಿಂದ ಹೇಳಲ್ಪಟ್ಟ ಕಥೆಯು ಈಗಲೂ ಜನರ ನೆನಪಿನಲ್ಲಿದೆ.

ಲಿಂಗರಾಜನು ೧೮೨೦ರಲ್ಲಿ ಕಾಲವಾದನು. ಈತನು ಸತ್ತ ಕೂಡಲೇ ಇವನ ಪ್ರೀತಿಯ ರಾಣಿಯು ವಜ್ರದ ಪುಡಿ ತಿಂದು ಸತ್ತಳು. ಇವರಿಬ್ಬರ ಶರೀರಗಳನ್ನು ಲಿಂಗರಾಜನ ಮಗ ಚಿಕ್ಕವೀರರಾಜನು ದೊಡ್ಡವೀರರಾಜನ ಗೋರಿಯ ಪಕ್ಕದಲ್ಲೇ ಹೂಳಿಸಿ ಅದೇ ರೀತಿಯಲ್ಲಿ ಇನ್ನೊಂದು ಗೋರಿಯನ್ನು ಕಟ್ಟಿಸಿದನು. ಇವೆರಡು ಗೋರಿಗಳನ್ನು ಈಗಲೂ ಮಡಿಕೇರಿಯಲ್ಲಿ ನೋಡಬಹುದು.

ಲಿಂಗರಾಜನು ಉತ್ತಮ ಗುರಿಗಾರನೂ ಕುದುರೆಸವಾರನೂ ಆಗಿದ್ದನು. ಆಗಿನ ಕಾಲದಲ್ಲಿ ಕೊಡಗಿನಲ್ಲಿ ಕಾಡುಗಳು ಹೆಚ್ಚಾಗಿದ್ದು ಕ್ರೂರ ಮೃಗಗಳ

ಉಪದ್ರವವೂ ಹೆಚ್ಚಾಗಿದ್ದಿತು. ಲಿಂಗರಾಜನು ಒಂದು ವರ್ಷದಲ್ಲಿರುವ ದಿವಸಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಹುಲಿಗಳನ್ನು ಬೇಟೆಯಾಡುತ್ತಿದ್ದನು ಮತ್ತು ಆನೆಗಳನ್ನು ಹಿಡಿಸುತ್ತಿದ್ದನು. ಇವನ ಕಾಲದಲ್ಲಿ ಅನೇಕ ಬ್ರಿಟಿಷ್ ಸೈನ್ಯಾಧಿಕಾರಿಗಳು ಕೊಡಗಿಗೆ ಬೇಟೆಯಾಡುವುದಕ್ಕೆ ಬಂದಿದ್ದರು.

ಲಿಂಗರಾಜನು ಕೆಲವು ವೇಳೆ ಬ್ರಿಟಿಷ್ ಸೈನ್ಯದ ಮೇಜರ್ ಜನರಲನ ಯೂನಿಫಾರಂ ಎಂದರೆ ಉಡಿಗೆಯನ್ನು ಧರಿಸಿಕೊಳ್ಳುತ್ತಿದ್ದನು. ಲಿಂಗರಾಜನು ಕನ್ನಡದಲ್ಲಿ ಕವಿತೆಗಳನ್ನು ರಚಿಸುತ್ತಿದ್ದನೆಂದು ಹೇಳುತ್ತಾರೆ.

## ಚಿಕ್ಕವೀರರಾಜೇಂದ್ರ ಒಡೆಯ (೧೮೨೦-೧೮೩೪)

ಲಿಂಗರಾಜನ ಅನಂತರ ಆತನ ಮಗ ವೀರರಾಜನು ೧೮೨೦ರಲ್ಲಿ ಪಟ್ಟಕ್ಕೆ ಬಂದನು. ಆತನು ಆಗ ಇಪ್ಪತ್ತು ವರ್ಷದ ಪ್ರಾಯದವನಾಗಿದ್ದನು. ಆತನು ಪಟ್ಟಕ್ಕೆ ಬಂದಕೂಡಲೇ ಆತನ ತಂದೆಯ ಕಾಲದಲ್ಲಿ ಆತನಿಗೆ ವಿರೋಧಮಾಡಿದವರನ್ನೆಲ್ಲಾ ಕೊಲ್ಲಿಸಿದನು. ಇವನ ಆಪ್ತರು ಅವಿವೇಕಿಗಳೂ ಇವನ ದುಷ್ಟವರ್ತನೆಗೆ ಪ್ರೋತ್ಸಾಹ ಕೊಡುವವರೂ ಆಗಿದ್ದರು. ಇವನ ತಂದೆಯ ಕಾಲದಲ್ಲಿ ಬಹಳ ಕೀಳುವೃತ್ತಿಯಲ್ಲಿದ್ದ ಕುಂಟಬಸವನೆಂಬವನು ಇವನ ಪರಮ ಆಪ್ತನಾಗಿ ಕೊನೆಗೆ ಇವನ ದಿವಾನನಾದನು. ವೀರರಾಜನ ಇನ್ನೊಬ್ಬ ದುಷ್ಟ ಆಪ್ತನು ಅಬ್ಬಾಸ್ ಆಲಿಯೆಂಬವನು. ವೀರರಾಜನ ಹಿಂಸೆಯಿಂದಾಗಿ ಚನ್ನವೀರನೆಂಬವನೊಬ್ಬನು ತನ್ನ ಹೆಂಡತಿಮಕ್ಕಳೊಡನೆ ಮೈಸೂರಿಗೆ ಓಡಿಹೋದನು. ಆದರೆ ವೀರರಾಜನು ಮೈಸೂರಿನ ರೆಸಿಡೆಂಟ್ ಕೋಲನಿಗೆ ಬರೆದು ಚನ್ನವೀರನನ್ನು ಹಿಂದಕ್ಕೆ ತರಿಸಿ ಆತನನ್ನೂ ಆತನ ಕುಟುಂಬದವರು ಇಪ್ಪತ್ತೆರಡು ಜನರನ್ನೂ ಕಾಂತುಮೂರ್ನಾಡಿಗೆ ಕಳುಹಿಸಿ ಅಲ್ಲಿ ಒಂದೇ ದಿವಸ ಅವರನ್ನು ಕೊಲ್ಲಿಸಿದನು. ಇದರನಂತರ ರಾಜನ ಕ್ರೂರತ್ವವು ಕಡಿಮೆಯಾಯಿತು.

ವೀರರಾಜನು ತನ್ನ ರಾಜ್ಯದ ಗುಟ್ಟು ಇಂಗ್ಲಿಷ್ ಅಧಿಕಾರಿಗಳಿಗಾಗಲೀ ಹೊರಪ್ರಾಂತಗಳ ಜನರಿಗಾಗಲೀ ತಿಳಿಯದ ಹಾಗೆ ಎಚ್ಚರ ವಹಿಸಿದ್ದನು. ಕೊಡಗಿನ ಗಡಿಗಳನ್ನು ಭದ್ರಪಡಿಸಿ ಉಕ್ಕಡಗಳಲ್ಲಿ ಬಲವಾದ ಪಹರೆಯನ್ನಿಟ್ಟಿದ್ದನು. ತನ್ನ ಪ್ರಜೆಗಳನ್ನು ಕೊಡಗಿನಿಂದ ಹೊರಗೆ ಹೋಗಲು ಬಿಡುತ್ತಿರಲಿಲ್ಲ.

ಈ ಸಮಯದಲ್ಲಿ ಕಂಪೆನಿಯ ಕಡೆಯಿಂದ ಮೈಸೂರಿನಿಂದ ಕಾಸಮೈಜರ್

ನೆಂಬ ಅಧಿಕಾರಿಯು ಕೊಡಗಿಗೆ ಬಂದನು. ಆತನಿಗೆ ಕೊಡಗಿನಲ್ಲಿ ವೀರರಾಜನು ಬಹಳ ಕಠಿಣವಾಗಿ ಆಳುತ್ತಿರುವನೆಂದೂ ಅನೇಕ ಜನರನ್ನು ಕೊಲ್ಲಿಸುತ್ತಿರುವ ನೆಂದೂ ವರ್ತಮಾನವು ತಲಪಿದ್ದಿತು. ವೀರರಾಜನು ಕಾಸಮ್ಯೈಜರನನ್ನು ಮರ್ಯಾದೆಯಿಂದ ಕಂಡನು. ಆದರೆ ಆತನಿಗೆ ಕೊಡಗಿನ ವಿಷಯಗಳು ಯಾವುವನ್ನೂ ತನ್ನ ಪ್ರಜೆಗಳು ತಿಳಿಸದ ಹಾಗೆ ಅವರಿಗೆ ಕಟ್ಟಪ್ಪಣೆಮಾಡಿದ್ದನು. ಆದುದರಿಂದ ಕಾಸಮ್ಯೈಜರನು ಮೈಸೂರಿಗೆ ಹಿಂದಿರುಗಿ ವೀರರಾಜನು ಬ್ರಿಟಿಷರ ಸರ್ಕಾರವನ್ನು ಮೆಚ್ಚಿಸುವುದಕ್ಕೆ ಆಸೆಯುಳ್ಳವನಾಗಿದ್ದಾನೆ, ಬುದ್ಧಿವಂತನಾಗಿ ದ್ದಾನೆ, ಚಿಕ್ಕ ಪ್ರಾಯದವನಾಗಿರುವುದರಿಂದ ಮುಂದೆ ಚೆನ್ನಾಗಿ ಆಳುವ ಭರವಸೆಯಿದೆಯೆಂದು ತನ್ನ ಮೇಲಧಿಕಾರಿಗಳಿಗೆ ಬರೆದನು.

ಆದರೆ ಕಾಸಮ್ಯೈಜರನು ಮೈಸೂರಿಗೆ ಹಿಂದಿರುಗಿದ ಕೂಡಲೇ ಕೊಡಗಿನಲ್ಲಿ ರಾಜರು ಅನೇಕರನ್ನು ಕೊಲ್ಲಿಸಿದನೆಂಬ ಪುಕಾರು ಮೈಸೂರಿನ ರೆಸಿಡೆಂಟನಿಗೆ ತಲಪಿತು. ರೆಸಿಡೆಂಟನು ವೀರರಾಜನು ಯಾರನ್ನು ಕೊಲ್ಲಿಸಿದನೆಂದೂ ಅವುಗಳ ವಿವರಗಳನ್ನು ಕೊಡಬೇಕೆಂದೂ ವೀರರಾಜನಿಗೆ ಪತ್ರ ಬರೆದನು. ವೀರರಾಜನು ತಾನು ಸ್ವತಂತ್ರನೆಂದೂ ಇಂಗ್ಲಿಷರಿಗೆ ತನ್ನನ್ನು ಕೇಳಲು ಅಧಿಕಾರವಿಲ್ಲ ವೆಂದೂ ಇಂಗ್ಲಿಷರು ಬರೆದ ಪತ್ರಕ್ಕೆ ಉತ್ತರವನ್ನು ಕೊಡದೆ ಇದ್ದನು. ಈ ಸಮಯದಲ್ಲಿ ವೀರರಾಜನ ತಂಗಿ ದೇವಮ್ಮಾಜಿಯ ಗಂಡ ಚನ್ನಬಸಪ್ಪನೆಂಬ ವನು ತನ್ನ ಮೇಲೆ ಒಳಸಂಚು ಮಾಡುತ್ತಿರುವನೆಂಬ ಸಂಶಯವು ವೀರರಾಜ ನಿಗೆ ಬಂತು. ಚನ್ನಬಸಪ್ಪನು ಹುಟ್ಟಿನಲ್ಲಿ ಕೊಡಗನು. ಲಿಂಗರಾಜನು ಅವನಿಗೆ ಲಿಂಗಧಾರಣೆ ಮಾಡಿಸಿ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿಸಿದ್ದನು. ಮತ್ತು ಆತನಿಗೆ ಅಪ್ಪಂಗಳ ಜಹಗೀರನ್ನು ಕೊಡಿಸಿದ್ದನು. ಚನ್ನಬಸಪ್ಪನು ರಾಜನು ತನ್ನ ಮೇಲೆ ಸಂಶಯಪಟ್ಟಿರುವುದನ್ನು ತಿಳಿದು ತನ್ನ ಪತ್ನಿ ಮತ್ತು ಪರಿವಾರದವರೊಡನೆ ೧೮೩೨ನೇ ಇಸವಿ ಸೆಪ್ಟಂಬರಿನಲ್ಲಿ ರಾತ್ರಿಯಲ್ಲಿಯೇ ಅಪ್ಪಂಗಳದಿಂದ ಹೊರಟು ಬೆಳಗಾಗುವಷ್ಟರಲ್ಲಿ ಮೈಸೂರು ಗಡಿಯನ್ನು ತಲಪಿ ದನು. ಅಲ್ಲಿದ್ದ ಪಹರೆಯವರನ್ನು ಗುಂಡುಹೊಡೆದು ಕೊಂದುಹಾಕಿ ಮೈಸೂರಿಗೆ ಹೋಗಿ ರೆಸಿಡೆಂಟನ ಆಶ್ರಯವನ್ನು ಪಡೆದನು. ಅಲ್ಲಿ ದೇವಮ್ಮಾಜಿಯು ವೀರರಾಜನ ಮೇಲೆ ಅನೇಕ ಅಪವಾದಗಳನ್ನು ಹೊರಿಸಿದಳು.

ಚನ್ನಬಸಪ್ಪನೂ ದೇವಮ್ಮಾಜಿಯೂ ತನ್ನ ರಾಜ್ಯದಿಂದ ತಪ್ಪಿಸಿಕೊಂಡು

ಹೋಗಿ ಬ್ರಿಟಿಷ್ ರೆಸಿಡೆಂಟನಲ್ಲಿ ಆಶ್ರಯ ಪಡೆದು ತನ್ನ ಮೇಲೆ ಅಪವಾದ ಗಳನ್ನು ಹೊರಿಸಿದುದಕ್ಕೆ ವೀರರಾಜನಿಗೆ ಸಿಟ್ಟು ಬಂತು. ಅವರನ್ನು ಕೊಡಗಿಗೆ ಹಿಂದಕ್ಕೆ ಕಳುಹಿಸಬೇಕೆಂದು ಮೈಸೂರಿನಲ್ಲಿದ್ದ ಬ್ರಿಟಿಷ್ ರೆಸಿಡೆಂಟನಿಗೆ ಕಾಗದ ಬರೆದನು. ಆದರೆ ಬ್ರಿಟಿಷ್ ರೆಸಿಡೆಂಟನು ರಾಜನ ಕೋರಿಕೆಯನ್ನು ಮನ್ನಿಸ ಲಿಲ್ಲ. ಅದರ ಬದಲಾಗಿ ಕೊಡಗಿನಲ್ಲಿ ವೀರರಾಜನ ಕೊಲೆ ಹಿಂಸೆಗಳನ್ನು ವಿಚಾರಿಸುವುದಕ್ಕೆ ಕಾಸಮ್ಯೆಜರನನ್ನು ತಿರುಗಿ ಕೊಡಗಿಗೆ ಕಳುಹಿಸಿದನು. ಇದ ರಿಂದ ರಾಜನಿಗೆ ಸಿಟ್ಟು ಬಂದಿತು. ರಾಜನು ತಾನು ಸ್ವತಂತ್ರ ರಾಜನೆಂದೂ ತನ್ನ ಇಷ್ಟ ಪ್ರಕಾರ ನಡೆಯುವೆನೆಂದೂ ಕಾಸಮ್ಯೆಜರನಿಗೆ ಹೇಳಿದನು.

ವೀರರಾಜನು ಇಂಗ್ಲಿಷರಿಗೆ ಕೊಡಗನ್ನು ಜಯಿಸಲು ಸಾಧ್ಯವಿಲ್ಲ ವೆಂತಲೂ ತಾನು ಇಂಗ್ಲಿಷರನ್ನು ಯುದ್ಧದಲ್ಲಿ ಸೋಲಿಸಬಲ್ಲೆನೆಂತಲೂ ನಂಬಿ ದ್ದನು. ಅವನ ಕೆಲವು ಅವಿವೇಕಿಗಳಾದ ಸ್ನೇಹಿತರು ಅವನ ಅಭಿಪ್ರಾಯವನ್ನು ಬಲಪಡಿಸಿದ್ದರು. ಆದುದರಿಂದ ಅವನು ಇಂಗ್ಲಿಷರೊಡನೆ ಯಾವ ಒಡಂಬಡಿ ಕೆಗೂ ಬರದೆ ಯುದ್ಧದ ಸಿದ್ಧತೆಗಳನ್ನು ಮಾಡಿದನು. ಮದರಾಸಿನ ಗವರ್ನರ ನಿಗೂ, ಇಂಡಿಯಾ ದೇಶದ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕ ನಿಗೂ ಅಪಮಾನಕರವಾದ ಪತ್ರಗಳನ್ನು ಬರೆದನು. ಕಂಪೆನಿ ಸರ್ಕಾರವನ್ನು ದೂಷಿಸಿ ಇಸ್ತಿಹಾರಗಳನ್ನು ಹೊರಡಿಸಿದನು. ಆಗ ಕಂಪೆನಿ ಸರ್ಕಾರವು ವೀರರಾಜನನ್ನು ಸಿಂಹಾಸನದಿಂದ ತಳ್ಳಿ ಕೊಡಗನ್ನು ಸ್ವಾಧೀನಪಡಿಸಿಕೊಳ್ಳುವ ನಿಶ್ಚಯವನ್ನು ಮಾಡಿತು.

ದೊಡ್ಡವೀರರಾಜನ ಕಾಲದಿಂದಲೇ ಇಂಗ್ಲಿಷ್ ಸೈನ್ಯಾಧಿಕಾರಿಗಳು ಆಗಾಗ ಕೊಡಗಿಗೆ ಬೇಟೆಯಾಡುವುದಕ್ಕೆ ಬರುತ್ತಿದ್ದರು. ಅವರಿಗೆ ಇಲ್ಲಿನ ಶೀತ ಹವೆಯು ಬಹಳ ಸುಖಕರವಾಗಿ ಕಂಡಿತು. ಆದುದರಿಂದ ಈಗ ಕೊಡಗನ್ನು ವಶಪಡಿಸಿಕೊಳ್ಳುವುದಕ್ಕೆ ಅನಾಯಾಸವಾಗಿ ಒಂದು ಸಂದರ್ಭವು ದೊರೆತದ್ದು ಕಂಪೆನಿಯ ಅಧಿಕಾರಿಗಳಿಗೆ ಬಹಳ ಸಂತೋಷವನ್ನುಂಟುಮಾಡಿತು.

ಕೊಡಗನ್ನು ಹಿಡಿದುಕೊಳ್ಳಬೇಕೆಂದು ೧೮೩೪ರಲ್ಲಿ ಲಾರ್ಡ್ ವಿಲಿಯಂ ಬೆಂಟಿಂಕನು ಅಪ್ಪಣೆ ಮಾಡಿದ ಕೂಡಲೇ ಕೊಡಗಿನ ನಾಲ್ಕು ದಿಕ್ಕುಗಳಿಂದ ಬ್ರಿಟಿಷ್ ಸೈನ್ಯಗಳು ಕೊಡಗನ್ನು ಮುತ್ತಲು ಬಂದವು. ಮುಖ್ಯ ಸೈನ್ಯಾಧಿ ಕಾರಿಯಾಗಿದ್ದ ಜನರಲ್ ಫ್ರೇಸರನು ಪಿರಿಯಾಪಟ್ಟಣದ ಮಾರ್ಗವಾಗಿ

ಕೊಡಗಿಗೆ ಬಂದನು. ಕೊಡಗಿನ ವೀರರು ಕೊಡಗಿನ ಗಡಿಗಳಲ್ಲಿದ್ದ ಇಕ್ಕಟ್ಟಾದ ದಾರಿಗಳನ್ನು ಕಟ್ಟಿ, ಉತ್ತರ, ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಿಂದ ಬಂದ ಸೈನ್ಯಗಳನ್ನು ತಡೆದು ಹಿಮ್ಮೆಟ್ಟಿಸಿದರು. ಆದರೆ ಇಷ್ಟರಲ್ಲಿ ನಾಲ್ಕುನಾಡು ಅರಮನೆಗೆ ಪತ್ನೀಸಮೇತನಾಗಿ ಹೋಗಿದ್ದ ವೀರರಾಜನು ತಾನು ಯುದ್ಧವನ್ನು ಮುಂದುವರಿಸಿದರೆ ಕೊನೆಗೆ ತಾನು ತನ್ನ ರಾಜ್ಯವನ್ನು ಕಳೆದುಕೊಳ್ಳಬೇಕಾಗ ಬಹುದೆಂದು ಹೆದರಿ, ತನ್ನ ದಿವಾನರ ಮಾತಿನ ಮೇರೆ ಬ್ರಿಟಿಷರಿಗೆ ಶರಣಾಗತ ನಾಗುವೆನೆಂದು ಹೇಳಿಕಳುಹಿಸಿದನು. ಅವನ ಅಪ್ಪಣೆ ಮೇರೆ ೧೮೩೪ನೆ ಇಸವಿ ಏಪ್ರಿಲ್ ೯ರಲ್ಲಿ ಅಪ್ಪಾರಂಡ ಬೋಪು ದಿವಾನನು ೬೦೦ ಜನರ ಸಮೇತ ಶರಣಾಗತಿಯ ಗುರುತಾದ ಬಿಳಿ ಬಾವುಟವನ್ನು ಹಿಡಿದುಕೊಂಡು ಕುಶಾಲ್ ನಗರಕ್ಕೆ ಹೋಗಿ ಅಲ್ಲಿ ಜನರಲ್ ಫ್ರೇಸರನನ್ನು ಎದುರುಗೊಂಡು ವೀರರಾಜನು ಬ್ರಿಟಿಷರಿಗೆ ಶರಣುಬಂದಿರುವನೆಂದೂ ಯುದ್ಧ ನಿಲ್ಲಿಸಿರುವನೆಂದೂ ಹೇಳಿದನು. ಅನಂತರ ಫ್ರೇಸರನನ್ನು ಆತನ ಸೈನ್ಯ ಸಮೇತ ಮಡಿಕೇರಿಗೆ ಕರೆದುಕೊಂಡು ಬಂದನು. ಏಪ್ರಿಲ್ ೧೧ರಲ್ಲಿ ರಾಜರ ಧ್ವಜವು ಕೆಳಗಿಳಿಸಲ್ಪಟ್ಟು ಬ್ರಿಟಿಷರ ಧ್ವಜವು ಕೋಟೆಯ ಮೇಲೆ ಏರಿಸಲ್ಪಟ್ಟಿತು.

ಜನರಲ್ ಫ್ರೇಸರನು ಕೊಡಗನ್ನು ಹಿಡಿದ ಕೂಡಲೇ ರಾಜನನ್ನು ಸಿಂಹಾಸನದಿಂದ ತಳ್ಳಿ ಕಂಪೆನಿ ಸರ್ಕಾರವೇ ಕೊಡಗನ್ನು ಆಳಬೇಕೆಂದು ನಿಶ್ಚಯಿಸಿದನು. ಕೊಡಗು, ಮೈಸೂರು, ಮಲಬಾರು, ದಕ್ಷಿಣಕನ್ನಡ ಜಿಲ್ಲೆಗಳ ಮಧ್ಯದಲ್ಲಿದ್ದು ಬೆಟ್ಟಸೀಮೆಯಾಗಿದ್ದುದರಿಂದ ಇಲ್ಲಿ ತಮ್ಮ ಒಂದು ಸೈನ್ಯವನ್ನು ಇಟ್ಟರೆ ಸುತ್ತುಮುತ್ತಲಿನ ಜಿಲ್ಲೆಗಳನ್ನು ಅಂಕೆಯಲ್ಲಿಡಬಹುದೆಂದು ಆತನು ಯೋಚಿಸಿದನು. ಇಲ್ಲಿನ ಹವೆಯು ಐರೋಪ್ಯರಿಗೆ ಹಿತಕರವಾಗಿದ್ದಿತು. ಈ ಕಾರಣಗಳಿಂದ ಜನರಲ್ ಫ್ರೇಸರನು ಕೊಡಗನ್ನು ಹಾಲೇರಿ ವಂಶದವರಿಗೆ ಕೊಡದೆ ತಾನೇ ಕಂಪೆನಿಯ ಹೆಸರಿನಲ್ಲಿ ಆಳತೊಡಗಿದನು. ತೋರಿಕೆಗೆ ಕೊಡಗನ್ನು ಹಿಡಿದ ಕೆಲವು ದಿವಸಗಳಲ್ಲೇ ಕೊಡಗಿನ ಮುಖ್ಯಸ್ಥರ ಸಭೆಯನ್ನು ಈಗಿನ ಸೆಂಟ್ರಲ್ ಹೈಸ್ಕೂಲಿನ ಆವರಣದಲ್ಲಿ ಸೇರಿಸಿ ಅವರಿಂದ ಕೊಡಗನ್ನು ಇನ್ನು ಮುಂದೆ ಬ್ರಿಟಿಷರೇ ಆಳಬೇಕೆಂಬ ತೀರ್ಮಾನವನ್ನು ಮಾಡಿಸಿದನು. ಅಂದಿನಿಂದ ಕೊಡಗಿನಲ್ಲಿ ಬ್ರಿಟಿಷರ ಆಳ್ವಿಕೆಯು ಪ್ರಾರಂಭವಾಯಿತು. ವೀರ ರಾಜನನ್ನು ಕುಟುಂಬ ಸಮೇತ ರಾಜಕೈದಿಯಾಗಿ ಕಾಶಿಗೆ ಕಳುಹಿಸಿದರು.

ವೀರರಾಜನೊಡನೆ ಕಾಶಿಗೆ ಸುಮಾರು ಇನ್ನೂರೈವತ್ತು ಜನರು ಅವನ ಆಪ್ತರೂ ರಾಜಭಕ್ತರೂ ಹೋದರು. ಅವರಲ್ಲಿ ಸಿರಕಾರ್ಯಕಾರ ಬಿದ್ದಂಡ ಸೋಮಯ್ಯನೂ ಹೆಬ್ಬಾಲೆ ಕಾಶಿ ತಿಮ್ಮಣ್ಣಗೌಡನೂ ಮುಖ್ಯಸ್ಥರು.

ವೀರರಾಜನು ಕಾಶಿಯಲ್ಲಿ ತನ್ನ ಹೆಂಡತಿಮಕ್ಕಳೊಡನೆ ಶ್ರೀಮಂತ ಜೀವನವನ್ನು ಮಾಡುತ್ತಿದ್ದನು. ಈತನು ೧೮೫೨ರಲ್ಲಿ ತನ್ನ ಪ್ರೀತಿಯ ಮಗಳು ಗೌರಮ್ಮನನ್ನು ಕರೆದುಕೊಂಡು ಇಂಗ್ಲೆಂಡಿಗೆ ಹೋದನು. ಅಲ್ಲಿ ವಿಕ್ಟೋರಿಯಾ ಮಹಾರಾಣಿಯ ಧರ್ಮಮಾತೃತ್ವದಲ್ಲಿ ಗೌರಮ್ಮನಿಗೆ ಕ್ರೈಸ್ತಮತ ದೀಕ್ಷೆಯನ್ನು ಕೊಡಿಸಿದನು. ಈಕೆಗೆ ವಿಕ್ಟೋರಿಯಾ ಗೌರಮ್ಮನೆಂದು ಹೆಸರಾಯಿತು.

ವೀರರಾಜನು ೧೮೬೦ರಲ್ಲಿ ಲಂಡನ್ ಪಟ್ಟಣದಲ್ಲಿ ಕಾಲವಾದನು. ಆತನ ದೇಹವನ್ನು ಮೊದಲು ಲಂಡನ್ನಿನ ಕೆನ್ಸಾಲ್ ಗ್ರೀನ್ ಸ್ಮಶಾನದಲ್ಲಿ ಹೂತು ಮರುವರ್ಷ ತಿರುಗಿ ಕಾಶಿಗೆ ತಂದು ಅಲ್ಲಿ ಹೂಳಿದರು.

ವಿಕ್ಟೋರಿಯಾ ಗೌರಮ್ಮನು ಒಬ್ಬ ಬ್ರಿಟಿಷ್ ಸೈನ್ಯಾಧಿಕಾರಿಯನ್ನು ಮದುವೆಯಾಗಿ ಚಿಕ್ಕ ಪ್ರಾಯದಲ್ಲೇ ಸತ್ತಳು. ಈಗ ಕಾಶಿಯಲ್ಲಿ ವೀರರಾಜನ ಪುತ್ರ ಸೋಮಶೇಖರರಾಜೇಂದ್ರ ಒಡೆಯನ ಮಗ ಚಂದ್ರಶೇಖರರಾಜೇಂದ್ರ ಒಡೆಯನೆಂಬವನು ಇರುವನು. ಈತನಿಗೆ ಸರಕಾರದಿಂದ ಐವತ್ತು ರೂಪಾಯಿಗಳ ರಾಜಕೀಯ ವೇತನವು ಕೊಡಲ್ಪಡುವುದು. ಕಾಶಿಯಲ್ಲಿ ಈತನ ಮನೆಗೆ ‘ಕೊಡಗಿನ ಮನೆ’ (Coorg House) ಎಂದು ಹೆಸರು.

## ಕೊಡಗಿನಲ್ಲಿ ಬ್ರಿಟಿಷರ ಆಳ್ವಿಕೆ (೧೮೩೪–೧೯೪೭)

## ಸ್ವತಂತ್ರಯುಗದಲ್ಲಿ ಕೊಡಗು (೧೯೪೭)

ಕ್ರಿ.ಶ ೧೮೩೪ರಲ್ಲಿ ಕೊಡಗಿನ ಕೊನೆಯ ರಾಜನಾದ ಚಿಕ್ಕವೀರರಾಜನನ್ನು ರಾಜಪದವಿಯಿಂದ ಕಿತ್ತುಹಾಕಿದಮೇಲೆ ಬ್ರಿಟಿಷರು ತಾವೇ ಕೊಡಗನ್ನು ಆಳಲಾರಂಭಿಸಿದರು. ಕೊಡಗಿನ ಹವೆಯು ಅವರಿಗೆ ಹಿತಕರವಾಗಿದ್ದುದರಿಂದಲೂ ಕೊಡಗನ್ನು ತಮ್ಮದಾಗಿ ಮಾಡಿಕೊಂಡರೆ ನೆರೆಜಿಲ್ಲೆಗಳಲ್ಲಿ ಶಾಂತಿಯನ್ನು ಸ್ಥಾಪಿಸುವುದಕ್ಕೆ ಅನುಕೂಲವಾಗುವುದರಿಂದಲೂ ಅವರು ಕೊಡಗನ್ನು ಹಿಂದಿನ ರಾಜವಂಶದವರಿಗೆ ಯಾರಿಗೂ ಕೊಡದೆ ತಾವೇ ಆಳಲಾರಂಭಿಸಿದರು.

ಕೊಡಗಿನ ಆಡಳಿತಾಧಿಕಾರಿಗೆ ಆಗ ಸೂಪರಿಂಟೆಂಡೆಂಟ್ ಎಂದು

ಹೆಸರಿದ್ದಿತು. ಈತನು ಮೈಸೂರು ರಾಜ್ಯದ ಆಡಳಿತೆಯನ್ನು ಆಗ ವಹಿಸಿದ್ದ ಕಮಿಷನರ್ ಎಂಬ ಅಧಿಕಾರಿಗಳ ಮೇಲ್ವಿಚಾರಕ್ಕೆ ಒಳಪಟ್ಟಿದ್ದನು. ಕೊಡಗಿನ ಮೊದಲನೆಯ ಸೂಪರಿಂಟೆಂಡೆಂಟನು ಕ್ಯಾಪ್ಟನ್ ಲೀಹಾರ್ಡಿ ಎಂಬವನು.

ರಾಜರ ಕಾಲದಲ್ಲಿ ಅಪರಂಪರನೆಂಬ ಒಬ್ಬನು ಮೊದಲು ಸನ್ಯಾಸಿಯಾಗಿ ಕೊಡಗಿನಲ್ಲಿ ಒಂದೆರಡು ಸಾರಿ ಕಾಣಿಸಿಕೊಂಡು ರಾಜನು ಪದಚ್ಯುತನಾದ ಮೇಲೆ ೧೮೩೭ರಲ್ಲಿ ತಾನು ಲಿಂಗರಾಜನ ಅಣ್ಣ ಅಪ್ಪಾಜಿರಾಜನ ಹಿರಿಯ ಮಗ ವೀರಪ್ಪರಾಜನು, ತಾನು ಕೊಡಗಿನ ರಾಜ್ಯಕ್ಕೆ ಹಕ್ಕುದಾರನು, ಎಂದು ಸಾರುತ್ತಾ ಕೊಡಲಿಪೇಟೆಗಾಗಿ ಕೊಡಗನ್ನು ಪ್ರವೇಶಿಸಿದನು. ಕೆಲವು ನೂರು ಜನರು ಇವನನ್ನು ಹಿಂಬಾಲಿಸಿದರು. ಆದರೆ ಇವನು ಮಡಿಕೇರಿಯನ್ನು ತಲಪುವ ಮೊದಲೇ ಸೆರೆಹಿಡಿಯಲ್ಪಟ್ಟು ಬೆಂಗಳೂರಿಗೆ ಸಾಗಿಸಲ್ಪಟ್ಟನು.

ತಿರುಗಿ ೧೮೩೭ರಲ್ಲಿ ಕಲ್ಯಾಣಸ್ವಾಮಿಯೆಂಬವನು ತಾನು ಅಪ್ಪಾಜಿ ರಾಜನ ಎರಡನೇ ಮಗ ನಂಜುಂಡರಸನೆಂದು ಹೇಳಿಕೊಂಡು ಕೊಡಗಿನಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಲು ಯತ್ನಿಸಿದನು. ಈತನಿಗೆ ಕೊಡಗಿನಲ್ಲೂ ದಕ್ಷಿಣ ಕನ್ನಡ ಜಿಲ್ಲೆಯ ಪಂಜೆ ಬೆಳ್ಳಾರೆ ಸೀಮೆಗಳಲ್ಲೂ ಅನೇಕ ಹಿಂಬಾಲಕರು ಇದ್ದರು. ಇವನು ಬಿಸಲೆಘಾಟಿಗಾಗಿ ಬೆಳ್ಳಾರೆಗೆ ಹೋಗಿ ಅಲ್ಲಿನ ಕೋಟೆ ಯನ್ನು ವಶಪಡಿಸಿಕೊಂಡು ಮಂಗಳೂರಿಗೆ ಹೋಗಿ ತಾಲೋಕು ಕಚೇರಿಯಲ್ಲಿದ್ದ ಖಜಾನೆಯನ್ನು ಒಡೆದು ಹಣವನ್ನು ಸುಲಿಗೆಮಾಡಿದನು. ಆದರೆ ಅಷ್ಟರಲ್ಲಿ ತಲಚೇರಿಯಿಂದ ಇಂಗ್ಲಿಷ ಸೈನ್ಯವು ಬರಲು ಕಲ್ಯಾಣಸ್ವಾಮಿಯು ಬೈತೂರಿಗೆ ಓಡಿಹೋದನು. ಅಲ್ಲಿ ಅವನನ್ನು ಹಿಡಿದು ವಿಚಾರಣೆ ಮಾಡಿ ಮಂಗಳೂರಿನ ಹತ್ತಿರ ಅವನನ್ನು ಗಲ್ಲಿಗೇರಿಸಿದರು.

ಕೊಡಗಿನಲ್ಲಿ ಕಲ್ಯಾಣಪ್ಪನ ಪಕ್ಷದ ಜನರು ಮಡಿಕೇರಿಯನ್ನು ಹಿಡಿದು ಕೊಳ್ಳಬೇಕೆಂದು ಕೊಡಗಿನ ಉತ್ತರ ಭಾಗದಿಂದ ಬಂದರು. ಆದರೆ ಅವರು ಯೋಚಿಸಿದಂತೆ ವೀರರಾಜಪೇಟೆ ನಾಡಿನವರೂ ಪಾಡಿನಾಲ್ಕು ನಾಡಿನವರೂ ಅವರ ಸಹಾಯಕ್ಕೆ ಬಾರದಿದ್ದುದರಿಂದ ಅವರು ಬ್ರಿಟಿಷ್ ಅಧಿಕಾರಿಗಳಿಗೆ ಶರಣಾಗತರಾದರು.

ಅಪ್ಪಾರಂಡ ಬೋಪು ದಿವಾನನು ತನ್ನ ಆಪ್ತಜನರ ದಂಡನ್ನು ತೆಗೆದು ಕೊಂಡು ಘಟ್ಟವನ್ನಿಳಿದು ಸುಳ್ಯ, ಪಂಜೆ ಸೀಮೆಗಳ ದಂಗೆಗಾರರನ್ನು ಅಡಗಿಸಿದನು.

ಕ್ರಿ.ಶ. ೧೮೩೭ರಲ್ಲಿ ಕಂಪೆನಿ ಸರ್ಕಾರದವರು ಕೊಡಗಿನಲ್ಲಿದ್ದ ಜಮ್ಮದಾಳು ಗಳ ಗುಲಾಮಗಿರಿ ಪದ್ಧತಿಯನ್ನು ತೆಗೆದುಹಾಕಿ ಗುಲಾಮರಿಗೆ ಸ್ವಾತಂತ್ರ್ಯ ವನ್ನು ಕೊಟ್ಟರು. ಕೊಡಗಿನಲ್ಲಿ ಗುಲಾಮಗಿರಿಯಿದ್ದರೂ ಗುಲಾಮರನ್ನು ಯಜಮಾನರು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು.

ರಾಜರ ಕಾಲದಲ್ಲಿ ಸರಕಾರಕ್ಕೆ ಕಂದಾಯವಾಗಿ ಹಣ ಕೊಡುವುದರ ಜತೆಗೆ ಧೂಳಿಬತ್ತವೆಂದು ಬತ್ತವನ್ನು ಕೊಡುವ ಪದ್ಧತಿಯಿತ್ತು. ಬ್ರಿಟಿಷರ ಕಾಲದಲ್ಲಿ ಧೂಳಿ ಬತ್ತವೆಂಬ ಬತ್ತ ಕೊಡುವ ಪದ್ಧತಿಯನ್ನು ನಿಲ್ಲಿಸಿದರು. ೧೮೫೭ರಲ್ಲಿ ಉತ್ತರ ಹಿಂದೂಸ್ಥಾನದಲ್ಲಿ ದೇಶೀಯ ಸೈನಿಕರು ಇಂಗ್ಲಿಷ್ ಸರ್ಕಾರದ ಮೇಲೆ ದಂಗೆಯೆದ್ದಾಗ ಮೈಸೂರಿನ ಮುಸಲ್ಮಾನರು ದಂಗೆಯೇಳ ಬಹುದೆಂಬ ಹೆದರಿಕೆಯು ಬ್ರಿಟಿಷ್ ಅಧಿಕಾರಿಗಳಿಗಿದ್ದಿತು. ಆಗ ಕಬ್ಬನ್ ದೊರೆಯು ಕೊಡಗರನ್ನು ಪಿರಿಯಾಪಟ್ಟಣದಲ್ಲಿ ಗಡಿಪಹರೆಗೆ ಇಟ್ಟಿದ್ದನು. ಕೊಡಗರ ರಾಜಭಕ್ತಿಯನ್ನು ಮೆಚ್ಚಿ ಕಬ್ಬನ್ ದೊರೆಯು ೧೮೬೧ರಲ್ಲಿ ಅವರಿಗೆ ಆಯುಧಗಳ ಕಾನೂನು ಹತ್ತುವುದಿಲ್ಲವೆಂದು ಅಪ್ಪಣೆ ಕೊಟ್ಟನು.

ಕ್ರಿ.ಶ. ೧೮೬೩ರಲ್ಲಿ ಮೈಸೂರಿನ ಆಡಳಿತ ಕ್ಷೇತ್ರಗಳ ಪುನರ್ವ್ಯವಸ್ಥೆ ಮಾಡುವಾಗ ಕೊಡಗನ್ನು ಅಷ್ಟಗ್ರಾಮ ವಿಭಾಗ ಅಥವಾ ಹಾಸನ ವಿಭಾಗಕ್ಕೆ ಸೇರಿಸಬೇಕೆಂದು ಮೈಸೂರಿನ ಆಡಳಿತವನ್ನು ನಡೆಸುತ್ತಿದ್ದ ಬ್ರಿಟಿಷ್ ಅಧಿಕಾರಿ ಗಳು ಆಲೋಚಿಸಿದರು. ಆದರೆ ಆಗ ಕೊಡಗಿನ ಎಲ್ಲಾ ಕೋಮುಗಳ ಮುಖಂಡರು ಈ ಏರ್ಪಾಡನ್ನು ವಿರೋಧಿಸಿ ಸರ್ಕಾರಕ್ಕೆ ಅರ್ಜಿಯನ್ನು ಬರೆದು ಕೊಂಡರು. ಕೊಡಗಿನ ಜನರ ಒಮ್ಮತವಾದ ವಿರೋಧವನ್ನು ತಿಳಿದು ಬ್ರಿಟಿಷ್ ಅಧಿಕಾರಿಗಳು ಕೊಡಗನ್ನು ಹಾಸನ ವಿಭಾಗಕ್ಕೆ ಸೇರಿಸಲಿಲ್ಲ. ೧೮೮೧ರಲ್ಲಿ ಮೈಸೂರು ದೇಶದ ಆಡಳಿತವನ್ನು ಬ್ರಿಟಿಷ್ ಅಧಿಕಾರಿಗಳು ತಿರುಗಿ ಮೈಸೂರು ರಾಜಮನೆತನದವರಿಗೆ ವಹಿಸಿಬಿಟ್ಟರು. ಆ ಸಮಯದಲ್ಲಿ ಕಾಫಿ ವ್ಯವಸಾಯಕ್ಕೆ ಹೆಸರಾದ ಕೊಡಗು, ವೈನಾಡು, ನೀಲಗಿರಿ ಸೀಮೆಗಳನ್ನು ಒಂದುಗೂಡಿಸಿ ಸೌತ್ ಇಂಡಿಯನ್ ಕಾಫಿ ಡಿಸ್ಟ್ರಿಕ್ಟ್ (ದಕ್ಷಿಣ ಹಿಂದೂಸ್ಥಾನದ ಕಾಫಿ ಜಿಲ್ಲೆ) ಎಂಬ ಆಡಳಿತಕ್ಷೇತ್ರ ಮಾಡಬೇಕೆಂದು ಈ ಸ್ಥಳಗಳ ಐರೋಪ್ಯ ಕಾಫಿ ತೋಟಗಳ ಒಡೆಯರು ಗವರ್ನರ್ ಜನರಲನಿಗೆ ಮನವಿಮಾಡಿಕೊಂಡರು. ಆಗಲೂ ಇಲ್ಲಿನ ದೇಶೀಯರು ಈ ಏರ್ಪಾಡಿಗೆ ಪ್ರತಿಭಟಿಸಿದರು.

೧೮೮೧ರಿಂದ ಮೈಸೂರಿನ ರೆಸಿಡೆಂಟನಾಗಿ ನೇಮಕವಾದ ಅಧಿಕಾರಿಯು ಕೊಡಗಿನ ಚೀಫ್ ಕಮಿಷನರ್ ಎಂಬ ಹೆಸರಿನಿಂದ ಬೆಂಗಳೂರಿನಲ್ಲಿದ್ದು ಕೊಡಗಿನ ಆಡಳಿತದ ಮೇಲ್ವಿಚಾರದಲ್ಲಿರುತ್ತಿದ್ದನು. ಕೊಡಗಿನಲ್ಲಿ ಮೊದಲು ಸೂಪರಿಂಟೆಂಡೆಂಟ್ ಎಂದು ಕರೆಯಲ್ಪಡುತ್ತಿದ್ದ ಉದ್ಯೋಗಸ್ಥನಿಗೆ ಇದಕ್ಕಿಂತ ಮೊದಲು ಎಂದರೆ ೧೮೬೨ರಲ್ಲಿ ಕಮಿಷನರ್ ಎಂಬ ಹೆಸರುಕೊಡಲಾಯಿತು.

೧೯೧೫ರಲ್ಲಿ ಕೊಡಗಿನಲ್ಲಿ ಮೊದಲನೆ ಬಾರಿಗೆ ಜನರು ತಮ್ಮ ರಾಜಕೀಯ ಹಕ್ಕುಗಳನ್ನು ಪಡೆಯುವುದಕ್ಕೆ ಕೊಡಗು ಜಮೀನ್ದಾರರ ಸಂಘವೆಂಬ ಸಂಘವನ್ನು ಸ್ಥಾಪಿಸಿದರು. ೧೯೧೮ರಲ್ಲಿ ಇದರ ಆಶ್ರಯದಲ್ಲಿ ಕೊಡಗನ್ನು ಮದರಾಸು ಆಧಿಪತ್ಯದ ಒಂದು ಜಿಲ್ಲೆಯಾಗಿ ಸೇರಿಸಬೇಕೆಂಬ ಚಳವಳಿ ಬಲವಾಯಿತು. ಈ ಚಳವಳಿಗಳ ಪರಿಣಾಮವಾಗಿ ೧೯೨೪ರಲ್ಲಿ ಕೊಡಗಿಗೆ ಹೆಚ್ಚು ಅಧಿಕಾರವಿಲ್ಲದ ಶಾಸನಸಭೆಯೊಂದನ್ನು ಇಂಡಿಯಾ ಸರ್ಕಾರದವರು ಕೊಟ್ಟರು.

೧೯೪೨ರಲ್ಲಿ ಬೆಂಗಳೂರಿನಲ್ಲಿದ್ದ ರೆಸಿಡೆಂಟನ ಉದ್ಯೋಗವು ತೆಗೆದುಹಾಕಲ್ಪಟ್ಟಿತು. ಆಗ ಕೊಡಗಿನಲ್ಲಿದ್ದ ಕಮಿಷನರ್ ಹುದ್ದೆಯನ್ನು ಇಲ್ಲದಂತೆ ಮಾಡಿ ಚೀಫ್ ಕಮಿಷನರನ್ನು ಕೊಡಗಿನ ಮುಖ್ಯ ಆಡಳಿತಾಧಿಕಾರಿಯಾಗಿ ಮಾಡಿ ಮಡಿಕೇರಿಯಲ್ಲಿ ಆತನ ಕಛೇರಿಯನ್ನಿಟ್ಟರು.

ಹಿಂದೂ ದೇಶದ ಇತರ ಭಾಗಗಳಲ್ಲಿ ಕಾಂಗ್ರೆಸ್ ಚಳವಳಿ ಬಲವಾದ ಹಾಗೆಯೇ ಕೊಡಗಿನಲ್ಲೂ ಕಾಂಗ್ರೆಸ್ ಚಳವಳಿ ಬಲಗೊಂಡು ೧೯೩೦ರಲ್ಲಿ ಮತ್ತು ೧೯೪೨ರಲ್ಲಿ ಅನೇಕ ಕಾಂಗ್ರೆಸ್ ಕಾರ್ಯಕರ್ತರು ಸೆರೆಮನೆವಾಸವನ್ನು ಅನುಭವಿಸಿದರು. ಹಿಂದೂ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದಮೇಲೆ ೧೯೫೨ರಲ್ಲಿ ಕೊಡಗಿನಲ್ಲೂ ಮಹಾಚುನಾವಣೆಯು ನಡೆಯಿತು. ಹಿಂದೂಸ್ಥಾನದ ಕೇಂದ್ರ ಲೋಕಸಭೆಗೆ ಒಬ್ಬ ಸದಸ್ಯನೂ ಕೊಡಗಿನ ವಿಧಾನಸಭೆಗೆ ೨೪ ಮಂದಿ ಸದಸ್ಯರೂ ಆರಿಸಲ್ಪಟ್ಟರು. ೧೯೫೪ರ ಏಪ್ರಿಲ್‌ನಿಂದ ಎರಡು ವರ್ಷಗಳವರೆಗೆ ಕೇಂದ್ರದ ಮೇಲಿನ ಸಭೆ ಎಂದರೆ ಕೌನ್ಸಿಲ್ ಆಫ್ ಸ್ಟೇಟ್ ಸಭೆಯಲ್ಲೂ ಕೊಡಗಿನ ಒಬ್ಬ ಪ್ರತಿನಿಧಿಯಿದ್ದನು. ೧೯೫೨ನೇ ವರ್ಷದ ಮಾರ್ಚಿ ತಿಂಗಳಲ್ಲಿ ಕೊಡಗಿನಲ್ಲಿ ಮಂತ್ರಿಗಳ ಆಡಳಿತವು ಪ್ರಾರಂಭವಾಯಿತು. ಕೊಡಗಿನಲ್ಲಿ ಇಬ್ಬರು ಮಂತ್ರಿಗಳಿದ್ದರು. ಕೊಡಗು ಹಿಂದೂಸ್ಥಾನದ ರಾಜಕೀಯ ವಿಭಾಗಗಳಾದ 'ಎ', 'ಬಿ', 'ಸಿ' ಸಂಸ್ಥಾನಗಳಲ್ಲಿ ಚೀಫ್ ಕಮಿಷನರಿಂದ ಆಳಲ್ಪಡುವ 'ಸಿ' ಸಂಸ್ಥಾನವಾಗಿತ್ತು.

## ಕೊಡಗು ಮೆಡಲುಗಳು





(ಅಮರ ಸುಳ್ಯದ ಕಾಟಕಾಯಿಯ ನೆನಪಿಗಾಗಿ ಕೊಟ್ಟ ಮೆಡಲುಗಳು)

## ಮೈಸೂರು ಸಂಸ್ಥಾನದಲ್ಲಿ ಕೊಡಗಿನ ವಿಲೀನಕರಣ

ಹಿಂದುಸ್ಥಾನದಲ್ಲಿ ಭಾಷಾವಾರು ಪ್ರಾಂತರಚನೆಯಾಗಬೇಕೆಂಬ ಚಳವಳ ಸುಮಾರು ೧೯೧೮ನೇ ಇಸವಿಯಿಂದಲೇ ಕಾಂಗ್ರೆಸ್ ಸಂಸ್ಥೆಯಲ್ಲಿ ಪ್ರಾರಂಭ ವಾಯಿತು. ಆಗಿನಿಂದಲೇ ಭಾಷಾವಾರು ತಳಹದಿಯ ಮೇಲೆ ಪ್ರಾದೇಶಿಕ ಕಾಂಗ್ರೆಸ್ ಸಂಸ್ಥೆಗಳು ರಚಿಸಲ್ಪಟ್ಟವು. ಕೊಡಗು ಜಿಲ್ಲಾ ಕಾಂಗ್ರೆಸ್ ಸಂಸ್ಥೆಯು ಹುಬ್ಬಳ್ಳಿಯು ಕೇಂದ್ರವಾಗಿದ್ದ ಕರ್ಣಾಟಕ ಕಾಂಗ್ರೆಸ್ ಸಂಸ್ಥೆಯ ಅಧೀನ ಸಂಸ್ಥೆಯಾಗಿತ್ತು. ೧೯೩೦ನೆ ಇಸವಿಯಿಂದ ಇತ್ತಲಾಗಿ ಕನ್ನಡ ಭಾಷೆಯನ್ನು ಆಡುವ ಬ್ರಿಟಿಷರ ಆಳ್ವಿಕೆಯೊಳಗಿನ ಜಿಲ್ಲೆಗಳೆಲ್ಲಾ ಒಂದಾಗಿ ಕರ್ಣಾಟಕ ಪ್ರಾಂತವಾಗಬೇಕೆಂಬ ಆಂದೋಲನವು ಬಿರುಸಾಗಿ ನಡೆಯಿತು. ಈ ಸಮಯ ದಲ್ಲಿ ಕೊಡಗಿನ ಶಾಸನಸಭೆಯಲ್ಲಿಯೂ ಹೊರಗೂ ಕೊಡಗನ್ನು ಕರ್ಣಾಟಕ ಪ್ರಾಂತ ರಚಿಸಿ ಅದರೊಳಗೆ ವಿಲೀನಗೊಳಿಸುವಂತೆಯೂ, ಇಲ್ಲವೇ ಮೈಸೂರಿಗೆ ಅಥವಾ ಮದರಾಸು ಸಂಸ್ಥಾನಗಳಿಗೆ ಸೇರಿಸುವಂತೆಯೂ ನಿರ್ಣಯಗಳು ಮಾಡಲ್ಪಟ್ಟವು. ಈ ನಿರ್ಣಯಗಳು ಕೊಡಗಿನ ಮುಖ್ಯಾಧಿಕಾರಿಯಾಗಿದ್ದ ಚೀಫ್ ಕಮಿಷನರನ ನಿರಂಕುಶ ಅಧಿಕಾರದಲ್ಲಿ ಜಿಗುಪ್ಸೆಗೊಂಡು ಅದನ್ನು

ಕೊನೆಗಾಣಿಸುವುದಕ್ಕೆ ಬೇರೆ ಉಪಾಯವು ತೋರದೆ ಮಾಡಿದ ನಿರ್ಣಯಗಳಾಗಿದ್ದವು.

ಆದರೆ ಭಾರತವು ಸ್ವತಂತ್ರವಾದನಂತರ ಕೊಡಗಿನ ಜನರ ಮತ್ತು ಅವರ ಮುಂದಾಳುಗಳ ದೃಷ್ಟಿಕೋನವು ಬದಲಾಯಿತು. ಕೊಡಗು ನೆರೆಪ್ರಾಂತ್ಯಗಳಿಂದ ಪ್ರತ್ಯೇಕವಾಗಿದ್ದರೇನೆ ಅದರ ಅಭಿವೃದ್ಧಿಯನ್ನು ಸಾಧಿಸಲು ಅನುಕೂಲವೆಂದು ಧುರೀಣರು ಮನಗಂಡರು. ಈ ಕಾರಣದಿಂದ ಕೊಡಗನ್ನು ನೆರೆಪ್ರಾಂತ್ಯಗಳೊಡನೆ ಸೇರಿಸಬಾರದೆಂದು ಕೇಂದ್ರ ಸರಕಾರವನ್ನು ಕೇಳಿಕೊಳ್ಳುವುದಕ್ಕೆ ೧೯೪೮ರಲ್ಲಿ ಕೊಡಗಿನ ಕೆಲವು ಮುಂದಾಳುಗಳ ನಿಯೋಗಗೋಷ್ಠಿಯೊಂದು ದೆಹಲಿಗೆ ಹೋಯಿತು. ದೆಹಲಿಯ ಕೇಂದ್ರ ಮಂತ್ರಿಗಳಿಂದ ತತ್ಕಾಲಕ್ಕೆ ಕೊಡಗನ್ನು ಬೇರೆ ಪ್ರಾಂತಗಳೊಡನೆ ಸೇರಿಸುವ ಆಲೋಚನೆಯಿಲ್ಲವೆಂಬ ಆಶ್ವಾಸನೆಯನ್ನು ಪಡೆದು ಈ ನಿಯೋಗಗೋಷ್ಠಿಯು ಹಿಂತಿರುಗಿತು.

ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ಆಡಳಿತ ಸಮಿತಿಯವರೂ ಕೇಂದ್ರ ಸರ್ಕಾರವೂ ಸ್ವಾತಂತ್ರ್ಯನಂತರ ಭಾಷಾವಾರು ಪ್ರಾಂತ ನಿರ್ಮಾಣದಿಂದ ಇಡೀ ರಾಷ್ಟ್ರದ ಐಕ್ಯತೆಗೆ ಭಂಗಬರುವುದೆಂದು ಮನಗಂಡು ಭಾಷಾವಾರು ಪ್ರಾಂತರಚನೆಗೆ ಪ್ರೋತ್ಸಾಹ ನೀಡಲಿಲ್ಲ. ಆದರೆ ೧೯೫೩ರಲ್ಲಿ ಆಂಧ್ರರು ಉಪವಾಸ ಮುಂತಾದ ಚಳವಳ ಹೂಡಿ ತಮಗೆ ಪ್ರತ್ಯೇಕವಾದ ಪ್ರಾಂತ ಪಡೆದರು. ಇದರಿಂದ ಭಾಷಾವಾರು ಪ್ರಾಂತಾಭಿಮಾನಿಗಳು ಉತ್ತೇಜನಗೊಂಡು ಭಾಷಾವಾರು ಪ್ರಾಂತರಚನೆಗೆ ಆವಶ್ಯವಿರುವ ಅಂಕಿಸಂಖ್ಯೆಗಳನ್ನು ಸಾಧಕಬಾಧಕಗಳ ಮಾಹಿತಿಗಳನ್ನೂ ಸಂಗ್ರಹಿಸಲು ಒಂದು ಸಮಿತಿಯನ್ನು ಏರ್ಪಡಿಸಲು ಕೇಂದ್ರ ಶಾಸನಸಭೆಗಳನ್ನು ಒತ್ತಾಯಿಸಿದರು. ಇದರ ಪರಿಣಾಮವಾಗಿ ನ್ಯಾಯಾಧೀಶ ಫಜಲ್ ಆಲಿಯವರ ಅಧ್ಯಕ್ಷತೆಯಲ್ಲಿ ರಾಜ್ಯಪುನರ್ವಿಂಗಡಣೆಯ ಸಮಿತಿಯೊಂದು ೧೯೫೪ರಲ್ಲಿ ಏರ್ಪಟ್ಟಿತು. ಈ ಸಮಿತಿಯ ಸದಸ್ಯರು ದೇಶದ ಎಲ್ಲಾ ಭಾಗಗಳನ್ನು ಸಂಚರಿಸಿ ಜನರ ಅಭಿಪ್ರಾಯಗಳನ್ನೂ ಅಂಕಿಸಂಖ್ಯೆಗಳನ್ನೂ ಸಂಗ್ರಹಿಸಿದರು. ಈ ಸಮಿತಿಯವರು ಕೊಡಗಿನ ಮಡಿಕೇರಿಗೂ ೧೯೫೪ರಲ್ಲಿ ಬಂದು ಸಂಸ್ಥಾನದ ಜನರ ಮತ್ತು ಸಂಸ್ಥೆಗಳ ಅಭಿಪ್ರಾಯಗಳನ್ನು ತಿಳಿದುಕೊಂಡರು. ಶಾಸನಸಭೆಯ ಸದಸ್ಯರೂ ಕೊಡಗಿನ ಹೆಚ್ಚಿನ ಮುಂದಾಳುಗಳೂ ಕೊಡಗು ಪ್ರತ್ಯೇಕವಾಗಿರಬೇಕೆಂದೇ ತಮ್ಮ ಹೇಳಿಕೆಯನ್ನಿತ್ತರು. ಕೆಲವರು

ಕೊಡಗನ್ನು ಕರ್ಣಾಟಕ ಪ್ರಾಂತದ ಭಾಗವಾಗಿಡಬೇಕೆಂದು ವರದಿ ಮಾಡಿದರು. ಕೊಡಗು ವಿಧಾನಸಭೆಯ ೨೪ ಸದಸ್ಯರೂ ಒಮ್ಮತದಿಂದ 'ಕೊಡಗು ಉಳುವರಿ ಸಂಸ್ಥಾನ. ಪ್ರತ್ಯೇಕವಾಗಿಯೇ ಇದ್ದು ತನ್ನ ಅಭಿವೃದ್ಧಿಯನ್ನು ಸಾಧಿಸ ಬಲ್ಲುದು. ಆದುದರಿಂದ ಕೊಡಗನ್ನು ಪ್ರತ್ಯೇಕವಾಗಿಯೇ ಇಡಬೇಕೆಂದು' ನಿರ್ಣಯ ಮಾಡಿ ರಾಜ್ಯಪುನರ್‌ನಿರ್ಮಾಣ ಸಮಿತಿಗೂ ಕೇಂದ್ರ ಸರಕಾರಕ್ಕೂ ಕಳುಹಿಸಿದರು.

ಆದರೆ ರಾಜ್ಯ ಪುನರ್‌ನಿರ್ಮಾಣ ಸಮಿತಿಯವರು ತಮ್ಮ ವರದಿಯಲ್ಲಿ 'ಬಿ', 'ಸಿ' ವಿಭಾಗದ ಸಂಸ್ಥಾನಗಳನ್ನು ಕೊನೆಗೊಳಿಸಿ ಹಿಂದೀ ಒಕ್ಕೂಟ (Indian Union)ದಲ್ಲಿ ಗವರ್ನರರ ಆಡಳಿತಕ್ಕೊಳಪಟ್ಟ 'ಎ' ಸಂಸ್ಥಾನ ಗಳೇ ಇರಬೇಕೆಂದೂ ಕೊಡಗಿನ ವಿಚಾರದಲ್ಲಿ ಅದು ಮುಂದೆ ರಚಿಸಲ್ಪಡುವ ಕನ್ನಡ ಪ್ರಾಂತ್ಯದೊಳಗೆ ಮಿಲನವಾಗಬೇಕೆಂದೂ ಆದರೆ ಅದರ ಚಾರಿತ್ರಿಕ ಹಿನ್ನೆಲೆ ಮತ್ತು ವೈಶಿಷ್ಟ್ಯಗಳಿಗೋಸ್ಕರ ಅದನ್ನು ಚಿಕ್ಕದಾದರೂ ಪ್ರತ್ಯೇಕ ಜಿಲ್ಲೆಯಾಗಿಡಬೇಕೆಂದೂ ತಮ್ಮ ವರದಿಯಲ್ಲಿ ನಮೂದಿಸಿದ್ದರು. ಈ ವರದಿ ಯನ್ನು ಅನುಸರಿಸಿ ಕೇಂದ್ರ ವಿಧಾಯಕ ಸಭೆಗಳು ಶಾಸನ ಮಾಡಿದ್ದರಿಂದ ಕೊಡಗು ಹೊಸ ಕನ್ನಡ ಪ್ರಾಂತವಾದ ಮೈಸೂರು ಪ್ರಾಂತದೊಳಗೆ ವಿಲೀನ ವಾಗಬೇಕಾಯಿತು.

ಹೊಸ ಕನ್ನಡ ಪ್ರಾಂತ್ಯವಾದ ಮೈಸೂರು ಪ್ರಾಂತ್ಯವು ೧೯೫೬ನೆ ಇಸವಿ ನವೆಂಬರ್ ೧ನೆ ತಾರೀಖಿನಲ್ಲಿ ಅಸ್ತಿತ್ವಕ್ಕೆ ಬಂದಿತು. ಅಂದಿನಿಂದ ಪ್ರತ್ಯೇಕ 'ಸಿ' ಸಂಸ್ಥಾನವಾಗಿದ್ದ ಕೊಡಗು ಮೈಸೂರು ಸಂಸ್ಥಾನದ ೧೯ ಜಿಲ್ಲೆಗಳಲ್ಲಿ ಒಂದು ಜಿಲ್ಲೆಯಾಗಿ ಮಾರ್ಪಟ್ಟಿತು.

ಕೊಡಗು ರಾಜ್ಯವು ಸಂಸ್ಥಾನದ ಸ್ಥಾನದಿಂದ ಜಿಲ್ಲೆಯ ಮಟ್ಟಕ್ಕೆ ಇಳಿಯಿತು. ಕೊಡಗಿನ ಜಿಲ್ಲಾಧಿಕಾರಿಯಾಗಿ ಡೆಪ್ಯುಟಿ ಕಮಿಷನರವರು ನೇಮಕ ಮಾಡಲ್ಪಟ್ಟರು. ಕೊಡಗಿನ ಬೇರೆ ಬೇರೆ ಆಡಳಿತ ಖಾತೆಗಳು ಮೈಸೂರು ಸಂಸ್ಥಾನದ ಮಂತ್ರಿಗಳ ಮತ್ತು ಸಂಸ್ಥಾನಾಧಿಕಾರಿಗಳ ಮೇಲ್ವಿಚಾರಕ್ಕೊಳ ಪಟ್ಟವು. ಮೈಸೂರು ಸಂಸ್ಥಾನದ ವಿಧಾನಸಭೆಯಲ್ಲಿ ಕೊಡಗಿಗೆ ಎರಡು ಸ್ಥಾನ ಗಳು ಕೊಡಲ್ಪಟ್ಟವು. ಹೀಗೆ ರಾಜ್ಯಪುನರ್‌ನಿರ್ಮಾಣದ ಪರಿಣಾಮವಾಗಿ ನೂರಾರು ವರ್ಷಗಳಿಂದ ಪ್ರತ್ಯೇಕ ಘಟಕವಾಗಿದ್ದ ಕೊಡಗು ತನ್ನ ವ್ಯಕ್ತಿತ್ವ ವನ್ನು ಕಳೆದುಕೊಂಡು ದೊಡ್ಡ ಸಂಸ್ಥಾನದೊಳಗೆ ಸೇರಬೇಕಾಯಿತು.

'ಸಿ' ಸಂಸ್ಥಾನವಾಗಿದ್ದ ಕೊಡಗು ನಾಲ್ಕೂವರೆ ವರ್ಷಗಳಲ್ಲಿ ಜನಪ್ರಿಯು ರಾಗಿದ್ದ ಮಂತ್ರಿದ್ವಯರ ಆಡಳಿತದಲ್ಲಿ ಗಣನೀಯವಾದ ಪ್ರಗತಿಯನ್ನು ಪಡೆಯಿತು. ಸಾಮುದಾಯಿಕ ವಿಕಾಸ ಯೋಜನೆ ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆಗಳ ಫಲವಾಗಿ ಗ್ರಾಮಾಂತರಗಳಲ್ಲಿ ವೈದ್ಯಕೀಯ ಸೌಕರ್ಯಗಳೂ ಸಾರಿಗೆ ಸಂಚಾರ ವ್ಯವಸ್ಥೆಗಳೂ ಹೆಚ್ಚಾದವು. ಸರ್ಕಾರದವರು ಶಾಲೆಗಳನ್ನು ಹೆಚ್ಚಾಗಿ ತೆರೆದುದಲ್ಲದೆ ಜಿಲ್ಲಾ ಬೋರ್ಡು ಶಾಲೆಗಳನ್ನು ಸರ್ಕಾರದ ಆಡಳಿತಕ್ಕೆ ಒಳಪಡಿಸಿದರು. ಜನಸಾಮಾನ್ಯರಿಗೆ ತಮ್ಮ ಉತ್ಪಾದನೆಗಳನ್ನು ಹೆಚ್ಚಿಸುವುದಕ್ಕೂ ಉಪವೃತ್ತಿಗಳನ್ನು ವಿರಾಮಕಾಲದಲ್ಲಿ ಅವಲಂಬಿಸುವುದಕ್ಕೂ ಧನಸಹಾಯ ಮತ್ತು ಇತರ ಉಪಕರಣಗಳ ಸಹಾಯವನ್ನೂ ಒದಗಿಸಿ ಕೊಟ್ಟರು. ಹೀಗೆ ಮಂತ್ರಿಗಳ ನಾಲ್ಕೂವರೆ ವರ್ಷಗಳ ಆಡಳಿತದಲ್ಲಿ ಆದ ಕೊಡಗಿನ ಪ್ರಗತಿಯು ಕೇಂದ್ರ ಸರಕಾರದ ಮಂತ್ರಿಗಳ ಮೆಚ್ಚಿಕೆಯನ್ನು ಪಡೆಯಿತು. ಈ ಅವಧಿಯಲ್ಲಿ ಕೊಡಗಿನ ಆರ್ಥಿಕಸ್ಥಿತಿಯು ಉತ್ತಮವಾಗಿ ಕೊಡಗು ಸ್ವಾವಲಂಬಿಯಾಗಿದ್ದಿತು.

ಪುಟ್ಟ ಸಂಸ್ಥಾನವಾಗಿದ್ದ ಕೊಡಗು ಭಾರತದಲ್ಲೇ ಆಡಳಿತಕ್ಕೆ ಆದರ್ಶವಾಗಿತ್ತು. ಸಂಸ್ಥಾನದ ಮಟ್ಟದಿಂದ ಜಿಲ್ಲೆಯ ಮಟ್ಟಕ್ಕೆ ಇಳಿದುದು ಸ್ವಲ್ಪ ದುಃಖದ ಮಾತಾದರೂ ಕೊಡಗಿನ ಸುಪುತ್ರರು ಇಡಿ ಕರ್ಣಾಟಕದಲ್ಲಿ ಹಾಗೂ ಭಾರತದಲ್ಲಿ ತಮ್ಮ ವರ್ಚಸ್ಸನ್ನು ಬೀರಿ ಕನ್ನಡನಾಡಾದ ಮೈಸೂರು ಸಂಸ್ಥಾನದಲ್ಲಿ ಮತ್ತು ಭಾರತದಲ್ಲಿ ಕೊಡಗಿನ ಹೆಸರನ್ನು ಮೆರೆಸುವರೆಂದು ಹಾರೈಸಲಾಗಿದೆ.

---

# ನಮ್ಮ ಪ್ರಕಟನೆಗಳು

೧. **ಬೃಂದಾವನ** (ಕವಿತಾಸಂಗ್ರಹ)
ವೈ. ಕೇ. ಅನಂತಪದ್ಮನಾಭರಾವ್ ೦—೧೨—೦

೨. **ಗೌರಮ್ಮನ ಕತೆಗಳು – ೧**
ಮಿಸೆಸ್ ಬಿ. ಟಿ. ಜಿ. ಕೃಷ್ಣ ೧—೪—೦

೩. **ಹಿತೋಪದೇಶ**
ಜಿ. ಶ್ರೀನಿವಾಸಮೂರ್ತಿ ೧—೪—೦

೪. **ಹರಿದಾಸಿ**
ವೈ. ವಿರೂಪಾಕ್ಷಯ್ಯ ೦—೧೨—೦

೫. **ನವನೀತ**
ಕೊಡಗಿನ ಕತೆಗಾರರ ಕಥಾಸಂಕಲನ ೧—೪—೦

೬. **ಚಂದ್ರಮತಿ**
ಆಸ್ಥಾನವಿದ್ವಾನ್ ನಂ. ಶ್ರೀಕಂಠಶಾಸ್ತ್ರಿ ೦—೧೨—೦

೭. **ಗೌರಮ್ಮನ ಕತೆಗಳು – ೨**
ಮಿಸೆಸ್ ಬಿ. ಟಿ. ಜಿ. ಕೃಷ್ಣ ೧—೪—೦

೮. **ಕಲ್ಪತರು**
ವೈ. ಕೇ. ಅನಂತಪದ್ಮನಾಭರಾವ್ ೧—೦—೬

೯. **ಸುಧಾ**
ವೈ. ಕೇ. ಅನಂತಪದ್ಮನಾಭರಾವ್ ೦—೧೨—೦

೧೦. **ಲಕ್ಷ್ಮೀಶನ ಮಹಾಕಾವ್ಯ** ೧—೦—೦
ವಿ. ಎಸ್. ರಾಮಕೃಷ್ಣ

ಪ್ರಕಾಶಕರು
ಶ್ರೀ ಕಾವೇರಿ ಪ್ರಕಟನಾಲಯ
**ಮಡಿಕೇರಿ**